# ದೊಡ್ಡಬಳ್ಳಾಪುರ ತಾಲ್ಲೂಕಿನ ಶಾಸನಗಳು ಮತ್ತು ಸ್ಮಾರಕಗಳು : ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ
ಸಾದರಪಡಿಸಿದ ಮಹಾಪ್ರಬಂಧ

ಸಂಶೋಧಕರು
ಮುನಿರಾಜು ಕೆ.ಎಂ.

ಮಾರ್ಗದರ್ಶಕರು
ಡಾ. ಡಿ.ವಿ.ಪರಮಶಿವಮೂರ್ತಿ
ಪ್ರವಾಚಕರು, ಶಾಸನಶಾಸ್ತ್ರ ವಿಭಾಗ



ಶಾಸನಶಾಸ್ತ್ರ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೭

# ದೊಡ್ಡಬಳ್ಳಾಪುರ ತಾಲ್ಲೂಕಿನ ಶಾಸನಗಳು ಮತ್ತು ಸ್ಮಾರಕಗಳು : ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ
ಸಾದರಪಡಿಸಿದ ಮಹಾಪ್ರಬಂಧ

ಸಂಶೋಧಕರು
ಮುನಿರಾಜು ಕೆ.ಎಂ.



ಮಾರ್ಗದರ್ಶಕರು
ಡಾ. ಡಿ.ವಿ.ಪರಮಶಿವಮೂರ್ತಿ
ಪ್ರವಾಚಕರು, ಶಾಸನಶಾಸ್ತ್ರ ವಿಭಾಗ

ಶಾಸನಶಾಸ್ತ್ರ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೭

# ಸಂಶೋಧಕರ ಪ್ರಮಾಣಪತ್ರ

**ದೊಡ್ಡಬಳ್ಳಾಪುರ ತಾಲ್ಲೂಕಿನ ಶಾಸನಗಳು ಮತ್ತು ಸ್ಮಾರಕಗಳು : ಒಂದು ಅಧ್ಯಯನ** ಎಂಬ ಮಹಾ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ ಡಾ.ಡಿ.ವಿ. ಪರಮಶಿವಮೂರ್ತಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಶಾಸನಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : 25.11.2007
ಸ್ಥಳ : ವಿದ್ಯಾರಣ್ಯ

ಮುನಿರಾಜು ಕೆ.ಎಂ.
ಸಂಶೋಧಕ
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಪರಿವಿಡಿ

# ಅಧ್ಯಾಯ ೧

# ಅಧ್ಯಯನದ ಉದ್ದೇಶ ವ್ಯಾಪ್ತಿ ಮತ್ತು ಆಕರಗಳು

# ೧
# ಅಧ್ಯಯನದ ಉದ್ದೇಶ ವ್ಯಾಪ್ತಿ ಮತ್ತು ಆಕರಗಳು

## ೧.೧. ಅಧ್ಯಯನದ ಉದ್ದೇಶ

ಕರ್ನಾಟಕದ ಸಾಂಸ್ಕೃತಿಕ ಇತಿಹಾಸ ರಚನೆಗೆ ನೆರವಾಗುವ ಪ್ರಮುಖ ಆಕರ ಸಾಮಗ್ರಿಗಳಲ್ಲಿ ಶಾಸನಗಳೇ ಪ್ರಧಾನವಾದವುಗಳು. ಈ ಶಾಸನಗಳು ಅರಸೊತ್ತಿಗೆಯ ಏಳುಬೀಳುಗಳನ್ನು ದಾಖಲಿಸುತ್ತವೆ. ಈ ಅರಸೊತ್ತಿಗೆಯಲ್ಲಿ ರೂಪಗೊಂಡ ಜನಜೀವನ ನಮ್ಮ ಹಿರಿಯ ಜೀವನ ಶೈಲಿಗೆ ಸಾಕ್ಷಿಗಳಾಗಿವೆ. ನಮ್ಮ ಕನ್ನಡ ನಾಡಿನ ಜನರ ಜೀವನವು ಎಲ್ಲಿಯೂ ಯಾವ ಕೃತಿಯಲ್ಲಿಯೂ ಮಡುಗಟ್ಟಿ ನಿಂತಿಲ್ಲ. ಕೆಲವು ಕಾವ್ಯಗಳಲ್ಲಿ ಈ ಬಗ್ಗೆ ಕಂಡುಬಂದರೂ ಅಧಿಕ ಪ್ರಮಾಣದಲ್ಲಿ ಹೆಚ್ಚು ವಿಸ್ತಾರವಾಗಿ, ಹೆಚ್ಚು ಶುದ್ಧ ರೂಪದಲ್ಲಿ ಕಂಡುಬರುವುದು ಶಾಸನ ಸಂಪತ್ತಿನಲ್ಲಿ ಮಾತ್ರ ಎಂದು ಹೇಳಿದರೆ ತಪ್ಪಾಗಲಾರದು. ನಮ್ಮ ಪ್ರಾಚೀನ ಇತಿಹಾಸಕಾರರು ಅಧ್ಯಯನಕ್ಕಾಗಿ ಪ್ರಮುಖವಾಗಿ ಶಾಸನಗಳನ್ನು ಬಳಸಿಕೊಂಡಿದ್ದಾರೆ. ಅವುಗಳಲ್ಲಿ ಬಹುತೇಕವಾಗಿ ರಾಜಕೀಯ ಮಹತ್ವವನ್ನು ಪ್ರತಿಬಿಂಬಿಸುವ ಅಂಶಗಳನ್ನು ಗುರುತಿಸಲು ಪ್ರಯತ್ನಿಸಿದ್ದಾರೆ. ಆ ಕಾರಣದಿಂದಾಗಿ ನಮ್ಮ ಇತಿಹಾಸ ರಾಜ ಮಹಾರಾಜರುಗಳಿಂದ ಅವೃತಗೊಂಡಿದೆ. ಆದರೆ ಒಂದು ನಾಡು ಎಂದರೆ ಅದನ್ನು ಆಳಿದ ರಾಜರು ಅಲ್ಲ, ಅಲ್ಲಿ ಬದುಕಿದ ಜನ. ಹೀಗೆ ಬದುಕಿದ ಜನರ ಒಂದು ಗಣನೀಯ ಭಾಗ. ಆ ನಾಡನ್ನಾಳಿದ ರಾಜ ಸಮೂಹ ಒಂದು ದೇಶದ ನಿಜವಾದ ಇತಿಹಾಸವೆಂದರೆ ಆ ಜನತೆಯ ಇತಿಹಾಸ. ಆದ್ದರಿಂದ ಇತಿಹಾಸದ ಪ್ರಮಾಣಭೂತವಾದ ಪುನರ್‌ಸೃಷ್ಟಿಗೆ ಇರುವ ನಾಡುಗಳನ್ನು ಉಲ್ಲೇಖಿಸುವ ಅತಿ ಪ್ರಮುಖ ಆಧಾರಗಳೆಂದರೆ ಶಾಸನಗಳು. ಕನ್ನಡ ಸಾಹಿತ್ಯ ಕೃತಿಗಳು, ಕಲಾಕೃತಿಗಳು ಇತರೆ ಅಂಶಗಳೆಲ್ಲವೂ ಸಹಾಯಕವಾದರೂ ಕರ್ನಾಟಕದ ಪರಂಪರೆಯನ್ನು ತಿಳಿಸುವ ಪ್ರಧಾನ ಆಕರಗಳೆಂದರೆ ಶಾಸನಗಳು ಮತ್ತು ಸ್ಮಾರಕಗಳು.

ಮತ್ತಿನ್ನಾವ ಪ್ರಮುಖ ಆಧಾರಗಳು ತುಂಬಿಕೊಡಲಾರದಷ್ಟು ಆಕರಗಳನ್ನು ನಮ್ಮ ಶಾಸನಕ್ಷೇತ್ರ ತುಂಬಿಕೊಡುತ್ತದೆ. ಆದರೆ ಇತ್ತೀಚೆಗೆ ಆಧುನಿಕತೆಯ ಸಂದರ್ಭದಲ್ಲಿ ಇತಿಹಾಸನವನ್ನು ಕಾಣುವ ದೃಷ್ಟಿಕೋನ ಬದಲಾಗಿದೆ. ಇತಿಹಾಸ ರಚನಾ ಕ್ರಮಗಳನ್ನು ನೋಡುವ ದೃಷ್ಟಿಯೂ ಹೆಚ್ಚು ಬದಲಾಗಿದೆ. ಕೇವಲ ರಾಜಕೀಯ ಚರಿತ್ರೆಯ ಅಧ್ಯಯನದ ಮಾರ್ಗವನ್ನು ಬಿಟ್ಟು ಸಾಂಸ್ಕೃತಿಕ ಪರಂಪರೆಯ ಹೊಸ ಹಾದಿಯ ಹುಡುಕಾಟ ನಡೆದಿದೆ. ಇದಕ್ಕಾಗಿ

ಈಗಾಗಲೇ ಹಲವು ಕ್ಷೇತ್ರಗಳಲ್ಲಿ ಇತಿಹಾಸಕಾರರು ಹೊಸ ಹೊಸ ಪ್ರಯತ್ನಗಳನ್ನು ಮಾಡಿದ್ದಾರೆ. ಇದರಿಂದಾಗಿ ಸಾಮಾನ್ಯ ಜನತೆಯಲ್ಲಿಯೂ ಸಹ ಇತಿಹಾಸದ ಬಗ್ಗೆ ಅರಿವು ಮೂಡ ತೊಡಗಿದೆ. ಈ ರೀತಿಯ ಅಧ್ಯಯನದ ಫಲವಾಗಿ ಪ್ರಾಚೀನ ಐತಿಹಾಸಿಕ ಸಾಮಗ್ರಿಗಳಲ್ಲಿ ಪ್ರಮುಖ ಭಾಗವಾದ ಶಾಸನಗಳನ್ನು ವಿಭಿನ್ನ ದೃಷ್ಟಿಯಲ್ಲಿ ನೋಡ ತೊಡಗಿದರು. ಆದ್ದರಿಂದ ರಾಜಕೀಯ ಜ್ಞಾನಕ್ಕೆ ಬುನಾದಿಯಾಗಿದ್ದ ಶಾಸನಗಳನ್ನು ರಾಜಕೀಯದಿಂದ ಹೊರಗಿಟ್ಟು ಇತರ ಅಧ್ಯಯನಗಳಿಗೂ ಬಳಸಿಕೊಳ್ಳ ತೊಡಗಿದರು. ಇದರಿಂದಾಗಿ ಅನಾಥ ವಾಗಿದ್ದ ನಮ್ಮ ನಾಡಿನ ಪ್ರಾಚೀನ ಮಾಹಿತಿಗಳು ಮತ್ತು ಜೀವನ ಶೈಲಿಯ ಅಧ್ಯಯನಕ್ಕೆ ಅಗತ್ಯವಾದ ಆಕರಗಳ ಅಮೂಲ್ಯ ಭಂಡಾರವನ್ನು ಇಲ್ಲಿ ತೆರೆದಂತಾಯಿತು.

ನಾನು ಮೂಲತಃ ಶಾಸನ ವಿದ್ಯಾರ್ಥಿ. ಸ್ನಾತಕೋತ್ತರ ಪದವಿಯಲ್ಲಿ ಕಲೆ ಮತ್ತು ಶಾಸನಗಳ ಬಗ್ಗೆ ಅರಿವೂ ಇತ್ತು. ಇತ್ತೀಚಿನ ಸಂದರ್ಭದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರ ತಾಲ್ಲೂಕು ರಾಜಧಾನಿಗೆ ಹತ್ತಿರವಾಗಿಯೇ ಇದೆ. ಜಾಗತೀಕರಣ ಮತ್ತು ನಗರೀಕರಣದ ಸಂದರ್ಭದಲ್ಲಿ ಪ್ರಾಚೀನ ಅವಶೇಷಗಳು ಕಣ್ಮರೆಯಾಗುತ್ತಿದೆ. ತಾಲ್ಲೂಕಿನ ಪಕ್ಕದಲ್ಲೇ ದೇವನಹಳ್ಳಿಯಲ್ಲಿ ಅಂತಾರಾಷ್ಟ್ರೀಯ ವಿಮಾನ ನಿಲ್ದಾಣ ಪ್ರಾರಂಭವಾಗುವುದರಲ್ಲಿದೆ. ಈ ಅಂತಾರಾಷ್ಟ್ರೀಯ ವಿಮಾನ ನಿಲ್ದಾಣವು ದೊಡ್ಡಬಳ್ಳಾಪುರದ ಗ್ರಾಮಗಳನ್ನೂ ಒಳಗೊಂಡಂತೆ ಸುಮಾರು ಐದುಸಾವಿರ ಎಕರೆ ಜಮೀನನ್ನು ಆಕ್ರಮಿಸಿಕೊಂಡಿದೆ. ನಗರೀಕರಣ ಅಂತೆಲ್ಲಾ ಜೀವನ ಶೈಲಿಯು ಬದಲಾಯಿತು. ಈ ಪ್ರದೇಶದಲ್ಲಿದ್ದ ಪ್ರಾಚೀನ ಶಾಸನಗಳು, ಸ್ಮಾರಕಗಳು, ಶಾಸನಶಿಲ್ಪಗಳು ಜನರ ಅನಾಧರಕ್ಕೆ ತುತ್ತಾಗಿ ಕಣ್ಮರೆಯಾಗತೊಡಗಿವೆ. ಶಾಸನಶಾಸ್ತ್ರ ವಿದ್ಯಾರ್ಥಿಯಾದ ನನಗೆ ಇಂತಹ ದೃಶ್ಯಗಳನ್ನು ಕಂಡು ಮನದಲ್ಲೇ ನೋವುಂಟಾಯಿತು. ಆಗ ನನ್ನ ಮನಸ್ಸಿನಲ್ಲಿ ಶಾಸನಗಳನ್ನು ಮತ್ತು ಸ್ಮಾರಕಗಳನ್ನು ಹುಡುಕುವ ಹಂಬಲ ಉಂಟಾಯಿತು. ಇದರಿಂದಾಗಿ ದೊಡ್ಡಬಳ್ಳಾಪುರ ತಾಲ್ಲೂಕಿನ ಶಾಸನಗಳನ್ನು, ಸ್ಮಾರಕಗಳನ್ನು ಮತ್ತು ಶಾಸನ ಶಿಲ್ಪಗಳ ಮಾಹಿತಿ ಸಂಗ್ರಹಿಸಿ ಒಂದೆಡೆ ಕಲೆಹಾಕಿ ಬರವಣಿಗೆ ರೂಪಕ್ಕೆ ತಂದರೆ ಒಳಿತು ಎಂಬ ಸದುದ್ದೇಶದಿಂದ ಮತ್ತು ನಾನು ಸಹ ದೊಡ್ಡಬಳ್ಳಾಪುರ ತಾಲ್ಲೂಕಿನವನಾದ್ದರಿಂದ ಈ ಪ್ರದೇಶದ ಅಧ್ಯಯನವನ್ನು ಮಾಡಲು ತಿರ್ಮಾನಿಸಿದೆ.

## ೧.೨. ಅಧ್ಯಯನದ ವ್ಯಾಪ್ತಿ

ದೊಡ್ಡಬಳ್ಳಾಪುರ ತಾಲ್ಲೂಕು ಬೆಂಗಳೂರು ನಗರಕ್ಕೆ ಕೇವಲ ನಲವತ್ತು ಕಿ.ಮೀ. ಅಂತರದಲ್ಲಿದೆ. ತಾಲ್ಲೂಕಿನ ಪೂರ್ವಕ್ಕೆ ದೇವನಹಳ್ಳಿ ತಾಲ್ಲೂಕು, ಉತ್ತರ ದಿಕ್ಕಿಗೆ ಗೌರಿಬಿದನೂರು ತಾಲ್ಲೂಕು, ಪಶ್ಚಿಮ ದಿಕ್ಕಿಗೆ ಕೊರಟಗೆರೆ, ನೆಲಮಂಗಲ ತಾಲ್ಲೂಕುಗಳು, ದಕ್ಷಿಣ ದಿಕ್ಕಿಗೆ ಬೆಂಗಳೂರು ಉತ್ತರ ತಾಲ್ಲೂಕುಗಳ ಮಧ್ಯೆ ನಾಡು, ಬೆಟ್ಟಗುಡ್ಡ, ನದಿ,

ಕೆರೆಗಳಿಂದ ಕೂಡಿದ ಸಾಂಸ್ಕೃತಿಕ ಪಟ್ಟಣ ದೊಡ್ಡಬಳ್ಳಾಪುರವಾಗಿದೆ. ಅಲ್ಲದೆ ಈ ದೊಡ್ಡಬಳ್ಳಾಪುರ ತಾಲ್ಲೂಕಿನ ಬಹುತೇಕ ಪ್ರದೇಶವನ್ನು ಹೊಯ್ಸಳ ವಿಜಯನಗರದ ಅಧೀನದಲ್ಲಿ ಮಾಂಡಲಿಕರಾಗಿ ಆಳ್ವಿಕೆ ನಡೆಸುತ್ತಿದ್ದ ನಾಡಪ್ರಭುಗಳ ಅನೇಕ ವಂಶಗಳೂ ಇವೆ. ತಾಲ್ಲೂಕಿನ ದಕ್ಷಿಣಕ್ಕೆ ಎಲಹಂಕನಾಡು, ಪೂರ್ವಕ್ಕೆ ಅವತಿನಾಡು, ಮೊರಸುನಾಡು, ಉತ್ತರಕ್ಕೆ ಹುಲುಕಡಿನಾಡು, ಪೂರ್ವಕ್ಕೆ ಮಣ್ಣೆನಾಡುಗಳು ಇದ್ದವು. ತಾಲ್ಲೂಕಿನ ಬಹುತೇಕ ಗ್ರಾಮಗಳು ಈ ನಾಡುಗಳಲ್ಲಿ ಅಂತರ್ಗತವಾಗಿದ್ದವು. ಈ ರೀತಿಯ ವಿಶಾಲ ಪ್ರದೇಶವು ಭೌಗೋಳಿಕವಾಗಿ ಬಹಳ ವಿಸ್ತಾರವಾದುದು. ಒಟ್ಟಾರೆ ಈ ತಾಲ್ಲೂಕಿನಲ್ಲಿ ೩೦೧ ಗ್ರಾಮಗಳಿದ್ದು, ಅವು ಕಸಬಾ, ತೂಬಗೆರೆ, ಮಧುರೆ, ದೊಡ್ಡಬೆಳವಂಗಲ, ಸಾಸಲು ಹೋಬಳಿಗಳಲ್ಲಿ ವಿಂಗಡಣೆಯಾಗಿವೆ. ಇದರ ಒಟ್ಟು ವಿಸ್ತೀರ್ಣ ೬೯,೭೬೦ ಹೆಕ್ಟೇರ್ ಆಗಿದೆ. ಇಂತಹ ವಿಶಾಲ ವಾದ ಭೂ ಪ್ರದೇಶದಲ್ಲಿ ಗಂಗ, ಹೊಯ್ಸಳ, ವಿಜಯನಗರ ಅರಸರ ಕಾಲದ ಅನೇಕ ಶಾಸನಗಳು ಸಮೃದ್ಧಿಯಾಗಿದ್ದು, ಶಾಸನಕ್ಷೇತ್ರ ಪ್ರಪಂಚಕ್ಕೆ ಕೊಡುಗೆ ನೀಡಿದೆ ಎಂದು ಹೇಳಬಹುದು.

ಈ ಅಧ್ಯಯನವನ್ನು ಒಟ್ಟು ಏಳು ಅಧ್ಯಾಯಗಳನ್ನಾಗಿ ವಿಂಗಡಿಸಿಕೊಂಡು ಚರ್ಚಿಸಲಾಗಿದೆ. ಈ ಅಧ್ಯಾಯಗಳಲ್ಲಿ ಚರ್ಚಿತವಾಗಿರುವ ವಿಷಯಗಳು ಈ ಕೆಳಕಂಡಂತಿವೆ.

ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿಯನ್ನು ವಿವರಿಸಲಾಗಿದೆ. ಅಧ್ಯಾಯ ಎರಡರಲ್ಲಿ ತಾಲ್ಲೂಕಿನ ಇತಿಹಾಸವನ್ನು ಚರ್ಚಿಸಲಾಗಿದೆ. ಇಲ್ಲಿ ಭೌಗೋಳಿಕ ವಿವರಗಳ ಆದಿಯಾಗಿ ಶಾತವಾಹನ, ಗಂಗ, ಹೊಯ್ಸಳರು, ವಿಜಯನಗರ, ಪಾಳೇಯಗಾರರು, ಬ್ರಿಟಿಷರ ಕಾಲದ ಸಂಗತಿಗಳು ಮತ್ತು ತಾಲ್ಲೂಕಿನ ಸ್ವಾತಂತ್ರ್ಯ ಹೋರಾಟಗಾರರ ಪ್ರಮುಖಾಂಶಗಳನ್ನು ವಿವೇಚಿಸಲಾಗಿದೆ. ಶಾತವಾಹನ ಮತ್ತು ಗಂಗರ ಕಾಲದ ಶಾಸನಗಳು ಮತ್ತು ಪ್ರಾಚೀನ ಅವಶೇಷಗಳು ಹಾಗೂ ಬೌದ್ಧ ಧರ್ಮದ ಕೆಲವು ಭಗ್ನ ಪ್ರತಿಮೆಗಳು ತಾಲ್ಲೂಕಿನ ಪ್ರಾಚೀನ ಬೌದ್ಧ ನೆಲೆಯಾದ ರಾಜಘಟ್ಟ ಗ್ರಾಮದಲ್ಲಿ ದೊರೆತಿವೆ. ಇಲ್ಲಿ ಶಾತವಾಹನರ ಕಾಲಕ್ಕೆ ಸೇರಿದ ಆದಿಚರಿತ್ರೆ ಕಾಲದ ಮಣ್ಣಿನ ಸುಟ್ಟ ಇಟ್ಟಿಗೆಗಳು ಕಂಡುಬಂದಿದೆ. ಇವುಗಳು ಶಾತವಾಹನ ಮತ್ತು ಗಂಗರ ಕಾಲದ ಕಟ್ಟಡಗಳಿಗೆ ಬಳಸಿರುವ ಇಟ್ಟಿಗೆಗಳ ಆಕೃತಿಗೆ ಮತ್ತು ಗಾತ್ರಕ್ಕೆ ಸಮನಾಗಿವೆ. ಗಂಗರ ಕಾಲದ್ದೆನ್ನಲಾದ ಮಡಿಕೆಗಳು ಮತ್ತು ಶಿವಾಲಯಗಳು ಈ ಗ್ರಾಮದಲ್ಲಿವೆ. ಇವುಗಳಲ್ಲಿ ಸುಂದರವಾದ ಕಪ್ಪುಶಿಲೆಯ ಮೂರು ಶಿವಲಿಂಗಗಳಿವೆ. ಇಲ್ಲಿನ ಒಂದು ಶಿವಲಿಂಗ ಇಂದಿಗೂ ಪೂಜೆಗೊಳ್ಳುವ ಹಳೆಯ ದೇವಾಲಯದಲ್ಲಿದೆ. ಇನ್ನು ಉಳಿದ ಎರಡು ಶಿವಲಿಂಗಗಳು ಭೂಮಿಯಲ್ಲಿ ಹೂತಿವೆ. ಇವುಗಳು ಎರಡು ಎರಡೂವರೆ ಅಡಿ ಎತ್ತರವಾಗಿದ್ದು, ಪ್ರಾಚೀನ ಶೈಲಿಯ ಬ್ರಹ್ಮ ಸೂತ್ರವನ್ನು ಹೊಂದಿವೆ. ಇಲ್ಲಿನ ಪ್ರದೇಶದಲ್ಲಿ ಚೋಳರ ಕಾಲದ ತಾಮ್ರದ ನಾಣ್ಯವೊಂದು ದೊರೆತಿದ್ದು, ಇದು ಚೋಳರ ಸಂಪರ್ಕದ

ಬಗ್ಗೆ ಮಾಹಿತಿಯನ್ನು ಒದಗಿಸಿದೆ. ಮತ್ತೊಂದು ನಾಣ್ಯ ಸುಮಾರು ೬ ಸೆ.ಮೀಟರ್‌ನಷ್ಟು ವ್ಯಾಸವುಳ್ಳದ್ದಾಗಿದ್ದು, ವಿಜಯನಗರ ಕಾಲಕ್ಕೆ ಸೇರಿದ್ದಾಗಿದೆ ಎಂದು ಹೇಳಬಹುದು. ಅಲ್ಲದೆ ಬೈರಾಪುರ, ಜಾಲಿಗೆರೆ, ಶ್ರೀರಾಮನಹಳ್ಳಿ ಮುಂತಾದ ಕಡೆ ಬೃಹತ್ ಶಿಲಾ ಸಮಾಧಿಗಳನ್ನು ಕಾಣಬಹುದು. ಈ ರಾಜಘಟ್ಟ ಗ್ರಾಮ ಆದಿ ಚರಿತ್ರೆಕಾಲದ ಪ್ರಾಚ್ಯವಶೇಷಗಳಿಂದ ಕೂಡಿದ್ದು ಇಂದಿನವರೆಗೂ ನಿರಂತರ ಜನವಸತಿ ಕೇಂದ್ರವಾಗಿದೆ. ಕರ್ನಾಟಕದ ಕೆಲವೇ ಕೆಲವು ಜೀವಂತ ಐತಿಹಾಸಿಕ ನೆಲೆಗಳಲ್ಲಿ ಇದು ಒಂದು ಎನ್ನಬಹುದು. ಬೃಹತ್ ಶಿಲಾಯುಕ್ಕೆ ಸೇರಿದ ಮತ್ತೊಂದು ಗ್ರಾಮ ಸಾಸಲು. ಇಲ್ಲಿ ಮೆಗಾಲಿಥಿಕ್ ಏಜ್‌ಗೆ ಸೇರಿದ ಐದು ಬೃಹತ್ ನಿಲುವುಗಲ್ಲುಗಳಿಗೆ. ಈ ನಿಲುವುಗಲ್ಲುಗಳ ಮೇಲಿನ ರೇಖಾಚಿತ್ರಗಳು ಸಂಶೋಧನೆಗೆ ಮತ್ತಷ್ಟು ಪುಷ್ಟಿ ಒದಗಿಸುತ್ತವೆ.

ಈ ಪ್ರದೇಶದಲ್ಲಿ ಹೊಯ್ಸಳರು, ಗಂಗ, ವಿಜಯನಗರ ಅರಸರ ಕಾಲದ ಶಾಸನಗಳೇ ಹೆಚ್ಚು ದೊರೆತಿವೆ. ಇವರ ಅಧೀನದಲ್ಲಿದ್ದ ಹುಲುಕಡಿನಾಡ ಪ್ರಭುಗಳು, ಗಂಡ್ರಗೊಳ್ಳಿ ದಳವಾಯಿಗಳು, ಆವತಿನಾಡ ಪ್ರಭುಗಳು, ಎಲಹಂಕನಾಡ ಪ್ರಭುಗಳ ಇತಿಹಾಸವನ್ನು ಇಲ್ಲಿ ಸೂಕ್ಷ್ಮವಾಗಿ ವಿವರಿಸಲಾಗಿದೆ. ಅಲ್ಲದೆ ಹೈದರಾಲಿ, ಟಿಪ್ಪು, ಬಿಜಾಪುರದ ಸೇನಾನಿಗಳ ಬಗ್ಗೆಯೂ ವಿವೇಚಿಸಲಾಗಿದೆ.

ಅಧ್ಯಾಯ ಮೂರರಲ್ಲಿ ಶಾಸನಗಳ ಸಮಗ್ರ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಶಾಸನಗಳ ವಸ್ತು, ವಿಷಯ, ವೈವಿಧ್ಯ, ಶಾಸನಗಳ ವರ್ಗೀಕರಣ, ದಾನಶಾಸನಗಳು, ಶಾಸನಗಳಲ್ಲಿ ಅಧಿಕಾರವರ್ಗ, ಶಾಸನೋಕ್ತ ಗ್ರಾಮಗಳು, ಶಾಸನಗಳಲ್ಲಿ ವೀರಪರಂಪರೆ, ಶಾಸನಗಳಲ್ಲಿ ಸಾಮಾನ್ಯರ ಚಿತ್ರಣ, ಅಗ್ರಹಾರಗಳು, ಶಾಸನಗಳಲ್ಲಿ ಕಾಲದ ನಿರೂಪಣೆ, ಶಾಸನಗಳಲ್ಲಿ ಸಾಹಿತ್ಯ, ಶಾಸನಕವಿಗಳು, ಲಿಪಿಕಾರರು, ಲಿಪಿವೈವಿಧ್ಯತೆಯ ಬಗ್ಗೆ ಕೂಲಂಕಶವಾಗಿ ಚರ್ಚಿಸಲಾಗಿದೆ. ದೊಡ್ಡಬಳ್ಳಾಪುರದ ಕೋಟೆ ಶಾಸನ, ಕ್ರಿ.ಶ.೧೫೩೦ರ ಕೊನಘಟ್ಟದ ಶಾಸನ, ಕ್ರಿ.ಶ.೧೭೧೫ರ ಮಾವಳೀಪುರದ ಶಾಸನ ಇನ್ನು ಹಲವು ಶಾಸನಗಳು ಶೈವಧರ್ಮಕ್ಕೆ ಸೇರಿದವುಗಳು. ಈ ಪ್ರದೇಶದಲ್ಲೂ ಪ್ರಾಚೀನ ಕಾಲದಲ್ಲಿ ಜೈನಧರ್ಮದ ಪ್ರಭಾವವಿತ್ತೆಂದು ಗಂಗರ ಎರಡು ಶಾಸನಗಳು ತಿಳಿಯಪಡಿಸುತ್ತವೆ.

ನಾಲ್ಕನೆಯ ಅಧ್ಯಾಯದಲ್ಲಿ ಶಾಸನಶಿಲ್ಪದ ಬಗ್ಗೆ ಅಧ್ಯಯನ ಮಾಡಲಾಗಿದೆ. ಶೈವಶಾಸನ ಶಿಲ್ಪ, ವೈಷ್ಣವಶಾಸನಶಿಲ್ಪ ಮತ್ತು ಜೈನಧರ್ಮಕ್ಕೆ ಸಂಬಂಧಪಟ್ಟ ಶಾಸನಶಿಲ್ಪಗಳನ್ನು ಅಧ್ಯಯನ ಮಾಡಲಾಗಿದೆ. ಶೈವ ಶಾಸನಶಿಲ್ಪಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಶಿವಲಿಂಗ, ಆಕಳು, ಕರು, ನಂದಿಶಿಲ್ಪ, ದೇವಾಲಯದ ಮುಂಭಾಗದಲ್ಲಿ ಕಂಡುಬರುವ ಮಂಟಪ, ಸೂರ್ಯಚಂದ್ರ ಮುಂತಾದ ಶಿಲ್ಪಗಳನ್ನು ನೋಡಬಹುದು. ಶಿವಲಿಂಗ ಇರುವ ಹಲವು ಶೈವಶಾಸನಗಳು ಮತ್ತು ಶಿಲ್ಪಗಳು ಅಧಿಕವಾಗಿ ಕಂಡುಬಂದಿರುವುದರಿಂದ ಶೈವಧರ್ಮ ಇಲ್ಲಿ ಹೆಚ್ಚು

ಪ್ರಚಲಿತವಾಗಿದ್ದಿರಬೇಕು. ಕಾಡನೂರು, ನಾಗೇನಹಳ್ಳಿ, ಅಂತರಹಳ್ಳಿ ಮುಂತಾದ ಕಡೆಗಳಲ್ಲಿ ವೈಷ್ಣವ ಶಿಲ್ಪಗಳಿರುವ ಶಾಸನಗಳು ಕಂಡುಬಂದಿವೆ. ಶೈವಶಿಲ್ಪಗಳಲ್ಲಿ ಕಂಡುಬರುವ ಲಿಂಗಮುದ್ರೆ ಕಲ್ಲುಗಳಂತೆ, ವೈಷ್ಣವ ಶಾಸನಶಿಲ್ಪಗಳಲ್ಲಿ ವಾಮನ ಮುದ್ರೆ ಮತ್ತು ರೇಖಾಚಿತ್ರಗಳು ಕಂಡುಬರುತ್ತವೆ. ಜೈನ ಶಾಸನಗಳಲ್ಲಿ ತೀರ್ಥಂಕರರು ಕುಳಿತಭಂಗಿ, ತಲೆಯ ಮೇಲೆ ಮುಕ್ಕೊಡೆ ಶಿಲ್ಪಗಳಿರುವುದು ಕಡಿಮೆ. ಈ ಭಾಗದಲ್ಲಿ ವ್ಯಕ್ತಿ-ವ್ಯಕ್ತಿಗಳ ಹೋರಾಟ, ಹೋರಾಟದ ಪರಂಪರೆ, ತುರುಗೋಳ್ ಶಿಲ್ಪ, ಪ್ರಾಣಿ ಪ್ರಾಣಿಗಳ ಹೋರಾಟ, ವ್ಯಕ್ತಿ ಮತ್ತು ಪ್ರಾಣಿ ಹೋರಾಟ ಶಿಲ್ಪಗಳನ್ನು ಮತ್ತು ಯುದ್ಧ ಹೋರಾಟ ಶಿಲ್ಪಗಳನ್ನು ಕುರಿತು ಚರ್ಚಿಸಲಾಗಿದೆ. ಅಲ್ಲದೆ ಶಾಸನಶಿಲ್ಪಗಳನ್ನು ಸಾಂಸ್ಕೃತಿಕ ದೃಷ್ಟಿಕೋನದಲ್ಲಿಯೂ ವಿವೇಚಿಸಲಾಗಿದೆ. ವೀರರು ತೊಟ್ಟಿರುವ ವೇಷಭೂಷಣ, ಆಯುಧಗಳು, ಧರಿಸಿರುವ ಆಭರಣಗಳು, ಸ್ತ್ರೀಯರ ಉಡುಪುಗಳು, ಕಂಠೀಹಾರ, ಡಾಬು, ಕಾಲುಕಡಗ, ಕೇಶವಿನ್ಯಾಸ ಮುಂತಾದ ಅಂಶಗಳನ್ನು ಚರ್ಚಿಸಲಾಗಿದೆ.

ಸ್ಮಾರಕಗಳ ಅಧ್ಯಯನ ಎಂಬ ಐದನೇ ಅಧ್ಯಾಯದಲ್ಲಿ ದೇವಾಲಯಗಳ ಬಗ್ಗೆ ವಿಶ್ಲೇಷಿಸಿದ್ದೇನೆ. ತಾಲ್ಲೂಕಿನಲ್ಲಿ ಅಧಿಕ ದೇವಾಲಯಗಳಿದ್ದರೂ ಅರಸುಮನೆತನಗಳಿಗೆ ಸೇರಿದ ಅತ್ಯಂತ ಪ್ರಾಚೀನ ದೇವಾಲಯಗಳನ್ನು ಮಾತ್ರ ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಶೈವ ದೇವಾಲಯಗಳಾದ ಹಣಬೆಯ ವೀರಭದ್ರ ದೇವಾಲಯ, ಹುಲುಕಡಿಬೆಟ್ಟದ ವೀರಭದ್ರಸ್ವಾಮಿ ದೇವಾಲಯ, ಇಸ್ತೂರಿನ ನೀಲಕಂಠೇಶ್ವರ ದೇವಾಲಯ, ವೈಷ್ಣವ ದೇವಲಯಗಳಾದ ಅರಳು ಮಲ್ಲಿಗೆಯ ಚನ್ನಕೇಶವಸ್ವಾಮಿ ದೇವಾಲಯ, ಕಾಡನೂರಿನ ಚನ್ನಕೇಶವಸ್ವಾಮಿ ದೇವಾಲಯ ಮಾರ್ಗದಾಂಬ ದೇವಾಲಯಗಳನ್ನು ವಾಸ್ತುಶಿಲ್ಪದ ಹಿನ್ನೆಲೆಯಲ್ಲಿ ಕುರಿತು ಚರ್ಚಿಸಲಾಗಿದೆ. ಶಿಲ್ಪ ಮತ್ತು ಶಾಸನಗಳ ಹಿನ್ನೆಲೆಯಲ್ಲಿ ದೇವಾಲಯಗಳಲ್ಲಿನ ಮೂರ್ತಿಶಿಲ್ಪಗಳ ಬಗ್ಗೆಯೂ, ದೇವಾನು ದೇವತೆಗಳ ಶಿಲ್ಪಗಳು, ಇತರೆ ಶಿಲ್ಪಗಳನ್ನು ವಿಶ್ಲೇಷಣೆಗೆ ಒಳಗು ಮಾಡಿದ್ದೇನೆ.

ತಾಲ್ಲೂಕಿನಲ್ಲಿನ ಕೋಟೆಗಳಲ್ಲಿ ಗಿರಿದುರ್ಗಗಳಾದ ಮಾಕಳಿದುರ್ಗ, ಹುಲುಕಡಿಬೆಟ್ಟ, ಉಜ್ಜನಿಬೆಟ್ಟ, ತೋಡಲು ಬಂಡೆ ಕೋಟೆಗಳನ್ನು, ನೆಲದುರ್ಗಗಳಾದ ಜಾಲಿಗೆರೆ, ಲಿಂಗಾಪುರ, ಮೆಳೆಕೋಟೆ, ದೊಡ್ಡಹೆಜ್ಜಾಜಿ, ಹಳೇಕೋಟೆಗಳನ್ನು ಕುರಿತು ಚರ್ಚಿಸಲಾಗಿದೆ. ಆದರೆ ತಾಲ್ಲೂಕಿ ನಲ್ಲಿ ಜಲದುರ್ಗಗಳು ಇಲ್ಲವೆಂದೇ ಹೇಳಬಹುದು. ಅರಳುಮಲ್ಲಿಗೆ, ಕಸಾಘಟ್ಟ, ದೊಡ್ಡಬಳ್ಳಾಪುರದ ಹದಿನಾರು ಕಣ್ಣಿನಬಾವಿ, ಹಾದ್ರಿಪುರದ ನಾಲ್ಕುಕಣ್ಣಿನ ಬಾವಿ, ಕೋಣೆಗಳನ್ನು ಕೆರೆಗಳನ್ನು ಕುರಿತು ಸಮಗ್ರವಾಗಿ ಇಲ್ಲಿ ಅಧ್ಯಯನ ಮಾಡಲಾಗಿದೆ.

ಆಚರಣೆಗಳು ಮತ್ತು ಜಾತ್ರೆಗಳು ಎಂಬ ಭಾಗದಲ್ಲಿ ತಾಲ್ಲೂಕಿನಲ್ಲಿ ಆಚರಿಸುತ್ತಿರುವ ಆಚರಣೆಗಳು, ರೂಢಿ, ಸಂಪ್ರದಾಯಗಳು ಹೇಗೆ ಅಸ್ತಿತ್ವಕ್ಕೆ ಬಂದವು. ಹೇಗೆ ಇವು ಇಂದಿಗೂ ಸಮಾಜದ ಅವಿಭಾಜ್ಯ ಅಂಗಗಳಾಗಿ, ಜನರ ಬದುಕಿನ ನಡುವೆ ಹಾಸು ಹೊಕ್ಕಾಗಿವೆ ಎಂಬುದನ್ನು ಕುರಿತು ಚರ್ಚಿಸಲಾಗಿದೆ. ಜನಪದ ಸಂಸ್ಕೃತಿಗೆ ಆಚರಣೆಯೇ ಮೂಲ.

ಆಚರಣೆಗಳು ಇಲ್ಲದಿದ್ದರೆ ಯಾವ ದೈವವೂ ಅಸ್ತಿತ್ವದಲ್ಲಿರಲು ಸಾಧ್ಯವಿಲ್ಲ. ಈ ಜನಪದರಲ್ಲಿನ ಧರ್ಮ, ಆಚರಣೆಯ ಧರ್ಮ ಎಂದು ಹೇಳಬಹುದು. ಇವುಗಳು ದೇವತೆಗಳಿಗೂ ಸಮಾಜಕ್ಕೂ ಇರುವ ಸಂಬಂಧ ಮತ್ತು ಅವುಗಳ ಅಭಿನಯಗೊಳ್ಳುವ ಕ್ರಮದ ವಿವರಗಳೇ ಈ ಆಚರಣೆಗಳು. ಆಚರಣೆಗಳನ್ನು ಇನ್ನೂ ವ್ಯಾಪಕವಾಗಿ ಅರ್ಥೈಸುವುದಾದರೆ ಮತಧರ್ಮಗಳಿಗೆ ಸಂಬಂಧಿಸಿದಂತೆ ಅಗೋಚರ ದೈವಶಕ್ತಿಗಳ ಪ್ರಿತ್ಯರ್ಥವಾಗಿ ಮಾನವ ನಡೆಸುತ್ತಾ ಬಂದಿರುವ ಮತಾಚಾರಗಳಿಗೆ ಕರ್ಮವಿಧಿಗಳಿಗೆ ಆಚರಣೆ ಎನ್ನಬಹುದು. ಈ ಹಿನ್ನೆಲೆಯ ಅರ್ಥದಲ್ಲಿ ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ಅಸ್ತಿತ್ವದಲ್ಲಿರುವ ಆಚರಣೆಗಳು ಮತ್ತು ಜಾತ್ರೆಗಳನ್ನು ಸಂಕ್ಷಿಪ್ತವಾಗಿ ಅಧ್ಯಯನ ಕೈಗೊಳ್ಳಲಾಗಿದೆ.

ತಾಲ್ಲೂಕಿನ ಏಕಾಶಿಪುರದ ಗ್ರಾಮದೇವತೆಗೆ ಕಂಬನೆಡುವುದು, ದೊಡ್ಡಬೆಳವಂಗಲದ ಮದ್ದೂರಮ್ಮನಿಗೆ ಮಡೆಕೊಡುವ ಸಂಪ್ರದಾಯ, ಎಳವಾರ, ಕೊಂಡಹಾಯುವುದು, ಬಲಿ ಆಚರಣೆ, ಆರತಿ ಬೆಳಗುವುದು, ಉರುಳುಸೇವೆ ಇನ್ನೂ ಹಲವು ಬಗೆಯ ಆಚರಣೆಗಳು ಹಾದ್ರಿಪುರ, ಉಜ್ಜನಿ, ಗಂಟಿಗಾನಹಳ್ಳಿ, ಕುರುವಿಗೆ, ಹೊಸಹಳ್ಳಿ, ಸಾಸಲು, ತಿಪ್ಪೂರು ಮುಂತಾದ ಗ್ರಾಮಗಳಲ್ಲಿ ಈ ಆಚರಣೆಗಳು ರೂಢಿಯಲ್ಲಿರುವುದು ಕಂಡುಬರುತ್ತದೆ. ಈ ಗೆಲವು ಆಚರಣೆಗಳ ಹಿನ್ನೆಲೆಯಲ್ಲಿಯೇ ಜಾತ್ರಾ ಮಹೋತ್ಸವಗಳು ಅಸ್ತಿತ್ವದಲ್ಲಿರುವುದೆಂದು ಹೇಳಬಹುದು. ದೊಡ್ಡಬಳ್ಳಾಪುರದ ಜಾತ್ರೆ, ಶ್ರೀ ಘಾಟಿಸುಬ್ರಹ್ಮಣ್ಯ ರಥೋತ್ಸವ, ಹುಲುಕಡಿಬೆಟ್ಟದ ಜಾತ್ರೆ, ಕಾಡನೂರು ಜಾತ್ರೆಗಳನ್ನು ಪ್ರಮುಖವಾಗಿ ಆಯ್ದುಕೊಂಡು ಇಲ್ಲಿ ಬಳಸಿಕೊಂಡಿದ್ದೇನೆ.

ಸಮಾರೋಪದ ಭಾಗದಲ್ಲಿ ಮೇಲ್ಕಂಡ ಅಧ್ಯಾಯಗಳಲ್ಲಿ ನಾನು ಕಂಡುಕೊಂಡ ವಿಷಯ ಸ್ವರೂಪ, ಸಾಧನೆಗಳನ್ನು ಪರಾಮರ್ಶಿಸಿದ್ದೇನೆ. ಅಧ್ಯಯನದ ಸಂದರ್ಭದಲ್ಲಿ ಎದುರಾದ ಸಮಸ್ಯೆಗಳನ್ನು ಮಾರ್ಗದರ್ಶಕರು, ವಿದ್ವಾಂಸರುಗಳೊಂದಿಗೆ ಸೂಕ್ತ ರೀತಿಯಲ್ಲಿ ಪರಿಹರಿಸಿಕೊಂಡು ವಿವಿಧ ಮಾರ್ಗಗಳಲ್ಲಿ ನನಗೆ ಹೊಳೆದ ವಿಚಾರಗಳನ್ನು ಚರ್ಚಿಸಲಾಗಿದೆ. ಒಟ್ಟಾರೆಯಾಗಿ ಹೇಳುವುದಾದರೆ ನನ್ನ ಅಧ್ಯಯನದ ಫಲಿತದ ಸಿಂಹಾವಲೋಕನ ಮತ್ತು ಅವಲೋಕನ ಈ ಅಧ್ಯಾಯದಲ್ಲಿದೆ.

## ೧.೩. ಆಕರಗಳು

ಶಾಸನಕ್ಷೇತ್ರದಲ್ಲಿ ಇಲ್ಲಿಯವರೆಗೂ ಅನೇಕ ವಿದ್ವಾಂಸರು ಸಂಶೋಧನೆಗಳನ್ನು ಕೈಗೊಂಡು ಫಲಿತಗಳನ್ನು ಪ್ರಕಟಿಸಿದ್ದಾರೆ. ಆದರೆ ಒಂದು ತಾಲ್ಲೂಕನ್ನು ಆಧಾರವಾಗಿಟ್ಟುಕೊಂಡು ಸಮಗ್ರವಾಗಿ ಸಂಶೋಧನೆ ಮಾಡುವ ಕ್ರಮ ಇತ್ತೀಚೆಗೆ ಆರಂಭವಾಗಿದೆ. ಈ ನಿಟ್ಟಿನಲ್ಲಿ ಸಮಗ್ರವಾಗಿ ಅಧ್ಯಯನಕ್ಕೆ ಒಳಪಡದ ದೊಡ್ಡಬಳ್ಳಾಪುರ ತಾಲ್ಲೂಕನ್ನು ನಮ್ಮ ಅಧ್ಯಯನಕ್ಕಾಗಿ ತೆಗೆದುಕೊಂಡು ಅನೇಕ ಪೂರಕ ಅಂಶಗಳನ್ನು ಸಂಗ್ರಹಿಸಿಕೊಂಡು ಅಧ್ಯಯನ ಮಾಡಲಾಗಿದೆ.

ಈ ಅಧ್ಯಯನದಲ್ಲಿ ಬಳಸಿಕೊಂಡ ಪ್ರಮುಖ ಆರಕಗಳನ್ನು ಇಲ್ಲಿ ವಿವರಿಸಲಾಗಿದೆ. ಇದಕ್ಕೂ ಮುನ್ನ ಹಲವು ವಿದ್ವಾಂಸರು ತಮ್ಮ ಅಧ್ಯಯನದ ಬಿಡಿ ಲೇಖನಗಳಲ್ಲಿ ಈ ತಾಲ್ಲೂಕಿನ ಕೆಲವು ಅಂಶಗಳನ್ನು ಹೊರಹಾಕಿದ್ದಾರೆ. ಡಾ.ಎಂ.ಎಂ.ಕಲಬುರ್ಗಿಯವರು ಸಂಪಾದಿಸಿರುವ ಪ್ರಾಚೀನ ಕರ್ನಾಟಕದ ಆಡಳಿತ ವಿಭಾಗಗಳು ಎಂಬ ಕೃತಿಯಲ್ಲಿ ಡಾ.ಡಿ.ವಿ.ಪರಮಶಿವಮೂರ್ತಿ ಯವರ ದೊಡ್ಡಬಳ್ಳಾಪುರ ತಾಲ್ಲೂಕಿಗೆ ಸಂಬಂಧಿಸಿದಂತೆ, 'ಹುಲುಕಡಿನಾಡು' ಎಂಬ ಶೀರ್ಷಿಕೆಯಡಿಯಲ್ಲಿ ಕೆಲವು ಮಹತ್ವದ ಅಂಶಗಳನ್ನು ತಿಳಿಸಿದ್ದಾರೆ. ಉಪನ್ಯಾಸಕರಾದ ಸಾಸಲು ವಿಶ್ವನಾಥರವರು 'ದೊಡ್ಡಬಳ್ಳಾಪುರ–ನವಶೋಧಿತ ಶಿಲಾಯುಗ ಸಂಸ್ಕೃತಿಯ ಸ್ಮಾರಕಗಳು ಮತ್ತು ರೇಖಾಚಿತ್ರಗಳು', ಮೈಸೂರು ನಾಗರಾಜಶರ್ಮರವರ 'ರಾಜಘಟ್ಟ– ಒಂದು ಐತಿಹಾಸಿ ನೆಲೆ, ಡಾ.ಎಂ.ಎಸ್.ಕೃಷ್ಣಮೂರ್ತಿ ಮತ್ತು ಡಾ.ಎಂ.ಪಿ.ಮಹದೇವಯ್ಯನವರು ಪ್ರಕಟಿಸಿರುವ 'ಕರ್ನಾಟಕದ ಬೌದ್ಧ ಧರ್ಮದ ಮೇಲೆ ಹೊಸ ಬೆಳಕು–ರಾಜಘಟ್ಟ ಉತ್ಖನನ' ಎಂಬ ಲೇಖನಗಳು ಮಾತ್ರ ದೊಡ್ಡಬಳ್ಳಾಪುರ ತಾಲ್ಲೂಕಿನ ಬಗೆಗೆ ಕೆಲವು ಹೊಸ ಸಂಗತಿಗಳನ್ನು ತಿಳಿಸುತ್ತವೆ. ಇವುಗಳ ಜೊತೆಗೆ ಎಫಿಗ್ರಾಫಿಯಾ ಕರ್ನಾಟಕದ ಸಂಪುಟ ೯ರಲ್ಲಿ ೬೮ ಶಾಸನಗಳು, ಅನುಬಂಧ ಸಂಪುಟದಲ್ಲಿ ೭ ಶಾಸನಗಳು ಪ್ರಕಟಗೊಂಡಿದ್ದು, ಒಟ್ಟು ೭೫ ಶಾಸನಗಳನ್ನು ಬಳಸಿಕೊಂಡಿದ್ದೇನೆ. ಇದರ ಜೊತೆಗೆ ಶಾಸನ ಸಂಶೋಧನೆ ಎಂಬ ಕೃತಿಯಲ್ಲಿ ಅಂಬಲಗೆರೆಯ ಶಾಸನವೊಂದು ಪ್ರಕಟವಾಗಿದೆ. ಈ ಶಾಸನಗಳಲ್ಲಿ ಶೈವದಾನಶಾಸನಗಳು ೧೪, ವೈಷ್ಣವ ದಾನಶಾಸನಗಳು ೨೭, ವೀರಗಲ್ಲುಗಳು ೧೦, ಗ್ರಂಥಲಿಪಿಶಾಸನ ೪, ಪಾರ್ಶಿಲಿಪಿಶಾಸನ ೧, ಜೈನಶಾಸನ ೨, ಹೀಗೆ ಒಟ್ಟು ೭೫ ಶಾಸನಗಳನ್ನು ಬಳಸಿಕೊಂಡು ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಬಂದ ರಾಷ್ಟ್ರಕೂಟರ ಕಾಲದ ಹಾದ್ರಿಪುರದ ಶಾಸನ, ಗಂಗರ ಕಾಲದ ಎರಡು ಶಾಸನಗಳು ಯುದ್ಧವರ್ಣನಾ ವೀರಗಲ್ಲುಗಳಾಗಿದ್ದು ಲಿಪಿಯನ್ನು ಒಳಗೊಂಡಿವೆ. ಈ ಶಾಸನಗಳ ಜೊತೆಗೆ ಒಂದುನೂರಕ್ಕೂ ಅಧಿಕ ವೀರಗಲ್ಲುಗಳು, ಮಾಸ್ತಿಕಲ್ಲುಗಳನ್ನು ಸಂಗ್ರಹಿಸಲಾಗಿದೆ. ಇವುಗಳ ಜೊತೆಗೆ ಸಾಹಿತ್ಯಕೃತಿಗಳಾದ ಕನ್ನಡ ಗದಾಯುದ್ಧ, ಪಂಪನ ಆದಿಪುರಾಣ, ಆರ್.ನರಸಿಂಹಚಾರ್ಯರ ಶಾಸನಪದ್ಯಮಂಜರಿ ಮುಂತಾದ ಗ್ರಂಥಗಳಲ್ಲಿ ಅನೇಕ ಮಾಹಿತಿಗಳು ದೊರೆತಿದ್ದು, ಅವುಗಳನ್ನು ಸಮಗ್ರವಾಗಿ ಬಳಸಿಕೊಂಡು ಅಧ್ಯಯನ ಕೈಗೊಳ್ಳಲಾಗಿದೆ.

ತಾಲ್ಲೂಕಿನ ಅನೇಕ ಶೈವ ಮತ್ತು ವೈಷ್ಣವ ದೇವಾಲಯಗಳನ್ನು ಪ್ರತ್ಯಕ್ಷವಾಗಿ ಕ್ಷೇತ್ರಕಾರ್ಯದ ಮೂಲಕ ಕಂಡು ಮಾಹಿತಿ ಸಂಗ್ರಹಿಸಿ ಇಲ್ಲಿ ವಿಶ್ಲೇಷಿಸಿದ್ದೇನೆ. ಆರಂಭದಿಂದ ಮೊದಲ್ಗೊಂಡು ಪಾಳೆಯಗಾರರ ಅವಧಿಯವರೆಗಿನ ಅನೇಕ ದೇವಾಲಯಗಳ ವಾಸ್ತುಶೈಲಿ, ಪ್ರಾಮುಖ್ಯತೆ ಮತ್ತು ಜನಗಳೊಂದಿಗೆ ಅವುಗಳ ಸಂಬಂಧಗಳನ್ನು ಕುರಿತು ವಿವರವಾಗಿ ಇಲ್ಲಿ ಚರ್ಚಿಸಿದ್ದೇನೆ.

# ಅಧ್ಯಾಯ ೨

## ಇತಿಹಾಸ

# ೨

# ಇತಿಹಾಸ

ಪ್ರತಿಯೊಂದು ಜನಾಂಗದ ಜೀವನವೂ ಆಯಾ ಭೌಗೋಳಿಕ ಪರಿಸರದ ಬೆಟ್ಟಗುಡ್ಡ, ನದಿ, ತೊರೆ, ಮೊದಲಾದ ನೈಸರ್ಗಿಕ ಸಂಪತ್ತನ್ನು ಅವಲಂಬಿಸಿದೆ. ಆಡಳಿತದ ಸೌಕರ್ಯಕ್ಕಾಗಿ ವಿಭಾಗಗಳನ್ನು ಮಾಡುವಾಗ ಪ್ರಾಚೀನ ಕಾಲದಿಂದಲೂ ನೈಸರ್ಗಿಕ ಸಂಪತ್ತನ್ನು ಅವಲಂಬಿಸಿದೆ. ಹಾಗಾಗಿ ಭೂಗೋಳ ಮತ್ತು ಇತಿಹಾಸದಲ್ಲಿ ಪ್ರಥಮ ಪ್ರಾಶಸ್ತ್ಯ ಯಾವುದಕ್ಕೆ ಎಂಬ ಪ್ರಶ್ನೆ ಬಂದಾಗ Geography lies at The basis of history ಎನ್ನುತ್ತಾನೆ ಕೌಂಟ್.[೧] ಇಲ್ಲಿ ಭೌಗೋಳಿಕತೆ ಮತ್ತು ಇತಿಹಾಸ ಎರಡೂ ಅವಳಿ ಸಹೋದರರಂತೆ ವರ್ತಿಸುತ್ತವೆ. ಭೌಗೋಳಿಕ ಹಿನ್ನೆಲೆ ಮತ್ತು ಇತಿಹಾಸದ ಹಿನ್ನೆಲೆಯ ಮಹತ್ವ ಪಡೆದಿರುವ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರ ತಾಲ್ಲೂಕು ಸಾಂಸ್ಕೃತಿಕವಾಗಿಯೂ ಮುಂದಿದೆ. ಇಲ್ಲಿನ ಭೌಗೋಳಿಕ ವಿವರ, ಶಿಲಾಯುಗದ ಅವಶೇಷಗಳು, ಸಮಾಧಿಗಳು ಮತ್ತು ಪಾಂಡವರ ಗುಡಿಗಳು, ಮಹತ್ವ ಪಡೆದಿವೆ. ಮೌರ್ಯ ಮತ್ತು ಶಾತವಾಹನರ ಅವಧಿಯ ಕಾಲದ ಐತಿಹಾಸಿಕ ನೆಲೆಗಳು, ಗಂಗರ ಮತ್ತು ಹೊಯ್ಸಳರ ಕಾಲದ ಶಾಸನಗಳು ತಾಲ್ಲೂಕಿನ ಇತಿಹಾಸವನ್ನು ಗುರುತಿಸುವಲ್ಲಿ ಸಹಕರಿಸುತ್ತವೆ. ವಿಜಯನಗರ ಅರಸರ ಅಧೀನದಲ್ಲಿದ್ದ ಸಾಮಂತರು, ನಾಡಪ್ರಭುಗಳು ಮತ್ತು ಗಂಡ್ರಗೂಳಿ ದಳವಾಯಿಗಳು ಇಲ್ಲಿ ಆಡಳಿತ ನಡೆಸಿರುವುದಕ್ಕೆ ಪುರಾವೆಗಳಿವೆ. ಇದೇ ಅವಧಿಯಲ್ಲಿದ್ದ ಪಾಳೇಯಗಾರರಾದ ಆವತಿನಾಡ ಪ್ರಭುಗಳು, ಯಲಹಂಕನಾಡ ಪ್ರಭುಗಳು, ದೊಡ್ಡಬಳ್ಳಾಪುರದ ಪಾಳೇಯಗಾರರು, ಹೈದರಾಲಿ ಮತ್ತು ಟಿಪ್ಪುಸುಲ್ತಾನ್, ಬ್ರಿಟೀಷರ ಅವಧಿಯಲ್ಲಿದ್ದ ಸ್ವಾತಂತ್ರ್ಯ ಹೋರಾಟಗಾರರು ದೊಡ್ಡಬಳ್ಳಾಪುರ ತಾಲ್ಲೂಕಿನ ಘನತೆಯನ್ನು ಎತ್ತಿ ಹಿಡಿದಿದ್ದಾರೆ. ಈ ಹಿನ್ನೆಲೆಯಲ್ಲಿಯೇ ತಾಲ್ಲೂಕಿನ ಇತಿಹಾಸವನ್ನು ಅರಿಯಬಹುದಾಗಿದೆ.

## ೨.೧. ಭೌಗೋಳಿಕ ಹಿನ್ನೆಲೆ

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಗಡಿಭಾಗವಾದ ದೊಡ್ಡಬಳ್ಳಾಪುರ ತಾಲ್ಲೂಕು ಉತ್ತಮವಾದ ಭೌಗೋಳಿಕ ಸನ್ನಿವೇಶವನ್ನು ಹೊಂದಿದೆ. ತಾಲ್ಲೂಕಿನ ಒಟ್ಟಾರೆ ಭೌಗೋಳಿಕ ವಿಸ್ತೀರ್ಣ ೭೯೨ ಚ.ಕಿ.ಮೀ. ಅಂದರೆ ೭೮,೭೬೦ ಹೆಕ್ಟೇರುಗಳು. ಈ ತಾಲ್ಲೂಕು ೧೩.೦೮° ಯಿಂದ ೧೩.೩೦° ಅಕ್ಷಾಂಶ ಮತ್ತು ೭೭.೧೬° ಯಿಂದ ೭೭.೩೯° ರೇಖಾಂಶದ ನಡುವೆ

ಇದೆ ಮತ್ತು ಸಮುದ್ರ ಮಟ್ಟಕ್ಕಿಂತ ೧೪೧೭ ಮೀಟರ್ ಎತ್ತರದಲ್ಲಿದೆ. ಇಲ್ಲಿನ ಸಾಮಾನ್ಯ ಮಳೆಯ ಪ್ರಮಾಣ ವಾರ್ಷಿಕ ೯೪೨ ಮಿಲಿ ಮೀಟರ್ ಇದ್ದು. ಈ ತಾಲ್ಲೂಕಿನಲ್ಲಿ ಒಟ್ಟು ೯ ಮಳೆಮಾಪನ ಕೇಂದ್ರಗಳಿವೆ.[2]

ದೊಡ್ಡಬಳ್ಳಾಪುರ ತಾಲ್ಲೂಕು ಭೌಗೋಳಿಕವಾಗಿ ವಿಶಾಲವಾದುದು. ಒಟ್ಟು ೬೮,೭೬೦ ಹೆಕ್ಟೇರ್ ವಿಸ್ತೀರ್ಣವನ್ನು ಹೊಂದಿದೆ. ಅಂದರೆ ಸುಮಾರು ೭೯೨ ಚ.ಕಿ.ಮೀಟರ್ ವಿಸ್ತೀರ್ಣವನ್ನು ಹೊಂದಿದೆ. ಸಾಗುವಳಿಗೆ ಯೋಗ್ಯವಾದ ಜಮೀನು ೪೧,೪೨೬ ಹೆಕ್ಟೇರ್. ಅರಣ್ಯವು ೩೮೯೫ ಹೆಕ್ಟೇರ್ ಭೂ ಪ್ರದೇಶವನ್ನು ಹೊಂದಿದೆ. ೩೪,೦೦೩ ಹೆಕ್ಟೇರ್ ಭೂಮಿಯಲ್ಲಿ ಖುಷ್ಕಿ ಬೇಸಾಯವನ್ನು, ೭೪೨೩ ಹೆಕ್ಟೇರ್ ಭೂಮಿಯಲ್ಲಿ ನೀರಾವರಿ ಬೇಸಾಯವನ್ನು, ೩೪೧೯ ಹೆಕ್ಟೇರ್ ಭೂಮಿಯು ಕೆರೆ ಅಚ್ಚುಕಟ್ಟು ಪ್ರದೇಶವನ್ನು ಹೊಂದಿದೆ. ಹಾಗೂ ೪೦೦೪ ಹೆಕ್ಟೇರ್ ಭೂಮಿಯನ್ನು ಬಾವಿ ನೀರಾವರಿಗಾಗಿ ಉಪಯೋಗಿಸಲಾಗುತ್ತಿದೆ. ಇಲ್ಲಿ ಭತ್ತ, ರಾಗಿ, ಮುಸುಕಿನಜೋಳ, ಕಡಲೆ, ಹುರುಳಿ, ತೊಗರಿ, ಅವರೆ, ಕಬ್ಬು, ತೆಂಗು, ಅಡಿಕೆ, ಮಾವು ರೇಷ್ಮೆ, ನೀಲಗಿರಿ, ಸರ್ವೆ, ತರಕಾರಿ, ದ್ವಿದಳಧಾನ್ಯಗಳನ್ನು ಬೆಳೆಯು ತ್ತಾರೆ. ಅತಿಸಣ್ಣರೈತರು, ಸಣ್ಣರೈತರು, ಅರೆಮಧ್ಯಮ, ಮಧ್ಯಮ, ದೊಡ್ಡ ರೈತ ಸಮುದಾಯದವರು ಇಲ್ಲಿದ್ದಾರೆ.

ಈ ತಾಲೂಕಿನಲ್ಲಿ ಒಟ್ಟು ೩೦೧ ಕಂದಾಯ ಗ್ರಾಮಗಳಿದ್ದು ಈ ಗ್ರಾಮಗಳನ್ನು ಒಟ್ಟು ಐದು ಹೋಬಳಿಗಳನ್ನಾಗಿ ವಿಂಗಡಿಸಲಾಗಿದೆ. ಈ ಹೋಬಳಿಗಳಿಗೆ ಒಳಪಡುವ ಗ್ರಾಮಗಳ ಸಂಖ್ಯೆ ಇಂತಿವೆ.

ಕಸಬಾ ಹೋಬಳಿ ೬೮ ಗ್ರಾಮಗಳು

ಮಧುರೆ ಹೋಬಳಿ ೪೨ ಗ್ರಾಮಗಳು

ದೊಡ್ಡಬೆಳವಂಗಲ ಹೋಬಳಿ ೬೪ ಗ್ರಾಮಗಳು

ಸಾಸಲು ಹೋಬಳಿ ೬೦ ಗ್ರಾಮಗಳು

ತೂಬಗೆರೆ ಹೋಬಳಿ ೬೭ ಗ್ರಾಮಗಳು

೨೦೦೧ರ ಜನಗಣತಿ ಪ್ರಕಾರ ೧,೧೫,೩೯೨ ಪುರುಷರು, ೧,೦೯,೨೫೦ ಮಹಿಳೆಯರಿದ್ದು, ೨,೨೪,೬೪೭ ಒಟ್ಟು ಜನಸಂಖ್ಯೆ ಇದೆ. ಪ್ರತಿ ಚದರ ಕಿಲೋ ಮೀಟರ್‌ಗೆ ೨೪೨ ಜನ ವಾಸ ಮಾಡುತ್ತಿದ್ದಾರೆ.[3] ತಾಲ್ಲೂಕಿನಲ್ಲಿ ಹಿಂದೂ, ಮುಸ್ಲಿಂ, ಕ್ರೈಸ್ತ ಧರ್ಮೀಯರು ಅಧಿಕವಾಗಿ ಇದ್ದಾರೆ. ಹಿಂದೂಗಳಲ್ಲಿ ಬಹುತೇಕವಾಗಿ ಲಿಂಗಾಯತ ಮತ್ತು ಒಕ್ಕಲಿಗ ಜನಾಂಗದವರು ಇಲ್ಲಿದ್ದಾರೆ. ಕನ್ನಡ ಮತ್ತು ತೆಲುಗು ಭಾಷೆಗಳು ಹೆಚ್ಚಾಗಿ ಅಸ್ತಿತ್ವದಲ್ಲಿದ್ದು, ಕನ್ನಡ ಭಾಷೆಯನ್ನು ಮಾತನಾಡುವವರ ಸಂಖ್ಯೆ ಶೇ.೬೭.೭೩ ರಷ್ಟು ಪ್ರಮಾಣದಲ್ಲಿದೆ. ಕನ್ನಡ ಮಾತೃಭಾಷೆಯವರು ವ್ಯವಹಾರಕ್ಕಾಗಿ ತೆಲುಗನ್ನೂ ಕಲಿತಿರುವರು. ಇವರು ತಾಲ್ಲೂಕಿನ ಈಶಾನ್ಯ ಪೂರ್ವಭಾಗದಲ್ಲಿ ಅಂದರೆ ಆಂಧ್ರದ ಗಡಿಭಾಗದಲ್ಲಿ ಮಾತ್ರ ಇರುವರು.

ಇಲ್ಲಿನ ವಾಯುಗುಣ ಒಣ ತೇವಾಂಶದಿಂದ ಕೂಡಿದ ಸವನ್ನಾ ಮಾದರಿಯದ್ದಾಗಿದೆ. ಡಿಸೆಂಬರ್‌ನಿಂದ ಫೆಬ್ರವರಿಯವರೆಗೆ ಚಳಿಯ ಪ್ರಮಾಣ ಅಧಿಕವಾಗಿರುತ್ತದೆ. ಮಾರ್ಚ್‌ನಿಂದ ಮೇವರೆಗೆ ಬೇಸಿಗೆ ಹವಾಮಾನ, ಮತ್ತು ಜೂನ್‌ನಿಂದ ಸೆಪ್ಟೆಂಬರ್‌ವರೆಗೆ ಮಾನ್ಸೂನ್ ಮಾರುತಗಳು ಬೀಸುತ್ತವೆ.

ಇಲ್ಲಿನ ಪ್ರದೇಶದಲ್ಲಿ ಕೆಂಪು ಮಿಶ್ರಿತ ಮರಳು ಮತ್ತು ಕಪ್ಪು ಮಣ್ಣಿನಿಂದ ಕೂಡಿದ ಭೂಮಿ ಅಧಿಕ ಪ್ರಮಾಣದಲ್ಲಿದೆ. ಕೃಷಿಯನ್ನು ಪ್ರಧಾನ ಕಸುಬನ್ನಾಗಿ ಮಾಡಿಕೊಂಡಿದ್ದಾರೆ. ಈ ಪ್ರದೇಶ ವಿವಿಧ ಮೇಲ್ಮೈ ಲಕ್ಷಣಗಳು, ವಾಯುಗುಣ, ಸ್ವಾಭಾವಿಕ ಸಸ್ಯವರ್ಗಗಳನ್ನು ಹೊಂದಿದ್ದು ಇಲ್ಲಿನ ಜನರ ಧರ್ಮ, ಭಾಷೆ ಮತ್ತು ಸಂಪ್ರದಾಯಗಳಲ್ಲಿ ವೈವಿಧ್ಯತೆ ಇದೆ. ಜಲಸಂಪನ್ಮೂಲಗಳು ಮತ್ತು ಭೂಸಂಪನ್ಮೂಲಗಳು ಎಂದು ಎರಡು ವಿಧಗಳಾಗಿ ಇಲ್ಲಿನ ಪ್ರಾಕೃತಿಕ ಸಂಪನ್ಮೂಲಗಳನ್ನು ನೋಡಬಹುದು.

ತಾಲ್ಲೂಕಿನಲ್ಲಿ ಅರ್ಕಾವತಿ, ಗರುಡಾಚಾಲ, ಬಂಡಿಹಳ್ಳ, ಏಳುದೇವರಹಳ್ಳ ದಕ್ಷಿಣ ಪಿನಾಕಿನಿ, ಉತ್ತರಪಿನಾಕಿನಿ, ಕುಮದ್ವತಿ ನದಿಗಳು ಹರಿಯುತ್ತವೆ. ಅರ್ಕಾವತಿ ನದಿಯು ನಗರದ ಈಶಾನ್ಯದ ನಂದಿದುರ್ಗದಲ್ಲಿ ಹುಟ್ಟಿ ದೊಡ್ಡಬಳ್ಳಾಪುರ ಮಾರ್ಗವಾಗಿ ನೆಲಮಂಗಲ, ಹೆಸರಘಟ್ಟ, ಮಾಗಡಿ ತಾಲ್ಲೂಕುಗಳ ಮೂಲಕ ಹಾದು ಕನಕಪುರವನ್ನು ಸುತ್ತುವರಿದು ತಮಿಳುನಾಡಿನ ಮೂಲಕ ಕಾವೇರಿ ನದಿಯನ್ನು ಸೇರುತ್ತದೆ. ಕುಮದ್ವತಿ ನದಿ ಹರಿಯುವಾಗ ತಿಪ್ಪಗೊಂಡನಹಳ್ಳಿ ಕೆರೆಗೆ ಸೇರುತ್ತದೆ ಮತ್ತು ರಾಮನಗರ, ಕನಕಪುರ ತಾಲ್ಲೂಕುಗಳಾದ್ಯಂತ ೧೯೦ ಕಿ.ಮೀ. ಹರಿದು ಸಂಗಮ್(ಮೇಕೆದಾಟು) ಕಾವೇರಿ ನದಿಗೆ ಸೇರುತ್ತದೆ.

ಗರುಡಾಚಲ ನದಿಯು ವಾಯುವ್ಯ ದಿಕ್ಕಿನಲ್ಲಿರುವ ಹುಲುಕಡಿ ಬೆಟ್ಟದಲ್ಲಿ ಹುಟ್ಟಿ ದಕ್ಷಿಣಾಭಿಮುಖವಾಗಿ ಹರಿದು ಚಿಕ್ಕಬೆಳವಂಗಲದ ಮೂಲಕ ಅರ್ಕಾವತಿಯನ್ನು ಸೇರುತ್ತದೆ. ನಂದಿದುರ್ಗದ ತಪ್ಪಲಿನಿಂದ ಪೂರ್ವಾಭಿಮುಖವಾಗಿ ಗೌರಿಬಿದನೂರಿನ ಉತ್ತರಪಿನಾಕಿನಿ ನದಿಗೆ ಸೇರುತ್ತದೆ. ಏಳುದೇವರಹಳ್ಳ ನದಿಯು ಹುಲುಕಡಿಬೆಟ್ಟದಲ್ಲಿ ಹುಟ್ಟಿ, ಸಾಸಲು ಬೆಟ್ಟ ಮತ್ತು ಹುಲುಕಡಿ ಬೆಟ್ಟಗಳ ತಪ್ಪಲಿನಲ್ಲಿ ಸಂಗಮವಾಗಿ ಹರಿದು, ಸಾಸಲು ಹೋಬಳಿಯ ಮೂಲಕ ಬೈಚನಹಳ್ಳಿ ಗಡಿಯಿಂದ ಆರೂಢಿ ಮಾರ್ಗವಾಗಿ ಗೌರಿಬಿದನೂರು ಕಡೆಗೆ ಸಾಗುತ್ತದೆ. ದಕ್ಷಿಣ ಪಿನಾಕಿನಿ ನದಿಯು ಚನ್ನಕೇಶವ ಬೆಟ್ಟದಲ್ಲಿ ಹುಟ್ಟುತ್ತದೆ. ಈ ನದಿಯು ದೇವನಹಳ್ಳಿ ಮತ್ತು ಹೊಸಕೋಟೆ ತಾಲ್ಲೂಕುಗಳಲ್ಲಿ ಹರಿದು ಕೋಲಾರ ಜಿಲ್ಲೆಯ ಜಂಗಮಕೋಟೆ ಮತ್ತು ಹೊಸಕೋಟೆ ಕೆರೆಗೆ ಸೇರುತ್ತದೆ. ದಕ್ಷಿಣ ಭಾಗದಲ್ಲಿ ಆನೇಕಲ್ಲು ತಾಲ್ಲೂಕಿನಲ್ಲಿ ಸುಮಾರು ೮೦ ಕಿ.ಮೀ. ಹರಿದು ಸರ್ಜಾಪುರದವರೆಗೂ ಸಾಗುತ್ತದೆ. ಇಲ್ಲಿನ ಎಲ್ಲಾ ನದಿಗಳು ಉತ್ತರದ

ಎತ್ತರ ಪ್ರದೇಶದಿಂದ ದಕ್ಷಿಣದ ತಗ್ಗಾದ ಪ್ರದೇಶಕ್ಕೆ ಹರಿದು ಸಣ್ಣ ನೀರಾವರಿ ಯೋಜನೆಗೆ ಸಹಕಾರಿಯಾಗಿವೆ. ದೊಡ್ಡಬಳ್ಳಾಪುರ ತಾಲ್ಲೂಕು ಘಟಕಗಳಾದ ರಾಜ್ಯ ರೈತಸಂಘ ಮತ್ತು ಹಸಿರುಸೇನೆ, ಸ್ವರಾಜ್ ಸಂಸ್ಥೆ, ಚನ್ನರಾಯಸ್ವಾಮಿ ಜಲಾನಯನ ಅಭಿವೃದ್ಧಿ ಸಂಘ, ಅರ್ಕಾವತಿ ಕುಮದ್ವತಿ ನದಿ ಪುನಶ್ಚೇತನ ಸಮಿತಿ, ಪಂಚಗಿರಿ ಸಂರಕ್ಷಣಾ ಸಮಿತಿ ಮತ್ತು ನಂದಿ ಮಿಂಚು ಸಂಘಟನೆ, ಚನ್ನಾಪುರ, ದೊಡ್ಡರಾಯಪ್ಪನಹಳ್ಳಿ, ಚಿಕ್ಕರಾಯಪ್ಪನಹಳ್ಳಿ ಗ್ರಾಮಸ್ಥರಿಂದ ಪ್ರತಿವರ್ಷ ಈ ನದಿಗಳು ಹುಟ್ಟು ಸ್ಥಳ ಚನ್ನರಾಯಸ್ವಾಮಿ ಬೆಟ್ಟದ ತಪ್ಪಲಿನಲ್ಲಿ ಚನ್ನಗಿರಿ ಉತ್ಸವವನ್ನು ಹಮ್ಮಿಕೊಳ್ಳಲಾಗುವುದು.

ನಂದಿಗಿರಿ ಸಾಲಿನಲ್ಲಿ ಬರುವ ಐದು ಬೆಟ್ಟಗಳಲ್ಲಿ ಚನ್ನಗಿರಿ ಬೆಟ್ಟವು ಒಂದು. ಇದನ್ನು ಸ್ಥಳೀಯರು ಚನ್ನರಾಯಸ್ವಾಮಿ ಬೆಟ್ಟ ಎಂದು ಕರೆಯುತ್ತಾರೆ. ಈ ಬೆಟ್ಟದ ಮೇಲೆ ಚೋಳರ ದೇವಾಲಯಗಳ ಲಕ್ಷಣಗಳನ್ನು ಹೋಲುವ, ಚೋಳರ ಆಳ್ವಿಕೆ ಕಾಲದಲ್ಲಿ ನಿರ್ಮಿಸಿರುವ ಚನ್ನರಾಯಸ್ವಾಮಿ ದೇವಾಲಯವಿದೆ. ಹತ್ತು ಹಲವು ವಿಶೇಷತೆಗಳನ್ನು ಈ ಚನ್ನಗಿರಿ ಬೆಟ್ಟ ಮೈಗೂಡಿಸಿಕೊಂಡಿದೆ. ಚಿಕ್ಕರಾಯಪ್ಪನಹಳ್ಳಿ ಕೆರೆ ದಡದಲ್ಲಿ ನಿಂತು ನೋಡಿದರೆ ಏಳೆಮ್ಮೆ ದೊಣೆಯಿಂದ ಮಳೆಗಾಲದಲ್ಲಿ ನೀರು ಹರಿಯುತ್ತದೆ. ಏಳಮ್ಮೆ ದೊಣೆಯಿಂದ ಸ್ವಲ್ಪ ಮೇಲ್ಭಾಗದಲ್ಲಿ ದೊಡ್ಡಗೌಡನ ಕೆರೆಯಿದೆ. ಈ ಕೆರೆಯಲ್ಲಿ ನೇರಳೆ ಮರಗಳ ದಂಡೇ ಇದೆ. ಮಳೆಗಾಲದಲ್ಲಿ ಇಲ್ಲಿ ನೀರು ನಿಲ್ಲದಿದ್ದರು ಸಹ ಇದರ ಮುಂಭಾಗದಲ್ಲಿ ನೀರು ಹರಿಯುತ್ತದೆ. ಈ ನೀರು ಏಳಮ್ಮೆದೊಣೆಯ ಮೂಲಕ ಹರಿದು ಕೆಳಗಡೆಯಿರುವ ಚಿಕ್ಕರಾಯಪ್ಪನಹಳ್ಳಿಯ ಚಿಕ್ಕಗೌಡನ ಕೆರೆಗೆ ಬಂದು ಸೇರುತ್ತದೆ. ಈ ಚನ್ನರಾಯಸ್ವಾಮಿ ಬೆಟ್ಟವು ಅರ್ಕಾವತಿ ನದಿ ಜಲಾನಯನ ಪ್ರದೇಶ ಎಂದು ಹೇಳಬಹುದು. ಈ ನಂದಿಗಿರಿ ಸಾಲುಗಳಲ್ಲಿ ಉಗಮವಾಗುವ ನದಿಗಳೆಂದರೆ ಅರ್ಕಾವತಿ, ಉತ್ತರಪಿನಾಕಿನಿ, ದಕ್ಷಿಣಪಿನಾಕಿನಿ, ಚಿತ್ರಾವತಿ, ಪಾಪಾಗ್ನಿ. ಇಲ್ಲಿನ ಬೆಟ್ಟ ಸಾಲುಗಳೆಂದರೆ ನಂದಿಗಿರಿ, ದಿಬ್ಬಗಿರಿ, ಚನ್ನಗಿರಿ, ಬ್ರಹ್ಮಗಿರಿ, ಸ್ಕಂದಗಿರಿ, ಚನ್ನರಾಯಸ್ವಾಮಿ ಬೆಟ್ಟದ ತುದಿಯಲ್ಲಿ ಚನ್ನರಾಯಸ್ವಾಮಿ ದೇಗುಲವಿದೆ. ಮತ್ತು ಆಂಜನೇಯಸ್ವಾಮಿ ಗುಡಿಯನ್ನು ಕಾಣಬಹುದು. ಇಲ್ಲಿನ ಕಲ್ಯಾಣಿಯಲ್ಲಿ ಸದಾ ನೀರಿರುತ್ತದೆ. ಪರಿಸರ ಪ್ರೇಮಿಗಳು ದೂರದ ಊರುಗಳಿಂದ ಪ್ರಕೃತಿ ಸೌಂದರ್ಯವನ್ನು ಸವಿಯಲು ಇಲ್ಲಿಗೆ ಬರುತ್ತಾರೆ. ಇಲ್ಲಿ ತಂಗಲು ಒಂದು ಮಂಟಪವೂ ಇದೆ. ಈ ಬೆಟ್ಟದಲ್ಲಿ ಆಯಾ ಪ್ರದೇಶಗಳಿಗೆ ಅನುಗುಣವಾಗಿ ಕೆಲವು ಹೆಸರುಗಳಿವೆ. ಅರಿಶಿನಗುಂಡು, ಹಂದಿಗುಂಡು, ಮೂರುನಾಮದಗುಂಡು, ಹಿಕ್ಕಟ್ಟಲು ಗುಂಡು, ಪೆಡಕಲ್ಲುಬೆಳ್ಳಿ, ಚಿನ್ನಕ್ಕನಬೋಡು, ತೇಕಲುಗುಡ್ಡ, ಜಾಲಾರಿಗಟ್ಟು, ಕರೆಗಟ್ಟು, ಮಾವಿನಮರದ ಹಳ್ಳ, ನೀರು ಧುಮುಕುವ ಹಳ್ಳ, ಕೃಷ್ಣನ ಪೋದೆ ಇತ್ಯಾದಿ ಹೆಸರುಗಳಿವೆ. ಈ ರೀತಿಯ ಪರಿಸರವನ್ನು ಉಳಿಸುವ, ಸಂಸ್ಕೃತಿಯನ್ನು ಉಳಿಸುವ ನಿಟ್ಟಿನಲ್ಲಿ ಚನ್ನಗಿರಿ ಉತ್ಸವವನ್ನು ಮಾಡುತ್ತಾರೆ.

### ‘ದೊಡ್ಡಬಳ್ಳಾಪುರ’ ಪದ ನಿಷ್ಪತ್ತಿ

ದೊಡ್ಡಬಳ್ಳಾಪುರ ಎಂಬ ಹೆಸರಿನ ಬಗ್ಗೆ ಒಂದು ದಂತಕಥೆಯಿದೆ. ಅದರಂತೆ ಪ್ರತಿದಿನ ಒಂದು ಹಸು ಒಂದು ಬಳ್ಳದಷ್ಟು ಹಾಲನ್ನು ಹುತ್ತದ ಮೇಲೆ ಸುರಿಸುತ್ತಿತ್ತಂತೆ. ಹಾಗಾಗಿ ಇದಕ್ಕೆ ‘ಬಳ್ಳಾಪುರ’ ಎಂಬ ಹೆಸರು ಬಂದಿದೆ ಎಂದು ಹೇಳುತ್ತಾರೆ. ಆದರೆ ಶಾಸನಗಳು ಇದಕ್ಕೆ ಭಿನ್ನವಾದ ವಿವರಣೆಯನ್ನೇ ನೀಡುತ್ತವೆ.

ಕ್ರಿ.ಶ.೧೫೯೮ರ ಶಾಸನದಲ್ಲಿ ‘ಬಲ್ಲಾಳಪುರದಠಾಣ್ಯ’ ಎಂಬ ಉಲ್ಲೇಖ ಬಂದಿದೆ.[೪] ಈ ಬಲ್ಲಾಳಪುರ ಆವತಿನಾಡ ಪ್ರಭು ಯಿಂಮಡಿ ಹಾವಳಿ ಬಯಿರಪ್ಪಗೌಡನವರ ನೆಲೆವೀಡಾಗಿತ್ತು ಎಂಬುದನ್ನು ತಿಳಿಸುತ್ತದೆ. ಈ ‘ಬಲ್ಲಾಳಪುರ’ ಹೆಸರಿನ ಮಾತೃಕೆ ಹೊಯ್ಸಳ ದೊರೆಯಾದ ಬಲ್ಲಾಳನಾಗಿರಬಹುದು. ಏಕೆಂದರೆ ಈ ಪ್ರದೇಶ ಕ್ರಿ.ಶ.೧೫೦೦ಕ್ಕಿಂತಲೂ ಹಿಂದೆ ಹೊಯ್ಸಳರ ಆಳ್ವಿಕೆಯ ನೆಲೆಯಾಗಿತ್ತು ಎಂಬುದನ್ನು ಕ್ರಿ.ಶ.೧೨೬೭ರ ದೊಡ್ಡಬಳ್ಳಾಪುರ ಕೋಟೆಯಲ್ಲಿರುವ ಶಿಲಾಶಾಸನದಿಂದ ತಿಳಿಯಬಹುದು.

ಬಲ್ಲಾಳಪುರ ಎಂಬ ನಾಮ ಅಪಭ್ರಂಶಗೊಂಡು ‘ಬಳ್ಳಾಪುರ’ ಎಂದಾಯಿತು ಎಂದು ಅರ್ಥೈಸಬಹುದು. ಈ ಬಳ್ಳಾಪುರವನ್ನು ಚಿಕ್ಕಬಳ್ಳಾಪುರದಿಂದ ವಿಭಿನ್ನವೆಂದು ಗುರುತಿಸುವ ಸಲುವಾಗಿ ದೊಡ್ಡ ಎಂಬ ವಿಶೇಷಣವನ್ನು ಸೇರಿಸಲಾಗಿದೆ. ದೊಡ್ಡಬಲ್ಲಾಳ ಆಳ್ವಿಕೆ ನಡೆಸಿರುವುದರಿಂದ ಇದಕ್ಕೆ ದೊಡ್ಡಬಳ್ಳಾಪುರ ಎಂಬ ಹೆಸರು ಬಂದಿರಬಹುದು, ಇಂದಿಗೂ ಬೆಂಗಳೂರಿನ ರಂಗಸ್ವಾಮಿ ಗುಡಿಬೀದಿಗೆ ‘ಬಳ್ಳಾಪುರಪೇಟೆ’ ಎಂದು ಕ್ರಿ.ಶ.೧೮೩೦ರ ಬೆಂಗಳೂರು ಶಾಸನ ಉಲ್ಲೇಖಿಸುತ್ತದೆ.

### ದೊಡ್ಡಬಳ್ಳಾಪುರದ ಐತಿಹಾಸಿಕ ನೆಲೆಗಳು

### ರಾಜಘಟ್ಟ ಗ್ರಾಮ

ಬೌದ್ಧಮತವು ಕ್ರಿ.ಪೂ.೩ನೆಯ ಶತಮಾನದಲ್ಲಿ ಭಾರತದ ಅನೇಕ ಕೇಂದ್ರಗಳಲ್ಲಿ ಬಹಳ ವೈಭವಯುತವಾಗಿ ಬೆಳೆಯಿತು. ಕನ್ನಡನಾಡಿನ ಬಹುಭಾಗವು ಬೌದ್ಧರ ನೆಲೆಗಳಿದ್ದು ಆ ಧರ್ಮವು ಜನಸಾಮಾನ್ಯರ ಮನಸ್ಸನ್ನು ತಲುಪಿತ್ತು. ಬ್ರಹ್ಮಗಿರಿಯ ಅಶೋಕನ ಶಾಸನದಲ್ಲಿ ತಂದೆ–ತಾಯಿಗಳನ್ನು ಗೌರವಿಸಿ, ಸತ್ಯವನ್ನು ನುಡಿಯಿರಿ, ಪ್ರಾಣಿಗಳ ಮೇಲೆ ಕನಿಕರವಿರಲಿ, ಗುರುಗಳು ಮತ್ತು ಹಿರಿಯರನ್ನು ಆದರಿಸಿರಿ ಎಂಬ ಹಿತನುಡಿಗಳಲ್ಲಿ ಬೌದ್ಧಧರ್ಮದ ತತ್ವಗಳನ್ನು ಹೇಳಿದೆ. ಕ್ರಿಸ್ತಶಕದ ಆರಂಭದಲ್ಲಿ ಶತಮಾನಗಳಲ್ಲಿ ಕನ್ನಡ ನಾಡಿನಲ್ಲಿ ಭೌದ್ಧ ಧರ್ಮದ ಅನೇಕ ಕೇಂದ್ರಗಳು ಇದ್ದುವೆಂಬುದರಲ್ಲಿ ಸಂದೇಹವಿಲ್ಲವಾದರೂ, ಆಗಿನ ಕಾಲದ ಅವಶೇಷಗಳು ಅಲ್ಪಸ್ವಲ್ಪ ಪ್ರಮಾಣದಲ್ಲಿ ದೊರೆತಿರುವುದರಿಂದ ಹೆಚ್ಚಿನ ಪರಿಚಯವು

ದೊರೆಯುವುದು ದುರ್ಲಭವಾಗಿದೆ. ಕನ್ನಡನಾಡಿನ ಪ್ರಾಂತ್ಯದ ಹಲವು ಕಡೆ ಬೌದ್ಧಧರ್ಮದ ಅವಶೇಷಗಳು ದೊರೆತಿವೆ. ಇವು ಕ್ರಿ.ಪೂ.೩ನೆಯ ಶತಮಾನದಿಂದ ಕ್ರಿ.ಶ.೧೬ನೆಯ ಶತಮಾನದ ವರೆಗಿನ ಕಾಲಾವಧಿಗೆ ಸಂಬಂಧಿಸಿದವುಗಳಾಗಿವೆ. ಚಿತ್ರದುರ್ಗ, ಗುಲಬರ್ಗಾ, ಬಿಜಾಪುರ, ರಾಯಚೂರು, ಧಾರವಾಡ, ಉತ್ತರಕನ್ನಡ, ದಕ್ಷಿಣಕನ್ನಡ, ಶಿವಮೊಗ್ಗ, ಕೋಲಾರ, ತುಮಕೂರು ಮುಂತಾದ ಕಡೆಗಳಲ್ಲಿ ಬೌದ್ಧಧರ್ಮದ ಅವಶೇಷಗಳು ದೊರೆತಿವೆ. ಹೀಗೆಂದ ಮಾತ್ರಕ್ಕೆ ಕನ್ನಡನಾಡಿನ ಇತರ ಜಿಲ್ಲೆಗಳಲ್ಲಿ ಬೌದ್ಧಧರ್ಮದ ಅವಶೇಷಗಳೇ ಇಲ್ಲ ಎಂಬ ತೀರ್ಮಾನಕ್ಕೆ ಬರಬಾರದು. ಸಂಶೋಧನೆ ಮುಂದುವರೆದ ಹಾಗೆ ಐತಿಹಾಸಿಕ ಸಾಮಗ್ರಿ ದೊರೆಯಬಹುದು. ಇದಕ್ಕೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯೂ ಹೊರತಾಗಿಲ್ಲ. ಆದುದರಿಂದ ಸದ್ಯದ ಪರಿಸ್ಥಿತಿಯಲ್ಲಿ ದೊರೆತಿರುವ ಅವಶೇಷಗಳ ಆಧಾರದ ಮೇಲೆ ಬೌದ್ಧಧರ್ಮದ ಬೆಳವಣಿಗೆಯು ಕನ್ನಡನಾಡಿನಲ್ಲಿ ಹೇಗಾಯಿತೆಂಬುದನ್ನು ತಿಳಿಯಬಹುದು.

ಕನ್ನಡನಾಡಿನಲ್ಲಿ ಬೌದ್ಧಧರ್ಮದ ಪ್ರಚಾರ ಕ್ರಿ.ಪೂ.೩ನೆಯ ಶತಮಾನದಿಂದಲೇ ಆರಂಭವಾಯಿತು. ಉತ್ತರಕನ್ನಡ ಜಿಲ್ಲೆ, ಚಿತ್ರದುರ್ಗ ಮತ್ತು ರಾಯಚೂರು ಜಿಲ್ಲೆಗಳಲ್ಲಿ ಬೌದ್ಧಮತವನ್ನು ಪ್ರಚಾರಗೊಳಿಸುವ ಪ್ರಮುಖ ಕೇಂದ್ರಗಳಿದ್ದುವೆಂದು ನಂಬಲಾಗಿದೆ. ಕ್ರಿ.ಶ.೨ ಹಾಗೂ ೩ನೆಯ ಶತಮಾನದಲ್ಲಿ ಗುಲಬರ್ಗಾ ಜಿಲ್ಲೆಯ ಚಿತ್ತಾಪುರ ತಾಲ್ಲೂಕಿನ ಸನ್ನತಿಯಲ್ಲಿ ಬೌದ್ಧಧರ್ಮದ ಕುರುಹುಗಳನ್ನು ಸೂಸುವ ಅವಶೇಷಗಳು ವಿಪುಲವಾಗಿ ಗೋಚರವಾಗುತ್ತವೆ. ಜರುಗಿಬಿದ್ದ ಸ್ತೂಪಗಳು ಚೆದುರಿ ಹೋದ ಚೈತ್ಯಗಳು ಗತವೈಭವದ ಕರುಣ ಕಥೆಯನ್ನು ಹೇಳುತ್ತವೆ. ಸನ್ನತಿಯಿಂದ ಪ್ರಾರಂಭವಾದ ಈ ಅವಶೇಷಗಳು ಚದುರಿ ಸುಮಾರು ಮೂರು ಮೈಲಿಗಳಷ್ಟು ಪ್ರದೇಶದಲ್ಲಿ ಭೀಮಾನದಿಯ ದಡದ ಗುಂಟ ಕೆನಗನಹಳ್ಳಿಯವರೆಗೂ ಹರಡಿ ಹೋಗಿವೆ. ಚಿತ್ರಗಳನ್ನು ಕೊರೆದ ಕಲ್ಲಿನ ಕಂಭಗಳು, ಮಂಟಪಗಳಿಗೆ ಉಪಯೋಗಿಸಿದ್ದ ಕಲ್ಲುಗಳು, ಬರಹಗಳನ್ನೊಳಗೊಂಡ ಶಿಲಾಚೌಕಗಳು, ಇಟ್ಟಿಗೆಯ ತುಂಡುಗಳು, ಮಡಿಕೆಯ ಚೂರುಗಳು, ಕಡೆದ ಆಭರಣಗಳು ಹೇರಳವಾಗಿ ಕಾಣಸಿಗುತ್ತವೆ.

ಕೆಲವೊಮ್ಮೆ ಭೂಮಿಯ ಒಳ ಮೇಲ್ಮೈಯನ್ನು ಹೊರಗೆಳೆಯುವ ನೇಗಿಲುಗಳಿಗೂ ಇಂತಹ ಅನೇಕ ಅವಶೇಷಗಳು ತಾಕಿ ಹೊರಬಂದಿವೆ. ಗುಡ್ಡಗಳಂತೆ ತೋರುವ ಕುಸಿದ ವಾಸಸ್ಥಾನಗಳು ಭೂಗರ್ಭದಲ್ಲಿ ಅಡಗಿದ ತಮ್ಮ ರಹಸ್ಯವನ್ನು ಹೊರಸೂಸುವ ಯತ್ನ ಮಾಡುತ್ತಿವೆ. ಸನ್ನತಿಯಲ್ಲಿ ದೊರೆತಿರುವ ಮುಖ್ಯವಾದ ಅವಶೇಷಗಳೆಂದರೆ ಬುದ್ಧನ ಸಮಾಧಿ, ಬುದ್ಧನ ಜನನ, ಬುದ್ಧನ ಅರಣ್ಯ ಪ್ರದೇಶ ಇವುಗಳನ್ನು ಬಿಂಬಿಸುವ ಶಿಲ್ಪಕಲಾಕೃತಿಗಳು ಇವುಗಳ ಕೆತ್ತನೆಗೆ ನೆರವಾದ ದಾನಿಗಳ ಹೆಸರುಗಳು ಇವುಗಳು ಬೌದ್ಧಧರ್ಮವು ಉನ್ನತ ಸ್ಥಿತಿಯಲ್ಲಿದ್ದುದನ್ನು ಸೂಚಿಸುತ್ತವೆ. ಸ್ತ್ರೀಯರ ಅನೇಕ ಹೆಸರುಗಳು, ಅವರು ಪಡೆದಿದ್ದ

ಹುದ್ದೆಗಳು, ಬರಹಗಳಲ್ಲಿ ನಮೂದಿಸಲ್ಪಟ್ಟಿವೆ. ಇವು ಆಗಿನ ಕಾಲದ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಪರಿಸ್ಥಿತಿಗಳಲ್ಲಿ ಸ್ತ್ರೀಯರ ಸ್ಥಾನವೇನೆಂಬುದನ್ನು ನಿರ್ದೇಶಿಸುತ್ತವೆ. ಉತ್ತರಕನ್ನಡ ಜಿಲ್ಲೆಯಲ್ಲಿರುವ ಬನವಾಸಿಯು ಬೌದ್ಧಮತ ಸಂಪ್ರದಾಯದ ಗುರುತುಗಳಿಂದ ತುಂಬಿಹೋಗಿದೆ ಎನ್ನಬಹುದು. ಅದು ಬೌದ್ಧ ಅವಶೇಷಗಳ ಸಂಗ್ರಹಾಲಯವೆಂದರೆ ತಪ್ಪಾಗಲಾರದು. ಕೋಲಾರ ಜಿಲ್ಲೆಯ ಶಾಸನವೊಂದು ಕ್ರಿ.ಪೂ.೪ನೆಯ ಶತಮಾನದಲ್ಲಿ ಕೊಟ್ಟ ದಾನವೊಂದನ್ನು ವಿವರಿಸುತ್ತದೆ. 'ಶಾಕ್ಯಶಿಲೆ'ಗಳು ಅಲ್ಲಿ ಇದ್ದುದನ್ನು ಅದು ವರ್ಣಿಸುತ್ತದೆ. ಉತ್ತರಕನ್ನಡ ಜಿಲ್ಲೆಯ ಕಾರವಾರ ಪ್ರದೇಶದಲ್ಲಿ ಕ್ರಿ.ಪೂ.ಐದನೆಯ ಶತಮಾನದಲ್ಲಿ ಆಹಾರ ದಾನದ ವರ್ಣನೆಯೊಂದು ಶಾಸನದಲ್ಲಿ ಕಂಡುಬರುತ್ತದೆ.

ಇನ್ನೂ ನಾಲ್ಕು-ಐದೂ ಶತಮಾನಗಳು ಕಳೆದರೂ ಬೌದ್ಧಧರ್ಮದ ವೈಭವ ಮತ್ತು ಪ್ರಾಬಲ್ಯ ಕಡಿಮೆ ಆಗಿರಲಿಲ್ಲವೆಂಬುದಕ್ಕೆ ಹ್ಯೂಯನತ್ಸಾಂಗನ ವರದಿಗಳು ಸಾಕ್ಷಿಯಾಗಿವೆ. ಬನವಾಸಿಯೊಂದರಲ್ಲೇ ನೂರು ಸಂಘಾರಾಮಗಳು, ಹತ್ತು ಸಾವಿರ ಭಿಕ್ಷುಗಳು, ಅಪಾರ ಸಂಖ್ಯೆಯಲ್ಲಿ ಮಹಾಯಾನ ಮತ್ತು ಹೀನಾಯಾನ ಪಂಥಗಳು ಇದ್ದವೆಂದು ಆತನ ವರದಿಗಳು ತಿಳಿಸುತ್ತವೆ. ಅನ್ಯಮತಗಳವರೂ ಕೆಲವೆಡೆ ಬೌದ್ಧಪಂಥೀಯ ಕಟ್ಟಡಗಳ ಅನುಕರಣೆಯನ್ನು ಮಾಡಿರುವುದು ಅಲ್ಲಲ್ಲಿ ತೋರುತ್ತದೆ. ಐಹೊಳೆಯಲ್ಲಿರುವ ಕ್ರಿ.ಶ.ಏಳನೆಯ ಶತಮಾನದ ದುರ್ಗಾದೇವಾಲಯವು ಬೌದ್ಧ ಚೈತ್ಯವನ್ನೇ ಹೋಲುತ್ತದೆ. ಇಂತಹ ಸಾಕ್ಷಿಗಳು ಬೌದ್ಧ ಧರ್ಮವು ಜನಪ್ರಿಯತೆಯನ್ನು ಎಷ್ಟರಮಟ್ಟಿಗೆ ಗಳಿಸಿದ್ದಿತೆಂದು ಸೂಚಿಸುತ್ತವೆ.

ಬೌದ್ಧರಿಗಷ್ಟೇ ಅಲ್ಲದೆ ಅನ್ಯಮತದವರಿಗೂ ಬೌದ್ಧದರ್ಶನವು ಆ ಸಮಯದ ಮುಖ್ಯ ಅಭ್ಯಾಸ ವಿಷಯಗಳಲ್ಲಿ ಒಂದ್ದಾಗಿದ್ದಿತಂತೆ! ಶಿವಮೊಗ್ಗ ಜಿಲ್ಲೆಯ ಬಳ್ಳಿಗಾವೆಯಲ್ಲಿರುವ ತಾರಾಭಗವತಿಯ ವಿಗ್ರಹದ ಕಲಾ ಸೌಂದರ್ಯವು ನೋಡುವವರನ್ನು ಸೆಳೆಯುತ್ತದೆ. ಗದಗ ತಾಲ್ಲೂಕಿನ ಡಂಬಳ ಶಾಸನವೂ ಬೌದ್ಧ ವಿಹಾರ ದಾನವನ್ನು ಹೆಮ್ಮೆಯಿಂದ ವರ್ಣಿಸುತ್ತದೆ. ಹೀಗೆ ಬೌದ್ಧಧರ್ಮದ ಅತ್ಯಂತ ಹೆಚ್ಚಿನ ಪ್ರಚಾರವನ್ನು ಕ್ರಿ.ಶ.ಏಳನೆಯ ಶತಮಾನ ಕಂಡಿತೆಂದು ಹೇಳಬಹುದು.

ದಕ್ಷಿಣಕನ್ನಡ ಜಿಲ್ಲೆಯಲ್ಲಿ ಬೌದ್ಧಧರ್ಮದ ಅವಶೇಷಗಳು ಕುಂದಾಪುರದ ಹೊರವಲಯ, ಉಡುಪಿ ತಾಲ್ಲೂಕಿನ ನೀಲಾವರ ಮತ್ತು ಮೂಳೂರು ಹಾಗೂ ಮಂಗಳೂರು ತಾಲ್ಲೂಕಿನ ಕದ್ರಿ ಗುಡ್ಡಗಳು, ಧ್ಯಾನಮುದ್ರೆಯ ಬುದ್ಧನ ಆಕೃತಿಗಳು ಮೂಳೂರು ಮತ್ತು ಕದ್ರಿ ಪ್ರದೇಶಗಳಲ್ಲಿ ಕಂಡುಬಂದಿವೆ. ಇವುಗಳು ಸುಮಾರು ಕ್ರಿ.ಶ.ಹತ್ತನೆಯ ಶತಮಾನಕ್ಕೆ ಸೇರಿದವುಗಳೆಂದು ಹೇಳಬಹುದು. ಕ್ರಿ.ಶ.ಹದಿಮೂರನೆಯ ಶತಮಾನದ ಸಂಸ್ಕೃತ ಶಾಸನವೊಂದು ಹುಬ್ಬಳ್ಳಿ ತಾಲ್ಲೂಕಿನ ಕೋಳಿವಾಡದ ತಾರಾದೇವಿಯ ವಿಗ್ರಹದ ಮೇಲಿದೆ. ಕ್ರಿ.ಶ.ಹದಿನಾರನೆಯ

ಶತಮಾನದಲ್ಲಿ ಬೌದ್ಧ ಧರ್ಮದ ಸಾರವನ್ನು ಒಂದು ಶಾಸನ ತಿಳಿಸುತ್ತದೆ. ಬಹುಶಃ ಇದೇ ಕನ್ನಡನಾಡಿನಲ್ಲಿ ದೊರೆತ ಕೊನೆಯ ಐತಿಹಾಸಿಕ ಉಲ್ಲೇಖ ಎಂದು ಹೇಳಬಹುದು. ಈ ರೀತಿಯ ಅವಶೇಷಗಳ ಆಧಾರದ ಮೇಲೆ ಬೌದ್ಧಧರ್ಮವು ಕನ್ನಡನಾಡಿನಲ್ಲಿ ಹೇಗೆ ಅತ್ಯುನ್ನತಿಯ ಶಿಖರವನ್ನು ದಾಟಿತೆಂಬುದನ್ನು ತಿಳಿಯಬಹುದು. ಅವಶೇಷಗಳು ತೊಡಲ್ನುಡಿಯಂತೆ ತಮ್ಮ ಆಶಯಗಳನ್ನು ಕೇವಲ ತುಂಡು ತುಂಡು ಮಾತುಗಳಲ್ಲಿ ಅಸ್ಫುಟವಾಗಿ ಸಂಕ್ಷೇಪವಾಗಿ ತಮ್ಮ ಘಟನೆಗಳನ್ನು ತಿಳಿಸುವುದರಿಂದ ಸದ್ಯದ ಪರಿಸ್ಥಿತಿಯಲ್ಲಿ ಬೌದ್ಧಧರ್ಮದ ಬೆಳವಣಿಗೆಯ ಬಗ್ಗೆ ಇನ್ನು ನಿಖರವಾಗಿ ಹೇಳುವುದು ಅಸಾಧ್ಯವೇ ಆಗಿದೆ.

ಸುಮಾರು ಎರಡು ಸಾವಿರ ವರ್ಷಗಳವರೆಗೆ ಬಾಳಿದ ಬೌದ್ಧಧರ್ಮ ಕನ್ನಡನಾಡಿನ ಜಿಲ್ಲೆಗಳಲ್ಲಿ ತನ್ನ ಕುರುಹುಗಳನ್ನು ಉಳಿಸಿಕೊಂಡು ಬಂದಿರುತ್ತದೆ. ನಮ್ಮ ನಾಡಿನ ಸಂಸ್ಕೃತಿಯಲ್ಲಿ ಗತಕಾಲದ ಗುರುತಗಳು ಹುದುಗಿ ಹೋಗಿವೆ. ನಿಜವಾಗಿ ಹೇಳುವುದಾದರೆ ಧರ್ಮ ಎನ್ನುವುದು ಮಾನವನ ಶುದ್ಧ ಆಚರಣೆ. ಅದನ್ನೇ ಮಹಾಪುರುಷರು ವಿವಿಧ ಮತಗಳನ್ನು ಸ್ಥಾಪಿಸುವುದರ ಮೂಲಕ ಪ್ರಚಾರಗೊಳಿಸಬಯಸುವುದು. ಗಾಳಿ ಇದೆ ಎನ್ನುವುದು ನಮ್ಮ ನೋಟಕ್ಕೆ ತಿಳಿಯದಿದ್ದರೂ ಅದರ ಅಲೆಗಳು ಒಂದೊಂದಾಗಿ ಬೀಸಿ ಬಂದಂತೆ ವಿವಿಧ ಅನುಭವಗಳುಂಟಾಗುವುದು ಸಹಜ. ಕೆಲವೊಮ್ಮೆ ತಂಗಾಳಿ, ಕೆಲವೊಮ್ಮೆ ಬಿರುಗಾಳಿ, ಕೆಲವೊಮ್ಮೆ ಸುಡುಗಾಳಿ ಎಂದೆನಿಸಬಹುದು. ಅದೇ ರೀತಿಯಲ್ಲಿ ಧರ್ಮ ಸೂಕ್ಷ್ಮವು ಒಂದೇ ಆದರೂ ವಿವಿಧ ಸಮಯ ಸಂದರ್ಭಗಳನ್ನು ಅನುಸರಿಸಿ ಇದು ಹೆಚ್ಚು, ಇದು ಕಡಿಮೆ ಎಂಬ ಭ್ರಮೆಯು ಉಂಟಾಗಬಹುದು. ಇಂತಹ ಭ್ರಮೆಯಿಂದ ದೂರ ಉಳಿಯಬೇಕೆಂಬ ಸಂದೇಶವನ್ನು ಮಾನವತೆಯ ಹಿರಿಮೆಯನ್ನು ದೇಶ ವಿದೇಶಗಳಲ್ಲಿ ಪ್ರಪ್ರಥಮವಾಗಿ ಪ್ರಚುರಪಡಿಸಿದ ಬೌದ್ಧಧರ್ಮದ ಶಾಸನಗಳು ಕನ್ನಡನಾಡಿನಲ್ಲಿ ನೆಲೆಯೂರಿ, ಕನ್ನಡನಾಡಿಗೆ ನೀಡಿರುವ ಬಹುಮುಖ್ಯ ಕೊಡುಗೆ ಆಗಿದೆ. ಈ ಹಿನ್ನೆಲೆಯಲ್ಲಿಯೇ ದೊಡ್ಡ ಬಳ್ಳಾಪುರ ತಾಲ್ಲೂಕಿನ ರಾಜಘಟ್ಟಗ್ರಾಮ ಬೌದ್ಧರ ನೆಲೆಯಾಗಿತ್ತು ಎಂಬುದನ್ನು ಹಲವು ಹತ್ತು ಪ್ರಮುಖಾಂಶಗಳು ಪುಷ್ಠಿ ನೀಡುತ್ತವೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರದ ಕೇಂದ್ರಸ್ಥಾನದಿಂದ ಎಂಟು ಕಿಲೋ ಮೀಟರ್ ಈಶಾನ್ಯಕ್ಕೆ ಇರುವ ಒಂದು ಚಿಕ್ಕ ಗ್ರಾಮ ರಾಜಘಟ್ಟ, ಈ ಗ್ರಾಮ ಐತಿಹಾಸಿಕ ನಕ್ಷೆಯಲ್ಲಿ ಶಾಶ್ವತ ಗ್ರಾಮವಾಗಿ ಗುರುತಿಸಲ್ಪಡುತ್ತದೆ. ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗವು ೧೯೭೭ರಲ್ಲೇ ಈ ಸ್ಥಳದಲ್ಲಿ ಪುರಾತತ್ವ ಅನ್ವೇಷಣೆಗಳನ್ನು ನಡೆಸಿ ಅಲ್ಲಿ ಪ್ರಾಚೀನ ಜನವಸತಿ ಇತ್ತು ಎಂಬುದನ್ನು ಸಾಬೀತು ಪಡಿಸಿದೆ. ರಾಜಘಟ್ಟ ಒಂದು ಪ್ರಮುಖವಾದ ಐತಿಹಾಸಿಕ ನೆಲೆ. ಪ್ರಾಚೀನ ವಸ್ತು ಅವಶೇಷಗಳು ರಾಜಘಟ್ಟ ಗ್ರಾಮದ ಸಂಸ್ಕೃತಿಯನ್ನು ಅಶೋಕನ ಕಾಲಕ್ಕೆ ಕೊಂಡೊಯ್ಯುತ್ತದೆ. ಕ್ರಿಸ್ತಪೂರ್ವದ ಕಾಲಕ್ಕೆ ಸಂಬಂಧಿಸಿದ ಬೃಹತ್

ಶಿಲಾಯುಗ ಸಂಸ್ಕೃತಿಯ ಹಲವಾರು ಸಮಾಧಿಗಳು ಇಲ್ಲಿ ಕಂಡುಬಂದಿವೆ. ಹಾಗಾಗಿ ಇಲ್ಲಿ ಜನವಸತಿ ಇದ್ದುವೆಂಬುದನ್ನು ಕ್ರಿಸ್ತಪೂರ್ವ ೫-೪ನೇ ಶತಮಾನಕ್ಕಿಂತ ಹಳೆಯದು ಎಂದು ಹೇಳಬಹುದು. ಆದರೆ ಇಂದು ಬಹಳಷ್ಟು ನಾಶವಾಗಿವೆ. ಅಲ್ಲಿ ದೊರಕಿರುವ ಕೆಲವು ಸಮಾಧಿಗಳಿಂದ ಅಲ್ಲಿನ ಸಂಸ್ಕೃತಿಯನ್ನು ಅರಿಯಲು ಸಾಧ್ಯವಾಗುತ್ತದೆ. ಕೆಲವು ಸಮಾಧಿಗಳು ೨.೭೦ ಮೀಟರ್ ಉದ್ದ, ೧.೭೦ ಮೀಟರ್ ಅಗಲ, ೧.೬೦ ಅಡಿ ಎತ್ತರದ ಚೌಕಟ್ಟಾದ ಕೋಣೆಯ ಮೇಲೆ ೪.೦೦ x ೨.೫೦ x ೦.೨೫ ಮೀಟರ್ ವಿಸ್ತೀರ್ಣದ ದೊಡ್ಡದಾದ, ನೀಟಾಗಿ ಕತ್ತರಿಸಿದ ಕಲ್ಲು ಚಪ್ಪಡಿಯನ್ನು ಕೂರಿಸಿ, ಪೂರ್ವದಿಕ್ಕಿಗೆ ೮೦.ಸೆಂ.ಮೀ. ವ್ಯಾಸದ ಕಿಂಡಿಯನ್ನು ಮಾಡಿ ನಿರ್ಮಿಸಿರುವ ಈ ಸಮಾಧಿ ಅದರ ವಾಸ್ತು ಸೌಂದರ್ಯಕ್ಕೆ ಮತ್ತು ನಿರ್ಮಾಣ ಕುಶಲತೆಗೆ ಉತ್ತಮ ನಿದರ್ಶನವಾಗಿದೆ. ಹಾಗಾಗಿ ಶಿಲಾಯುಗ ಸಂಸ್ಕೃತಿಯಿಂದ ಇಲ್ಲಿ ನಾಗರೀಕತೆ ಬೆಳೆಯತೊಡಗಿರಬಹುದು ಇಲ್ಲಿ ಯಾವುದೇ ನದಿಗಳಿಲ್ಲ. ಗ್ರಾಮದ ಪಕ್ಕದಲ್ಲೇ ಒಂದು ಕೆರೆ ಇದೆ. ಈ ಕೆರೆ ಪ್ರಾಚೀನ ಕಾಲದಿಂದಲೂ ಜನರಿಗೆ ಆಶ್ರಯ ಒದಗಿಸಿರಬಹುದು. ನಾಗರೀಕತೆ ಬೆಳೆದಂತೆಲ್ಲಾ ಹಲವಾರು ರಾಜಮನೆತನಗಳು ಬೆಳೆಯತೊಡಗಿದವು. ಬಾಣರು, ಗಂಗರ ಕಾಲಗಳಲ್ಲಿ ರಾಜಘಟ್ಟ ಒಂದು ಪ್ರವರ್ಧಮಾನದ ಗ್ರಾಮವಾಗಿ ಬೆಳೆಯಿತು.

ರಾಜಘಟ್ಟ ಎಂಬ ಹೆಸರು ಈ ಊರಿಗೆ ಹೇಗೆ ಬಂತು ಎಂಬುದಕ್ಕೆ ನೇರವಾದ ಸ್ಥಳಪುರಾಣವಾಗಲಿ, ಐತಿಹ್ಯಗಳಾಗಲಿ ದೊರೆತಿಲ್ಲ. ಬೌದ್ಧಕೇಂದ್ರವಾಗಿ ಬೌದ್ಧ ಸಂಸ್ಕೃತಿಯೊಂದಿಗೆ ಸಂಪರ್ಕವನ್ನು ಹೊಂದಿದ್ದರಿಂದ ಈ ಹೆಸರು ಬಂದಿರಬೇಕು. ಬೌದ್ಧಧರ್ಮ ಉತ್ತರದಿಂದ ದಕ್ಷಿಣಕ್ಕೆ ಬಂದುದು. ಈ ಧರ್ಮ ಮುಂಚೆ ವಾರಣಾಸಿಯ ಬಳಿ ರಾಜಘಟ್ಟ ಎಂಬ ಪ್ರದೇಶದಲ್ಲಿ ನೆಲೆಸಿದ್ದು ನಂತರ ದಕ್ಷಿಣದ ಕಡೆಗೆ ವಲಸೆ ಬಂದಿರುವ ಸಾಧ್ಯತೆ ಇದೆ. ಈ ಸ್ಥಳಕ್ಕೂ ಸಹ ಬೌದ್ಧ ಧರ್ಮಕ್ಕೆ ಹೆಸರಾದ ಉತ್ತರದ ರಾಜಗೃಹ, ರಾಜಘಾಟ್ ಮುಂತಾದ ಊರಿನ ಹೆಸರನ್ನು ಇಟ್ಟಿರುವ ಸಾಧ್ಯತೆ ಇರಬಹುದು. ರಾಜಘಟ್ಟ ಎಂಬ ಹೆಸರು ಬಹುಶಃ ಈ ಪ್ರದೇಶಕ್ಕೆ ಔತ್ತರೇಯ ಬೌದ್ಧ ಸಂಸ್ಕೃತಿಯ ಕೊಡುಗೆಯಾಗಿ ಬಂದಿರಬಹುದು.

ರಾಜಘಟ್ಟ ಗ್ರಾಮದ ಆಗ್ನೇಯ ಭಾಗಕ್ಕೆ ವಿಸ್ತಾರವಾದ ಕೃಷಿಭೂಮಿ ಇದ್ದು, ಅಲ್ಲಿಯ ಸ್ವಲ್ಪ ಭಾಗವನ್ನು ಸ್ಥಳೀಯರು 'ಬೂದಿಗುಂಡಿ' ಪ್ರದೇಶ ಎಂದು ಕರೆಯುತ್ತಾರೆ. ಸುಮಾರು ೮ ರಿಂದ ೧೦ ಅಡಿಯವರೆಗಿನ ಭೂಮಿಯಿದ್ದು ಇದು ಜನವಸತಿ ನಿವೇಶನದ ಕುರುಹು ಎಂದು ಹೇಳಬಹುದು. ಕೃಷಿ ಗೊಬ್ಬರಕ್ಕಾಗಿ ಭೂಮಿಯ ಮಣ್ಣನ್ನು ಅಗೆಯುತ್ತಿದ್ದಾಗ ಕೆಲವು ಕುರುಹುಗಳು ಪತ್ತೆಯಾಗಿವೆ. ಇವೆಲ್ಲವೂ ಆದಿ ಚಾರಿತ್ರಿಕ ಕಾಲದ ಸಂಸ್ಕೃತಿಗೆ ಸೇರಿದವುಗಳಾಗಿವೆ. ಕೆಂಪು ಮತ್ತು ಕಪ್ಪು ಬಣ್ಣದ ಮಡಕೆಗಳು, ಚಿತ್ರಿತ ಮಡಕೆಗಳು, ಶಂಖ ಮತ್ತು ದಂತದಲ್ಲಿ ಮಾಡಿದ ಆಭರಣಗಳ ಚೂರುಗಳು ಗಾಜಿನ ಮತ್ತು ಕಲ್ಲಿನ ಮಣಿಗಳು ಇಲ್ಲಿ ದೊರೆತಿವೆ. ಇವೆಲ್ಲವು ಕರ್ನಾಟಕದ ಆದಿಚಾರಿತ್ರಿಕ ಕಾಲದ ನೆಲೆಗಳಲ್ಲಿ ದೊರೆತಿರುವ ಅವಶೇಷಗಳಿಗೆ

ಸರಿಸಮಾನವಾಗಿರುವುದರಿಂದ ಇಲ್ಲಿ ಆ ಕಾಲದ ಸಂಸ್ಕೃತಿ ನೆಲಸಿತ್ತೆಂದು ಹೇಳಬಹುದು. ಸಮೃದ್ಧವಾದ ಸಂಸ್ಕೃತಿ ಮತ್ತು ಜನವಸತಿ ಈ ಪ್ರದೇಶದಲ್ಲಿ ಇತ್ತು ಎಂಬುದಕ್ಕೆ ದೊರೆತಿರುವ ಪ್ರಾಚ್ಯವಸ್ತುಗಳೇ ಸಾಕ್ಷಿ ಆದರೆ ರಾಜಕೀಯವಾಗಿ ಯಾವುದೇ ರಾಜಮನೆತನ ಆಳ್ವಿಕೆ ನಡೆಸಿತ್ತೆಂಬುದಕ್ಕೆ ಆಧಾರಗಳಿಲ್ಲ. ಆದಿ ಚಾರಿತ್ರಿಕ ಕಾಲಕ್ಕೆ ಸೇರಬಹುದಾದ ಇಟ್ಟಿಗೆಯ ಕಟ್ಟಡದ ಕೆಲವು ಅವಶೇಷಗಳು ಈ ಬೂದಿಗುಂಡಿ ಪ್ರದೇಶದಲ್ಲಿ ಕಂಡುಬಂದಿವೆ. ಕಟ್ಟಡಗಳನ್ನು ನಿರ್ಮಿಸಲು ಬಳಸಿದ ಇಟ್ಟಿಗೆಗಳು ಕರ್ನಾಟಕದ ಇತರ ಸ್ಥಳಗಳಲ್ಲಿ ಶಾತವಾಹನರು ಮತ್ತು ಗಂಗರು ಉಪಯೋಗಿಸುತ್ತಿದ್ದ ಇಟ್ಟಿಗೆಗಳ ಆಕೃತಿಗೆ ಮತ್ತು ಗಾತ್ರಕ್ಕೆ ಸಮವಾಗಿ ಇವೆ. ಈ ಕಟ್ಟಡಗಳೆಲ್ಲಾ ನಾಶವಾಗಿ ಅವಶೇಷಗಳು ಮಾತ್ರ ಉಳಿದಿವೆ. ಬೂದಿಗುಂಡಿ ಪ್ರದೇಶದಲ್ಲಿ ಸುಮಾರು ಎಂಟು ಅಡಿ ಎತ್ತರದ ಬೂದಿಮಣ್ಣು ಖಾಲಿಯಾಗಿದೆ. ಅಲ್ಲಲ್ಲಿ ಸಣ್ಣದಾದ ಮಣ್ಣಿನ ಗುಡ್ಡೆಗಳು ಉಳಿದಿದ್ದು, ಉಳಿದಿರುವ ಮಣ್ಣಿನ ಗುಡ್ಡೆಗಳಲ್ಲೇ ಕೆಲವು ಕುರುಹುಗಳು ದೊರೆತಿರುವುದು ಉತ್ಖನನದ ಸ್ಥಳದಲ್ಲಿ ಅಗೆದ ಗುಂಡಿಯಲ್ಲಿ ಮೇಲಿನ ಎರಡು ಸ್ತರಗಳಲ್ಲಿ ಯಾವುದೇ ಮಾಹಿತಿಗಳು ದೊರೆತಿಲ್ಲ ಮೂರನೆಯ ಸ್ತರದಲ್ಲಿ ಗಂಗರ ಕಾಲದ್ದೆನ್ನಬಹುದಾದ ಮಡಕೆಗಳು ಕಂಡುಬಂದಿವೆ. ಮನೆಯ ಗೋಡೆ ಅವಶೇಷಗಳು ಗೋಡೆಗೆ ಹೊಂದಿಕೊಂಡಂತಿರುವ ಇಟ್ಟಿಗೆಯ ಒಲೆ, ಅದರ ಪಕ್ಕದಲ್ಲೆ ಬೂದಿಯ ರಾಶಿ ಪತ್ತೆಯಾಗಿದೆ. ನಂತರ ಆದಿಚಾರಿತ್ರಿಕ ಕಾಲಕ್ಕೆ ಸೇರಿದ ಮನೆಯ ಗೋಡೆ ಮತ್ತು ಗಟ್ಟಿನೆಲ ಪತ್ತೆಯಾಗಿವೆ. ಕೆಳಭಾಗದಲ್ಲಿ ಬೂದಿ ಮಿಶ್ರಿತ ಮಣ್ಣು ಇದ್ದು, ಕಪ್ಪು ಮಡಕೆ, ಕಂದುಬಣ್ಣದ ಮಡಕೆ, ಬೂದಿ ಬಣ್ಣದ ಚೂರುಗಳು ಕಂಡುಬಂದಿವೆ. ಇಲ್ಲಿ ಕಂಡುಬಂದಿರುವ ಬೂದಿ ಮತ್ತು ಬೂದಿ ಮಿಶ್ರಿತ ಮಣ್ಣು ಈ ಕಾಲದಲ್ಲಿ ಬೆಂಕಿಗೆ ಸಂಬಂಧಿಸಿದ ಕಾರ್ಯಗಳು ನಡೆದಿರಬಹುದು. ಆದಿಚಾರಿತ್ರಿಕ ಕಾಲದಿಂದ ಇಲ್ಲಿ ಜನವಸತಿ ಇದ್ದಿರಬಹುದು. ಇಟ್ಟಿಗೆಯಿಂದ ಮಾಡಿದ ಮನೆಗಳಲ್ಲಿ ಜನ ವಾಸ ಮಾಡುತ್ತಿದ್ದಿರಬಹುದು. ಸುಮಾರು ಎಂಟರಿಂದ ಹತ್ತನೆಯ ಶತಮಾನದವರೆಗೆ ಜನವಸತಿ ಇದ್ದಿರಬಹುದು ನಂತರ ಬೇರೆ ಸ್ಥಳಕ್ಕೆ ಬದಲಾವಣೆ ಹೊಂದಿರಬೇಕು.

ರಾಜಘಟ್ಟ ಗ್ರಾಮದ ದಕ್ಷಿಣಕ್ಕೆ ಇಲ್ಲಿ ಇಟ್ಟಿಗೆಯಿಂದ ನಿರ್ಮಿಸಲಾದ ಒಂದು ಚೈತ್ಯಾಲಯ ಕಂಡುಬಂದಿದೆ. ಈ ಚೈತ್ಯಾಲಯದ ಉದ್ದ ೧೧.೫ ಮೀಟರ್‌ಗಳು ಅಗಲ ೯.೫ ಮೀಟರ್‌ಗಳು ಇದರ ಮಧ್ಯಭಾಗದಲ್ಲಿ ಒಂದು ಹಜಾರ ಇದ್ದು ಅದರ ವಿಸ್ತೀರ್ಣ ೪.೩ x ೨.೫ ಮೀಟರ್‌ಗಳು ಈ ಹಜಾರದ ಒಂದು ವಿಶೇಷ ಲಕ್ಷಣವೆಂದರೆ ಇದರಲ್ಲಿ ಯಾವುದೇ ಕಂಬಗಳಿಲ್ಲ ಮತ್ತು ಇದರ ಒಳ ಹಿಂಬದಿ ಮಾತ್ರ ಅರ್ಧವೃತ್ತಾಕಾರದ ಅಥವಾ ಕುದುರೆ ಲಾಳಾಕಾರವಾಗಿದೆ. ಇದರ ಹೊರಭಾಗ ಸಮಚತುರಾಕಾರದಲ್ಲಿ ಇದೆ. ಈ ಹಜಾರದ ಸುತ್ತಲೂ ದೀರ್ಘ ಚತುರ ಪ್ರಾಕಾರದ ಒಂದು ಪ್ರದಕ್ಷಿಣ ಪಥವಿದೆ. ಇದರ ಅಗಲ ೭೫ ಸೆಂಟಿಮೀಟರ್ ಇದೆ. ಚೈತ್ಯಾಲಯದ ಹೊರಗೋಡೆಯಲ್ಲಿ ಕೋಷ್ಟಗಳು, ಜಾಲಂಧ್ರಗಳು ಇದ್ದುದಕ್ಕೆ ಸೂಕ್ಷ್ಮವಾದ

ಸಾಕ್ಷ್ಯಗಳು ಕಂಡುಬಂದಿವೆ. ದಕ್ಷಿಣದ ಮುಖದಲ್ಲಿ ಕಂಬಗಳ ಆಸರೆಯ ಮೇಲೆ ನಿಂತಿದ್ದ ಒಂದು ಸಣ್ಣ ಮುಖಮಂಟಪ ಇತ್ತು. ಮುಖ್ಯದ್ವಾರದ ಮುಂಭಾಗದಲ್ಲಿ ಚಂದ್ರಶಿಲೆ, ಮತ್ತು ಇಕ್ಕೆಲಗಳಲ್ಲಿ ಕಟಾಂಜನದ ಕಲ್ಲುಗಳು ಕಂಡುಬಂದಿದೆ. ಕಟ್ಟಡವನ್ನು ಸಂಪೂರ್ಣವಾಗಿ ಗಾರೆಯಿಂದ ಗಿಲಾವು ಮಾಡಿ ಸುಣ್ಣವನ್ನು ಬಳಿಯಲಾಗಿದೆ. ಕಟ್ಟಡದ ಹೊರಮುಖವು ವೈವಿಧ್ಯಮಯವಾದ ವಾಸ್ತು ಮತ್ತು ಶಿಲ್ಪ ಅಲಂಕರಣಗಳಿಂದ ಕೂಡಿದೆ. ವಾಸ್ತು ಅಲಂಕರಣಕ್ಕಾಗಿ ವಿವಿಧಾಕಾರದ ಗಾತ್ರದ ವಿಶೇಷ ರೀತಿಯ ಇಟ್ಟಿಗೆಗಳನ್ನು ಪ್ರತ್ಯೇಕವಾಗಿ ಅಚ್ಚು ಮಾಡಿ ಸುಟ್ಟು ಅವುಗಳನ್ನು ಬಳಸುತ್ತಿದ್ದರು. ಇಲ್ಲಿ ಚೌಕಟ್ಟಾದ ದೀರ್ಘಚತುಸ್ರಾಕಾರದ ಉಳಿಯಾಕಾರದ, ಅರ್ಧವೃತ್ತಾಕಾರವಾದ, ಕಾಲು ವೃತ್ತಾಕಾರವಾದ ದುಂಡಾದ ತುದಿಗಳುಳ್ಳ ಇಟ್ಟಿಗೆಗಳು ದೊರೆತಿವೆ. ಅಲ್ಲದೆ ಮೂಲೆ ಮತ್ತು ಮೇಲ್ಭಾಗಗಳನ್ನು ದುಂಡು ಮಾಡಿದ, ಮೂಲೆ ಕತ್ತರಿಸಿದ, ವಿವಿಧಾಕಾರದ ಏಣು, ಗಾಡಿಗಳನ್ನುಳ್ಳ ಇಟ್ಟಿಗೆಗಳು, ವಿವಿಧ ಅಲಂಕರಣೆಗಳಿಗೆ ಬಳಸಿದ ಇಟ್ಟಿಗೆಗಳು ಕಂಡುಬಂದಿವೆ. ಕಟ್ಟಡದ ಜೊತೆಗೆ ಅಲಂಕರಣಕ್ಕಾಗಿ ಸಣ್ಣದಾದ ಕಟಾಂಜನದ ಕಂಬಗಳನ್ನು ಇಟ್ಟಿಗೆಗಳಿಂದ ತಯಾರು ಮಾಡಿ ಕೊಳ್ಳುತ್ತಿದ್ದರು. ಕಟಾಂಜನ ಕಂಬಗಳ ಪೀಠ ಮತ್ತು ಮೇಲ್ಭಾಗ ಹಾಗೂ ಮಧ್ಯದ ದಿಂಡಿಗೆ ವಿವಿಧ ರೀತಿಯ ಸಣ್ಣದಾದ ಉರುಳಿಯಾಕಾರದ, ಚೌಕಾಕಾರದ, ಅಷ್ಟಮುಖ ಅಕಾರದ ಇಟ್ಟಿಗೆಗಳನ್ನು ಬಳಸಿದ್ದಾರೆ. ಈ ಇಟ್ಟಿಗೆಗಳಿಗೆ ಮಧ್ಯದಲ್ಲಿ ಸಮಗಾತ್ರದ ಕೊಳವೆಯಾಕಾರದ ರಂಧ್ರವನ್ನು ಮಾಡಿದ್ದಾರೆ.

ಗೋಡೆಯ ಭಾಗದಲ್ಲಿ ಮೂರ್ತಿಶಿಲ್ಪ, ಪ್ರಾಣಿಶಿಲ್ಪ, ಸಸ್ಯ ಹಾಗೂ ಜ್ಯಾಮಿತಿಯ ರೂಪಗಳ ಮುಖಾಂತರ ಅಲಂಕರಿಸಲಾಗಿದೆ. ಸಣ್ಣ ಸಣ್ಣ ಶಿಲ್ಪಗಳು ಕಂಡುಬಂದಿವೆ. ಮನುಷ್ಯ ಶಿಲ್ಪದ ತಲೆಗಳು, ಮುಖಗಳು, ಕೈಕಾಲುಗಳು ಹೊರಭಿತ್ತಿಯಲ್ಲಿ ಕಂಡುಬರುತ್ತವೆ. ಇವುಗಳನ್ನು ಇಟ್ಟಿಗೆಯ ಚೂರು ಗಾರೆ ಮತ್ತು ಸುಣ್ಣದಿಂದ ಮಾಡಲಾಗಿದೆ. ಶಿಲ್ಪಗಳಲ್ಲಿನ ಭಾವನೆಗಳು ಬೌದ್ಧಧರ್ಮಕ್ಕೆ ಸಂಬಂಧಿಸಿದ ಸನ್ನಿವೇಶಗಳನ್ನು ತೋರ್ಪಡಿಸುವಂತಿದೆ. ಅಲಂಕಾರಿಕ ರೂಪಗಳಾದ ವ್ಯಾಸಶಿಲ್ಪಗಳು, ಅಗಲವಾಗಿ ಬಾಯಿತೆರೆದ ಸಿಂಹಮುಖಗಳು, ಸಿಂಹದ ಅಗಲವಾದ ಕಣ್ಣುಗಳು, ಚೂಪಾದ ಕೋರೆದಾಡೆಗಳು ಒಳಕ್ಕೆ ಸುತ್ತಿಕೊಂಡಿರುವ ಚೂಪಾದ ನಾಲಿಗೆಯ ತುದಿ, ಸೂಕ್ಷ್ಮವಾದ ಕಿವಿಗಳು ಮತ್ತು ಗುಂಗುರು ಕೇಶರಾಶಿಗಳು ರೂಪಿಸಲ್ಪಟ್ಟಿವೆ. ಅಂಕುಡೊಂಕಾಗಿ, ಸುರುಳಿಸುರುಳಿಯಾಗಿ ಸುತ್ತಿಕೊಂಡಿರುವ ಬಳ್ಳಿಯ ಚಿತ್ರಗಳು ಮತ್ತು ಹೂವಿನ ಚಿತ್ರಗಳು, ಚೈತ್ಯಾಲಯದ ಅಲಂಕರಣೆಯಲ್ಲಿ ಆಕರ್ಷಕವಾಗಿ ಕಂಡುಬರುತ್ತಿದೆ. ಚೈತ್ಯಾಲಯವು ಮಳೆ-ಗಾಳಿಗೆ ಸ್ಥಳೀಯರ ಹಾವಳಿಗೆ ತುತ್ತಾಗಿ, ಕಟ್ಟಡದ ಅವಶೇಷಗಳು ಕಂಡುಬರುತ್ತವೆ. ಚೈತ್ಯಾಲಯದ ತಳವಿನ್ಯಾಸ ಸ್ಪಷ್ಟವಾದ ಆಕಾರದಲ್ಲಿದೆ. ಇದನ್ನು ಸುಟ್ಟು, ಅಚ್ಚು ಹಾಕಿದ ಇಟ್ಟಿಗೆಗಳಿಂದ ಕಟ್ಟಿದ್ದಾರೆ. ಈ ಇಟ್ಟಿಗೆಗಳು ಚೌಕಾಕಾರವಾಗಿವೆ. ಆದರೆ

ಇವು ಗಾತ್ರಮತ್ತು ಪ್ರಮಾಣದಲ್ಲಿ ವ್ಯತ್ಯಾಸವಿದೆ. ಈ ಇಟ್ಟಿಗೆಗಳಲ್ಲಿ ಮೂರು ಮುಖ್ಯ ಗಾತ್ರದ ಇಟ್ಟಿಗೆಳನ್ನು ಗುರುತಿಸಬಹುದು. ಅವುಗಳೆಂದರೆ ೪೧ x ೨೦ x ೬೧ ಸೆಂಟಿಮೀಟರ್, ೨೫ x ೨೦ x ೬ ಸೆಂಟಿಮೀಟರ್, ೧೯ x ೧೯ x ೬೧ ಸೆಂಟಿಮೀಟರ್. ಈ ಇಟ್ಟಿಗೆಗಳು ಕರ್ನಾಟಕದಲ್ಲಿ ಆದಿಚಾರಿತ್ರಿಕಕಾಲಕ್ಕೆ ಸೇರಿದ ಸಂಸ್ಕೃತಿಯ ನೆಲೆಗಳಲ್ಲಿ ದೊರೆಯುವ ಇಟ್ಟಿಗೆಗಳ ಪ್ರಮಾಣಕ್ಕೆ ಸರಿಹೊಂದುತ್ತವೆ.[೬] ಈ ಕಟ್ಟಡವನ್ನು ಅಡಿಪಾಯದ ಮೇಲೆ ಕಟ್ಟಿಲ್ಲ. ಗಟ್ಟಿಮಣ್ಣಿನ ಮೇಲೆ ಇಟ್ಟಿಗೆಗಳನ್ನು ಕೂರಿಸಿ ಗೋಡೆಯನ್ನು ನಿರ್ಮಿಸಿದ್ದಾರೆ. ಇಟ್ಟಿಗೆಗಳನ್ನು ಬಹಳ ನೀಟಾಗಿ ಜೋಡಿಸಿರುವುದುಂಟು. ಕಟ್ಟಡ ಭದ್ರವಾಗಿರುವುದು ತಿಳಿಯುತ್ತದೆ.

ಚೈತ್ಯಾಲಯದ ಹೊರಭಾಗದ ಗೋಡೆಯು ಸುಂದರವಾದ ವಾಸ್ತುಶಿಲ್ಪ ಅಲಂಕಾರಿಕ ಕೆತ್ತನೆಗಳಿಂದ ಕೂಡಿದೆ. ಎಲೆ, ಬಳ್ಳಿ, ಹೂವು, ಪ್ರಾಣಿಗಳ ಮತ್ತು ಮನುಷ್ಯರ ಸಣ್ಣ ಸಣ್ಣ ಆಕೃತಿಗಳು ಗಾರೆಯಿಂದ ತುಂಬಿದೆ. ಶಿಲ್ಪಾಲಂಕರಣದಲ್ಲಿ ಬೌದ್ಧ ಪರಂಪರೆಗೆ ಸಂಬಂಧಿಸಿದ ಜಾತಕ ಕಥೆಗಳು, ಸನ್ನಿವೇಶಗಳು ನಿರೂಪಿತವಾಗಿವೆ. ಬಹುಶಃ ಇವು ಲೌಖಿಕ ಘಟನೆಗಳನ್ನು ಒಳಗೊಂಡಿರಬಹುದು. ಶಿಲ್ಪಿಯಲ್ಲಿದ್ದ ಅಲಂಕರಣೆಯ ಜ್ಞಾನದ ಕುಶಲತೆಯನ್ನು ನಿರೂಪಿಸುತ್ತವೆ. ಪ್ರಾಣಿಶಿಲ್ಪಗಳು, ವ್ಯಾಳದ ಶಿಲ್ಪಗಳು ಅಚ್ಚುಕಟ್ಟಾಗಿ, ಆಕರ್ಷಕವಾಗಿ ಮೂಡಿಬಂದಿವೆ. ಈ ಚೈತ್ಯಾಲಯದ ಮೇಲ್ಛಾವಣೆ ಇಟ್ಟಿಗೆಯಿಂದ ನಿರ್ಮಿಸಿದಂತೆ ಕಮಾನಿನ ಆಕಾರದಲ್ಲಿದೆ ಈ ಚೈತ್ಯಾಲಯವಿರುವ ಸ್ವಲ್ಪ ದೂರದಲ್ಲಿ ಮಣ್ಣಿನಿಂದ ಮಾಡಿದ ಅನೇಕ ಸಣ್ಣ ಸಣ್ಣ ಸ್ತೂಪಗಳು ಇಲ್ಲಿ ದೊರೆತಿವೆ. ಹರಕೆಯ ಸ್ತೂಪಗಳ ಒಳಭಾಗದಲ್ಲಿ ಸಣ್ಣದಾದ ಬಿಲ್ಲೆಗಳು ಕಂಡುಬಂದಿವೆ. ಬಿಲ್ಲೆಯ ಮೇಲೆ ಬ್ರಾಹ್ಮೀ ಲಿಪಿಯಲ್ಲಿ ಬೌದ್ಧಧ್ಯಾನ ಶ್ಲೋಕವೊಂದರ ಮುದ್ರೆ ಇದೆ. ಲಿಪಿಯ ಕಾಲದ ದೃಷ್ಟಿಯಿಂದ ಕ್ರಿ.ಶ.೪ ರಿಂದ ೬ನೇ ಶತಮಾನಕ್ಕೆ ಸೇರಿದವುಗಳೆಂದು ಹೇಳಬಹುದು. ಹರಕೆಯ ಸ್ತೂಪಗಳನ್ನು ಬೌದ್ಧ ಧರ್ಮೀಯರು ಬುದ್ಧನಿಗೆ ಅರ್ಪಿಸಿದ್ದಿರಬಹುದು. ಈ ರೀತಿಯ ಸ್ತೂಪಗಳ ಅರ್ಪಣೆ ಇಂದಿಗೂ ಟಿಬೆಟ್‌ನ ಬೌದ್ಧ ಧರ್ಮೀಯರಲ್ಲಿದೆ. ಈ ಒಂದು ಸ್ಥಳದಲ್ಲಿ ದೊರೆತಿರುವುದರಿಂದ ಇಲ್ಲಿ ಆ ಕಾಲದಲ್ಲಿ ಬೌದ್ಧ ಧರ್ಮ ಗಟ್ಟಿಯಾಗಿ ನೆಲನಿಂತಿರಬೇಕು. ಬಹಳಷ್ಟು ಮಂದಿ ಬೌದ್ಧ ಧರ್ಮಿಯರು ನಿತ್ಯೋಪಯೋಗಕ್ಕಾಗಿ ರಾಜಘಟ್ಟ ಗ್ರಾಮದಲ್ಲಿ ಚೈತ್ಯಾಲಯ ನಿರ್ಮಿತವಾಗಿರಬೇಕು. ಹಾಗಾಗಿ ಇದರ ಕಾಲವನ್ನು ೪ ರಿಂದ ೬ನೆಯ ಶತಮಾನದ್ದೆಂದು ಹೇಳಬಹುದು.

ರಾಜಘಟ್ಟ ಪ್ರದೇಶದಲ್ಲಿ ನೆಲೆ ಊರಿದ್ದ ಬೌದ್ಧ ಜನಾಂಗವು ಬೌದ್ಧ ಧರ್ಮದಲ್ಲಿ ಯಾವ ಪಂಥಕ್ಕೆ ಸೇರಿತ್ತು ಎಂಬುದರ ಬಗ್ಗೆ ನಿಖರವಾದ ಮಾಹಿತಿಗಳು ಲಭ್ಯವಾಗಿಲ್ಲ. ಇಲ್ಲಿ ದೊರೆತಿರುವ ಹರಕೆಯ ಸ್ತೂಪಗಳಲ್ಲಿ ಒಂದು ಪದಕದ ಗಾತ್ರದ ಮಣ್ಣಿನ ಮುದ್ರೆಯೊಂದು ದೊರೆತಿದೆ.[೭] ಈ ಪದಕದ ಒಂದು ಮುಖದಲ್ಲಿ ಪದ್ಮಾಸನದಲ್ಲಿ ಮತ್ತು ಧ್ಯಾನಮುದ್ರೆಯಲ್ಲಿರುವ ಬುದ್ಧನ ಚಿತ್ರವಿದೆ. ಬುದ್ಧನ ಇಕ್ಕೆಲಗಳಲ್ಲಿ ಸಣ್ಣ ಸ್ತೂಪವಿದೆ. ಬುದ್ಧನ

ಎರಡು ಭುಜದ ಪಕ್ಕಗಳಲ್ಲಿ ಚಾಮರ, ತಲೆಯ ಹಿಂಭಾಗದಲ್ಲಿ ಪ್ರಭಾವಳಿ ಕಂಡುಬರುತ್ತದೆ. ಈ ರೀತಿಯ ಬುದ್ಧನ ಕಂಡರಣೆಯನ್ನು ಅಮಿತಾಭನೆಂದು ಕರೆಯಲಾಗುತ್ತದೆ. ಬುದ್ಧನ ಈ ನಿರೂಪಣೆಯನ್ನು ಮಹಾಯಾನ ಪಂಥದ ಟಿಬೆಟ್‌ನ ಬೌದ್ಧರು ಇಂದಿಗೂ ಅಮಿತಾಭನೆಂದು ಪೂಜಿಸುತ್ತಾರೆ. ಮಹಾಯಾನ ಚೈತ್ಯಾಲಯಗಳನ್ನು ಇಂದಿಗೂ ಸಹ ದಕ್ಷಿಣಕ್ಕೆ ಮುಖಮಾಡಿ ನಿರ್ಮಿಸಲಾಗುತ್ತದೆ. ಇಲ್ಲಿಯೂ ಸಹ ಈ ಚೈತ್ಯಾಲಯವು ದಕ್ಷಿಣಕ್ಕೆ ಮುಖಮಾಡಿ ನಿಂತಿರುವುದರಿಂದ ಇದು ಮಹಾಯಾನಪಂಥಕ್ಕೆ ಸೇರಿದ್ದಿರಬಹುದೆಂದು ಹೇಳಬಹುದು.

ರಾಜಘಟ್ಟ ಗ್ರಾಮದ ಆಗ್ನೇಯ ದಿಕ್ಕಿಗೆ ಹೊಲವೊಂದರಲ್ಲಿ ದೊರೆತಿರುವ ಹರಕೆಯ ಸ್ತೂಪಗಳು ಒಂದೂವರೆ ಅಡಿಯಷ್ಟು ಎತ್ತರದ ಪದರದಲ್ಲಿ ಹುದುಗಿದ್ದವು ಇಂತಹ ನೂರಾರು ಸ್ತೂಪಗಳು ಒಟ್ಟಿಗೆ ಗುಡ್ಡೆಯಾಗಿ ಕಂಡುಬಂದಿರುವುದು ಇದೇ ಮೊದಲು ಎನಿಸುತ್ತದೆ. ದೊರೆತಿರುವ ಸ್ತೂಪಗಳು ಒಂದೇ ರೀತಿಯಲ್ಲಿ ಕಲಸಿದ ಮಣ್ಣನ್ನು ಸಿದ್ಧಪಡಿಸಿದ ಮರದ ಅಥವಾ ಲೋಹದ ಅಥವಾ ಕಲ್ಲಿನ ಅಚ್ಚಿನೊಳಕ್ಕೆ ತುಂಬಿ ಹಸಿಯಾಗಿಯೇ ತೆಗೆದು ಬಿಸಿಲಿನಲ್ಲಿ ಒಣಗಿಸಿದಂತಹ ಸ್ತೂಪಗಳಾಗಿವೆ. ಇವುಗಳಿಗೆ ತೆಳುವಾದ ಕೆಂಪು ಮಣ್ಣಿನ ತಿಳಿಯಲೇಪನ ಮಾಡಿರುವುದು ತಿಳಿಯುತ್ತದೆ. ಈ ರೀತಿಯಾಗಿ ಸ್ತೂಪಗಳನ್ನು ಅಚ್ಚಿನಲ್ಲಿ ಮಾಡಿದಾಗ ಪ್ರತಿಯೊಂದು ಸ್ತೂಪದ ಒಳಕ್ಕೂ ಒಂದೊಂದು ಬೌದ್ಧಧ್ಯಾನ ಶ್ಲೋಕದ ಮುದ್ರೆಯನ್ನು ಹೊಂದಿರುವ ಮಣ್ಣಿನ ಬಿಲ್ಲೆಯನ್ನು ಸೇರಿಸುತ್ತಿದ್ದರು. ಈ ರೀತಿಯ ಬಿಲ್ಲೆಗಳು ಆ ಮಣ್ಣಿನ ಸ್ತೂಪಕ್ಕೆ ಹೆಚ್ಚಿನ ಪಾವಿತ್ರ್ಯತೆಯನ್ನು ತಂದು ಕೊಡುತ್ತಿದ್ದವು ಎಂಬ ಅಂಶವನ್ನು ವಿಶೇಷವಾಗಿ ಇಲ್ಲಿ ಹೇಳಬೇಕಾಗಿಲ್ಲ. ಅಚ್ಚಿನೊಳಕ್ಕೆ ಅರ್ಧ ಮಣ್ಣನ್ನು ತುಂಬಿದ ಮೇಲೆ, ಈ ಮಣ್ಣಿನ ಬಿಲ್ಲೆಯನ್ನು ಹಾಕಿ ಉಳಿದ ಅರ್ಧಭಾಗಕ್ಕೂ ಮಣ್ಣನ್ನು ತುಂಬಿ, ಚೆನ್ನಾಗಿ ಅಮುಕಿ ಸ್ತೂಪವನ್ನು ಹೊರಕ್ಕೆ ತೆಗೆಯುತ್ತಿದ್ದರು ಈ ರೀತಿಯ ಅಚ್ಚಿನಿಂದ ಸ್ತೂಪವನ್ನು ಮಾಡುವ ಪರಿಪಾಠ ಈಗಲೂ ಸಹ ಟಿಬೆಟ್ ಬೌದ್ಧರಲ್ಲಿ ಇದೆ. ಈ ರೀತಿಯ ಅಚ್ಚನ್ನು ತ್ಸ-ತ್ಸ ಎಂದು ಕರೆಯುತ್ತಾರೆ.[೮]

ಈ ಹರಕೆಯ ಸ್ತೂಪಗಳ ತಯಾರಿಕೆಯಲ್ಲಿ- ಸ್ತೂಪಗಳನ್ನು ತಯಾರಿಸುವಾಗ ಹಸಿಮಣ್ಣಿನ ಮೇಲೆ ಮಣ್ಣಿನ ಬಿಲ್ಲೆಗಳನ್ನು ಸೇರಿಸಿದ್ದರು ಆ ಬಿಲ್ಲೆಗಳು ಹಸಿ ಮಣ್ಣಿಗೆ ಅಂಟಿಕೊಂಡಿರುವುದಿಲ್ಲ. ಭಗ್ನವಾದ ಸ್ತೂಪಗಳಿಂದ ಇವುಗಳು ಪ್ರತ್ಯೇಕವಾಗಿ ಹೊರಕ್ಕೆ ಬಂದಿರುತ್ತವೆ. ಬಿಲ್ಲೆಯ ಒಂದು ಮುಖದಲ್ಲಿ ಸೂಕ್ಷ್ಮವಾದ, ಸ್ಪಷ್ಟವಾದ ಹಾಗು ಖಚಿತವಾದ ಅಕ್ಷರಗಳಲ್ಲಿ ಬೌದ್ಧಧ್ಯಾನಶ್ಲೋಕವೊಂದನ್ನು ಮುದ್ರೆಯ ಮುಖಾಂತರ ಮುದ್ರಿಸಿರುತ್ತಾರೆ. ಈ ಮುದ್ರೆಗಳು ಲೋಹ ಅಥವಾ ಕಲ್ಲಿನದ್ದಾಗಿರಬಹುದು. ಈ ಅಕ್ಷರಗಳನ್ನು ಸೂಕ್ಷ್ಮವಾಗಿ ಕೊರೆದಿರುವುದನ್ನು ಗಮನಿಸಿದರೆ ಅಂದಿನ ಕಾಲದಲ್ಲಿದ್ದ ಶಿಲ್ಪಿಗಳ ಕೌಶಲ್ಯಕ್ಕೆ ಕೈಗನ್ನಡಿಯಂತಿದೆ. ಹಾಗಾಗಿ ಭಾರತದ ಇನ್ನಾವುದೇ ನಾಣ್ಯದ ಮೇಲೆ ಇಷ್ಟೊಂದು ಸೂಕ್ಷ್ಮವಾದ, ಸುಂದರವಾದ ಅಕ್ಷರಗಳು ಇದುವರೆವಿಗೂ ಕಂಡುಬಂದಿಲ್ಲವೆಂದೇ ಹೇಳಬಹುದು.

ಇಲ್ಲಿ ದೊರೆತಿರುವ ಬಿಲ್ಲೆಗಳು ತೆಳುವಾಗಿ ವೃತ್ತಾಕಾರವಾಗಿದ್ದು, ಚಪ್ಪಟೆಯಾಗಿದೆ. ಹಿಂಭಾಗ ಸ್ವಲ್ಪ ಉಬ್ಬಿದಂತೆ ಕಾಣುತ್ತದೆ. ಇಲ್ಲಿನ ಧ್ಯಾನ ಶ್ಲೋಕವು ಐದು ಅಥವಾ ಆರು ಸಾಲುಗಳಾಗಿ ಅಪರೂಪಕ್ಕೆಂಬಂತೆ ಕಂಡುಬರುತ್ತದೆ. ಈ ಲಿಪಿಗಳ ಲಕ್ಷಣಗಳನ್ನು ಗಮನಿಸಿದಾಗ, ಲಿಪಿಯು ಬ್ರಾಹ್ಮೀ ಲಿಪಿಯಲ್ಲಿದ್ದು, ಕ್ರಿ.ಶ.ನಾಲ್ಕರಿಂದ ಆರನೆಯ ಶತಮಾನದವರೆಗಿನ ದಕ್ಷಿಣಾರ್ಯ ಬ್ರಾಹ್ಮೀಲಿಪಿಯ ಲಕ್ಷಣಗಳ ಸಮನಾಗಿವೆ ಎನ್ನಬಹುದು. ಆದ್ದರಿಂದ ಇಲ್ಲಿಯ ಹರಕೆಯ ಸ್ತೂಪಗಳು ನಾಲ್ಕರಿಂದ ಆರನೆಯ ಶತಮಾನಗಳಿಗೆ ಕೊಂಡೊಯ್ಯಬಹುದು. ಈ ಬಿಲ್ಲೆಗಳ ಮೇಲಿನ ಧ್ಯಾನಶ್ಲೋಕದ ಭಾಷೆಯು ಸಂಸ್ಕೃತ ಮಿಶ್ರಿತ ಪ್ರಾಕೃತ ಅಥವಾ ಪ್ರಾಕೃತ ಮಿಶ್ರಿತ ಸಂಸ್ಕೃತ ಎಂದು ಹೇಳಬಹುದು. ಈ ಧ್ಯಾನ ಶ್ಲೋಕದ ಪೂರ್ಣ ಪಾಠ ಹೀಗಿದೆ.

''ಯೇ ಧಮಾ ಹೇತು ಪ್ಪ ಭವಾ ತೇಸ ಹೇತು ತಥಾಗತೋ ಆ ಹೇ ತೇಸ ಚ ಯೋ ನಿರೋದೋ ಏವವಾದೀ ಮಹಾಸಮಣೋ''

ಹರಕೆಯ ಸ್ತೂಪಗಳ ಮೇಲ್ಭಾಗದಲ್ಲಿ ಕೆಲವು ಅಲಂಕರಣೆಗಳು ಕಂಡುಬಂದಿವೆ. ಸ್ತೂಪವು ಮೇಧಿ ಮತ್ತು ಅಂಡವನ್ನು ಹೊಂದಿವೆ. ಅಂಡದ ಮೇಲ್ಭಾಗದಲ್ಲಿ ಕಟಾಂಜನವಿರುವ ಸ್ಥಳದಲ್ಲಿ ಸಣ್ಣದಾಗಿ ಚೌಕಟ್ಟಾದ ಭಾಗವನ್ನು ಮಾಡಿರುವರು. ಇದರ ಮೇಲೆ ಶಂಕುವಿನ ಆಕೃತಿಯ ಸಣ್ಣದಾದ ಮಣ್ಣಿನ ಭಾಗವನ್ನು ಕಿರೀಟದಂತೆ ಕೂಡಿಸಿದ್ದಾರೆ. ಬಹುಶಃ ಇದು ಛತ್ರ, ಛತ್ರಯಷ್ಠಿ, ಛತ್ರಾವಳಿ ಮುಂತಾದವುಗಳನ್ನು ಸೂಚಿಸುತ್ತವೆ ಎಂದು ಹೇಳಬಹುದು. ಈ ಹರಕೆಯ ಸ್ತೂಪಗಳೆಲ್ಲವೂ ಅಚ್ಚಿನಿಂದ ಮಾಡಿದವುಗಳಾಗಿವೆ. ಇಲ್ಲಿನ ಸ್ತೂಪಗಳೆಲ್ಲ ವೈವಿಧ್ಯತೆಯಿಂದ ಕೂಡಿದವುಗಳಾಗಿವೆ. ಐದುನೂರು ಗ್ರಾಂ. ತೂಕದ ಸ್ತೂಪಗಳಿಂದ ಹಿಡಿದು ಚಿಕ್ಕ ಗಾತ್ರದ ನಲವತ್ತು ಗ್ರಾಂ. ತೂಕದ ಸ್ತೂಪಗಳವರೆಗೂ ಕಂಡುಬರುತ್ತವೆ. ಈ ಹರಕೆಯ ಸ್ತೂಪಗಳ ತಯಾರಿಕೆಯಲ್ಲಿ ಏಳು ಮುಖ್ಯವಾದ ಅಚ್ಚುಗಳ ಆಕಾರಗಳು ಕಂಡು ಬಂದಿವೆ. ಅವುಗಳೆಂದರೆ ಒಂದನೇ ವಿಧ; ಚೌಕಟ್ಟಾದ ಪೀಠದ ಮೇಲೆ ಅಷ್ಟಮುಖಿ ಅದರ ಮೇಲೆ ದುಂಡಾದ ಮೇಧಿಯಲ್ಲಿ ಹೊಂದಿರುವ ಸ್ತೂಪ. ಚೌಕಟ್ಟಾದ ಬುಡಕ್ಕೆ ನಾಲ್ಕು ಮೂಲೆಗಳಲ್ಲಿ ಮತ್ತು ನಾಲ್ಕು ಮಧ್ಯಗಳಲ್ಲಿ ಸಣ್ಣದಾದ ಅಸ್ಪಷ್ಟವಾದ ಮುಂಬಣೆ ಕಂಡುಬರುತ್ತದೆ. ಪ್ರಾಯಶಃ ಇವುಗಳು ಸಿಂಹ ಅಥವಾ ಆನೆಯ ಶಿಲ್ಪದ ಆಸರೆಯನ್ನು ಅಥವಾ ಕೆತ್ತನೆಯನ್ನು ಹೊಂದಿರುವ ಮೇಧಿಯ ಪ್ರತಿರೂಪವಿರಬಹುದು. ಮೇಲ್ಭಾಗದ ಅಂಡ ಹೆಚ್ಚು ಕಡಿಮೆ ಎಲ್ಲಾ ಸ್ತೂಪ ಗಳಲ್ಲಿಯೂ, ಕೆಲವು ಅಪವಾದಗಳನ್ನು ಬಿಟ್ಟು, ಗುಮ್ಮಟಾಕಾರವಾಗಿಯೇ ಇರುತ್ತದೆ. ಎರಡನೆಯ ವಿಧ: ವಿಧದಲ್ಲಿ ವೃತ್ತಾಕಾರವಾದ ಮತ್ತು ಸ್ವಲ್ಪ ಎತ್ತರವಾದ ಮೇಧಿ ಮತ್ತು ಅದರ ಮೇಲೆ ಅದೇ ರೀತಿಯ ಚಿಕ್ಕ ಚಿಕ್ಕದಾದ ಇನ್ನೆರಡು ಮೇಧಿಗಳು ಮತ್ತು ಅಂಡ. ನಾಲ್ಕನೆಯ ವಿಧ- ಇದರಲ್ಲಿ ಎತ್ತರವಾದ ವೃತ್ತಾಕಾರವಾದ ಮೇಧಿ. ಅದರ ಮೇಲೆ ಮೇಧಿಗಿಂತ ಕುಳ್ಳಗೆ ಇರುವ ಅಂಡ ಇರುತ್ತದೆ. ಐದನೆಯ ವಿಧ- ಇದರಲ್ಲಿ ಘಂಟಾಕಾರವಾದ ಅಂಡ

ಕೆಳಭಾಗದಲ್ಲಿ ಸಣ್ಣಗೆ, ತೆಳ್ಳಗೆ ಕಾಣುವ ಒಂದು ಅಥವಾ ಎರಡು ಮೇಧಿಗಳು ಇದೆ. ಆರನೆಯ ವಿಧ ಇದರಲ್ಲಿ ಉದ್ದವಾದ, ಎತ್ತರವಾದ, ಘಂಟಾಕಾರದ ಅಂಡ ಮತ್ತು ಕೆಳಭಾಗದಲ್ಲಿ ಅಸ್ಪಷ್ಟವಾಗಿ ಕಾಣುವ ಮೇಧಿ ಇವೆ. ಏಳನೆಯ ವಿಧ ಇದರಲ್ಲಿ ಈ ಮೇಲೆ ಹೇಳಿದ ಎಲ್ಲಾ ಸ್ತೂಪ ವಿಧಗಳಿಗೂ ಅಪವಾದವೆಂಬಂತೆ ಅಥವಾ ವಿಭಿನ್ನವಾಗಿರುವಂತೆ ಬರಿ ಕೈಯಿಂದ ಮಾಡಿದ ಒಂದೇ ಒಂದು ಸ್ತೂಪದ ವಿಧವೂ ಸಹ ಚೈತ್ಯಾಲಯದ ಆವರಣದ ಉತ್ಖನನದಲ್ಲಿ ದೊರೆತಿದೆ.[೧೦]

ಇಲ್ಲಿ ದೊರೆತಿರುವ ಹರಕೆಯ ಸ್ತೂಪಗಳು ಬೌದ್ಧ ಧರ್ಮದ ಧಾರ್ಮಿಕ ವಿಧಿ ವಿಧಾನಗಳು ಮತ್ತು ಸೌಂದರ್ಯಾಭಿರುಚಿಯ ಸಂಕೇತಗಳೆಂದು ಹೇಳಬಹುದಾಗಿದೆ. ತಮ್ಮ ಇಷ್ಟಾರ್ಥಸಿದ್ಧಿಗಾಗಿ ಸ್ತೂಪಗಳನ್ನು ತಯಾರು ಮಾಡಿ ತಮ್ಮ ಇಷ್ಟ ದೈವಕ್ಕೆ ಅರ್ಪಿಸುವ ಸಂಪ್ರದಾಯ ಅಥವಾ ರೂಢಿ ಬಹಳ ಹಿಂದಿನಿಂದಲೂ ಇದ್ದಂತೆ, ಈಗಲೂ ಇರುವ ಒಂದು ಸಂಪ್ರದಾಯವಾಗಿದೆ. ರಾಜಘಟ್ಟದಲ್ಲಿ ದೊರೆತಿರುವ ಬೌದ್ಧ ಅವಶೇಷಗಳು ಕ್ರಿಪೂ.ದಲ್ಲಿ ಪ್ರಾರಂಭವಾದ ಬೌದ್ಧಧರ್ಮದ ಇತಿಹಾಸ, ಬೌದ್ಧ ವಾಸ್ತುಶಿಲ್ಪ, ಮತ್ತು ಬೌದ್ಧಸಂಪ್ರದಾಯದ ದೃಷ್ಟಿಯಿಂದ ಬಹಳ ಮಹತ್ವ ಪಡೆದಿದೆ ಎಂದು ಹೇಳಬಹುದು. ಇಲ್ಲಿನ ಚೈತ್ಯಾಲಯದ ತಳವಿನ್ಯಾಸದ ರಚನೆಯಲ್ಲಿ ದಕ್ಷಿಣ ಭಾರತದಲ್ಲೇ ಅಪರೂಪವಾದುದು. ಇಂತಹ ತಳವಿನ್ಯಾಸದ ರಚನೆ ಭಾರತದಲ್ಲೇ ಅಪರೂಪವಾದುದು. ಇಂತಹ ತಳವಿನ್ಯಾಸದ ರಚನೆ ಭಾರತದಲ್ಲಿ ಎಲ್ಲಿಯು ದೊರೆತಿಲ್ಲದಿರುವುದರಿಂದ ಇದರ ವಾಸ್ತು ನಿರೂಪಣೆಯ ವಿಶೇಷತೆಯನ್ನು ಹೆಚ್ಚಿಸುತ್ತದೆ. ಇಲ್ಲಿನ ಮಣ್ಣಿನ ಹರಕೆಯ ಸ್ತೂಪಗಳು ಸಂಖ್ಯೆಯ ಆಕಾರ, ವೈವಿಧ್ಯಗಳಿಂದ ಕೂಡಿದ್ದು, ಬೌದ್ಧ ಶ್ಲೋಕವಿರುವ ಬಿಲ್ಲೆಗಳನ್ನು ಹೊಂದಿರುವ ಈ ಹರಕೆಯ ಸ್ತೂಪಗಳು ಈ ಸ್ಥಳವು ಮತ್ತಷ್ಟು ಪ್ರಾಮುಖ್ಯತೆಯನ್ನು ಪಡೆದಿದೆ.

ಕರ್ನಾಟಕ, ದಕ್ಷಿಣ ಭಾರತದ ಬೌದ್ಧ ಧರ್ಮದ ಇತಿಹಾಸಕ್ಕೆ ತನ್ನ ಕೊಡುಗೆಯನ್ನು ಅಷ್ಟಾಗಿ ನೀಡಿರಲಿಲ್ಲ. ಅಶೋಕನ ಶಾಸನಗಳು ದಕ್ಷಿಣದ ಎಲ್ಲಾ ರಾಜ್ಯಗಳಿಗಿಂತಲೂ ಸಂಖ್ಯೆಯಲ್ಲಿ ಹೆಚ್ಚಾಗಿ ಕರ್ನಾಟಕದಲ್ಲಿ ದೊರಕಿದ್ದರೂ ಬೌದ್ಧ ಧರ್ಮದ ಕುರುಹುಗಳು ಕರ್ನಾಟಕದಲ್ಲಿ ಏಕೆ ಕಡಿಮೆ ಎಂಬುದೇ ಒಂದು ಜಟಿಲ ಸಮಸ್ಯೆಯಾಗಿತ್ತು. ಇತ್ತೀಚೆಗೆ ಸನ್ನತಿಯಲ್ಲಿ ನಡೆದ ಸಂಶೋಧನೆಗಳು ಉತ್ತರ ಕರ್ನಾಟಕದಲ್ಲಿ ಆ ಕಾಲದಲ್ಲಿ ಬೌದ್ಧ ಧರ್ಮ ಪ್ರಬಲವಾಗಿತ್ತೆಂಬುದಕ್ಕೆ ಸಾಕ್ಷ್ಯಾಧಾರಗಳನ್ನು ಒದಗಿಸಿಕೊಟ್ಟಿವೆ. ಆದರೆ ದಕ್ಷಿಣ ಕರ್ನಾಟಕದಲ್ಲಿ ಮಾತ್ರ ಬೌದ್ಧಧರ್ಮ ಪಸರಿಸಿತ್ತೆ ಎಂಬುದು ಸಂಶಯಾಸ್ಪದವಾದ ವಿಷಯವಾಗಿತ್ತು. ಆದರೆ ರಾಜಘಟ್ಟದಲ್ಲಿ ನಡೆದ ಈ ಉತ್ಖನನಗಳು ದಕ್ಷಿಣ ಕರ್ನಾಟಕದಲ್ಲಿ ಸಹ ಬೌದ್ಧ ಧರ್ಮದ ಪೋಷಣೆಯಲ್ಲಿ ಸಾಕಷ್ಟು ಮಹತ್ತರವಾದ ಪಾತ್ರವನ್ನು ವಹಿಸಿತ್ತು ಎಂಬುದಕ್ಕೆ ಸ್ಪಷ್ಟ ಸಾಕ್ಷ್ಯಗಳನ್ನು ನೀಡುತ್ತವೆ. ಕ್ರಿ.ಶ.೩೩೮ರ ಮುಡಿಯನೂರು ತಾಮ್ರಶಾಸನವು ಬಾಣದೊರೆ

ನಂದಿವರ್ಮನನ್ನು 'ಬೋಧಿಸತ್ವನಂತೆ ಕರುಣಾಮಯ ಆಗಿದ್ದನೆಂದು ಪ್ರಾರಂಭಿಸುತ್ತದೆ. ಈ ಅಂಶ ಬೋದಿಸತ್ವ, ಆತನ ತತ್ವಗಳು ಆತನ ಪೂಜೆ ಆತನ ಮಹತ್ವ ಆ ಕಾಲದಲ್ಲಿ ದಕ್ಷಿಣ ಕರ್ನಾಟಕದಲ್ಲಿ ಸಾಕಷ್ಟು ಜನಜನಿತವಾಗಿತ್ತೆಂಬುದನ್ನು ಸೂಚಿಸುತ್ತದೆ. ಕೋಲಾರ ಜಿಲ್ಲೆಯ ಕುರುಡುಮೇಲ್ಲೈಯಲ್ಲಿ ಬುದ್ಧನ ಪ್ರತಿಮೆಯೊಂದು ದೊರಕಿರುವುದು ತಿಳಿದು ಬರುತ್ತದೆ.[೧೧] ಕೋಲಾರಕ್ಕೆ ಹೊಂದಿಕೊಂಡಿರುವ ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಧರ್ಮಪುರಿಗೆ ಸಮೀಪದಲ್ಲೇ ಸುಂದರವಾದ ಬುದ್ಧನ ವಿಗ್ರಹಗಳು ದೊರಕಿವೆ. ಬೆಂಗಳೂರು ಜಿಲ್ಲೆಯ ಮಾಗಡಿ ತಾಲ್ಲೂಕಿನ ಹಿಂದಿನ ಕಲಾವತಿ ನಗರ, ಈಗಿನ ಕಲ್ಯ ಒಂದು ಪ್ರಸಿದ್ಧ ಬೌದ್ಧ ಕೇಂದ್ರವಾಗಿತ್ತೆಂಬುದನ್ನು ಡಾ.ಎಂ.ಚಿದಾನಂದಮೂರ್ತಿ ತಿಳಿಸಿದ್ದಾರೆ.[೧೨] ಈ ಎಲ್ಲಾ ಅಂಶಗಳನ್ನು ಕ್ರೋಢೀಕರಿಸಿ ನೋಡಿದಾಗ ಬೌದ್ಧ ಧರ್ಮ ದಕ್ಷಿಣ ಕರ್ನಾಟಕದಲ್ಲೂ ಪ್ರಬಲವಾಗಿ ಬೇರೂರಿತ್ತು ಎಂಬುದು ತಿಳಿಯುತ್ತದೆ. ಇದಕ್ಕೆ ಪೂರಕವಾಗಿ ಕರ್ನಾಟಕದಲ್ಲೂ ಬೌದ್ಧ ನೆಲೆಗಳು ಇತ್ತೆಂಬುದಕ್ಕೆ ರಾಜಘಟ್ಟದ ನೆಲೆ ಪ್ರಮುಖ ಸಾಕ್ಷ್ಯವಾಗಿದೆ.

### ಬೃಹತ್ ಶಿಲಾಯುಗದ ಸ್ಮಾರಕಗಳು ಮತ್ತು ರೇಖಾಚಿತ್ರಗಳು

ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದ ಕೆಲವು ನೆಲೆಗಳು ಕಾಣಸಿಗುತ್ತವೆ. ವಿವಿಧ ಮಾದರಿಯ ಸಮಾಧಿಗಳು ಮತ್ತು ನಿಲಸುಗಲ್ಲುಗಳು ಕಂಡುಬಂದಿದ್ದು ಅವುಗಳ ಮೇಲೆ ರೇಖಾಚಿತ್ರಗಳು ಕಂಡುಬಂದಿವೆ. ತಾಲ್ಲುಕಿನ ಸೂಲುಕುಂಟೆ ಗ್ರಾಮದ ಸಮೀಪದ ಕಾಡಿನಲ್ಲಿ ಸುಮಾರು ಹದಿಮೂರು ಅಡಿ ಉದ್ದ ಮೂರು ಅಡಿ ಅಗಲದ ಒಂದು ನಿಲುವುಗಲ್ಲು ಕಾಣುತ್ತದೆ. ಈ ಪ್ರದೇಶದ ಸುತ್ತ ಮುತ್ತ ಸುಮಾರು ನೂರ ಐವತ್ತಕ್ಕೂ ಹೆಚ್ಚು ಕಲ್ಗುಪ್ಪೆ ಸಮಾಧಿಗಳು ಕಂಡುಬರುತ್ತವೆ. ಇಲ್ಲಿಯ ಜನ ಇದನ್ನು ಪಾಂಡವರ ದಿನ್ನೆ ಎಂಬ ಹೆಸರಿನಿಂದ ಕರೆಯುವರು. ಇಲ್ಲಿನ ಸಮಾಧಿಗಳು ನೆಲ ತೊಟ್ಟಿಗಳಂತೆ ಇವೆ. ಇವು ೧೦ x ೮, ೬x೬, ೫ x ೪, ಆಯಾತಾಕಾರದ ಕಲ್ಲುತೊಟ್ಟಿಗಳ ಸಮಾಧಿಗಳಾಗಿವೆ. ಬೃಹತ್ ಶಿಲಾಯುಗದ ಸಮಾಧಿಗಳಂತೆ ಕಂಡುಬರುವ ಇವುಗಳು, ಬನ್ನೇರುಘಟ್ಟದ ಸುತ್ತಮುತ್ತಲಿನ ಪ್ರದೇಶದಲ್ಲಿ, ಅರಸೀಕೆರೆ, ಶ್ರವಣಬೆಳಗೊಳ, ಕೆ.ಆರ್ .ನಗರ, ತುಮಕೂರು, ಮಾಗಡಿ ಇನ್ನು ಮುಂತಾದ ತಾಲ್ಲೂಕುಗಳಲ್ಲಿ ಅನೇಕ ವಿದ್ವಾಂಸರು ಗುರುತಿಸಿ ದ್ದಾರೆ. ಈ ಪ್ರದೇಶದ ಜನ ಈ ತೊಟ್ಟಿಗಳನ್ನು ಪಾಂಡವರು ರಾಗಿ ತುಂಬಲು ಮತ್ತು ನೀರು ತುಂಬಿಸಿಡಲು ಬಳಸುತ್ತಿದ್ದರಂತೆ ಎಂದು ಹೇಳುತ್ತಾರೆ. ಇವುಗಳನ್ನು ಮುಟ್ಟಬಾರದು, ಮುಟ್ಟಿದರೆ ನಾಶವಾಗುತ್ತೇವೆ ಎಂದೆಲ್ಲಾ ಹೇಳುತ್ತಾರೆ. ಬಹುಶಃ ಇಲ್ಲಿಯ ಜನರ ಮುಗ್ಧತೆ ಯಿಂದ ಇಲ್ಲಿಯವರೆಗೂ ಈ ಸ್ಥಳಗಳು ಅರೆಬರೆಯಾಗಿ ಹಾಳಾಗದೆ ಹಾಗೆಯೇ ಉಳಿದಿವೆ. ಇಲ್ಲದಿದ್ದರೆ ಕೆರೆ ಕಟ್ಟೆ ಬಾವಿಗಳಿಗೆ ಆಸರೆಯಾಗುತ್ತಿದ್ದವು. ಇಲ್ಲಿ ಸುಮಾರು ಇನ್ನೂರು ಗಜ ಸುತ್ತಮುತ್ತಲಿನ ಪ್ರದೇಶ ಒಂದು ನೆಲೆಯಾಗಿ ನಿಂತಿದೆ ಎಂದು ಹೇಳಬಹುದು. ಬಿದ್ದಿರುವ

ಕೆಂಪುಕಲ್ಲುಗಳು ಮತ್ತು ಇವುಗಳ ಜೊತೆಗೆ ಅಸ್ತವ್ಯಸ್ತವಾಗಿ ಬಿದ್ದಿರುವ ಬಿಳಿಯ ಕಲ್ಲುಗಳು ಗೋಚರಿಸುತ್ತವೆ. ಚನ್ನವೀರನಹಳ್ಳಿ ಗ್ರಾಮದ ಬುಡ್ಡಪ್ಪನ ಹೊಲದಲ್ಲಿ ಸುಮಾರು ಆರು ಅಡಿ ಎತ್ತರದ ಕೋಡುಗಲ್ಲನ್ನು ಕಾಣಬಹುದು. ಇದರ ಪಕ್ಕದಲ್ಲೇ ಮೂರು ಅಡಿ ಎತ್ತರದ, ಮತ್ತೊಂದು ಕೋಡುಗಲ್ಲು ಇದೆ.

ಈ ಒಂದು ಪ್ರದೇಶದಲ್ಲಿ ಉಜ್ಜನಿಬೆಟ್ಟವಿದ್ದು, ಎರಡು ಗುಹೆ ಕಲ್ಲಾಸರೆಗಳು ಇವೆ. ಇಲ್ಲಿಯ ಕುರುಹುಗಳನ್ನು ಗಮನಿಸಿದರೆ ಶಿಲಾಯುಗ ಜನರ ಯೋಗ್ಯವಾದ ನೆಲೆ ಆಗಿದ್ದಿರಬಹುದು. ಇಲ್ಲಿಯ ಸಮಾಧಿಗಳು ಕೆಲವು ನಿಧಿ ಶೋಧಕರ ದಾಳಿಗೆ ತುತ್ತಾಗಿರುವುದು ಸ್ಪಷ್ಟವಾಗಿ ತಿಳಿಯುತ್ತದೆ. ಇವುಗಳು ಸ್ವಸ್ತಿಕ್ ಆಕಾರದ ಕಣಜಗಳಂತೆ ಗೋಚರವಾಗುತ್ತವೆ. ಕಲ್ಕುಂಟೆ ಗ್ರಾಮದ ಹತ್ತಿರ ಸುಮಾರು ಹತ್ತು ಅಡಿ ಉದ್ದ, ನಾಲ್ಕು ಅಡಿ ಅಗಲದ ನಿಲುವು ಗಲ್ಲು ಕಂಡುಬರುತ್ತದೆ. ಈ ನಿಲುವುಗಲ್ಲಿನ ಸುತ್ತಲೂ ಹದಿನೇಳು ಹಾಲು ಚಿಲುಮೆಯಿದ್ದು, ಇದರ ಬಳಿ ಹನ್ನೆರಡು ಅಡಿ ಉದ್ದ, ಮೂರುವರೆ ಅಡಿ ಅಗಲದ ನಿಲುವುಗಲ್ಲೊಂದನ್ನು ಕಾಣಬಹುದು. ಇದರ ಸುತ್ತಮುತ್ತಲೂ ಸುಮಾರು ಇಪ್ಪತ್ತು ಮೇಲ್ಗುಪ್ಪೆ ಸಮಾಧಿಗಳಿವೆ. ಈ ಸ್ಮಾರಕ ಕಲ್ಲುಗಳನ್ನು ಸ್ಥಳೀಯರು ಕೋತಿಕಲ್ಲು, ಪಾಂಡವರಕಲ್ಲು, ಗೂಡ್ಗಲ್ಲು ಎಂಬುದಾಗಿ ಕರೆಯುತ್ತಾರೆ. ರಾಜಘಟ್ಟ ಗ್ರಾಮದ ಬೂದಿಗುಂಡಿಯಲ್ಲೂ ಸಹ ಕೋಟೆ ಸಮಾಧಿಗಳು ಕಂಡುಬರುತ್ತವೆ. ಬೈರಾಪುರ ಗ್ರಾಮದ ಸುತ್ತಮುತ್ತಲಿನ ಹೊಲಗಳಲ್ಲಿ ಮೂವತ್ತೆರಡು ಶಿಲಾವೃತ್ತ ಸಮಾಧಿಗಳು, ಜಾಲಿಗೆರೆ ಗ್ರಾಮದ ಸಮೀಪದಲ್ಲಿ ಹನ್ನೆರಡು ಅಡಿ ಉದ್ದ, ಮೂರುವರೆ ಅಡಿ ಅಗಲದ ನಿಲುವುಗಲ್ಲು ಇದ್ದು, ಈ ಪ್ರದೇಶದಲ್ಲಿ ಸುಮಾರು ಹನ್ನೊಂದು ಕಲ್ಗುಪ್ಪೆ ಸಮಾಧಿಗಳಿವೆ. ಮತ್ತು ಅಕ್ಕತಮ್ಮನಹಳ್ಳಿಯ ಸಮೀಪದ ಮಠಗುಂಟೆಯ ಬಳಿ ಒಂದು ತುಂಡು ಕಲ್ಲಿನ ಸಮಾಧಿ ಇದ್ದು ಒಂದು ಚಿಕ್ಕದಾದ ನಿಲಸುಗಲ್ಲು, ಭಕ್ತರಹಳ್ಳಿ ಸಮೀಪದಲ್ಲಿ ಹದಿನಾಲ್ಕು ಅಡಿ ಎತ್ತರದ ಮತ್ತು ಐದು ಅಡಿ ಅಗಲದ ನಿಲಸುಗಲ್ಲು ಇದೆ. ಈ ಪ್ರದೇಶದ ಸುತ್ತಮುತ್ತ ಸುಮಾರು ಹದಿನೇಳೂ ಬೃಹತ್ ಶಿಲಾಸಮಾಧಿಗಳು ಕಂಡುಬರುತ್ತವೆ. ಆದಿ ಮಾನವರು ನೆಲೆ ನಿಲ್ಲಬೇಕಾದರೆ ಆಹಾರ ನೀರು ಮತ್ತು ರಕ್ಷಣೆಗೆ ಸ್ಥಳವನ್ನು ಆಯ್ಕೆ ಮಾಡಿಕೊಳ್ಳುತ್ತಿದ್ದ ರೀತಿ, ಬೆಟ್ಟ ಪ್ರದೇಶಗಳು, ಅರಣ್ಯ ತಾಣಗಳು, ಹರಿದು ಹೋಗುವ ನೀರಿನ ಕಾಲುವೆಗಳು ಈ ಎಲ್ಲಾ ಬಗೆಯ ಲಕ್ಷಣಗಳು ಉಜ್ಜಿನಿ ಬೆಟ್ಟದ ಇಕ್ಕೆಲಗಳಲ್ಲಿ ಇರುವುದರಿಂದ ಇದು ಬೃಹತ್ ಶಿಲಾಯುಗ ಸಂಸ್ಕೃತಿಯ ಅಪೂರ್ವ ನೆಲೆಯಾಗಿತ್ತೆಂದು ಹೇಳಬಹುದು.

ತಾಲ್ಲೂಕಿನ 'ಸಾಸಲು' ಗ್ರಾಮದ ಹತ್ತಿರ ಬೃಹತ್ ಶಿಲಾಯುಗಕ್ಕೆ ಸೇರಿದ ಸ್ಮಾರಕಗಳು ಮತ್ತು ರೇಖಾಚಿತ್ರಗಳು ಕಂಡುಬಂದಿವೆ. ಗ್ರಾಮದ ಉತ್ತರದಿಕ್ಕಿಗೆ ಇರುವ ಐದು ಅಡಿ ಎತ್ತರ ಮತ್ತು ಮೂರು ಅಡಿ ಉದ್ದದ ನಿಲುವುಗಲ್ಲು ಇದ್ದು ಅದರ ಮೇಲೆ ಶಂಕುವಿನ ಆಕಾರದ ಚಿತ್ರಗಳು, ದಳಗಳಂತಹ ಚಿತ್ರಗಳು, ಚೌಕಳಿ ಮನೆಗಳ ರೇಖಾಚಿತ್ರಗಳು ಇವೆ. ಇದೇ ಗ್ರಾಮದ

ದಕ್ಷಿಣ ಭಾಗದಲ್ಲಿ 'ತೋಡಲುಬಂಡೆ' ಎಂಬ ಹೆಸರಿನ ಗುಡ್ಡವಿದ್ದು, ಮೂರು ನಿಲುವುಗಲ್ಲುಗಳು ಕಂಡುಬರುತ್ತವೆ. ಇಲ್ಲಿಯ ಕೆಲವು ನಿಲುವುಗಲ್ಲುಗಳು ಎಡಭಾಗಕ್ಕೆ ಬಾಗಿದ್ದು, ಖಡ್ಗದಂತೆ ಆಕಾರವನ್ನು ಹೋಲುತ್ತವೆ. ಕರ್ನಾಟಕದಲ್ಲಿ ಹಲವಾರು ಬೃಹತ್ ಶಿಲಾಯುಗಕ್ಕೆ ಸಂಬಂಧಿಸಿದ ಸಮಾಧಿಗಳು ಪತ್ತೆಯಾಗಿದ್ದರೂ ನಿಲುವುಗಲ್ಲುಗಳು ಅಧಿಕವಾಗಿ ಪತ್ತೆಯಾಗಿರಲಿಲ್ಲವೆನ್ನಬಹುದು. ಬೆಂಗಳೂರು ಜಿಲ್ಲೆಯಲ್ಲಿ ಮೊದಲಬಾರಿಗೆ ನಿಲುವುಗಲ್ಲುಗಳು ಸಾಸಲಿನಲ್ಲಿ ಪತ್ತೆಯಾಗಿರುವುದು ಪ್ರಮುಖ ಅಂಶ. ಸಾಸಲು ಗ್ರಾಮದ ಈಶಾನ್ಯ ದಿಕ್ಕಿಗೆ 'ಕದರಿಕಂಭ' ಎಂಬ ಹೆಸರಿನ ಗುಡ್ಡದ ಮೇಲಿನ ಬಂಡೆಗಳ ಮೇಲೆ ಹಲವಾರು ರೇಖಾಚಿತ್ರಗಳು ಇವೆ. ನವಿಲು, ಜಿಂಕೆ, ಆನೆ, ನಕ್ಷತ್ರ, ಮನುಷ್ಯ ಮುಂತಾದ ಚಿತ್ರಗಳು ಇದ್ದು, ಪ್ರಥಮ ಬಾರಿಗೆ ಒಂದೇ ಪ್ರದೇಶದ ವ್ಯಾಪ್ತಿಯಲ್ಲಿ ನಿಲುವುಗಲ್ಲುಗಳು ಮತ್ತು ರೇಖಾಚಿತ್ರಗಳು ಮೆಗಾಲಿಥಿಕ್ ಏಜ್‌ಗೆ ಸೇರಿದ್ದು, ಕ್ರಿ.ಪೂ. ಸುಮಾರು ಹತ್ತನೆಯ ಶತಮಾನಕ್ಕೆ ಸೇರಿದ್ದವುಗಳೆಂದು ಊಹಿಸಬಹುದು.

**ಗಂಗರು**

ಗಂಗ ವಂಶವು ಕರ್ನಾಟಕವನ್ನು ಆಳಿದ ಪ್ರಮುಖ ರಾಜವಂಶಗಳಲ್ಲಿ ಒಂದು. ಗಂಗವಂಶದಲ್ಲಿ ತಲಕಾಡಿನ ಗಂಗರ ಶಾಖೆ ಅತ್ಯಂತ ಪ್ರಮುಖವಾದುದು. ಅಲ್ಲದೆ ಇದರ ಜೊತೆಗೆ ಇತರ ಶಾಖೆಗಳೂ ಇದ್ದವರು. ನಾಲ್ಕನೆಯ ಶತಮಾನದ ಮಧ್ಯಭಾಗದಿಂದ ಹತ್ತನೆಯ ಶತಮಾನದವರೆಗೆ ಕರ್ನಾಟಕದ ದಕ್ಷಿಣ ಭಾಗವನ್ನು ಆಳಿದ ಗಂಗ ಸಂತತಿಯ ಅರಸರು ಪಶ್ಚಿಮ ಗಂಗರೆಂದೂ ಪ್ರಸಿದ್ಧರಾಗಿದ್ದಾರೆ. ಇವರದು ಕನ್ನಡನಾಡಿನ ಇತಿಹಾಸದಲ್ಲೇ ಅತಿ ದೀರ್ಘಕಾಲ ಆಳ್ವಿಕೆ ನಡೆಸಿದ ಮನೆತನ ಕರ್ನಾಟಕದ ಇತಿಹಾಸದಲ್ಲಿ ಇವರ ಶಾಸನಗಳು ಕೊಡುಗು ಜಿಲ್ಲೆಯಿಂದ ಉತ್ತರ ಅರ್ಕಾಟ್ ಜಿಲ್ಲೆಯವರೆಗೂ ಬಳ್ಳಾರಿ ಜಿಲ್ಲೆಯಿಂದ ಸೇಲಂ, ಕೊಯಮತ್ತೂರು ಜಿಲ್ಲೆಗಳವರೆಗೂ ದೊರೆತಿದ್ದು, ಇವರ ಪ್ರಭುತ್ವ ಅಷ್ಟು ವಿಸ್ತಾರವಾದ ಪ್ರದೇಶದ ಮೇಲೆ ಸ್ಥಾಪಿತವಾಗಿತ್ತು. ಇವರ ರಾಜ್ಯವನ್ನು ಗಂಗವಾಡಿ ೯೬೦೦೦ ಎಂದು ಹಲವಾರು ಶಾಸನಗಳು ತಿಳಿಸುತ್ತವೆ. ಶಾಂತಿ ಸುಭಿಕ್ಷೆಗಳ ಬೀಡಾದ ಇವರ ನಾಡಿಗೆ ಶ್ರೀರಾಜ್ಯ ಎಂಬ ಅನ್ವರ್ಥನಾಮವೂ ಇತ್ತು. ಪ್ರಜಾನುರಾಗಿಗಳು, ರಾಜನೀತಿ ಕುಶಲರು ಎಂದು ಕರೆದುಕೊಳ್ಳುವ ಈ ವಂಶದ ಅರಸರು ದಕ್ಷಿಣರಾಜ್ಯ ಸಂರಕ್ಷಣ ಸಮರ್ಥ, ಕೊಂಗುಣಿವರ್ಮ, ಧರ್ಮ ಮಹಾರಾಜಧಿರಾಜ ಶ್ರೀವಲ್ಲಭ, ಪೆರ್ಮಾನಡಿ ಮೊದಲಾದ ಬಿರುದುಗಳನ್ನು ಧರಿಸಿದ್ದರು. ಮೈಸೂರು ಜಿಲ್ಲೆಯ ತಲಕಾಡು ಇವರ ರಾಜಧಾನಿ ಕುವಳಾಲ(ಇಂದಿನ ಕೋಲಾರ) ನಂದಗಿರಿ(ನಂದಿಬೆಟ್ಟ), (ನೆಲಮಂಗಲ ತಾಲ್ಲೂಕಿನ ಮಣ್ಣೆ ಮುಖ್ಯ ಪಟ್ಟಣ) ಇವರ ರಾಜಧಾನಿಗಳಾಗಿದ್ದವು. ಆನೆ ಈ ವಂಶದವರ ರಾಜಲಾಂಛನ. ಗಂಗಮನೆತನದ ರಾಜರು ತಮ್ಮ ಸುದೀರ್ಘ ಆಳ್ವಿಕೆಯ ಕಾಲದಲ್ಲಿ ಕಂಚಿಯ ಪಲ್ಲವರು ಬನವಾಸಿಯ ಕದಂಬರು ಬಾದಾಮಿಯ ಚಾಲುಕ್ಯರು ಮಳಖೇಡದ ರಾಷ್ಟ್ರಕೂಟರು, ಮಧುರೆಯ ಪಾಂಡ್ಯರು,

ಉರೈಯೂರಿನ ಚೋಳರು, ಕಲ್ಯಾಣದ ಚಾಲುಕ್ಯರು ಹಾಗೂ ಹೊಯ್ಸಳ ರಾಜಮನೆತನಗಳೊಡನೆ ಒಂದಿಲ್ಲೊಂದು ರೀತಿಯ ರಾಜಕೀಯ ಸಂಬಂಧವನ್ನು ಹೊಂದಿದ್ದರು. ಬಾದಾಮಿ ಚಾಲುಕ್ಯ ಹಾಗೂ ರಾಷ್ಟ್ರಕೂಟ ಸಾರ್ವಭೌಮ ಮನೆತನಗಳೊಡನೆ ಮಧುರ ಭಾಂದವ್ಯ ಹೊಂದಿದ್ದು ಆ ಮನೆತನದ ಸಾಮ್ರಾಟರ ಸಹಾಯಕ್ಕೆ ಹಲವು ಮಂದಿ ಗಂಗರಾಜರು ತಮ್ಮ ಸೈನ್ಯ ಸಮೇತ ಧಾವಿಸಿ ದಕ್ಷಿಣದಲ್ಲಿ ರಾಮೇಶ್ವರದವರೆಗೂ ಉತ್ತರದಲ್ಲಿ ಉಜ್ಜಯನಿಯವರೆಗೂ ತಮ್ಮ ಪರಾಕ್ರಮವನ್ನು ಕೀರ್ತಿಯನ್ನು ವ್ಯಾಪಿಸುವಂತೆ ಮಾಡಿದರು. ಇವರು ಇಕ್ಷ್ವಾಕುವಂಶದ ಅರಸನ ಮಕ್ಕಳೆಂದು ಕರೆದುಕೊಂಡ ಗಂಗರು ಆಂಧ್ರದಲ್ಲಿ ಶಾತವಾಹನರ ನಂತರ ಆಳಿದ ಇಕ್ಷ್ವಾಕುಗಳ ಸಂಬಂಧಿಗಳೂ ಆಗಿರಬಹುದು. ಗಂಗರಾಜ್ಯ ಸ್ಥಾಪನೆ ಮಾಡಿದ ದಡಿಗ ಮತ್ತು ಮಾಧವರು ಉತ್ತರದಿಂದ ಬರುವಾಗ ಕಡಪ ಜಿಲ್ಲೆಯ ಪೆರೂರು ಎಂಬಲ್ಲಿ ಸಿಂಹನಂದಿ ಎಂಬ ಜೈನ ಯತಿಯನ್ನು ಸಂದರ್ಶಿಸಿದರೆಂದೂ ಅವರ ರಾಜಕಳೆಯಿಂದ ಆಕರ್ಷಿತನಾದ ಜೈನಯತಿ ತನ್ನ ಇಷ್ಟದೇವತೆಯಿಂದ ವರ ಪಡೆದು ಅವರಿಗೆ ಕುವಲಾಳ ಅಥವಾ ಇಂದಿನ ಕೋಲಾರದ ಬಳಿಯಲ್ಲಿ ಕರ್ಣಿಕಾರ ಪುಷ್ಪದ ಕಿರೀಟವನ್ನು ತನ್ನ ಕೈಯಿಂದಲೇ ತೊಡಿಸಿ ಖಡ್ಗವನ್ನು ದೊರಕಿಸಿಕೊಟ್ಟನೆಂದು ಇವರ ರಾಜ್ಯಕ್ಕೆ ಗಂಗವಾಡಿ ೯೬೦೦೦ ಸಾವಿರ ಎಂದು ಹೆಸರಾಯಿತೆಂದು ಇತಿಹಾಸ ತಿಳಿಸುತ್ತದೆ. ಈ ವಂಶದ ಮೂರನೆಯ ರಾಜನಾದ ಹರಿವರ್ಮ, ದೊಡ್ಡಬಳ್ಳಾಪುರ ತಾಲ್ಲೂಕಿನ ಪ್ರಾಚೀನ ಶಾಸನವಾದ ಮಲ್ಲೋಹಳ್ಳಿ ತಾಮ್ರ ಶಾಸನದಲ್ಲಿ ಪ್ರಸ್ತಾಪಿಸಿದೆ. ಈ ಶಾಸನದಲ್ಲಿ ಗಂಗ ರಾಜರ ಪ್ರಸಿದ್ಧ ಅರಸರ ಹೆಸರುಗಳು ಬಂದಿದ್ದು ಅನ್ಯ ರಾಜವಂಶಗಳ ಜೊತೆ ಸಂಪರ್ಕವನ್ನು ಹೊಂದಿದ್ದರು ಎಂಬುದನ್ನು ತಿಳಿಸುತ್ತದೆ. ಸ್ಥಳಪುರಾಣಗಳ ಪ್ರಕಾರ ತಲಕಾಡು ಅಂದಿನ ಕಾದಲ್ಲಿ ದಟ್ಟವಾದ ಅರಣ್ಯಗಳಿಂದ ಕೂಡಿದ್ದು ಗಜಾರಣ್ಯವೆಂದು ಪ್ರಸಿದ್ಧವಾಗಿತ್ತು. ಮದಗಜ ಗಂಗಲಾಂಛನವಾಗಲು ಈ ಅಂಶವೇ ಕಾರಣವಿರಬಹುದು. ಈ ವಂಶದ ಮೂಲಪುರುಷರು ಕೋಲಾರ, ಬೆಂಗಳೂರು, ಮಂಡ್ಯ, ಮೈಸೂರು ಜಿಲ್ಲೆಗಳ ಪ್ರದೇಶದಲ್ಲಿ ಇಂದಿಗೂ ವ್ಯವಸಾಯವನ್ನು ಅವಲಂಬಿಸಿ ಕನ್ನಡವನ್ನೇ ಮಾತೃಭಾಷೆಯಾಗುಳ್ಳ ಹಾಗೂ ಅಧಿಕ ಸಂಖ್ಯೆಯಲ್ಲಿ ವಾಸಿಸುತ್ತಿರುವ ಗಂಗಡಿಕಾರ ಎಂಬ ಗುಂಪಿಗೆ ಸೇರಿದವರು. ಆದುದರಿಂದ ಅವರ ರಾಜ್ಯಕ್ಕೆ ಗಂಗವಾಡಿ ಎಂದೂ ಇವರ ಸಂತತಿಗೆ ಗಂಗರೆಂದೂ ಹೆಸರಾಯಿತು ಎಂಬ ಅಭಿಪ್ರಾಯವೂ ಇದೆ. ಈ ಗಂಗಸಂತತಿಯ ರಾಜರು ಹೊಂದಿದ್ದ ಪ್ರಜಾನುರಾಗ, ದೀರ್ಘ ವರ್ಷಗಳ ಕಾಲ ಆಳ್ವಿಕೆ ಮೊದಲಾದ ಅಂಶಗಳು ಇವರು ಹೊರಗಿನಿಂದ ಬಂದವರಾಗಿರದೆ ಈ ಪ್ರದೇಶದ ನಿವಾಸಿಗಳೇ ಇರಬೇಕೆಂದು ಹೇಳಬಹುದು. ಸಾತವಾಹನರ ಆಳ್ವಿಕೆಯ ಪತನ ಹಾಗೂ ಅನಂತರ ಉದ್ಭವಿಸಿದ ರಾಜಕೀಯ ಪರಿಸ್ಥಿತಿಗಳ ಸಂದರ್ಭಗಳನ್ನು ಉಪಯೋಗಿಸಿಕೊಂಡು ಕನ್ನಡನಾಡಿನಲ್ಲಿ ಕದಂಬ ಮತ್ತು ಬಾಣರಂತೆ ಗಂಗ ಅರಸರೂ ರಾಜ್ಯ ಸ್ಥಾಪಿಸಿರಬೇಕು. ಇವರು ಪ್ರಾರಂಭದಲ್ಲಿ ವೈದಿಕ

ಮತಾವಲಂಬಿಗಳಾಗಿದ್ದು, ಶಿವ ಹಾಗೂ ವೈಷ್ಣವೋಪಾಸಕರಾಗಿದ್ದು, ಅನಂತರ ಜೈನಧರ್ಮವನ್ನು ಸ್ವೀಕರಿಸಿ ಆಸ್ಥಾನ ವಿದ್ವಾಂಸರಿಂದ ಸಿದ್ಧಪಡಿಸಲ್ಪಟ್ಟ ಗೋತ್ರ ಹಾಗೂ ಮೂಲಕ್ಕೆ ಸಂಬಂಧಿಸಿದ ಪೌರಾಣಿಕ ವರ್ಣನೆಗಳನ್ನು ಅಂಗೀಕರಿಸಿರಬೇಕು. ಶಾಸನೋಕ್ತ ಕೊಂಗಣಿವರ್ಮ, ದುರ್ವಿನೀತ ಶ್ರೀಪುರುಷರು ಗಂಗ ರಾಜ್ಯವನ್ನು ಉತ್ತುಂಗಕ್ಕೆ ಕೊಂಡೊಯ್ದ ರಾಜರುಗಳಾಗಿದ್ದಾರೆ. ಗಂಗ ಮನೆತನದ ರಾಜಕೀಯ ಇತಿಹಾಸದಲ್ಲಿ ಸುಮಾರು ೨೫ ಮಂದಿ ರಾಜರು ಆಳ್ವಿಕೆ ನಡೆಸಿದ್ದಾರೆ. ಕ್ರಿ.ಶ.ಸುಮಾರು ೩೨೫-೫೦ರ ಅವಧಿಯಲ್ಲಿ ಕೊಂಗಣಿವರ್ಮ ಈ ಸಂತತಿಯ ಆಳ್ವಿಕೆ ಸಂಸ್ಥಾಪಕ. ಈತನಿಗೆ ದಡಿಗ ಎಂಬ ಹೆಸರೂ ಇದ್ದಂತೆ ತಿಳಿಯುತ್ತದೆ. ಈತನ ತಮ್ಮ ಒಂದನೆಯ ಮಾಧವ ಕ್ರಿ.ಶ.ಸುಮಾರು ೩೫೦ರಲ್ಲಿ ಕೊಂಗು ಪ್ರದೇಶವನ್ನು ಗೆದ್ದು ಕೋಲಾರ ಪ್ರದೇಶದಲ್ಲಿ ಆಳ್ವಿಕೆ ನಡೆಸುತ್ತಿದ್ದ ಬಾಣರನ್ನು ಸೋಲಿಸಿ ರಾಜ್ಯ ವಿಸ್ತರಿಸಿದನು. ಈ ದಡಿಗ ಮತ್ತು ಮಾಧವರು ಗಂಗ ರಾಜ್ಯ ಸ್ಥಾಪಕರು ಎಂಬ ಮಾತು ಉಂಟು. ಒಂದನೆಯ ಮಾಧವನ ಮಗನೇ ಹರಿವರ್ಮ. ಕ್ರಿ.ಶ.ಸುಮಾರು ೩೭೫ರಲ್ಲಿ ಅಭಿಷಕ್ತನಾದನು. ಮಾಧವನಿಗೆ ಮೂವರು ಗಂಡು ಮಕ್ಕಳಿದ್ದರೆಂದೂ ಅವರಲ್ಲಿ ಹರಿವರ್ಮ ತಲಕಾಡಿನಲ್ಲೂ ಕಿರಿಯರಾದ ಕೃಷ್ಣವರ್ಮ ಪೆರುವಿನಲ್ಲೂ ಮತ್ತು ಆರ್ಯವರ್ಮ ಕೋಲಾರ ಜಿಲ್ಲೆಯ ಕೈವಾರದಲ್ಲೂ ಸ್ವತಂತ್ರರಾಗಿ ಆಳುತ್ತಿದ್ದರೆಂದು ಹೇಳಬಹುದು. ಗಂಗರಾಜ್ಯವನ್ನು ವಿಸ್ತರಿಸಿದ ಹೆಗ್ಗಳಿಕೆ ಹರಿವರ್ಮನಿಗೆ ಸೇರುತ್ತದೆ. ಹರಿವರ್ಮನ ಮಗ ಇಮ್ಮಡಿಮಾಧವ. ಈತನಿಗೆ ಸಿಂಹ ವರ್ಮನೆಂಬ ಹೆಸರು ಇತ್ತು ಎಂದು ಹೇಳಬಹುದು. ಈತನು ಪಲ್ಲವ ಸ್ಕಂದವರ್ಮನಿಂದ ಅಭಿಷಕ್ತನಾದನೆಂದು ಮಲ್ಲೋಹಳ್ಳಿ ತಾಮ್ರಶಾಸನಗಳು ಹೇಳುತ್ತವೆ. ಈತನ ತಮ್ಮ ವಿಷ್ಣುಗೋಪನ ನಂತರ ಮಾಧವನು ಅನಂತರ ಕೆಲಕಾಲ ರಾಜ್ಯವಾಳಿದ ವಿಷ್ಣುಗೋಪನ ಮಗ ಮೂರನೆಯ ಮಾಧವ ಅಥವಾ ತಡಂಗಲ ಮಾಧವ ಆಳಿದನು. ಇವನು ಪಲ್ಲವ ಮತ್ತು ಕದಂಬ ರಾಜಮನೆತನಗಳೊಡನೆ ಮೈತ್ರಿಯಿಂದಿದ್ದು, ರಾಜ್ಯವನ್ನು ವಿಸ್ತರಿಸಿ, ಪ್ರಜಾನುರಾಗಕ್ಕೂ ದಕ್ಷ ಆಡಳಿತಕ್ಕೂ ಉದಾರಮತೀಯ ನೀತಿಗೂ ಪ್ರಸಿದ್ಧನಾಗಿದ್ದ. ತಡಮಂಗಲ ಮಾಧವ ಬಹುಶಃ ಕದಂಬ ಕೃಷ್ಣವರ್ಮನ ಸಹೋದರಿಯನ್ನು ವಿವಾಹವಾಗಿದ್ದ. ಈತನ ಮಗನೇ ಅವನೀತ. ಕ್ರಿ.ಶ.ಸುಮಾರು ೪೬೯ರಲ್ಲಿ ದೊರೆಯಾದ ಈತ ಪುನ್ನಾಟ ರಾಜನಾದ ಸ್ಕಂದವರ್ಮನ ಪುತ್ರಿಯಾದ ಜೇಷ್ಠಾದೇವಿಯನ್ನು ವಿವಾಹವಾಗಿದ್ದನು.

ಅವನೀತನ ನಂತರ ಆಳಿದ ಹಿರಿಯ ಮಗನೇ ದುರ್ವಿನೀತ. ಸುಮಾರು ೫೨೯ರಲ್ಲಿ ರಾಜನಾಗಿ ೫೭೯ರವರೆಗೂ ರಾಜ್ಯವಾಳಿದನು. ಈತ ಗಂಗ ಸಂತತಿಯಲ್ಲೇ ಅತಿ ಪ್ರಸಿದ್ಧನಾದವನು. ಅವನೀತ ಸಾಯುವ ಮೊದಲು ತನ್ನ ಕಿರಿಯ ರಾಣಿಯ ಪುತ್ರನನ್ನು ಸಿಂಹಾಸನಕ್ಕೆ ಹೆಸರಿಸಿ ಮರಣ ಹೊಂದಿದ್ದರಿಂದ ದರ್ವಿನೀತ ತನ್ನ ಹಕ್ಕನ್ನು ಸ್ಥಾಪಿಸಲು ಶ್ರಮಿಸಬೇಕಾಯಿತು. ಅಂದರಿ, ಅಲತ್ತೂರು, ಪೊರುಳರೆ ಕಡೆಗಳಲ್ಲಿ ಪಲ್ಲವರನ್ನು ಸೋಲಿಸಿ

ರಾಜ್ಯವನ್ನು ವಿಸ್ತರಿಸಿದನು. ಈತನ ರಾಜ್ಯ ಬಳ್ಳಾರಿಯಿಂದ ಕೊಯಮತ್ತೂರಿನವರೆಗೂ ವಿಸ್ತರಿಸಿತ್ತು. ದಕ್ಷಿಣಭಾರತದಲ್ಲೇ ಅತ್ಯಂತ ಪ್ರಭಾವಿ ದೊರೆಯಾಗಿದ್ದನೆಂದು ತಿಳಿದುಬರುತ್ತದೆ. ಇವರ ಇತಿಹಾಸದ ಬಗ್ಗೆ ದೊಡ್ಡಬಳ್ಳಾಪುರ ತಾಲ್ಲೂಕಿನ ಮಲ್ಲೋಹಳ್ಳಿಯ ಎರಡು ತಾಮ್ರಶಾಸನಗಳು ಉಲ್ಲೇಖಿಸುತ್ತವೆ.

ತಾಲ್ಲೂಕಿನ ದೊಡ್ಡಬೆಳವಂಗಲದಲ್ಲಿ ಕ್ರಿ.ಶ.೮ನೇ ಶತಮಾನಕ್ಕೆ ಸೇರಿದ ಗಂಗರ ಕಾಲದ ವೀರಗಲ್ಲುಗಳು ಗಂಗ ಅರಸ ಮಹೇಂದ್ರನನ್ನು ಉಲ್ಲೇಖಿಸುತ್ತವೆ. ಈತ ಕಾಳಗದಲ್ಲಿ ಶತ್ರುಗಳಿಂದ ಮಡಿದು ಲೋಕಪ್ರಾಪ್ತನಾದ ವಿಷಯವನ್ನು ಪ್ರಸ್ತಾಪಿಸುವುದರಿಂದ ತಾಲ್ಲೂಕಿನ ಇತಿಹಾಸವನ್ನು ಶಾತವಾಹನ ಮತ್ತು ಗಂಗರ ಕಾಲಕ್ಕೆ ಕೊಂಡೊಯ್ಯಬಹುದು. ಪ್ರಾಚೀನ ಬೌದ್ಧ ನೆಲೆಯಾಗಿದ್ದ ರಾಜಘಟ್ಟ ಸ್ಥಳದಲ್ಲಿ ಶಾತವಾಹನ ಮತ್ತು ಗಂಗರ ಕಾಲದ ಕಟ್ಟಡಗಳಿದ್ದು, ಕಟ್ಟಡಗಳಲ್ಲಿ ಇಟ್ಟಿಗೆಗಳ ಆಕೃತಿ ಮತ್ತು ಗಾತ್ರ ಒಂದೇ ಸಮನಾಗಿದ್ದು, ಸುಟ್ಟ ಮಣ್ಣಿನ ಇಟ್ಟಿಗೆಳನ್ನು ಬಳಸಿದೆ. ಇದೇ ರೀತಿಯ ಇಟ್ಟಿಗೆಗಳು ಗಂಗರ ಸ್ಥಳಗಳಾದ ತಲಕಾಡು, ನರಸಮಂಗಲ, ಮಣ್ಣೆ ಮುಂತಾದ ಸ್ಥಳಗಳಲ್ಲಿ ದೊರೆತಿರುವ ಇಟ್ಟಿಗೆಗಳನ್ನು ಹೋಲುತ್ತವೆ. ಪ್ರಾಚೀನ ಶಾತವಾಹನರ ಕಾಲಕ್ಕೆ ಸೇರುವ ಬೌದ್ಧವಿಗ್ರಹಗಳು ಸಹ ಈ ಸ್ಥಳದಲ್ಲೇ ದೊರೆತಿರುವುದು ಮತ್ತೊಂದು ವಿಶೇಷತೆಯಾಗಿದೆ.

ಗಂಗರ ಕಾಲದ ಪ್ರಾಚ್ಯ ವಸ್ತುಗಳು ಹೇರಳವಾಗಿ ಈ ಸ್ಥಳದಲ್ಲಿ ಕಂಡುಬರುತ್ತವೆ. ಮಡಕೆಗಳು, ದಂತ, ಗಾಜಿನ ಮಣಿಗಳು, ಬೋಗುಣಿಗಳು, ತಲಕಾಡಿನ ಉತ್ಖನನದಲ್ಲಿ ದೊರೆತಿರುವ ವಸ್ತುಗಳನ್ನು ಹೋಲುತ್ತವೆ. ಇವರ ಕಾಲದ ಬರಹವುಳ್ಳ ಕೆಲವು ವೀರಗಲ್ಲುಗಳನ್ನು ಸಹ ಇಲ್ಲಿ ಕಾಣಬಹುದಾಗಿರುವುದರಿಂದ ಗಂಗರ ಆಡಳಿತದ ಪ್ರಭಾವ. ಈ ಪ್ರದೇಶಗಳ ಮೇಲೆ ಇತ್ತು ಎಂಬುದಾಗಿ ಹೇಳಬಹುದು. ಅಲ್ಲದೆ ತಾಲ್ಲೂಕಿನ ಅತ್ಯಂತ ಪ್ರಾಚೀನ ಶಾಸನಗಳಾದ ಕ್ರಿ.ಶ.೪೯೫, ಮತ್ತು ಕ್ರಿ.ಶ.೫೧೮ರ ಮಲ್ಲೋಹಳ್ಳಿ ತಾಮ್ರಶಾಸನಗಳು ಗಂಗರಾಜರ ಹೆಸರುಗಳನ್ನು ಉಲ್ಲೇಖಿಸುವುದರಿಂದ ತಾಲೂಕಿನ ಇತಿಹಾಸವನ್ನು ಸುಮಾರು ೪ನೇ ಶತಮಾನಕ್ಕೂ ಮಿಗಿಲಾದ ಇತಿಹಾಸ ಹೊಂದಿದೆ ಎಂದು ಹೇಳಬಹುದು.[೧೩]

**ಹೊಯ್ಸಳರು**

ಗಂಗರ ನಂತರ ಅಧಿಕಾರಕ್ಕೆ ಬಂದವರು ಹೊಯ್ಸಳರು. ಇವರು ಚಾಲುಕ್ಯರ ಮಾಂಡಲಿಕರಾಗಿದ್ದರು. ಹೊಯ್ಸಳರ ಇತಿಹಾಸ ರಚನೆಗೆ ಶಾಸನಗಳು ಪ್ರಮುಖ ಸಾಧನಗಳು. ಕೆಲವು ಸಾಹಿತ್ಯ ಕೃತಿಗಳಾದ 'ಗದ್ಯಕಣಾಮೃತ'ದಂತಹ ಸಂಸ್ಕೃತ ಸಾಹಿತ್ಯಕೃತಿ, 'ಜಾತಕ ತಿಲಕ'ದಂತಹ ಕನ್ನಡ ಕೃತಿಗಳು ಪ್ರಮುಖವಾದವುಗಳು. ಹನ್ನೊಂದನೆಯ ಶತಮಾನದಿಂದ ಮಾಂಡಲಿಕರಾಗಿ ಆರಂಭಿಸಿದ ಹೊಯ್ಸಳರು ಹನ್ನೆರಡನೆಯ ಶತಮಾನದವರೆಗೂ ಪರಮಾಧಿಕಾರಿ

ಗಳಾಗಿ ತುಂಗಭದ್ರೆಯ ಉತ್ತರದವರೆಗೂ ಅಧಿಕಾರ ಹೊಂದಿದ್ದರು. ಹದಿನಾಲ್ಕನೆಯ ಶತಮಾನದ ಪೂರ್ವಾರ್ಧದಲ್ಲೆ ಇವರ ಆಳ್ವಿಕೆ ಕೊನೆಗೊಂಡಿತೆಂದು ಹೇಳಬಹುದು. ಇವರು ಮೂಲತಃ ಗುಜರಾತಿನ ದ್ವಾರಕೆಯಿಂದ ಬಂದವರೆಂದು ತಿಳಿಯುತ್ತದೆ. ಈ ವಂಶದ ಮೂಲಪುರಷ ಸಳ ಶಶಕಪುರದವರೆಂದು, ಇದು ಸೊಸೆವೂರು ಅಥವಾ ಮೂಡುಗೆರೆ ತಾಲ್ಲೂಕು 'ಅಂಗಡಿ' ಎಂದು ಹೇಳುತ್ತಾರೆ. 'ಮಲೆಪರೊಳ್‌ಗಂಡ' ಎಂಬುದು ಇವರ ಹೆಮ್ಮೆಯ ಬಿರುದು ಇವರಿಗಿದ್ದಿರಬೇಕು. ದೊಡ್ಡಬಳ್ಳಾಪುರ ತಾಲ್ಲೂಕಿನ ಹೊಯ್ಸಳರ ಶಾಸನಗಳಲ್ಲಿ ಅಧಿಕವಾಗಿ ಕಾಣಿಸಿಕೊಳ್ಳುತ್ತದೆ. ಈ ವಂಶದ ಮೊದಲ ಗಣ್ಯ ಅರಸ ನೃಪಕಾಮ ಈತನಿಗೆ ಪೆರ್ಮಾಡಿ ಎಂಬ ಗಂಗರ ವಿಶಿಷ್ಟ ಬಿರುದನ್ನು ಹೊಂದಿದ್ದನು. ಬಹುಶಃ ಇದು ಗಂಗ–ಹೊಯ್ಸಳರ ಸಂಬಂಧಕ್ಕೆ ಸೂಚಕ ಎನ್ನಬಹುದು. ನೃಪಕಾಮನು ಚಾಲುಕ್ಯರ ಮಾಂಡಲಿಕರಾಗಿದ್ದು ಅವನ ಮಗ ವಿನಯಾದಿತ್ಯ ಒಂದನೇ ಸೋಮೇಶ್ವರನ ಸಮಕಾಲೀನನು. ಬಹುಶಃ ಸೋಮೇಶ್ವರನ ಸತಿ ಹೊಯ್ಸಳದೇವಿ ಸೋದರಿ ಅಥವಾ ಮಗಳಿರಬಹುದು. ಎರೆಯಂಗನ ಎರಡನೆಯ ಮಗನಾದ ಬಿಟ್ಟಿದೇವ ಅಥವಾ ವಿಷ್ಣುವರ್ಧನರು ದೋರಸಮುದ್ರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದವರು. ಎರೆಯಂಗನ ಹಿರಿಯ ಮಗ ಒಂದನೆಯ ಬಲ್ಲಾಳ ಕ್ರಿ.ಶ.೧೧೦೨ರಲ್ಲಿ ಚೆಂಗಾಳ್ವರನ್ನು ಹುಂಚದ ಸಾಂತರ ಜಗದೇವನನ್ನು ಸೋಲಿಸಿದನೆಂದು ತಿಳಿದುಬರುತ್ತದೆ. ಹೊಯ್ಸಳ ರಾಜವಂಶವನ್ನು ಒಂದು ಪರಮಾಧಿಕಾರವುಳ್ಳ ರಾಜಸತ್ತೆಯಾಗಿ ಬೆಳೆಸಿದ ರೀತಿ ಇಮ್ಮಡಿ ಬಲ್ಲಾಳನಿಗೆ ಸೇರುತ್ತದೆ. ಹೊಯ್ಸಳ ವಂಶದಲ್ಲಿಯೇ ಅದ್ವಿತೀಯನಾದ ಅರಸು. ಅವನು ಯುವರಾಜನಾಗಿದ್ದಾಗ ತನ್ನ ತಂದೆಯ ಅಸಮರ್ಥತೆಗಳಿಂದ ರಾಜ್ಯವು ಕ್ರಿ.ಶ.೧೧೭೩ರಲ್ಲಿ ತಂದೆಯ ವಿರುದ್ಧ ಬಂಡೆದ್ದು ಅಧಿಕಾರವನ್ನು ಕಸಿದುಕೊಂಡನು. ಬಲ್ಲಾಳನಿಗೆ ಗಿರಿದುರ್ಗಮಲ್ಲ, ಶನಿವಾರಸಿದ್ಧಿ ಎಂಬ ಬಿರುದುಗಳಿದ್ದವೆಂದು ಹೇಳಬಹುದು. ಕ್ರಿ.ಶ.೧೧೭೮ರಲ್ಲಿ ಹಾನಗಲ್ಲನ್ನು ಗೆದ್ದು ಬೆಳ್ವೊಲವನ್ನು ವಶಪಡಿಸಿಕೊಳ್ಳಲು ಯತ್ನಿಸಿದಾಗ ಕಲಚೂರಿಗಳು ತೀವ್ರ ಪ್ರತಿಭಟನೆಯನ್ನು ಎದುರಿಸಬೇಕಾಯಿತು. ಮರುವರ್ಷವೇ ಅವನು ಹಾನಗಲ್ಲನ್ನು ಕಳೆದುಕೊಂಡು ಕಲಚೂರಿಗಳ ಅದಿರಾಜತ್ವವನ್ನು ಸ್ವೀಕರಿಸಬೇಕಾಗಿ ಬಂದಿತು. ಆದರೆ ಇದಕ್ಕಿಂತಲೂ ಮುಂಚೆ ಕಲಚೂರಿಗಳನ್ನು ಸೋಲಿಸಿ 'ಸಾಮ್ರಾಟ್ ಸಂಕಮನ' ಆನೆಯನ್ನು ಕೊಂದುದಾಗಿ ತಿಳಿದುಬರುತ್ತದೆ. ನಂತರ ಕಲಚೂರಿಗಳ ಅನೇಕ ಅಧಿಕಾರಿಗಳು ಬಲ್ಲಾಳನ ಊಳಿಗಕ್ಕೆ ನಿಂತರು. ಕ್ರಿ.ಶ.೧೧೮೪ರಲ್ಲಿ ಬಲ್ಲಾಳನು ಬನವಾಸಿ–೧೨೦೦೦ದ ಕೇಂದ್ರ ಬಳ್ಳಿಗಾವೆಯನ್ನು ಗೆದ್ದು ಅಲ್ಲಿಂದ ಬೆಳ್ವೊಲಕ್ಕೆ ಸಾಗಲು ಅವನಿಗೂ ಚಾಲುಕ್ಯ ನಾಲ್ಕನೆಯ ಸೋಮೇಶ್ವರನಿಗೂ ಕ್ರಿ.ಶ.೧೧೮೭ರಲ್ಲಿ ಯುದ್ಧವಾಗಿ ಬಲ್ಲಾಳನು ಜಯಶಾಲಿಯಾದನು.

ಬಲ್ಲಾಳನ ನಂತರ ಈತನ ಮಗ ಕ್ರಿ.ಶ.೧೨೨೦ರಲ್ಲಿ ಎರಡನೆಯ ನರಸಿಂಹನಿಗೆ ಪಟ್ಟವಾಗುವುದು. ಈತ ತಮಿಳುನಾಡಿನ ರಾಜಕೀಯದಲ್ಲಿ ಮಗ್ನನಾಗಿ ಅನೇಕ ಅನುಕೂಲತೆಗಳನ್ನು

ಪಡೆದನು. ಪಾಂಡ್ಯರನ್ನು ಸೋಲಿಸಿ ಚೋಳರ ಮೂರನೆ ರಾಜರಾಜನ ಸ್ಥಾನವನ್ನು ಭದ್ರಗೊಳಿಸಲು ನೆರವಾದ ಈತನು ತಮಿಳುನಾಡಿನ ಶ್ರೀರಂಗಂ ಬಳಿಯ ಕುಪ್ಪಂನಲ್ಲಿ ತನ್ನ ಎರಡನೆಯ ರಾಜಧಾನಿಯನ್ನು ಮಾಡಿಕೊಂಡ ತನಗೆ ದೊರೆತ ತಮಿಳುನಾಡಿನ ಪ್ರದೇಶಗಳ ಆಡಳಿತವನ್ನು ಭದ್ರಗೊಳಿಸಿದನು. ಈತನ ನಂತರ ಮೂರನೇ ನರಸಿಂಹನು ಬಂದ ನಂತರ ಸೇವುಣರ ದಾಳಿಯನ್ನು ಎದುರಿಸಬೇಕಾಗಿ ಬಂದಿತು. ನಂತರದಲ್ಲಿ ನರಸಿಂಹನ ಮಗ ಮೂರನೇ ಬಲ್ಲಾಳನು ಕ್ರಿ.ಶ.೧೨೯೧ರಲ್ಲಿ ಪಟ್ಟಾಭಿಷಕ್ತನಾದನು.

ಹೊಯ್ಸಳ ವಂಶದಲ್ಲಿಯೇ ಮುಮ್ಮಡಿ ವೀರಬಲ್ಲಾಳನು ಗಣ್ಯ ಅರಸು ಹಾಗೂ ಕೊನೆಯ ಅರಸು ತಂದೆಯ ಕಾಲದಲ್ಲಿ ಆಡಳಿತದಲ್ಲಿ, ಯುದ್ಧಕಾರ್ಯಗಳಲ್ಲಿ ಪಾಲ್ಗೊಂಡು ಕೆಲವು ಕಾಲ ತಮಿಳುನಾಡಿನ ಮಾಂಡಲಿಕನಾಗಿದ್ದಂತೆ ತಿಳಿದುಬರುತ್ತದೆ. ಕ್ರಿ.ಶ.೧೩೦೩ರಲ್ಲಿ ಸೇವುಣರ ಸೇನೆ ಕುಮ್ಮಟದ ಕಂಪಿಲರಾಯನ ನೇತೃತ್ವದಲ್ಲಿ ದಂಡೆತ್ತಿ ಬಂದಾಗ ಆ ಸೈನ್ಯವನ್ನು ಹಿಮ್ಮೆಟ್ಟಿಸಿದನು. ಪಾಂಡ್ಯರಾಜ್ಯದಲ್ಲಿ ಉತ್ತರಾಧಿಕಾರಕ್ಕಾಗಿ ನಡೆದ ಕಲಹದಲ್ಲಿ ಬಲ್ಲಾಳನು ವೀರಪಾಂಡ್ಯನ ವಿರುದ್ಧವಾಗಿ ಸುಂದರಪಾಂಡ್ಯನ ಪಕ್ಷವಹಿಸಿ ಹೋರಾಡಲು ತಮಿಳುನಾಡಿಗೆ ಹೋದನು. ಆಗ ದೆಹಲಿಯ ಸುಲ್ತಾನನ ಸೇನೆ ಮಲ್ಲಿಕಾಫರ್‌ನ ನೇತೃತ್ವದಲ್ಲಿ ಕ್ರಿ.ಶ.೧೩೧೧ರ ಅವಧಿಯಲ್ಲಿ ದ್ವಾರಸಮುದ್ರವನ್ನು ಮುತ್ತಿತು. ಬಲ್ಲಾಳನು ಆಗ ದ್ವಾರಸಮುದ್ರಕ್ಕೆ ಮರಳಿ ಕೆಲವು ಕಾಲ ರಾಜಧಾನಿಯನ್ನು ಸಂರಕ್ಷಿಸಲು ಯತ್ನಿಸಿದನು. ಆದರೆ ಇವರಿಗೆ ಶರಣಾಗಿ ಅವರ ಜೊತೆ ಸ್ನೇಹ ಬೆಳೆಸಿಕೊಂಡನು. ಮಲ್ಲಿಕಾಫರ್‌ನ ಜೊತೆಗೂಡಿ ತಮಿಳುನಾಡಿಗೂ ಸಾಗಿ ಮಧುರೆಯನ್ನು ಗೆಲ್ಲಲು ಅವನಿಗೆ ನೆರವಾದ. ನಂತರ ಮಲ್ಲಿಕಾಫರ್ ಅಪಾರ ಲೂಟಿಯೊಂದಿಗೆ ದ್ವಾರಸಮುದ್ರದ ಮಾರ್ಗವಾಗಿ ದೆಹಲಿಗೆ ಹಿಂತಿರುಗಿದನು. ಕ್ರಿ.ಶ.೧೩೧೬ರಲ್ಲಿ ಬಲ್ಲಾಳನು ಕಾಕತೀಯರ ಪಾಂಡ್ಯರನ್ನು ಸೋಲಿಸಿ ತಿರುವಣ್ಣಾಮಲೈ ಪ್ರದೇಶವನ್ನು ಗೆದ್ದುಕೊಂಡನು. ಇಂತಹ ರಾಜಕೀಯ ಸಾಧನೆಗಳನ್ನು ಮಾಡಿದ ಬಲ್ಲಾಳನು ಮಧುರೆಯಲ್ಲಿ ಸ್ಥಾಪನೆಗೊಂಡ ಮುಸ್ಲಿಂ ರಾಜ್ಯವೊಂದನ್ನು ನಾಶಗೊಳಿಸಬೇಕೆಂಬ ಯತ್ನವನು ಸತತವಾಗಿ ನಡೆಸಿದ ಬಲ್ಲಾಳ ಕ್ರಿ.ಶ.೧೩೪೩ರಲ್ಲಿ ನಡೆದ ಯುದ್ಧದಲ್ಲಿ ತೀರಿಕೊಂಡನು. ದಕ್ಷಿಣಭಾರತದಲ್ಲಿ ಕಾಣಿಸಿಕೊಂಡ ಪರಕೀಯ ಆಕ್ರಮಣದ ಸಂಧಿಕಾಲದ ಕತ್ತಲಲ್ಲಿ ಮುಮ್ಮಡಿ ಬಲ್ಲಾಳನು ಏಕಾಂಗಿಯಾಗಿ ಬೆಳಗಿದ ಬೆಳ್ಳಿಯಂತಿದ್ದಾನೆ. ಇವರ ಮಾಂಡಲಿಕರಾಗಿದ್ದವರು ಆಡಳಿತ ನಡೆಸಿರುವುದಕ್ಕೆ ತಾಲ್ಲೂಕಿನಲ್ಲಿ ಹಲವಾರು ಶಾಸನಗಳು ಸಾಕ್ಷ್ಯಗಳಾಗಿವೆ. ಹೊಯ್ಸಳರ ನಂತರ ಬಂದ ವಿಜಯನಗರದ ರೂಪದಲ್ಲಿ ಉದಯಿಸಿದ ಸ್ವಾತಂತ್ರ್ಯ ಸೂರ್ಯನಿಗೆ ಮುಂಬೆಳಕು ನೀಡಿದವನು ಮೂರನೇ ಬಲ್ಲಾಳ.

ಗಂಗರ ನಂತರ ಹೊಯ್ಸಳ ಚಕ್ರವರ್ತಿಗಳು ಮತ್ತು ಅವರ ಸಾಮಂತಾಧಿಕಾರಿಗಳು ಆಡಳಿತ ·ವೈಖರಿಯನ್ನು ತಿಳಿಸುವ ಹಲವು ಶಾಸನಗಳು ನಮಗೆ ದೊರೆಯುತ್ತವೆ.

ಕ್ರಿ.ಶ.೧೨೬೭ರ ದೊಡ್ಡಬಳ್ಳಾಪುರದ ಕೋಟೆ ಶಾಸನವು ಹೊಯ್ಸಳ ಮಾಂಡಲಿಕರ ನೆಲೆವೀಡಾಗಿತ್ತು.[೧೪] ಮತ್ತು ಹೊಯ್ಸಳ ಚಕ್ರವರ್ತಿ ವೀರನರಸಿಂಹದೇವರು ರಾಜ್ಯವನ್ನಾಳುತ್ತಿರುವಾಗ ಶ್ರೀಮನ್ಮಹಾಮಂಡಲೇಶ್ವರ ಶ್ರೀಭುವನಮಲ್ಲ ನಂದಗಿರಿನಾಥ ಭಂಗಿಕುಲ ಕಮಳವಿಕಸಿತ ದಿವಾಕರಂ ಸಿತಗರಗಂಡ ಸೆಣಸುವರ ಗಂಡ ವೈರಿವೃಷಭಶಾರ್ದೂಳ ಅಂಣ್ಣನಂಕಕಾರದೇಚಿದೇವಸ್ಯರು ಎಲಹಂಕ ನೆಲೆವೀಡಿನೊಳು ಸುಖ ಸಂಕಥಾವಿನೋದದಿಂದ ರಾಜ್ಯ ಪರಿಪಾಲನೆ ಮಾಡುತ್ತಿದ್ದ ವಿಷಯದಿಂದ ಈ ಅಂಶ ಸ್ಪಷ್ಟವಾಗುತ್ತದೆ. ಕ್ರಿ.ಶ.೧೩೦೬ರ ಇಸ್ತೂರು ಗ್ರಾಮದ ಶಾಸನವು ಹೊಯ್ಸಳ ಚಕ್ರವರ್ತಿ ಮೂರನೇ ಬಲ್ಲಾಳನನ್ನು ಹೆಸರಿಸುತ್ತದೆ. ಚೋಳ, ಚೇರ ಪಾಂಡ್ಯರೊಡನೆ ಸಂಪರ್ಕ ಹೊಂದಿದ್ದನು ಎಂಬುದನ್ನು ತಿಳಿಸುತ್ತದೆ. ಅಂದರೆ ಇವರ ಆಡಳಿತದ ಪ್ರಭಾವ ಇವರ ಮೇಲೂ ಹರಡಿತ್ತು ಎಂಬುದನ್ನು ಹೇಳಬಹುದು.

**ವಿಜಯನಗರ**

ದೆಹಲಿಯ ಸುಲ್ತಾನರ ಸೇನೆಗಳ ದಾಳಿಯು ಕರ್ನಾಟಕದ ರಾಜಮನೆತನಗಳಾದ ಸೇವುಣರು ಮತ್ತು ಹೊಯ್ಸಳರು ಹಾಗೂ ದಕ್ಷಿಣ ಭಾರತದ ಇತರ ಗಣ್ಯ ಅರಸರಾದ ಕಾಕತೀಯರು ಹಾಗೂ ಪಾಂಡ್ಯರು ಇವರೆಲ್ಲರ ನಾಶಕ್ಕೆ ಕಾರಣವಾಗಿ, ದಕ್ಷಿಣಭಾರತದಲ್ಲಿ ಪ್ರಬಲಕೇಂದ್ರ ಇಲ್ಲದ ಪರಿಸ್ಥಿತಿ ನಿರ್ಮಾಣಗೊಂಡಿತ್ತು. ಇಂತಹ ಆಕ್ರಮಣಗಳಿಂದಾಗಿ ಪೂಜಾಸ್ಥಾನಗಳಿಗೆ ಪರಂಪರಾಗತ ಧಾರ್ಮಿಕ ಮೌಲ್ಯಗಳಿಗೆ ಆಘಾತಗಳುಂಟಾಗಿ ಜನದಿಕ್ಕು ತಪ್ಪುವಂತಾಯಿತು. ಜನರ ವಿತ್ತಜೀವಿತಗಳಿಗೂ ಭದ್ರತೆಯಿಲ್ಲದಂತಹ ಅರಾಜಕ ಸ್ಥಿತಿ ಕಾಣಿಸಿ ಕೊಂಡಿತು. ಈ ನಿರ್ವಾತ ಸ್ಥಿತಿಯನ್ನು ತುಂಬಲು ಉದಯಿಸಿದ ವಿಜಯನಗರ ಸಾಮ್ರಾಜ್ಯ ತುಂಗಭದ್ರೆಯ ದಕ್ಷಿಣದ ಇಡೀ ಭಾರತವನ್ನು ಏಕತೆಗೆ ತಂದು, ಈ ಭಾಗದ ಪರಂಪರಾಗತ ಧರ್ಮ, ಜೀವನವಿಧಾನಗಳನ್ನು ರಕ್ಷಿಸಿ ಅವುಗಳ ಪ್ರಗತಿಗೆ ತನ್ನದೇ ಅಮೂಲ್ಯ ಕೊಡುಗೆಯನ್ನು ನೀಡಿತು. ಧರ್ಮ, ಸಾಹಿತ್ಯ, ಲಲಿತಕಲೆಗಳ ಕ್ಷೇತ್ರದಲ್ಲಿ ವಿಜಯನಗರ ಅಮೂಲ್ಯ ಸಾಧನೆಗಳಿಗೆ ಕಾರಣವಾಯಿತು.

ವಿಜಯನಗರ ಇತಿಹಾಸ ರಚನೆಗೆ ಸಾಧನ ಸಾಮಗ್ರಿಗಳು ವಿಪುಲವಾಗಿವೆ. ಸುಮಾರು ೭೦೦೦ ಶಾಸನಗಳು, ದಕ್ಷಿಣಭಾರತದಲ್ಲಿ ಹರಡಿದ್ದು, ಆ ಪೈಕಿ ಅರ್ಧದಷ್ಟು ಕನ್ನಡದಲ್ಲಿವೆ. ೨೦೦೦ ಶಾಸನಗಳು ತಮಿಳಿನಲ್ಲಿವೆ. ೧೫೦೦ ಶಾಸನಗಳು ತೆಲುಗಿನಲ್ಲಿ, ಉಳಿದವು ಸಂಸ್ಕೃತದಲ್ಲಿವೆ. ಇವೆಲ್ಲವೂ ಮೂರು ರಾಜ್ಯಗಳಲ್ಲಿಯೂ ಹರಡಿವೆ. ಸಂಸ್ಕೃತ ಶಾಸನಗಳ ಪೈಕಿ ಸುಮಾರು ೩೦೦ ತಾಮ್ರಪಟಗಳಾಗಿವೆ. ವಿಜಯನಗರ ಸಾಮ್ರಾಜ್ಯ ಮತ್ತು ಇವರ ಅಧೀನದಲ್ಲಿದ್ದ ಹುಲುಕಡಿನಾಡ ಪ್ರಭುಗಳು ಮತ್ತು ಗಂಡ್ರೊಳ್ಳಿ ದಳವಾಯಿಗಳ ಪ್ರಸ್ತಾಪವನ್ನೊಳಗೊಂಡ ಬಹಳಷ್ಟು ಶಾಸನಗಳು ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿವೆ. ಈ ಶಾಸನಗಳಲ್ಲಿ ಒಂದನೇ

ಬುಕ್ಕ, ಹರಿಹಜ, ಕೃಷ್ಣದೇವರಾಯ, ಎರಡನೇ ದೇವರಾಯ, ನರಸಿಂಹ, ರಾಮರಾಯ, ಅಚ್ಚುತರಾಯರ ವಿಷಯಗಳನ್ನು ಪ್ರಸ್ತಾಪಿಸುವ ಶಾಸನಗಳು ಇಲ್ಲಿವೆ. ಇವರಾರು ಆಡಳಿತ ನಡೆಸಿದ ಉಲ್ಲೇಖಗಳು ಕಂಡುಬಂದಿಲ್ಲ. ಆದರೆ ಇವರ ಅಧೀನದಲ್ಲಿದ್ದ ನಾಪಪ್ರಭುಗಳು, ಆವತಿನಾಡ ಪ್ರಭುಗಳು, ಎಲಹಂಕನಾಡ ಪ್ರಭುಗಳು ಆಳ್ವಿಕೆ ನಡೆಸಿರುವುದು ತಿಳಿಯುತ್ತದೆ.

ವಿಜಯನಗರ ಕಾಲದ ಶಾಸನಗಳು ಮತ್ತು ಸ್ಮಾರಕಗಳು. ದೇವಾಲಯಗಳು ತಾಲ್ಲೂಕಿನ ಇತಿಹಾಸವನ್ನು ತಿಳಿಸುವಲ್ಲಿ ಪ್ರಮುಖ ಆಕರಗಳಾಗಿವೆ. ವಿಜಯನಗರ ಸಾಮ್ರಾಜ್ಯದ ದೊರೆಗಳು ನೇರವಾಗಿ ಆಡಳಿತವನ್ನು ನಡೆಸಿರುವುದಕ್ಕೆ ನಮಗೆ ಯಾವುದೇ ಪುರಾವೆಗಳಿಲ್ಲ. ಅವರ ಅಧೀನದಲ್ಲಿದ್ದ ಸಾಮಂತರು, ನಾಡಪ್ರಭುಗಳು, ದಳವಾಯಿಗಳು ಆಡಳಿತ ನಡೆಸಿದ್ದರೆಂಬುದನ್ನು ಸ್ಪಷ್ಟವಾಗಿ ಹೇಳಬಹುದು. ತಾಲ್ಲೂಕಿನ ಪಶ್ಚಿಮಭಾಗದ ಬಹುತೇಕ ಪ್ರದೇಶವು ವಿಜಯನಗರ ಅರಸರ ಆಡಳಿತದ ಅವಧಿಯಲ್ಲಿ ಈ ಪ್ರದೇಶ 'ಹುಲುಕಡಿ ನಾಡು' ಎಂಬ ಹೆಸರಿನಿಂದ ಕರೆಸಿಕೊಂಡಿತ್ತು. ಇದರ ಬಗ್ಗೆ, ಹೆಚ್ಚಿನ ಮಾಹಿತಿಯನ್ನು ಅರಿಯುವಲ್ಲಿ ಶಾಸನಗಳನ್ನು ಹೊರತುಪಡಿಸಿದರೆ ಮತ್ತಿನ್ನಾವ ಆಕರಗ್ರಂಥಗಳು ದೊರೆತಿಲ್ಲ. ಈ ಹುಲುಕಡಿ ನಾಡಿಗೆ ಕ್ರಿ.ಶ.೧೧೧೫ರ ಒಂದು ತಮಿಳುಶಾಸನದಲ್ಲಿ 'ಪುಕೋರ್ಡಿ' ಎಂಬ ಹೆಸರು ಅನ್ವಯವಾದಂತೆ ಕಂಡುಬರುತ್ತದೆ.[೧೫] ಈ ಶಾಸನ ಹೊಯ್ಸಳರ ಕಾಲಕ್ಕೆ ಸೇರಿದ್ದಾಗಿದ್ದು, ಇವರ ಅವಧಿಯಲ್ಲಿ ಈ ಭಾಗವು ಚೋಳ ಮಂಡಲದ ಮಣ್ಣಿನಾಡಿಗೆ ಸೇರಿದ್ದಾಗಿತ್ತು. ವಿಜಯನಗರದ ಅರಸನಾದ ಒಂದನೇ ಬುಕ್ಕನ ಕ್ರಿ.ಶ.೧೩೬೭ರ ಒಂದು ಶಾಸನದಲ್ಲಿ ಈ ನಾಡಿನ ಉಲ್ಲೇಖವಿದ್ದು, ಈ ನಾಡನ್ನು 'ಬುಮ್ಮರಳ' ಎಂಬ ಅರಸ ಆಳುತ್ತಿದ್ದನೆಂದು ಮಾತ್ರ ತಿಳಿದುಬರುತ್ತದೆ.[೧೬] 'ಬೈಯಂಣಗವುಡರ ಮಕ್ಕಳು ಬೈಪಗವುಡರು ಹುಲುಕಡಿನಾಡ ಪ್ರಭುಗಳಾಗಿದ್ದರೆಂಬುದನ್ನು ಕ್ರಿ.ಶ.೧೪೯೩ರ ಒಂದು ಶಾಸನ ಹೇಳುತ್ತದೆ.[೧೭] ನಂತರ ಕ್ರಿ.ಶ.೧೫೩೧ರ ಕಾಡನೂರು ಶಾಸನವು ಹುಲುಕಡಿನಾಡು ಅಲ್ಲಿನ ಅರಸರ ಕೈ ತಪ್ಪಿ ಗಂಡ್ರಗೊಳ್ಳೀ ದಳವಾಯಿ ಸೊಂಣಪ್ಪನಾಯಕರ ಮಕ್ಕಳಾದ ನಾಗಪ್ಪನಾಯಕನಿಗೆ ಸೇರುತ್ತದೆ ಎಂಬುದಾಗಿ ತಿಳಿಸುತ್ತದೆ.[೧೮] ಈ ಅವಧಿಯಲ್ಲಿ ವಿಜಯನಗರದ ಅರಸ ಅಚ್ಚುತರಾಯ ಆಳ್ವಿಕೆಯನ್ನು ಮಾಡುತ್ತಿರುತ್ತಾನೆ. ದೊಡ್ಡಬೆಳವಂಗಲದ ಉತ್ತರಕ್ಕೆ ನಾಲ್ಕು ಮೈಲಿ ದೂರವಿರುವ ಹುಲುಕಡಿ ಬೆಟ್ಟ ಇವರ ಆವಾಸ ಕೇಂದ್ರಸ್ಥಾನವಾಗಿತ್ತು. ಈ ನಾಡು ಮೊದಲಿಗೆ ಮಣ್ಣೆ ನಾಡಿನ ಒಂದು ಭಾಗವಾಗಿದ್ದರೂ ನಂತರ ಒಂದು ಪ್ರತ್ಯೇಕ ನಾಡಾಗಿ ಬೆಳದಿದೆ. ಈ ನಾಡಿನಲ್ಲಿ ತಿಪ್ಪೂರು, ದೊಡ್ಡಹೆಜ್ಜಾಜಿ, ಹಣಬೆ, ಸಿಂಪಾಡಿಪುರ, ಗಂಡ್ರಗೊಳ್ಳಿಪುರಗಳು ಸೀಮೆಗಳಾಗಿ ಹಣಬೆ ಮತ್ತು ತಿಪ್ಪೂರು ಸ್ಥಳಗಳಾಗಿದ್ದವು. ಅಂಬಲಗೆರೆ, ಬೈರಾಪುರ, ಅಗ್ರಹಾರ, ಕಾಡನೂರು, ಶಿಂಪಾಡಿಪುರ, ಇಸ್ತೂರು, ಹೊನ್ನಾವರ, ಈ ಗ್ರಾಮಗಳು ಇಂದಿಗೂ ಅಸ್ಥಿತ್ವದಲ್ಲಿವೆ. ಈ ಹುಲುಕಡಿನಾಡಿನ ಪೂರ್ವಭಾಗಕ್ಕೆ ಆವತಿನಾಡು, ದಕ್ಷಿಣಕ್ಕೆ ಎಲಹಂಕನಾಡು, ಪೂರ್ವಕ್ಕೆ ಮಣ್ಣೆನಾಡು, ಮತ್ತು ಉತ್ತರಕ್ಕೆ ಮರುಗಲ್ಲು ನಾಡುಗಳು ಇದ್ದವು

ಎಂಬುದಕ್ಕೆ ಶಾಸನಗಳು ಸಾಕ್ಷ್ಯಗಳಾಗಿವೆ. ಈಗಿರುವ ಹಣಬೆ ಮತ್ತು ದೊಡ್ಡಬೆಳವಂಗಲ ಹೋಬಳಿಯ ಸುಮಾರು ಅರವತ್ತೈದು ಗ್ರಾಮಗಳು ಈ ನಾಡಿನ ವ್ಯಾಪ್ತಿಗೆ ಒಳಪಟ್ಟಿದ್ದವೆಂದು ಹೇಳಬಹುದು.

ಕ್ರಿ.ಶ.೧೫೩೧ರ ಒಂದು ಶಾಸನವು ಈ ಹುಲುಕಡಿನಾಡು ಆಡಳಿತ ನಡೆಸುತ್ತಿದ್ದ ಅರಸರ ಕೈತಪ್ಪಿ ಗಂಡ್ರಗೊಳ್ಳಿದಳವಾಯಿ ಸೊಂಣಪ್ಪನಾಯಕರ ಮಕ್ಕಳು ನಾಗಪ್ಪನಾಯಕನಿಗೆ ಹಸ್ತಾಂತರವಾದಂತೆ ತಿಳಿಯುತ್ತದೆ.[೧೯] ಆದರೆ ಈ ನಾಡು ವಿಜಯನಗರ ಅವಧಿಯಲ್ಲಿ ಹುಟ್ಟಿ ಅವರ ಅವಧಿಯಲ್ಲಿಯೇ ಪತನಗೊಂಡಿದೆ ಎನ್ನಬಹುದು.

ವಿಜಯನಗರ ಅರಸನಾದ ವೀರನರಸಿಂಗದೇವರಾಯನ ಕಾಲಕ್ಕೆ ಸೇರಿದ ಕೆಲವು ಶಾಸನಗಳು ಗಂಡ್ರಗೊಳ್ಳಿದಳವಾಯಿಗಳು ಆಳ್ವಿಕೆ ನಡೆಸಿದ್ದನ್ನು ತಿಳಿಸುತ್ತವೆ. ಕ್ರಿ.ಶ.೧೫೪೧ರ ಗಂಡ್ರಗೊಳ್ಳೀಪುರದಲ್ಲಿರುವ ಶಾಸನದಲ್ಲಿ ದಳವಾಯಿ ಸೊಣ್ಣಪ್ಪನಾಯಕ ಈತನ ಮಗನಾದ ಬೈರಪ್ಪನಾಯಕನು ಆಳ್ವಿಕೆ ನಡೆಸಿದಂತೆ ತಿಳಿಯುತ್ತದೆ. ಇದೇ ಅಂಶವನ್ನು ಒತ್ತಿ ಹೇಳುವ ಮತ್ತೊಂದು ಶಾಸನ ಇದೇ ಗ್ರಾಮದಲ್ಲಿದೆ.[೨೦] ಈ ದಳವಾಯಿಗಳ ಹೆಸರಿನ ಮುಂದಿರುವ 'ಗಂಡರಗೂಳಿ' ಎಂಬುದು ಅವರ ಶೌರ್ಯತನಕ್ಕೆ ಸಂಕೇತದಂತೆ ಕಂಡುಬಂದಿದ್ದು, ಬಳುವಳಿಯಾಗಿ ಬಂದ ಬಿರುದುಗಳಾಗಿದ್ದವೆನ್ನಬಹುದು.

## ಎಲಹಂಕನಾಡ ಪ್ರಭುಗಳು

ದೊಡ್ಡಬಳ್ಳಾಪುರ, ಹೊಸಕೋಟೆ, ದೇವನಹಳ್ಳಿ, ನೆಲಮಂಗಲ ತಾಲ್ಲೂಕಿನ ಬಹಳಷ್ಟು ಗ್ರಾಮಗಳು ವಿಜಯನಗರದ ಅಧೀನದಲ್ಲಿದ್ದವು. ಹುಲುಕಡಿನಾಡಿನ ಸಮಕಾಲೀನರಾಗಿ ಬೆಂಗಳೂರು ಬಳಿಯ ದಕ್ಷಿಣ ದಿಕ್ಕಿನ ಎಲಹಂಕವನ್ನು ಕೇಂದ್ರವಾಗಿ ಮಾಡಿಕೊಂಡು ಆಡಳಿತ ನಡೆಸಿದವರು ಎಲಹಂಕನಾಡ ಪ್ರಭುಗಳು. ಮಧ್ಯಕಾಲೀನ ಬೆಂಗಳೂರು ಜಿಲ್ಲೆಯ ಇತಿಹಾಸದಲ್ಲಿ ಈ ನಾಡು ಹೆಚ್ಚು ಪ್ರಚಲಿತವಿದ್ದಂತೆ ತಿಳಿಯುತ್ತದೆ. ಶಾಸನಗಳಲ್ಲಿ ಎಲಹಕ, ಎಲೆಹಕ್ಕ, ಎಲಹಂಕ, ಎಲಹಕ್ಕನಾಡು, ಎಲಹಂಕನಾಡು ಎಂದು ಹೇಳುತ್ತವೆ. ಇವು ಹೆಚ್ಚಾಗಿ ಹೊಯ್ಸಳರ ಕಾಲದ ಶಾಸನಗಳಲ್ಲಿ ಉಲ್ಲೇಖಗೊಂಡಿರುವುದು ಕಂಡುಬರುತ್ತದೆ. ಅಲ್ಲದೆ ಈ ನಾಡು ಚೋಳರ ಕಾಲದಲ್ಲೇ ರೂಪಗೊಂಡಿರಬೇಕೆಂದು ಹೇಳಲು ಸಾಧ್ಯವಿದೆ. ಇದಕ್ಕೆ ಕಾರಣ ಚೋಳರು ರೂಪಿಸಿದ ಆಡಳಿತ ವಿಭಾಗಗಳನ್ನು ಹೊಯ್ಸಳರೂ ಸಹ ಹಾಗೆಯೇ ಉಳಿಸಿಕೊಂಡು ಬಂದಿರುವುದು ದೊಡ್ಡಬಳ್ಳಾಪುರದ ಕೋಟೆ ಶಾಸನದಲ್ಲಿ ಎಲಹಂಕನಾಡನ್ನು ಪ್ರಸ್ತಾಪಿಸುವ ಈ ಶಾಸನ ಹೊಯ್ಸಳ ಚಕ್ರವರ್ತಿ ವೀರನರಸಿಂಹನ ಕಾಲಕ್ಕೆ ಸೇರಿದ್ದಾಗಿದೆ. ನಾಡಗೌಡಗಳ ಆಳ್ವಿಕೆ ನಾಡಿನ ಮೇಲೆ ಅತ್ಯಂತ ಪ್ರಭಾವಶಾಲಿಯಾಗಿದ್ದಿತು. ಇವರ ಅಧಿಕಾರ

ವ್ಯಾಪ್ತಿ, ನೆರೆಯ ನಾಡುಗಳಾದ ಮೊರಸುನಾಡು, ಆವತಿನಾಡು, ಹುಲುಕಡಿನಾಡುಗಳ ಮೇಲೂ ಇತ್ತು. ಈ ಎಲಹಂಕನಾಡಪ್ರಭುಗಳ ವಂಶಾವಳಿಯನ್ನು ಹೀಗೆ ಹೇಳಬಹುದು.

ಬೈರೇದೇವ, ಮಾರಗೌಡ, ಕಂನಗೌಡರು ಕ್ರಿ.ಶ.೧೨೬೪ ರಿಂದ ೧೩೪೨ರವರೆಗೆ ಜಿಯಪ್ಪಗೌಡನು ಕ್ರಿ.ಶ.೧೩೪೨ ರಿಂದ ೧೪೦೦ರವರೆಗೆ ಗಿಡ್ಡಪ್ಪಗೌಡ ಕ್ರಿ.ಶ.ಸುಮಾರು ೧೪೦೦ ರಿಂದ ೧೪೫೦ರವರೆಗೆ ನಾಚಪ್ಪಗೌಡ ಕ್ರಿ.ಶ.೧೪೫೦ರಿಂದ ೧೫೦೦ರವರೆಗೆ, ಕೆಂಚನಾಚಪ್ಪಗೌಡ ಕ್ರಿ.ಶ.ಸುಮಾರು ೧೫೦೦ ರಿಂದ ೧೫೩೧ರವರೆಗೆ, ಹಿರಿಯ ಕೆಂಪೇಗೌಡ ಕ್ರಿ.ಶ.ಸುಮಾರು ೧೫೫೧ರಿಂದ ೧೬೦೮ರವರೆಗೆ, ಇಮ್ಮಡಿ ಕೆಂಪೇಗೌಡ ಕ್ರಿ.ಶ.೧೫೬೭ ರಿಂದ ೧೬೫೬ರವರೆಗೆ, ಮುಮ್ಮಡಿ ಕೆಂಪೇಗೌಡ, ಕ್ರಿ.ಶ.೧೬೫೬ ರಿಂದ ೧೬೮೧ರವರೆಗೆ, ದೊಡ್ಡವೀರಪ್ಪಗೌಡ ಕ್ರಿ.ಶ. ೧೬೮೧ ರಿಂದ ೧೬೯೨ರವರೆಗೆ ಕೆಂಪವೀರಪ್ಪಗೌಡ ಕ್ರಿ.ಶ.೧೬೯೨ ರಿಂದ ೧೭೧೬ರವರೆಗೆ ಆಳ್ವಿಕೆ ನಡೆಸಿದರೆಂದು ತಿಳಿದುಬರುತ್ತದೆ. ಈ ಎಲಹಂಕನಾಡು ವಿಜಯನಗರ ಹೊಯ್ಸಳರ ಕಾಲದಲ್ಲಿ ಹೆಚ್ಚು ಪ್ರಸಿದ್ಧಿಯಾಗಿತ್ತೆಂದು ಹೇಳಬಹುದು.

**ಆವತಿನಾಡಪ್ರಭುಗಳು**

ಕ್ರಿ.ಶ.೧೭೧೫ರ ಮಾವಳೀಪುರದ ಶಾಸನವು ಆವತಿನಾಡ ಪ್ರಭುಗಳು ದೊಡ್ಡಬಳ್ಳಾಪುರದ ಅದಿಪತ್ಯವನ್ನು ವಹಿಸಿದ್ದರು ಎಂಬುದನ್ನು ಶಾಸನ ತಿಳಿಸುತ್ತದೆ. 'ಶ್ರೀ ಮನ್ಮಹಾ ವತಿನಾಡ ಪ್ರಭುಗಳಾದ ಇಮ್ಮಡಿ ಸೊಣಬೈರೇಗೌಡರಯ್ಯನವರ ಪುತ್ರರಾದ ಗೋಪಾಲಗೌಡಯ್ಯನವರ ಪುತ್ರರಾದ ದೊಡ್ಡಬೈರೇಗೌಡಯ್ಯನವರು ಹರಿತಗೋತ್ರದ ಅಪಸ್ತಂಭ ಸೂತ್ರದ ಯಜಃ ಶಾಖಾಧ್ಯಾಯಿಗಳಾದ ಬರೂರ ತಿರುಪತಿಭಟ್ಟರ ಪೌತ್ರರಾದ ಯಲ್ಲಂಭಟರ ಪುತ್ರರಾದ ಸುಬ್ಬಾಭಟ್ಟರವರಿಗೆ ಕೊಟ್ಟ ಏಕಬೋಗ್ಯಗ್ರಾಮದ..." ಎಂದು ಉಲ್ಲೇಖಗೊಂಡಿದೆ.[೨೧] ಇದು ಆವತಿನಾಡ ಪ್ರಭುಗಳು ಒಂದು ಮನೆತನದ ಶಾಖೆಯ ಅರಸರು ದೊಡ್ಡಬಳ್ಳಾಪುರದ ಮೇಲೆ ಆಳ್ವಿಕೆ ನಡೆಸಿರುವುದು ತಿಳಿಸುತ್ತದೆ. ಈ ದೊಡ್ಡಬಳ್ಳಾಪುರ ಒಂದು ಪಟ್ಟಣವಾಗಿ ಬೃಹತ್ತಾಗಿ ಈಗ ಬೆಳೆದಿದೆ. ಬೆಂಗಳೂರು ನಗರಕ್ಕೆ ನಲವತ್ತು ಕಿ.ಮೀ. ದೂರದಲ್ಲಿರುವ ಈ ಪಟ್ಟಣ ಐತಿಹಾಸಿಕ ಸ್ಥಳ ಎನ್ನಬಹುದು. ಪಟ್ಟಣದಿಂದ ೨೦ ಕಿ.ಮೀ. ದೂರದಲ್ಲಿರುವ ದೇವನಹಳ್ಳಿ ತಾಲ್ಲೂಕಿನ ಆವತಿ ಗ್ರಾಮದಲ್ಲಿ ಆಳ್ವಿಕೆ ನಡೆಸಿದ ಆವತಿನಾಡ ಪ್ರಭುಗಳು ಇವರು ಏಳು ಜನ ಸಹೋದರರ ಮಕ್ಕಳಲ್ಲಿ ಒಬ್ಬನಾದ ಮಲ್ಲಬೈರೇಗೌಡನು ಒಬ್ಬ. ಮೂಲತಃ ಅವತಿನಾಡ ಪ್ರಭುಗಳ ಪೂರ್ವಜರಲ್ಲಿ ಬೆಂಗಳೂರು ನಗರ ಸಂಸ್ಥಾಪಕರಾದ ಕೆಂಪೇಗೌಡನು ಒಬ್ಬನು. ಇವರೆಲ್ಲ ಹದಿಮೂರನೆಯ ಶತಮಾನಕ್ಕೆ ಸೇರಿದವರು. ಈಗಿನ ತಮಿಳುನಾಡಿನ ಕಾಂಜೀವರಂ ಜಿಲ್ಲೆಯ ಯಣಮಂಜಿ ಪುತ್ತೂರಿನ ಬಳಿಯಿರುವ ಅತ್ತೂರಿನಲ್ಲಿ ನೆಲೆಸಿದ್ದರು. ಅತ್ತೂರಿನ ಗೌಡನಾಗಿದ್ದ ರಣಬೈರೇಗೌಡ ಜನರ ಪ್ರೀತಿ, ವಿಶ್ವಾಸಕ್ಕೆ ಪಾತ್ರನಾಗಿದ್ದು, ವ್ಯವಸಾಯವನ್ನು

ಮಾಡಿಕೊಂಡಿದ್ದರು. ಈ ಏಳು ಜನ ಸಹೋದರರು ಮಾತ್ರವಲ್ಲದೆ ರಣಬೈರೇಗೌಡನಿಗೆ ಹಾವಳಿಬೈರೇಗೌಡ, ಮಲ್ಲಬೈರೇಗೌಡ, ಸಣ್ಣಬೈರೇಗೌಡ, ಜಯಗೌಡ ಎನ್ನುವ ನಾಲ್ಕು ಜನ ಗಂಡು ಮಕ್ಕಳು, ದೊಡ್ಡಮ್ಮ ಎನ್ನುವ ಮಗಳೂ ಇದ್ದಳು. ರಣಬೈರೇಗೌಡನ ಸಹೋದರರು ಮತ್ತು ಅವನ ಮಕ್ಕಳು ಆವತಿಯ ಸುತ್ತಮುತ್ತಲಿನ ಪ್ರದೇಶಗಳಾದ, ದೇವನಹಳ್ಳಿ, ಜಾಲ, ಚಿಕ್ಕಬಳ್ಳಾಪುರ, ದೊಡ್ಡಬಳ್ಳಾಪುರ, ಆನೆಕಲ್ಲು, ಹೊಸಕೋಟೆ, ಕೊರಟಗೆರೆ, ಯಲಹಂಕ, ಮುಂತಾದ ಪ್ರದೇಶಗಳನ್ನು ವಶಪಡಿಸಿಕೊಂಡು ಆಳ್ವಿಕೆ ನಡೆಸಲು ಪ್ರಾರಂಭಿಸಿದ್ದರು. ಈ ವೇಳೆಗಾಗಲೇ ರಣಬೈರೇಗೌಡನ ಸಹೋದರರು ಆವತಿಯ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಅಧಿಪತ್ಯವನ್ನು ಸ್ಥಾಪಿಸಿದ್ದರು. ಸಹೋದರರ ಮಕ್ಕಳ ಅಭಿವೃದ್ಧಿಯನ್ನು ಏಕಕಾಲದಲ್ಲಿ ಕಂಡ ಶ್ರೇಷ್ಠ ಜೀವಿ ರಣಬೈರೇಗೌಡ. ಅನೇಕ ಮಹಾತ್ಕಾರ್ಯಗಳನ್ನು ಸಾಧಿಸಿ ತುಂಬು ಜೀವನ ನಡೆಸಿದ ವೀರಾಗ್ರಣಿ. ಈತನ ಮಗನಾದ ಮಲ್ಲಬೈರೇಗೌಡನು ದೊಡ್ಡಬಳ್ಳಾಪುರವನ್ನು ಸ್ಥಾಪಿಸಿದನೆಂದು ಹೇಳುವರು. ಈ ಆವತಿನಾಡ ಪ್ರಭುಗಳ ಆಳ್ವಿಕೆಯನ್ನು ಕುರಿತಾದ ಉಲ್ಲೇಖಿತ ಶಾಸನಗಳಲ್ಲಿ ಒಂದಾದ ಕ್ರಿ.ಶ.೧೫೮೬ರ ತಿಪ್ಪೂರು ಗ್ರಾಮದ ಶಾಸನ ಪ್ರಮುಖವಾಗಿದೆ.[೨೨]

ಬೆಂಗಳೂರಿನ ಉತ್ತರ ತಾಲ್ಲೂಕಿನಲ್ಲಿರುವ 'ಯಲಹಂಕ' ಎಂಬ ಊರು ೧೨ನೆಯ ಶತಮಾನಕ್ಕೆ ಸೇರಿದ ಒಂದು ನಾಡಾಗಿತ್ತು. ಚೋಳರ ಆಳ್ವಿಕೆಯ ಕಾಲದಲ್ಲಿ ಅಸ್ತಿತ್ವಕ್ಕೆ ಬಂತೆನ್ನಲಾದ ಯಲಹಂಕನಾಡು ಪ್ರಾಚೀನ ಕಾಲದ ಕರಿಕನಾಡನ್ನು ಕೇಂದ್ರವಾಗಿಟ್ಟುಕೊಂಡು ಕುಕ್ಕರಪಾಳಿಕ್ಕಾರಿನಾಡು, ಕುಕ್ಕನೂರುನಾಡು, ತೊರೆವಳಿನಾಡುಗಳು ಹಾಗೂ ಮಾಶಂಡಿ ಮತ್ತು ಬೆಂಪೂರು ನಾಡುಗಳ ಹಲವು ಪ್ರದೇಶಗಳನ್ನು ಒಳಗೊಂಡಿತ್ತು ಎನ್ನಬಹುದಾಗಿದೆ. ಈ ಎಲಹಂಕ ನಾಡನ್ನು ಹೆಸರಿಸುವ ಹಲವು ಶಾಸನಗಳು ನಮಗೆ ದೊರೆತಿವೆ. ಇದು ಒಂದು ನಾಡಾಗಿ ಸ್ಪಷ್ಟವಾದ ರೂಪವನ್ನು ಚೋಳರ ಕಾಲದಲ್ಲಿಯೇ ಪಡೆಯಿತೆಂಬುದಕ್ಕೆ ಸ್ಪಷ್ಟವಾದ ಮಾಹಿತಿಗಳು ದೊರೆಯುತ್ತಿಲ್ಲ. ಚೋಳರ ನಂತರದ ಸ್ಥಾನದಲ್ಲಿ ಹೊಯ್ಸಳರ ಕಾಲದ ಶಾಸನಗಳಲ್ಲಿ ಈ ನಾಡಿನ ಉಲ್ಲೇಖಗಳು ಕಾಣಿಸಿಕೊಳ್ಳುತ್ತವೆ.

ಬಹುಶಃ ಈ ನಾಡು ಚೋಳರ ಕಾಲದಲ್ಲೇ ರೂಪುಗೊಂಡಿರಬಹುದು ಎಂಬುದಕ್ಕೆ ಕಾರಣ ಚೋಳರು ರೂಪಿಸಿದ ಆಡಳಿತ ವಿಭಾಗಗಳನ್ನು ಹೆಚ್ಚಿನ ಬದಲಾವಣೆಗೆ ಒಳಪಡಿಸದೆ ಹಾಗೆಯೇ ಬಳಕೆಯಲ್ಲಿ ತಂದಿರುವುದು. ಈ ಎಲಹಂಕನಾಡು ಒಂದು ನಾಡಿನ ಕೇಂದ್ರ ಸ್ಥಳವಾಗಿದ್ದಂತೆ ಮತ್ತು ಹೊಯ್ಸಳ ಮಾಂಡಳಿಕರ ನೆಲೆವೀಡಾಗಿತ್ತು ಎಂಬುದನ್ನು ದೊಡ್ಡಬಳ್ಳಾಪುರದ ಒಂದು ಶಾಸನ ತಿಳಿಸುತ್ತದೆ. ಈ ಶಾಸನ ಹೊಯ್ಸಳ ದೊರೆ ಮೂರನೇ ಬಲ್ಲಾಳನ ಕಾಲಕ್ಕೆ ಸೇರಿದ ಕ್ರಿ.ಶ.೧೩೨೮ರ ಹಾಡೋನಹಳ್ಳಿಯಲ್ಲಿದೆ.[೨೩] ವೀರಬಲ್ಲಾಳ ಅರಸು ರಾಜ್ಯಭಾರ ಮಾಡುತ್ತಿದ್ದಾಗ, ದಂಣಾಯಕನು ಎಲಹಂಕ ನಾಡಿಗೆ ಸೇರಿದ ಹಡುವನಹಳ್ಳಿ

ಈಗಿನ ಹಾಡೋನಹಳ್ಳಿ ಸೀಮೆಯನ್ನು ಆಳುತ್ತಿದ್ದನೆಂಬುದನ್ನು ತಿಳಿಸುತ್ತದೆ. ಇದೇ ಕಾಲಕ್ಕೆ ಸೇರಿದ ಮತ್ತೊಂದು ಶಾಸನ ಕುರುವಿಗೆರೆ ಗ್ರಾಮದಲ್ಲಿದ್ದು ಮೇಲಿನ ವಿಷಯವನ್ನೇ ಪ್ರಸ್ತಾಪಿಸಿದೆ.[೨೪] ಮಹಾಪ್ರಧಾನನಾದ ಪೊಂನಣನ ಮಕ್ಕಳಾದ ಕಾಮದಂಣಾಯಕರು ಎಲಹಂಕ ಪ್ರಭುವಿಗೆ ಚತುಸ್ಸೀಮೆಯನ್ನು ನೀಡಿರುವುದನ್ನು ಗಮನಿಸಿದರೆ, ಈ ಸ್ಥಳಗಳೆಲ್ಲ ಯಲಹಂಕ ಪ್ರಭುಗಳ ಆಳ್ವಿಕೆಗೆ ಒಳಪಟ್ಟಿತ್ತೆಂಬುದಾಗಿ ಹೇಳಬಹುದು. ಕ್ರಿ.ಶ.೧೪೭೧ರ ಶಾಸನ ನಂದಿಗುಂದ ಗ್ರಾಮದಲ್ಲಿದ್ದು ಎಲಹಂಕನಾಡಿನ ಬಯಿರೇಗೌಡ ಪ್ರಭುಗಳ ಪೂರ್ವಿಕರಲ್ಲಿ ಒಬ್ಬ. ಈತನ ಮಗನಾದ ಮಂಚೇಗೌಡರಿಗೆ ನಂದಿಗುಂದ ಗ್ರಾಮದ ಸೀಮೆಯನ್ನು ನೀಡಿರುವುದನ್ನು ತಿಳಿಸುತ್ತದೆ. ಆದ್ದರಿಂದ ತಾಲ್ಲೂಕಿನ ಪೂರ್ವಭಾಗದ ಕೆಲವು ಪ್ರದೇಶಗಳಲ್ಲಿ ಯಲಹಂಕ ಪ್ರಭುಗಳು ಆಳ್ವಿಕೆ ನಡೆಸಿದ್ದಾರೆ ಎಂಬುದಾಗಿ ಹೇಳಬಹುದು.[೨೫]

## ಹೈದರಾಲಿ ಮತ್ತು ಟಿಪ್ಪು

ತಾಲ್ಲೂಕಿನ ಇತಿಹಾಸವನ್ನು ತಿಳಿಯುವಲ್ಲಿ ಬ್ರಿಟಿಷರು ಮತ್ತು ಹೈದರಾಲಿ ಟಿಪ್ಪುವಿನ ಆಡಳಿತ ಪ್ರಭಾವವೂ ಇದೆ ಎಂಬುದನ್ನು ಈ ಕೆಲವು ಅಂಶಗಳು ಪುಷ್ಠಿ ನೀಡುತ್ತವೆ. ಕ್ರಿ.ಶ.೧೬೩೭-೩೮ರಲ್ಲಿ ಬಿಜಾಪುರದ ಸೇನಾನಿಯಾದ ರಣದುಲ್ಲಾಖಾನನ ನೇತೃತ್ವದಲ್ಲಿ ದಂಡೆತ್ತಿ ಬಂದ ಬಿಜಾಪುರದ ಸೈನ್ಯ, ದಳವಾಯಿಗಳ ಕೈಯಲ್ಲಿದ್ದ ಈ ಪಟ್ಟಣವನ್ನು ವಶಪಡಿಸಿಕೊಂಡಿತು. ಸುಮಾರು ನಲವತ್ತು ವರ್ಷಗಳ ಕಾಲ ಬಿಜಾಪುರದ ಸುಲ್ತಾನನಾದ ಮಹಮ್ಮದ್ ಮತ್ತು ಆದಿಲ್ ಷಾ ಆಳ್ವಿಕೆ ನಡೆಸಿದರು. ನಂತರ ೧೬೮೦ರಲ್ಲಿ ಅಧಿಕಾರಕ್ಕೆ ಬಂದ ಮರಾಠರ ಸಾಂಬಾಜಿ ಮತ್ತು ಷಾಜಿಗಳು ಪಟ್ಟಣದ ಆಳ್ವಿಕೆಯನ್ನು ಮುಂದುವರಿಸಿದರು. ಕ್ರಿ.ಶ.೧೭೪೭ರಿಂದ ಕ್ರಿ.ಶ.೧೭೮೬ರವರೆಗೆ ಮೊಘಲರು ದೊಡ್ಡಬಳ್ಳಾಪುರವನ್ನು ಆಳಿದಂತೆ ತಿಳಿದುಬರುತ್ತದೆ. ಹೊಯ್ಸಳರ ಶಾಸನವೊಂದರ ಮೇಲೆ ಬರೆದಿರುವ ಪರ್ಶಿಯನ್ ಶಾಸನದ ಪ್ರಕಾರ ಕ್ರಿ.ಶ.೧೬೮೯ರಲ್ಲಿ ಔರಂಗಜೇಬನ ಸೈನ್ಯವು ಈ ನಗರವನ್ನು ವಶಪಡಿಸಿಕೊಂಡಿತು. ದೊಡ್ಡ ಬಳ್ಳಾಪುರವನ್ನು ಒಳಗೊಂಡಂತೆ ವಿಸ್ತಾರವಾದ ಪ್ರದೇಶವನ್ನು ಶಿರಾದ ನವಾಬನ ಹಿಡಿತದಲ್ಲಿ ಸುಮಾರು ೪೯ ವರ್ಷಗಳ ಕಾಲ ಅಲಿಖುಲಿಖಾನನಿಗೆ ಜಾಗೀರಾಗಿ ನೀಡಲಾಗಿತ್ತು. ಈತನ ಮರಣದ ನಂತರ ಸಿರಾದ ನವಾಬನಾದ ದರ್ಗಾ ಖುಲಿಖಾನನಿಗೆ ಜಾಗೀರಾಗಿ ಕೊಡಲಾಯಿತು. ನಂತರ ಹೈದರಾಬಾದ್ ನವಾಬ ಪಡೆದುಕೊಂಡ ತನ್ನ ಸಾಮಂತನಾದ ಅಬ್ಬಾಸ್ ಖುಲಿಖಾನನಿಗೆ ಒಪ್ಪಿಸಿದನು. ಕ್ರಿ.ಶ.೧೭೬೧ರಲ್ಲಿ ಹೈದರಾಲಿಯು ದೊಡ್ಡಬಳ್ಳಾಪುರವನ್ನು ತನ್ನ ಹಿಡಿತಕ್ಕೆ ತೆಗೆದುಕೊಂಡ ನಂತರ ಮುಂದೆ ಈ ಪ್ರದೇಶವು ಮೈಸೂರು ಸಂಸ್ಥಾನದ ಒಂದು ಭಾಗವಾಯಿತು.

## ಸ್ವಾತಂತ್ರ್ಯ ಹೋರಾಟಗಾರರು

ದೊಡ್ಡಬಳ್ಳಾಪುರ ತಾಲ್ಲೂಕು ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ತನ್ನದೇ ಆದ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಬ್ರಿಟೀಷರನ್ನು ಭಾರತದಿಂದ ಹೊರಡುವಂತೆ ಮಾಡಲು ಅನೇಕ ಹೋರಾಟಗಳನ್ನು ಮಾಡಿದ ಸ್ವಾತಂತ್ರ್ಯ ಹೋರಾಟಗಾರರು ದೇಶಭಕ್ತರು ಇಲ್ಲಿದ್ದಾರೆ. ರುಮಾಲೆ ಚನ್ನಬಸವಯ್ಯ, ಎಚ್. ಮುಗುವಾಳಪ್ಪ, ಟಿ.ಸಿದ್ದಲಿಂಗಯ್ಯ ನಾ. ನಂಜುಂಡಯ್ಯ, ಆರ್.ಬಿ.ಭದ್ರಣ್ಣ, ನರಸಿಂಹಅಯ್ಯಂಗಾರ್, ಟೈಲರ್ ಸುಬ್ಬರಾವ್, ಎಚ್. ಕೇಶವಮೂರ್ತಿ, ಎಸ್.ಆರ್.ಚಂದ್ರಶೇಖರಯ್ಯ ಎಸ್.ಆರ್.ಗುರು, ಡಿ.ದಾನಪ್ಪ, ಎಚ್.ಪಿ. ತಮ್ಮಯ್ಯ, ಸಿದ್ದಪ್ಪ, ಗಲಿಬಿಲಿಕೋಟೆ ರಾಮಯ್ಯ ಇನ್ನು ಮುಂತಾದವರು ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರು.

ಸ್ವಾತಂತ್ರ್ಯ ಹೋರಾಟದಲ್ಲಿ ಕಿಡಿ ಹತ್ತಿಸಿದ ವ್ಯಕ್ತಿಗಳಲ್ಲಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನರು, ಗಾಂಧಿ ಚಳುವಳಿಯಲ್ಲಿ ಭಾಗವಹಿಸಿದ ಇವರು ದೇವನಹಳ್ಳಿಯಲ್ಲಿ ಜನನವಾಯಿತು. ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ತಮ್ಮ ಶಕ್ತಿಸಾಮರ್ಥ್ಯದಿಂದ ಅಧಿಕಾರಕ್ಕೆ ಬಂದು ಮೈಸೂರು ರಾಜ್ಯವನ್ನು ವಿಸ್ತರಿಸಿದನು. ಬ್ರಿಟಿಷರ ವಿರುದ್ಧ ಹೋರಾಟಗಳಲ್ಲಿ, ಶೌರ್ಯ ಸಾಹಸ ಗಳಿಂದ ಪ್ರಖ್ಯಾತಿ ಪಡೆದವರು. ಬ್ರಿಟಿಷರ ವಿರುದ್ಧ ನಡೆದ ನಾಲ್ಕು-ಮೈಸೂರು ಯುದ್ಧಗಳಲ್ಲಿ ಭಾಗವಹಿಸಿದ್ದಾರೆ. ತ್ಯಾಗ, ಬಲಿದಾನ, ಇವರಿಬ್ಬರ ಹೋರಾಟದ ಕತೆಯನ್ನು ದೊಡ್ಡಬಳ್ಳಾಪುರ ಮತ್ತು ದೇವನಹಳ್ಳಿ ಇವರ ಆಳ್ವಿಕೆಗೆ ಒಳಪಟ್ಟ ಪ್ರದೇಶಗಳು ಹೇಳುತ್ತವೆ. ೧೯೩೪ರ ಸಂದರ್ಭದಲ್ಲಿ ಗಾಂಧೀಜಿಯವರು ಅಸ್ಪೃಶ್ಯತೆಯನ್ನು ಹೋಗಲಾಡಿಸಬೇಕೆಂಬ ಉದ್ದೇಶದಿಂದ ಜನಜಾಗೃತಿಯನ್ನು ಮೂಡಿಸಲು, ದೇಶಾದ್ಯಂತ ಪ್ರವಾಸಕೈಗೊಂಡಿದ್ದರು. ಆಗ ಜನವರಿ ನಾಲ್ಕರಂದು ದೊಡ್ಡಬಳ್ಳಾಪುರಕ್ಕೆ ಭೇಟಿ ನೀಡಿ ಅಸ್ಪೃಶ್ಯತೆಯ ನಿವಾರಣೆಯ ಬಗ್ಗೆ ಸಾರ್ವಜನಿಕ ಸಮಾರಂಭದಲ್ಲಿ ಭಾಷಣ ಮಾಡಿದ್ದರು. ಈ ಭಾಷಣವನ್ನು ಕೇಳಿದ ವಿ. ವೆಂಕಟಪ್ಪ ಕನ್ನಡಕ್ಕೆ ಭಾಷಾಂತರ ಮಾಡಿದ್ದರು. ಈ ಭಾಷಣವನ್ನು ಕೇಳಿ ಉತ್ತೇಜಿತರಾದ ಟಿ. ಸಿದ್ದಲಿಂಗಯ್ಯ ಮತ್ತು ರುಮಾಲೆಚನ್ನಬಸವಯ್ಯನವರಲ್ಲಿ ಸ್ವಾತಂತ್ರ್ಯದ ಹೋರಾಟದ ಛಲ ಮೂಡಿತು. ೧೯೩೫ರಲ್ಲಿ ಬಿಳಿಯರ ವಿರುದ್ಧ ಕರಿಯರ ಪ್ರತಿಭಟನೆಯ ಸಲುವಾಗಿ 'ನೇಗಸ್ ಯೂಥ್ ಲೀಗ್' ಎಂಬ ಸಂಸ್ಥೆಯನ್ನು ಹುಟ್ಟು ಹಾಕಿದರು. ೧೯೩೬ರಲ್ಲಿ ಗಾಂಧೀಜಿ ಮತ್ತು ಅವರೊಂದಿಗೆ ಇದ್ದ ಸರ್ದಾರ್‌ವಲ್ಲಭಬಾಯ್ ಪಟೇಲರು ನಂದಿದುರ್ಗಕ್ಕೆ ಬಂದಿದ್ದಾಗ ಅವರನ್ನು ಟಿ. ಸಿದ್ದಲಿಂಗಯ್ಯನವರು ದೊಡ್ಡಬಳ್ಳಾಪುರಕ್ಕೆ ಆಹ್ವಾನಿಸಿದರು. ಆಗ ಪಟೇಲರು 'ನೇಗಸ್ ಯೂಥ್ ಲೀಗ್' ಕಾರ್ಯಕಾರಣಗಳನ್ನು ಪ್ರಶ್ನಿಸಿದಾಗ ಇದನ್ನು ವಿಸರ್ಜಿಸಿ

ಕಾಂಗ್ರೆಸ್ ಸಂಸ್ಥೆಗೆ ಸೇರುವಂತೆ ಸಲಹೆ ನೀಡಿದರು. ನಂತರ ಆ ಸಂಸ್ಥೆಯಲ್ಲಿದ್ದವರೆಲ್ಲ ಕಾಂಗ್ರೆಸ್‌ಗೆ ಸೇರಿದರು ಕೆ.ಟಿ.ಭಾಷ್ಯಂ, ವೀರಕೇಸರಿ ತಗಡೂರು ರಾಮಚಂದ್ರರಾವ್ ಮುಂತಾದವರು ದೊಡ್ಡಬಳ್ಳಾಪುರ ಟಿ. ಸಿದ್ದಲಿಂಗಯ್ಯನವರನ್ನು ಮೈಸೂರು ಸಂಸ್ಥಾನದ ಕಾಂಗ್ರೆಸ್ ಅಧ್ಯಕ್ಷರನ್ನಾಗಿ ೧೯೩೭ರಲ್ಲಿ ಆಯ್ಕೆ ಮಾಡಿದರು.

ದೊಡ್ಡಬಳ್ಳಾಪುರದ ಟಿ. ಸಿದ್ದಲಿಂಗಯ್ಯನವರು ಮೈಸೂರು ಸಂಸ್ಥಾನದಲ್ಲಿ ಸಂಪೂರ್ಣವಾಗಿ ಪ್ರವಾಸ ಮಾಡಿ, ಕಾಂಗ್ರೆಸ್‌ನ ಧ್ಯೇಯಗಳನ್ನು ಮತ್ತು ಉದ್ದೇಶಗಳನ್ನು ಜನರಿಗೆ ತಿಳಿಸಿ ಕೊಟ್ಟರು. ಜವಾಬ್ದಾರಿ ಸರ್ಕಾರದ ಬಗ್ಗೆ ಅರಿವು ಮೂಡಿಸಿದರು. ೧೯೩೮ರಲ್ಲಿ ಮೈಸೂರು ಕಾಂಗ್ರೆಸ್, ರಾಷ್ಟ್ರೀಯ ಕಾಂಗ್ರೆಸ್‌ನ ಶಾಖೆಯಾಗಿ ಹೊರಹೊಮ್ಮಿತು. ಆಗ ಈ ಶಾಖೆಯನ್ನು ಸೇಲಂನ ಕಾಂಗ್ರೆಸ್ ನಾಯಕರಾದ ಎಸ್.ವೆಂಕಟಪ್ಪ ಚೆಟ್ಟಿಯೂರ್‌ರವರು ಉದ್ಘಾಟನೆ ಮಾಡಿದರು. ಮೊದಲ ಕಾಂಗ್ರೆಸ್ ಅಧಿವೇಶನವನ್ನು ಶಿವಪುರದಲ್ಲಿ ನಡೆಸುವಂತೆ ತೀರ್ಮಾನ ಮಾಡಿ ಅಧ್ಯಕ್ಷರನ್ನಾಗಿ ಟಿ.ಸಿದ್ದಲಿಂಗಯ್ಯನವರನ್ನು ಆಯ್ಕೆ ಮಾಡಿದರು. ಆಗ ಜವಾಬ್ದಾರಿ ಸರ್ಕಾರದ ಬೇಡಿಕೆಯನ್ನು ಮುಂದೂಡಲಾಯಿತು. ಶಿವಪುರದ ಕಾಂಗ್ರೆಸ್ ಅಧಿವೇಶನದಲ್ಲಿ ೧೯೩೮ರಲ್ಲಿ ತ್ರಿವರ್ಣ ಧ್ವಜವನ್ನು ಸಿದ್ಧಲಿಂಗಯ್ಯನವರು ಹಾರಿಸಿದರು. ಈ ಅಧಿವೇಶನಕ್ಕೆ ದೊಡ್ಡಬಳ್ಳಾಪುರದಿಂದ ಹಲವಾರು ಜನ ಕಾರ್ಯಕರ್ತರು ಹೋಗಿದ್ದರು. ಈ ಅಧಿವೇಶನ ನಡೆಯುತ್ತಿದ್ದಾಗ ಪೋಲಿಸರು ಕಾಂಗ್ರೆಸ್ ಕಾರ್ಯಕರ್ತರ ಮೇಲೆ ಗುಂಡು ಹಾರಿಸಿ ಸಿದ್ದಲಿಂಗಯ್ಯನವರನ್ನು ಬಂಧಿಸಿದರು. ಆಗ ಸಾವು-ನೋವುಗಳು ಸಂಭವಿಸಿತು. ಕಾರ್ಯಕರ್ತರು ಮತ್ತೆ ಸುಮ್ಮನೆ ಕೂರಲಿಲ್ಲ. ತ್ರಿವರ್ಣ ಧ್ವಜ ಹಾರಿಸುವ ಮತ್ತು ಧ್ವಜ ಸತ್ಯಾಗ್ರಹ ಚಳುವಳಿಯ ಕಾರ್ಯ ಮೈಸೂರು ಸಂಸ್ಥಾನಾದ್ಯಂತ ನಡೆಯಿತು. ತ್ರಿವರ್ಣ ಧ್ವಜಹಾರಿಸುವ ಕಾರ್ಯಕ್ರಮ ಶಿವಪುರದಲ್ಲೆ ನಡೆಯುತ್ತಿದ್ದರು ಪೋಲಿಸರ ಹದ್ದಿನ ಕಣ್ಣು ಇವರ ಮೇಲಿತ್ತು. ಪೋಲಿಸರ ಕಣ್ಣು ತಪ್ಪಿಸಿ ಕಾರ್ಯಕ್ರಮಗಳು ನಡೆಯುತ್ತಿದ್ದವು. ಇಂತಹ ಹೋರಾಟಗಳಲ್ಲಿ ಎಚ್. ಮುಗುವಾಳಪ್ಪ, ರೂಮಾಲೆ ಚನ್ನಬಸವಯ್ಯ, ನಾ.ನಂಜುಂಡಯ್ಯ, ಪುಂಡಲೀಕರಾವ್ ಬಿ. ವೀರಭದ್ರಯ್ಯ, ಮೊದಲಾದವರು ಈಚಲು ಮರಗಳನ್ನು ಕಡಿದು ಮಧ್ಯಪಾನ ನಿರೋಧದ ಬಗ್ಗೆ ಜಾಗೃತಿ ಕಾರ್ಯಕ್ರಮಗಳನ್ನು ದೊಡ್ಡಬಳ್ಳಾಪುರ ತಾಲ್ಲೂಕಿನಾದ್ಯಂತ ಹಮ್ಮಿಕೊಂಡಿದ್ದರು. ಆಗ ಅನೇಕರನ್ನು ಪೋಲೀಸರು ಬಂಧಿಸಿದ್ದರು.

ದೊಡ್ಡಬಳ್ಳಾಪುರ ತಾಲ್ಲೂಕಿನ ಗಂಟಿಗಾನಹಳ್ಳಿ ರಾಮಶೆಟ್ಟಿಯವರು ಗ್ರಾಮೀಣ ಪ್ರದೇಶದ ಸ್ವಾತಂತ್ರ್ಯ ಹೋರಾಟಗಾರರು. ಸ್ವಾತಂತ್ರ್ಯ ಪಡೆಯಬೇಕೆಂಬ ಹಂಬಲದಿಂದ ಟಿ.ಸಿದ್ದಲಿಂಗಯ್ಯನವರ ನೇತೃತ್ವದಲ್ಲಿ ಹೋರಾಟ ಪ್ರಾರಂಭವಾದಾಗ ಈಚಲು ಮರ ಕಡಿಯುವ ಕೆಲಸದಲ್ಲಿ ನಿರತರಾಗಿದ್ದಾಗ ದೊಡ್ಡಬಳ್ಳಾಪುರದ ಅರ್ಕಾವತಿ ಬಳಿ ಇವರನ್ನು ಬಂಧಿಸಿದರು. ಅವರು ತಿಂಗಳುಗಳ ಕಾಲ ಸೆರಮನೆ ವಾಸವನ್ನು ಅನುಭವಿಸಿದರು. ಮತ್ತೊಬ್ಬ ಗ್ರಾಮೀಣ ಪ್ರದೇಶದ

ಸ್ವಾತಂತ್ರ್ಯ ಹೋರಾಟಗಾರರಾದ ಗಂಟಿಗಾನಹಳ್ಳಿಮುನಿರಾಮಪ್ಪನವರು ಒಬ್ಬರು. ಕಮ್ಮಾರಿಕೆ ವೃತ್ತಿಯನ್ನು ಮಾಡಿಕೊಂಡಿದ್ದ ಇವರು ದೊಡ್ಡಬಳ್ಳಾಪುರದ ಮುಗುವಾಳಪ್ಪ, ನಾ. ನಂಜುಂಡಯ್ಯನವರ ನೇತೃತ್ವದಲ್ಲಿ ಮೆಳೆಕೋಟೆಯಲ್ಲಿ ಸಮ್ಮೇಳನ ನಡೆಸಿದರು. ಕಾರ್ಯಕರ್ತರಾದ ಗುಂಡಪ್ಪ ಮತ್ತು ರಾಮಶೆಟ್ಟಿಯವರ ಸಂಗಡ ದೊಡ್ಡಬಳ್ಳಾಪುರದ ಅರ್ಕಾವತಿ ಬಳಿ ಈ ಚಲುಮರ ಕಡಿದರು. ಮೇಳೆಕೋಟೆಯಲ್ಲಿ ಹೆಂಡದ ಅಂಗಡಿಗೆ ಬೆಂಕಿ ಹಚ್ಚಿದರು. ಈ ಸುದ್ಧಿಯನ್ನು ತಿಳಿದ ಪೋಲೀಸರು ಇವರನ್ನು ಬಂಧಿಸಿ ಬಂಧನದಲ್ಲಿಡಲಾಯಿತು. ನಂತರ "ಕೆ.ಸಿ.ರೆಡ್ಡಿಯವರ ಮುಂದಾಳತ್ವದಲ್ಲಿ ೨೭-೧೦-೧೯೪೭ರಂದು ಜವಾಬ್ದಾರಿ ಸರ್ಕಾರ ಅಸ್ತಿತ್ವಕ್ಕೆ ಬಂದಿತು. ಮೈಸೂರು ಸರ್ಕಾರದಲ್ಲಿ ಟಿ.ಸಿದ್ದಲಿಂಗಯ್ಯನವರು ಎರಡು ಅವಧಿಯಲ್ಲಿ ಮಂತ್ರಿಗಳಾಗಿದ್ದರು. ರುಮಾಲೆ ಚನ್ನಬಸವಯ್ಯನವರು ೧೯೫೨ರಿಂದ ೧೯೬೦ರವರೆಗೆ ವಿಧಾನ ಪರಿಷತ್‌ನಲ್ಲಿ ನಾಮಕರಣ ಸದಸ್ಯರಾಗಿದ್ದರು." ಮೈಸೂರು ಸಂಸ್ಥಾನದಲ್ಲಿ ಕಾಂಗ್ರೇಸ್ ಅನ್ನು ಬೇರೂರಿಸಿ ಕಾಂಗ್ರೇಸಿನ ಧ್ಯೇಯ ಮತ್ತು ಕಾರ್ಯಗಳನ್ನು ಸಿದ್ಧಾಂತಗಳನ್ನು ಅನುಷ್ಠಾನಗೊಳಿಸಿದವರಲ್ಲಿ ದೊಡ್ಡಬಳ್ಳಾಪುರ ತಾಲ್ಲೂಕಿನವರ ಪಾತ್ರ ತುಂಬಾ ಮಹತ್ವದ್ದಾಗಿದೆ. ಈ ರೀತಿಯಾಗಿ ದೊಡ್ಡಬಳ್ಳಾಪುರ ತಾಲೂಕಿನ ಜನತೆ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ.

ಹೀಗೆ ದೊಡ್ಡಬಳ್ಳಾಪುರ ಶಾತವಾಹನರ ಕಾಲದಿಂದ ಆಧುನಿಕ ಕಾಲದವರೆಗೆ ಅನೇಕ ರೀತಿಯ ರಾಜಕೀಯದ ಏಳು ಬೀಳುಗಳನ್ನು ಕಂಡಿದೆ. ಸ್ವತಂತ್ರ ಹೋರಾಟದಲ್ಲಿ ಈ ತಾಲ್ಲೂಕಿನ ಪಾತ್ರ ಬಹಳ ದೊಡ್ಡದು. ವಾಣಿಜ್ಯದಲ್ಲೂ ದೊಡ್ಡಬಳ್ಳಾಪುರ ಬಹಳ ಪ್ರಮುಖವಾಗಿದೆ. ಇಂದು ಈ ನಗರದ ಪ್ರತಿ ಮನೆಗಳಲ್ಲೂ ಕೈಮಗ್ಗ ಅಥವಾ ಯಂತ್ರ ಮಗ್ಗಗಳಿವೆ. ಇಂದು ಈ ನಗರ ರೇಷ್ಮೆ ಬಟ್ಟೆಗೆ ವಿಶ್ವವಿಖ್ಯಾತವಾಗಿದೆ. ವಾರ್ಷಿಕ ನೂರಾರು ಕೋಟಿ ರೂ.ಗಳ ಜವಳಿ ರಫ್ತು ಇಲ್ಲಿಂದ ನಡೆಯುತ್ತಿದೆ.

**ಅಡಿಟಿಪ್ಪಣಿಗಳು**

೧. ಎಸ್.ಕೆ.ಕೊಪ್ಪ, **ತರ್ದವಾಡಿನಾಡು,** ಪು.೧೫

೨. ಸೂರ್ಯನಾಥ್ ಕಾಮತ್(ಸಂ), **ಕರ್ನಾಟಕ ಗ್ಯಾಸೆಟಿಯರ್,** ಪು.೬೦

೩. ಭಾರತೀಯ **ಜನಗಣತಿ ವರದಿ,** ೨೦೦೧

೪. ಎ.ಕ.ಸಂಪುಟ೯, ದೊಡ್ಡಬಳ್ಳಾಪುರ(ಅನುಬಂಧ)ಸಂಖ್ಯೆ.೬, ದೊಡ್ಡಬಳ್ಳಾಪುರ, ಕ್ರಿ.ಶ.೧೫೪೮

೫. ಎಚ್.ಎಸ್.ಗೋಪಾಲರಾವ್(ಸಂ), **ಕನಕಸಿರಿ,** ಪು.೨೬೭

೬. ಸೂರ್ಯನಾಥ ಯು.ಕಾಮತ್(ಸಂ), **ಇತಿಹಾಸ ದರ್ಶನ,** ಸಂಪುಟ.೧೭, ಪು.೬

೭. ಡಾ.ನಾಗರಾಜಶರ್ಮ, **ಡೆಕ್ಕನ್ ಹೆರಾಲ್ಡ್ ಪತ್ರಿಕೆ,** ೧೮.೧೧.೨೦೦೦

೮. ಸೂರ್ಯನಾಥ ಯು. ಕಾಮತ್(ಸಂ) **ಇತಿಹಾಸದರ್ಶನ,** ಸಂಪುಟ ೧೭, ಪು.೭

೯. ಅದೇ, ಪು.೯

೧೦. ಅದೇ, ಪು.೧೦

೧೧. ಮೈಸೂರು ಗ್ಯಾಸೆಟಿಯರ್, ೧೯೬೮, ಕೋಲಾರ ಜಿಲ್ಲೆ, ಪು.೮೫

೧೨. ಡಾ.ಎಂ.ಚಿದಾನಂದಮೂರ್ತಿ, **ಹೊಸತು ಹೊಸತು**, ಪು.೨೫೭

೧೩. ಎ.ಕ.ಸಂ. ೯, ಸಂಖ್ಯೆ.೬೭, ೬೮, ಮಲ್ಲೋಹಳ್ಳಿ, ಕ್ರಿ.ಶ.೫೧೭

೧೪. ಎ.ಕ.ಸಂ.೯, ಸಂಖ್ಯೆ.೩೧, ಕೋಟೆಶಾಸನ, ಕ್ರಿ.ಶ.೧೨೬೭

೧೫. ಎ.ಕ.ಸಂ.೯, ಸಂಖ್ಯೆ.೧೧, ಹುಲುಕಡಿಬೆಟ್ಟ, ಕ್ರಿ.ಶ.೧೧೧೫

೧೬. ಎ.ಕ.ಸಂ.೯, ಸಂಖ್ಯೆ.೩೯, ಅರಳುಮಲ್ಲಿಗೆ, ಕ್ರಿ.ಶ.೧೩೬೭

೧೭. ಎ.ಕ.ಸಂ.೯, ಸಂಖ್ಯೆ.೪೨, ಪುಟ್ಟಯ್ಯನಗ್ರಹಾರ, ಕ್ರಿ.ಶ.೧೪೯೩

೧೮. ಎ.ಕ.ಸಂ.೯, ಸಂಖ್ಯೆ.೫೦, ಕಾಡನೂರು, ಕ್ರಿ.ಶ.೧೫೩೧

೧೯. ಅದೇ,

೨೦. ಎ.ಕ.ಸಂ.೯, ಸಂಖ್ಯೆ.೪೧, ಗಂಡ್ರಗೊಳ್ಳಿಪುರ, ಕ್ರಿ.ಶ.೧೫೪೧

೨೧. ಎ.ಕ.ಸಂ.೯, ಸಂಖ್ಯೆ.೬೩, ಮಾವಳೀಪುರ, ಕ್ರಿ.ಶ.೧೭೧೫

೨೨. ಎ.ಕ.ಸಂ.೯, ಸಂಖ್ಯೆ.೫, ತಿಪ್ಪೂರು, ಕ್ರಿ.ಶ.೧೫೮೬

೨೩. ಎ.ಕ.ಸಂ.೯, ಸಂಖ್ಯೆ.೧೪, ಹಾಡೋನಹಳ್ಳಿ, ಕ್ರಿ.ಶ.೧೩೨೮

೨೪. ಎ.ಕ.ಸಂ.೯, ಸಂಖ್ಯೆ.೧೮, ಕುರುವಿಗೆರೆ, ಕ್ರಿ.ಶ.೧೩೨೮

೨೫. ಎ.ಕ.ಸಂ.೯, ಸಂಖ್ಯೆ.೨೯, ನಂದಿಗುಂದ, ಕ್ರಿ.ಶ.೧೪೭೧

## ಅಧ್ಯಾಯ ೩

# ಶಾಸನಗಳ ಅಧ್ಯಯನ

೩.೧. ಶಾಸನಾಧ್ಯಯನದ ಇತಿಹಾಸ

೩.೨. ಶಾಸನ ಮತ್ತು ವಿಷಯ ವೈವಿಧ್ಯ

೩.೩. ದಾನಶಾಸನಗಳು

೩.೪. ಶಾಸನಗಳಲ್ಲಿ ಅಧಿಕಾರಿವರ್ಗ

೩.೫. ತೆರಿಗೆ, ತೆರಿಗೆ ವಸ್ತುಗಳು, ಸುಂಕದ ವಿವರಗಳು

೩.೬. ಶಾಸನಗಳಲ್ಲಿ ಜನಸಾಮಾನ್ಯರ ಚಿತ್ರಣ

೩.೭. ಅಗ್ರಹಾರಗಳು, ಪುರಗಳು, ಮಂಗಲಗಳು

೩.೮. ಗ್ರಾಮನಾಮಗಳು, ವ್ಯಕ್ತಿನಾಮಗಳು, ಸ್ಥಳವಿಶೇಷಗಳು

೩.೯. ನಾಡುಗಳು, ಸೀಮೆಗಳು, ಇತರೆ ವಿಭಾಗಗಳು

೩.೧೦. ಸ್ಮಾರಕ ಶಾಸನಗಳು

೩.೧೧. ಶಾಸನಗಳಲ್ಲಿ ಕಾಲದ ನಿರೂಪಣೆ

೩.೧೨. ಸಾಹಿತ್ಯ-ಛಂದಸ್ಸು

೩.೧೩. ಶಾಪಾಶಯ

೩.೧೪. ಶಾಸನ ಕವಿಗಳು, ಲಿಪಿಕಾರರು, ಲಿಪಿ ವೈವಿಧ್ಯ

೩

# ಶಾಸನಗಳ ಅಧ್ಯಯನ

## ೩.೧. ಶಾಸನಾಧ್ಯಯನದ ಇತಿಹಾಸ

ಶಾಸನಗಳ ನೆರವಿನಿಂದ ಪ್ರಾಚೀನ ಕರ್ನಾಟಕದ ರಾಜಕೀಯ ಸ್ಥಿತಿ ಆಡಳಿತ ಕ್ರಮ, ಸಮಾಜ, ಕಲೆ, ಧರ್ಮ, ಆರ್ಥಿಕ ಸ್ಥಿತಿ, ತೆರಿಗೆ ಪದ್ಧತಿ ಪರಿಸ್ಥಿತಿಯನ್ನು ಅರಿಯಲು ಮತ್ತು ಅವುಗಳ ಇತಿಹಾಸವನ್ನು ಪುನಾರಚಿಸಲು ಸುಲಭ ಸಾಧ್ಯವಾಗಿದೆ. ಶಾಸನಗಳು ಚರಿತ್ರೆ ಇತಿಹಾಸದ ಪುನಾರಚನೆಯಲ್ಲಿ ವಹಿಸುವ ಪಾತ್ರ ಬಹಳ ಪ್ರಮುಖವಾದದ್ದಾಗಿದೆ. ಬದುಕಿನ ಸಮಸ್ತ ಸಂವೇದನೆಗಳು ಮತ್ತು ಜನ ಜೀವನವು ಶಾಸನಗಳಲ್ಲಿ ಅಭಿವ್ಯಕ್ತಗೊಂಡಿರುವಂತೆ ಇನ್ನೆಲ್ಲೂ ವ್ಯಕ್ತವಾಗಿಲ್ಲ. ಈ ಕಾರಣಕ್ಕೆ ಅವು ಚರಿತ್ರೆ ಸಂಶೋಧನೆಗೆ ಪ್ರತಿಹಂತದಲ್ಲೂ ಅಧಿಕೃತವಾದ ಭೂಮಿಕೆಯಾಗಿವೆ.[೧]

ಕನ್ನಡನಾಡಿನಲ್ಲಿ ಶಾಸನಗಳು ಕ್ರಿಪೂ. ಮೂರನೆಯ ಶತಮಾನದಿಂದಲೂ ಕಂಡುಬರುತ್ತಿವೆ. 'ಶಾಸನ' ಎಂಬ ಪದವನ್ನು ವಿದ್ವಾಂಸರು ಆಂಗ್ಲ ಪದವಾದ 'Inscription' ಎಂಬ ಪದಕ್ಕೆ ಸಮವಾಗಿ ಬಳಸಿರುವರು. ಇನ್‌ಸ್ಕ್ರಿಪ್ಷನ್ ಎಂದರೆ ಬಹುಕಾಲದವರೆಗೆ ಉಳಿಯಬಲ್ಲಂತಹ, ಶಾಶ್ವತವಾದ ವಸ್ತುಗಳ ಮೇಲೆ ಕೊರೆಯಲ್ಪಟ್ಟಂತಹ ಬರಹಗಳು. ಬ್ರಿಟಾನಿಕಾ ವಿಶ್ವಕೋಶದಲ್ಲಿ 'ಇನ್‌ಸ್ಕ್ರಿಪ್ಷನ್' ಎಂಬ ಪದವನ್ನು Documents incised on some hard or permenent natural in the form of letters or other conventional signs, for the purpose of conveying some information or preserving a record, they are, they fore tobe distinguished on the one hand from manuscripts or documents written on papyrus, parchhment, paper or other more or less smooth, suofaces by means of a brush, read or pen and some coloured fluid"[೨] ಅಂದರೆ ತಾಳೆಗರಿ, ಭೂರ್ಜಪತ್ರ, ಕಾಗದ ಮುಂತಾದವುಗಳ ಮೇಲೆ ಕಂಡುಬರುವಂತಹ ಬರಹಗಳನ್ನು ಹೊರತುಪಡಿಸಿ, ಬಹುಕಾಲ ಉಳಿಯುವ ಸಾಮಗ್ರಿಯ ಮೇಲೆ ಕೆತ್ತಿರುವ ಬರಹಗಳನ್ನು ಶಾಸನಗಳು ಎಂಬುದಾಗಿ ಕರೆಯಬಹುದಾಗಿದೆ. ಈ ಶಾಸನ ಎಂಬ ಪದದ ಮೂಲಾರ್ಥ ಆಜ್ಞೆ ಎಂಬುದಾಗಿ ಕೌಟಿಲ್ಯನ ಅರ್ಥಶಾಸ್ತ್ರ ಹೇಳುತ್ತದೆ. ಶಾಸನ ಮತ್ತು ರಾಜರ ಆಜ್ಞೆಗಳನ್ನು ತಿಳಿಸುವ ಬರಹವನ್ನು ಇದು ಹೇಳುತ್ತದೆ.[೩] ಶುಕ್ರಾಚಾರ್ಯರ 'ಶುಕ್ರನೀತಿಸಾರ'ದಲ್ಲಿ ರಾಜಶಾಸನ ಪ್ರಬೇಧಗಳ ವಿವರಗಳು ಇಂತಿವೆ. ಶಾಸನಪತ್ರದಲ್ಲಿ ರಾಜನ ಸ್ವಂತ ರುಜುವೂ ಆ ಆಜ್ಞೆ ಹೊರಟ ದಿನಾಂಕವೂ ಇರಬೇಕು.

ಮತ್ತು ಹೀಗೆ ಆರಂಭವಾಗಬೇಕು. 'ನೀವೆಲ್ಲ ಕೇಳಿರಿ, ನೀವೆಲ್ಲ ಹೀಗೆ ಮಾಡಬೇಕು. ಮತ್ತು ಈ ಆಜ್ಞೆಯಂತೆ ನಡೆದುಕೊಳ್ಳಬೇಕು ಇತ್ಯಾದಿಗಳು ಮತ್ತೊಂದು ಪ್ರಕಾರದ ಶಾಸನಗಳನ್ನು ಆಜ್ಞಾಪತ್ರಗಳೆಂದು ಕರೆಯುತ್ತಾರೆ. ಇವು ಸಾಮಂತರಿಗೆ, ಮಾಂಡಲಿಕರಿಗೆ ಮತ್ತು ಇತರ ಅಧಿಕಾರಿಗಳಿಗೆ ಒಪ್ಪಿಸಿದ ಕರ್ತವ್ಯಗಳ ನಿರೂಪಣೆಗಳು. ಶುಕ್ರನೀತಿಯಲ್ಲಿ ಲೇಖನವಿಲ್ಲದೆ ಆಜ್ಞೆ ಮಾಡುವ ರಾಜ ಇಂತಹ ಆಜ್ಞಾ ಪತ್ರಗಳಲ್ಲದೆ ಅಧಿಕಾರವನ್ನು ಪ್ರಯೋಗಿಸುವ ಅಧಿಕಾರಿಗಳಿಬ್ಬರೂ ಚೋರರು", "ರಾಜಮುದ್ರಾ ಸಹಿತವಾದ ಶಾಸನವೇ ನಿಜವಾದ ರಾಜ. ಬರಿಯ ರಾಜ ರಾಜನೇ ಅಲ್ಲ"[೪] ಎಂಬ ಮಾತುಗಳು ಶಾಸನಗಳ ಮಹತ್ವವನ್ನು ಸಾರಿ ಹೇಳುತ್ತವೆ.

ದೂತರ ಮೂಲಕ ರಾಜರು ತಮ್ಮ ಆಜ್ಞೆಗಳನ್ನು ಹೇಳಿಕಳುಹಿಸಬಹುದು. ದೂತರು ಅವಜ್ಞತೆಯಿಂದಲೋ, ಅಜ್ಞಾನದಿಂದಲೋ, ದಡ್ಡತನದಿಂದಲೋ ಆ ಆಜ್ಞೆಯನ್ನು ಸರಿಯಾಗಿ ಮುಟ್ಟಿಸದೇ ಇರಬಹುದು. ಆದ್ದರಿಂದ ತಾಳಪತ್ರದ ಮೇಲೆ ಲಿಖಿತವಾದ ರಾಜಾಜ್ಞೆಯೇ ಗೌರವಾರ್ಹವಾದುದು ಎಂಬ ಮಾತು ಸತ್ಯವೆನಿಸುತ್ತದೆ.[೫] ರಾಜರ ಅಥವಾ ದೊರೆಗಳ ಆಜ್ಞೆಗಳು ತಾಳಪತ್ರಗಳ ಮೇಲೆ ಇದ್ದುದಾದರೂ ಅವು ದೀರ್ಘ ಕಾಲದವರೆಗೆ ಉಳಿಯಲು ಅಸಾಧ್ಯವಾದ ಕಾರಣದಿಂದಾಗಿ ಕಾಲಕ್ರಮೇಣ ಅವುಗಳ ವಿಷಯವನ್ನು ತಾಮ್ರಪಟಗಳ ಮೇಲೆಯೋ ಶಿಲೆಗಳ ಮೇಲೆಯೋ ಕೊರೆದರು. ಆದುದರಿಂದ ಇವುಗಳು ರಾಜಾಜ್ಞೆಗಳಾಗಿ ನಂತರ ಶಾಸನ ಎಂಬುದಾಗಿ ಬಳಕೆಗೆ ಬಂದವು.

ರಾಜನ ಕರ್ತವ್ಯಗಳ ವಿವರಗಳನ್ನು ಹೇಳುವಾಗ, ಭೂಮಿಯನ್ನು ದಾನ ಮಾಡುವಾಗಲೋ ಅಥವಾ ಯಾವುದಾದರೂ ಶಾಶ್ವತವಾದ ಏರ್ಪಾಟನ್ನು ಮಾಡುವಾಗಲೋ ಅದರ ನಿಯಮಗಳನ್ನು ಮುಂದಿನ ರಾಜರ ತಿಳುವಳಿಕೆಗಾಗಿ ವಸ್ತ್ರಪಟದ ಮೇಲಾಗಲಿ ತಾಮ್ರಪಟದ ಮೇಲಾಗಲಿ ಬರೆಯಿಸಬೇಕು. ಅದರಲ್ಲಿ ತನಗಿಂತ ಹಿಂದಿನ ತಲೆಮಾರುಗಳ ವಿಷಯ, ತನ್ನ ವಿಷಯ, ದಾನವನ್ನು ಸ್ವೀಕರಿಸುವವನ ವಿಷಯ, ದಾನದ ಪ್ರಮಾಣ, ಭೂಮಿಯ ಮೇರೆಗಳು, ದಿನಾಂಕ ಇವುಗಳನ್ನು ನಿರೂಪಿಸಿ, ತನ್ನ ಮುದ್ರೆ ಮತ್ತು ಸಹಿಗಳನ್ನು ಹಾಕಬೇಕು. ಹೀಗೆ ದಾನವು ಶಾಶ್ವತವಾಗಿ ನಡೆಯುವಂತೆ ಮಾಡಬೇಕು.[೬] ಇಲ್ಲಿ ಶಾಸನಗಳಲ್ಲಿನ ಅಂಶಗಳು ಪ್ರತಿಬಿಂಬಿತವಾಗಿವೆ. ಶುಕ್ರನೀತಿ ಸಾರವು ರಾಜಶಾಸನಗಳನ್ನು ಮತ್ತು ರಾಜಾಜ್ಞೆಗಳನ್ನು ಪ್ರಜೆಗಳಿಗೆ ಡಂಗುರ ಹೊಡೆಯಿಸಿ ತಿಳಿಸಬೇಕೆಂದೂ ಅವುಗಳನ್ನು ಪ್ರಜೆಗಳ ಗಮನಕ್ಕೆ ತರಲು ಅವುಗಳನ್ನು ನಾಲ್ಕು ದಾರಿಗಳು ಕೂಡುವ ಸ್ಥಳಗಳಲ್ಲಿ ಬರೆಯಿಸಿ ಪ್ರಕಟಿಸಬೇಕೆಂದೂ, ಅವುಗಳನ್ನು ಮೀರಿದವರಿಗೆ ಶಿಕ್ಷೆಯನ್ನು ವಿಧಿಸಲಾಗುವುದೆಂದೂ ತಿಳಿಸಬೇಕೆಂದು ಹೇಳುತ್ತದೆ. ಪ್ರಜೆಗಳಿಗೆ ರಾಜನು ಹಾಕಿಸಿದ ಶಾಸನಗಳು ದಿನಾ ನೋಡುತ್ತಿರುವುದರಿಂದ ಅವುಗಳು ಪ್ರಜೆಗಳ ಗಮನಕ್ಕೆ ಬಂದು ದಾನವನ್ನು ಹಾಳು ಮಾಡದಂತಿರಲಿ ಎಂಬ ಉದ್ದೇಶವೂ ಇತ್ತು. ಮೇಲಿನ ಅಂಶಗಳಲ್ಲಿ ಶಾಸನಗಳು ಮೊದಲು ರಾಜಾಜ್ಞೆಗಳಾಗಿದ್ದವು ಎಂಬುದು ತಿಳಿಯುತ್ತದೆ. ನಿಯಮಗಳನ್ನು ಕಾನೂನುಗಳನ್ನು ಜನರಿಗೆ ತಿಳಿಯಪಡಿಸುವ ಒಟ್ಟಾರೆ ಬರಹಗಳೇ ಈ ಶಾಸನಗಳು.

ರಾಜಾಜ್ಞೆಗಳನ್ನು ಹೇಳುತ್ತಿದ್ದ ಶಾಸನಗಳನ್ನು ಬರೆಯಿಸಲು ಯಾವ ಯಾವ ವಸ್ತುಗಳನ್ನು ಬಳಸಿಕೊಳ್ಳುತ್ತಿದ್ದರು ಎಂಬುದರ ಮೇಲೆ ಶಾಸನಗಳನ್ನು ವರ್ಗೀಕರಿಸುತ್ತಾರೆ. ಶಿಲಾಶಾಸನ ತಾಮ್ರಶಾಸನ ಎಂಬೆರಡು ವಿಭಾಗಗಳು ಪ್ರಮುಖವಾದವು. ಕ್ಷೇತ್ರಾಧ್ಯಯನ ಕೈಗೊಂಡಾಗ ದೊರೆತಿರುವ ಶಾಸನಗಳಲ್ಲಿ ಈ ಎರಡು ಪ್ರಕಾರದ ಶಾಸನಗಳೇ ಗೋಚರಿಸುತ್ತವೆ. ಇವುಗಳಲ್ಲದೆ ಚಿನ್ನ, ಬೆಳ್ಳಿ, ಹಿತ್ತಾಳೆ, ಕಂಚು ಮುಂತಾದ ಲೋಹಗಳ ಮೇಲೆ ಮಣ್ಣಿನ ಕುಡಿಕೆ, ಇಟ್ಟಿಗೆ, ಶಂಖ ಮುಂತಾದ ಲೋಹೇತರ ವಸ್ತುಗಳ ಮೇಲೆಯೂ, ಶಾಸನಗಳನ್ನು ಬರೆದಿರುವ ನಿದರ್ಶನಗಳನ್ನು ಕಾಣಬಹುದಾಗಿದೆ. ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ಯಾವುದೇ ಲೋಹೇತರ ವಸ್ತುಗಳ ಮೇಲಿನ ಶಾಸನಗಳು ಇದುವರೆವಿಗೂ ಕಂಡುಬಂದಿಲ್ಲವೆಂಬುದು ಸ್ಪಷ್ಟ. ಕರ್ನಾಟಕದ ಆರಂಭದ ಶಾಸನಗಳು ಬಹುಪಾಲು ತಾಮ್ರಶಾಸನಗಳೇ ಆಗಿವೆ.[೭] ಕ್ರಿ.ಶ.ಎಂಟನೆಯ ಶತಮಾನದ ನಂತರ ಶಿಲಾಶಾಸನಗಳು ಹೇರಳವಾಗಿ ದೊರೆಯುತ್ತವೆ. ಕ್ರಿ.ಶ.ಹನ್ನೆರಡನೆಯ ಶತಮಾನದಲ್ಲಿ ಅಸಂಖ್ಯಾತ ಶಿಲಾಶಾಸನಗಳನ್ನು ಕಾಣಬಹುದಾಗಿದೆ. ಈ ತಾಲ್ಲೂಕಿನ ಶಾಸನಗಳು ಎಪಿಗ್ರಾಫಿಯಾ ಕರ್ನಾಟಿಕಾದ ಸಂಪುಟ ೯ರಲ್ಲಿ ೬೮ ಶಾಸನಗಳು, ಅನುಬಂಧ ಸಂಪುಟದಲ್ಲಿ ೭ ಶಾಸನಗಳೂ ಪ್ರಕಟಗೊಂಡಿದ್ದು ಒಟ್ಟು ೭೫ ಶಾಸನಗಳು ಎಪಿಗ್ರಾಫಿಯಾ ಕರ್ನಾಟಿಕ ಸಂಪುಟಗಳಲ್ಲಿ ಪ್ರಕಟವಾಗಿದೆ. ಶಾಸನ ಸಂಶೋಧನೆ ಕೃತಿಯಲ್ಲಿ ಅಂಬಲಗೆರೆಯ ಶಾಸನವೊಂದು ಪ್ರಕಟವಾಗಿದ್ದು, ಇದನ್ನೂ ಸೇರಿಸಿದರೆ ಈ ತಾಲ್ಲೂಕಿನಲ್ಲಿ ಅನುಬಂಧ ಸಂಪುಟದಲ್ಲಿ ಎರಡು ಶಾಸನಗಳನ್ನು ಪರಿಷ್ಕರಿಸಿ ಪ್ರಕಟಿಸಲಾಗಿದೆ. ಒಟ್ಟಾರೆ ಈ ತಾಲ್ಲೂಕಿನ ಶಾಸನಗಳಲ್ಲಿ ಶೈವದಾನ ಶಾಸನಗಳು ೧೪, ವೈಷ್ಣವ ದಾನಶಾಸನಗಳು ೨೭, ವೀರಗಲ್ಲು ೧೦, ಗ್ರಂಥಲಿಪಿ ಶಾಸನ ೪, ಪಾರ್ಶಿಲಿಪಿಶಾಸನ ೧, ಜೈನಶಾಸನ ೨, ಇತರೆ ೧೭ ಹೀಗೆ ಒಟ್ಟು ೭೫ ಶಾಸನಗಳನ್ನು ಬಗೆ ಬಗೆಯಾಗಿ ವಿಂಗಡಿಸಬಹುದಾಗಿದೆ. ಇವುಗಳಲ್ಲಿ ೫ ತಾಮ್ರ ಶಾಸನಗಳಾಗಿದ್ದು, ಮಿಕ್ಕ ೭೦ ಶಾಸನಗಳು ಶಿಲಾಶಾಸನಗಳಾಗಿವೆ. ನಮ್ಮ ಕ್ಷೇತ್ರಕಾರ್ಯದ ವೇಳೆ ಹಾದ್ರಿಪುರದ ಒಂದು ಮತ್ತು ಗುಂಡುಂಗೆರೆಯ ಎರಡು ಅಪ್ರಕಟಿತ ಶಾಸನಗಳನ್ನು ಗುರುತಿಸಲಾಗಿದೆ. ಇವುಗಳನ್ನು ಒಳಗೊಂಡಂತೆ ಈವರೆಗೆ ಒಟ್ಟು ೭೮ ಶಾಸನಗಳು ಪತ್ತೆಯಾಗಿವೆ. ತಾಲ್ಲೂಕಿನ ಅತ್ಯಂತ ಪ್ರಾಚೀನ ಶಾಸನವಾದ ಕ್ರಿ.ಶ.೪೫೯ರ ಮಲ್ಲೋಹಳ್ಳಿ ತಾಮ್ರಶಾಸನದಿಂದ ಪ್ರಾರಂಭಗೊಂಡು ೧೭೧೫ರ ಮಾವಳಿಪುರ ಶಾಸನದವರೆಗೂ ದೊರೆತಿವೆ. ಅಲ್ಲದೆ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗಮನಿಸಿದ ವೀರಗಲ್ಲುಗಳು ಮತ್ತು ವೀರಮಾಸ್ತಿಕಲ್ಲುಗಳಾದ ದೊಡ್ಡ ಬೆಳವಂಗಲದ ಬಳಿ ಇರುವ ಕ್ರಿ.ಶ.೮೧೦ರ ಕಾಲದ ವೀರಗಲ್ಲುಗಳು, ಹುಲುಕುಂಟೆ ಗ್ರಾಮದ ಬಳಿ ದೊರೆತಿರುವ ವೀರಗಲ್ಲುಗಳು, ಹಿರೇ ಮುದ್ದೇನಹಳ್ಳಿ ಗ್ರಾಮದ ಹೊರವಲಯದ ರಸ್ತೆಯ ಬದಿಯಲ್ಲಿ ದೊರೆತಿರುವ ವೀರಮಾಸ್ತಿಕಲ್ಲುಗಳನ್ನು ಹೆಸರಿಸಬಹುದು. ಇವುಗಳನ್ನು ಪ್ರತ್ಯೇಕ ಅಧ್ಯಯನ ವಿಭಾಗದಲ್ಲಿ ಚರ್ಚಿಸಲಾಗಿದೆ.

ಶಾಸನಗಳನ್ನೇ ಆಧಾರವಾಗಿಟ್ಟುಕೊಂಡು ದೊಡ್ಡಬಳ್ಳಾಪುರ ಪರಿಸರದ ಇತಿಹಾಸ, ಸಂಸ್ಕೃತಿಯನ್ನು ಬಿಂಬಿಸುವ ಗ್ರಂಥಗಳಾಗಲಿ ಅಥವಾ ಲೇಖನವಾಗಲಿ ಇದುವರೆಗೂ ಪ್ರಕಟವಾಗಿಲ್ಲ. ಆದುದರಿಂದ ಇಂತಹ ಒಂದು ಪ್ರಯತ್ನವನ್ನು ಇಲ್ಲಿ ಕೈಗೊಳ್ಳಲಾಗಿದೆ. ಈ ಮೊದಲು ಎಫಿಗ್ರಾಫಿಯಾ ಕರ್ನಾಟಕ, ಅನುಬಂಧ ಸಂಪುಟದಲ್ಲಿ, ಡಾ.ಡಿ.ವಿ. ಪರಮಶಿವಮೂರ್ತಿಯವರ 'ಶಾಸನ ಸಂಶೋಧನೆ', ಸಾಸಲು ವಿಶ್ವನಾಥರ ಲೇಖನಗಳು, ಟಿ. ಗೋವಿಂದರಾಜುರವರ 'ಚನ್ನಾದೇವಿ ಅಗ್ರಹಾರ ಒಂದು ಸಂಸ್ಕೃತಿ', ಎಂಬ ಕೃತಿಯಲ್ಲಿ ಸ್ವಲ್ಪ ಮಟ್ಟಿಗೆ ಈ ತಾಲ್ಲೂಕಿನ ಮಾಹಿತಿಗಳು ಲಭ್ಯವಾಗಿವೆ. ಇವುಗಳ ಜೊತೆಗೆ ಕ್ಷೇತ್ರಕಾರ್ಯ ಕೈಗೊಂಡು ಮಾಹಿತಿಗಳನ್ನು ಸಂಗ್ರಹಿಸಿ ದೊಡ್ಡಬಳ್ಳಾಪುರ ತಾಲ್ಲೂಕಿನ ಶಾಸನಗಳು ಮತ್ತು ಸ್ಮಾರಕಗಳ ಬಗೆಗೆ ಅಧ್ಯಯನಗಳನ್ನು ನಡೆಸುವ ಪ್ರಯತ್ನವನ್ನು ಇಲ್ಲಿ ಕೈಗೊಳ್ಳಲಾಗಿದೆ.

## ೩.೨. ಶಾಸನ ವಸ್ತು ಮತ್ತು ವಿಷಯ ವೈವಿಧ್ಯ

ಅರಸೊತ್ತಿಗೆಯ ಏಳು ಬೀಳುಗಳನ್ನು ಅದರ ಹಿನ್ನೆಲೆಯಲ್ಲಿ ರೂಪಿತವಾದ ಜನ ಜೀವನದ ಸ್ಥೂಲ ಸ್ವರೂಪಗಳನ್ನು ಹಲವಾರು ಗ್ರಂಥಗಳಲ್ಲಿ ಬಿಡಿ ಬಿಡಿಯಾಗಿ ಇಲ್ಲವೆ ಅಖಂಡವಾಗಿ ಕಾಣಬಹುದು. ಆದರೆ ಒಂದು ಸೀಮಿತ ಪ್ರದೇಶದ ಅಥವಾ ನಾಡಿನ, ಜನ ಜೀವನದ ಸ್ವರೂಪವನ್ನು ಬರವಣಿಗೆಯಲ್ಲಿ ಹಿಡಿದಿಡುವುದು ತುಂಬಾ ಪ್ರಯಾಸದ ಸಂಗತಿಯೇ ಸರಿ. ಇದಕ್ಕೆ ಪೂರಕವಾದ ಸಾಮಗ್ರಿಗಳೆಂದರೆ ಶಾಸನಗಳೇ. ರಾಜಕೀಯ ಜೀವನ ನಿರಂತರ ಬದಲಾವಣೆಗಳಿಂದ ಕೂಡಿದ್ದರೂ ಸ್ವಲ್ಪವೂ ವಿಚ್ಛಿದ್ರಗೊಳ್ಳದೆ ನಿರಂತರವಾದ ಸಾಂಸ್ಕೃತಿಕ ಪರಂಪರೆಯನ್ನು ಕಾಯ್ದುಕೊಂಡು ಬಂದ ವಿವರಗಳು ಈ ಶಾಸನಗಳಲ್ಲೇ ನಮಗೆ ದೊರಕುವುದು. ವಿಪುಲವಾದ ಶಾಸನಗಳ ಆಧಾರದಿಂದ ಶಾಸನಗಳ ವಸ್ತು, ವಿಷಯ ವೈವಿಧ್ಯ, ಮತ್ತು ಅಲ್ಲಿ ವ್ಯಕ್ತಗೊಂಡಿರುವ ಜನತೆಯ ಸಾಮಾಜಿಕ ಪರಿಸ್ಥಿತಿ, ಮತ್ತು ಸಂಸ್ಕೃತಿಗಳನ್ನು ಸಮಗ್ರವಾಗಿ ವಿವೇಚಿಸಲು ಇಲ್ಲಿ ಉದ್ದೇಶಿಸಲಾಗಿದೆ.

ಕರ್ನಾಟಕದಲ್ಲಿ ಶಾಸನಗಳು ನಮಗೆ ಕ್ರಿಪೂ.ಮೂರನೆಯ ಶತಮಾನದಿಂದ ಕಂಡುಬಂದರೂ ಅವುಗಳ ರಚನೆಗೆ ನಿಯಮಗಳನ್ನು ರೂಪಿಸಿದ್ದು, ಸ್ಮೃತಿಗಳ ಕಾಲಕ್ಕೆ. ಕೌಟಿಲ್ಯನ ಅರ್ಥಶಾಸ್ತ್ರ, ಶುಕ್ರನೀತಿಸಾರ ಬೃಹಸ್ಪತಿಸ್ಮೃತಿ, ಯಾಜ್ಞವಲ್ಕ್ಯ ಸ್ಮೃತಿ ಮೊದಲಾದ ಗ್ರಂಥಗಳು ಈ ಬಗ್ಗೆ ತಿಳಿಸಿವೆ. ಶಾಸನಗಳನ್ನು ಯಾವ ವಸ್ತು ಮಾಧ್ಯಮದ ಮೇಲೆ ಕೆತ್ತಲಾಗಿದೆ ಎಂಬ ಅಂಶಗಳ ಮೇಲೆಯೇ ಶಾಸನಗಳನ್ನು ವಿಂಗಡಿಸಲಾಗಿದೆ. ಶಿಲಾಶಾಸನ ಮತ್ತು ತಾಮ್ರಶಾಸನ ಎಂಬ ಎರಡು ಪ್ರಕಾರಗಳೇ ಪ್ರಮುಖವಾದ ವಿಭಾಗಗಳು. ದೊಡ್ಡಬಳ್ಳಾಪುರ ತಾಲ್ಲೂಕಿನ ಶಾಸನಗಳನ್ನು ಗಮನಿಸಿದಾಗ ನಮಗೆ ಅಧಿಕ ಪ್ರಮಾಣದಲ್ಲಿ ಶಿಲಾಶಾಸನಗಳೇ ದೊರೆಯುತ್ತವೆ. ತಾಮ್ರಶಾಸನಗಳು ಕಡಿಮೆ ಪ್ರಮಾಣದಲ್ಲಿ ದೊರೆತಿವೆ. ತಾಲ್ಲೂಕಿನ ಅತ್ಯಂತ ಪ್ರಾಚೀನ ಶಾಸನವು ತಾಮ್ರಶಾಸನವಾಗಿದೆ. ಶಾಸನಗಳ ಪ್ರಕಾರ

ತಾಲ್ಲೂಕಿನ ಇತಿಹಾಸವನ್ನು ಕ್ರಿ.ಶ.೪೫೦ರ ಹಿಂದಕ್ಕೆ ಕೊಂಡೊಯ್ಯಬಹುದು. ಕರ್ನಾಟಕದ ಆರಂಭ ಶಾಸನಗಳೂ ಸಹ ಅಪಾರ ಪ್ರಮಾಣದ ತಾಮ್ರಶಾಸನಗಳೇ ಆಗಿವೆ. ಇವುಗಳಲ್ಲದೆ ಕಂಚು ಲೋಹಗಳು, ಚಿನ್ನ, ಬೆಳ್ಳಿ, ಹಿತ್ತಾಳೆ, ಮಣ್ಣಿನ ಕುಡಿಕೆ, ಇಟ್ಟಿಗೆ, ಶಂಖ ಮುಂತಾದ ವಸ್ತುಗಳ ಮೇಲೆಯೂ ಶಾಸನಗಳನ್ನು ಬರೆದಿರುವ ನಿದರ್ಶನಗಳನ್ನು ಕರ್ನಾಟಕದಾದ್ಯಂತ ಕಾಣಬಹುದು. ಆದರೆ ನಮಗೆ ಈ ತಾಲ್ಲೂಕಿನಲ್ಲಿ ಶಿಲಾಶಾಸನಗಳ ಮತ್ತು ತಾಮ್ರಶಾಸನಗಳನ್ನು ಹೊರತುಪಡಿಸಿ ಯಾವುದೇ ವಸ್ತುಗಳ ಮೇಲಿನ ಬರವಣಿಗೆಗಳು ಇದೂವರೆಗೂ ದೊರೆತಿಲ್ಲ. ಶಾಸನ ಪ್ರಪಂಚದಲ್ಲಿ ೧೨ನೆಯ ಶತಮಾನದ ವೇಳೆಯಲ್ಲಿ ಅಸಂಖ್ಯಾತ ಶಿಲಾಶಾಸನಗಳನ್ನು ಕಾಣಬಹುದು. ಕ್ಷೇತ್ರಾಧ್ಯಯನ ಸಂದರ್ಭದಲ್ಲಿ ಕಂಡುಬಂದ ಶಾಸನಗಳನ್ನು ಗಮನಿಸಿದರೆ ೧೭ನೆಯ ಶತಮಾನದವರೆಗಿನ ಶಿಲಾಶಾಸನಗಳನ್ನು ಈ ತಾಲ್ಲೂಕಿನಲ್ಲಿ ಕಾಣಬಹುದು. ದಾನಶಾಸನಗಳು, ಪ್ರಶಸ್ತಿಶಾಸನ, ವೀರಗಲ್ಲು, ಮಹಾಸತಿಕಲ್ಲು, ಅಥವಾ ಮಾಸ್ತಿಕಲ್ಲು, ರಾಜಾಜ್ಞೆಗಳು, ಅಥವಾ ಆಡಳಿತ ವ್ಯವಸ್ಥೆಯು ಹೊರಡಿಸಿರುವ ಆಜ್ಞೆಗಳು, ಧಾರ್ಮಿಕ ಆತ್ಮಹತ್ಯೆಯನ್ನು ಮಾಡಿಕೊಂಡ ವೀರರ ಸ್ಮಾರಕಗಳು, ಯಂತ್ರದ ಕಲ್ಲುಗಳು, ಗಡಿಕಲ್ಲುಗಳು, ಇತರೆ ಶಾಸನಗಳು ಎಂಬುದಾಗಿ ವಿಂಗಡಿಸಬಹುದು. ಬಹುತೇಕ ಶಾಸನಗಳು ದಾನಶಾಸನಗಳೇ ಆಗಿರುವುದು ವಿಶೇಷವಾಗಿದೆ.

ಯಾವುದೇ ಒಂದು ಬರಹವನ್ನು ಪ್ರಾರಂಭಿಸುವ ಮುನ್ನ ಶುಭಸೂಚಕ ಚಿಹ್ನೆ ಅಥವಾ ಪದಗಳನ್ನು, ಸಂಕೇತಗಳನ್ನು ಮತ್ತು ಸಂಸ್ಕೃತ ಭೂಯಿಷ್ಠ ಶ್ಲೋಕಗಳನ್ನು ಬರೆಯುವ ಸಂಪ್ರದಾಯ ರೂಢಿಯಲ್ಲಿತ್ತು. ಆ ಒಂದು ಸಂಪ್ರದಾಯ ಶಾಸನ ರಚನೆಯಲ್ಲಿಯೂ ಕಂಡುಬರುತ್ತದೆ. ಕೆಲವು ಶಾಸನಗಳಲ್ಲಿ ಸ್ವಸ್ತಿ, ಸ್ವಸ್ತಿಶ್ರೀ, ಓಂ, ಸಿದ್ಧಂ, ಶ್ರೀ ಎಂಬ ಅಕ್ಷರಗಳಿರುತ್ತವೆ. ಇವುಗಳ ಜೊತೆಗೆ ಶಾಸನವನ್ನು ಯಾವ ವ್ಯಕ್ತಿ ನೆಡಿಸುತ್ತಾನೋ, ಅಥವಾ ಯಾವ ಹೆಸರಿನ ದೇವಾಲಯಕ್ಕೆ ದತ್ತಿ ಬಿಡುತ್ತಾನೋ, ಅಥವಾ ಯಾವ ಸಂಸ್ತೆಗೆ ದತ್ತಿ ಬಿಡುತ್ತಾನೋ, ಆ ದೇವರನ್ನು ಕುರಿತ ಶ್ಲೋಕವಿರುತ್ತದೆ. ಶೈವ ಪಂಥದವರು, ಶಿವನನ್ನು, ವಿಷ್ಣು ಅಥವಾ ವೈಷ್ಣವ ಪಂಥದವರು ವಿಷ್ಣುವನ್ನು, ಜೈನ ಧರ್ಮದವರು ಜಿನನನ್ನು ಸ್ತುತಿಸುವ ಶ್ಲೋಕಗಳಿಂದ ತಮ್ಮ ತಮ್ಮ ಶಾಸನಗಳನ್ನು ಪ್ರಾರಂಭ ಮಾಡುವರು. ಶಿವೋಪಾಸಕರ ಶಾಸನಗಳಲ್ಲಿ

ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ
ತ್ರೈಲೋಕ್ಯ ನಗರಾರಂಬ ಮೂಲಸ್ಥಂಭಾಯ ಶಂಭವೇ||

ಎಂದು ಶಿವನನ್ನು ಸ್ತುತಿಸುವ ಶ್ಲೋಕ ಕಂಡುಬರುತ್ತದೆ.

(ಯಾರ ಶಿರಸ್ಸಿನಲ್ಲಿ ಚಂದ್ರನು ಮನೋಹರವಾದ ಚಾಮರದಂತಿದ್ದಾನೋ, ಯಾರು ಮೂರು ಲೋಕಗಳಿಗೂ ಆಧಾರಸ್ತಂಭದಂತಿದ್ದಾನೋ, ಆ ಶಂಭುವಿಗೆ ನಮಸ್ಕಾರಗಳು)

ಎಂಟು ಮತ್ತು ಒಂಭತ್ತನೆಯ ಶತಮಾನಗಳ ನಂತರದ ಶಾಸನಗಳಲ್ಲಿ ಪ್ರಾರಂಭದಲ್ಲಿ ಸಂಸ್ಕೃತ ಶ್ಲೋಕಗಳು ಅಧಿಕ ಸಂಖ್ಯೆಯಲ್ಲಿ ಕಾಣುತ್ತವೆ. ಈ ಶ್ಲೋಕವು ಕ್ರಿ.ಶ.೭ನೆಯ ಶತಮಾನದಲ್ಲಿದ್ದ ಸಂಸ್ಕೃತ ಕವಿ ಬಾಣಭಟ್ಟ ವಿರಚಿತ ಹರ್ಷಚರಿತದ ಒಂದು ಮಂಗಳ ಶ್ಲೋಕವಾಗಿದೆ. ಈ ಶ್ಲೋಕವು ಒಂಭತ್ತನೆಯ ಶತಮಾನದ ಶಾಸನಗಳಲ್ಲಿ ಕಾಣಿಸಿಕೊಳ್ಳುತ್ತವೆ. ಈ ಶ್ಲೋಕವು ನಮ್ಮ ಶಾಸನ ಕವಿಗಳ ಮನಸ್ಸನ್ನು ಹೆಚ್ಚಾಗಿ ಆಕರ್ಷಿಸಿದೆ ಎನ್ನಬಹುದು. ಏಕೆಂದರೆ ಶಾಸನಗಳಲ್ಲಿ ಮಂಗಳ ಶ್ಲೋಕವಾಗಿ ಈ ಪದ್ಯ ಬರುವಷ್ಟು ಬೇರೆ ಯಾವ ಶ್ಲೋಕವೂ ಬರುವುದಿಲ್ಲ ಇದನ್ನು ಅನುಸರಿಸಿ ಅನೇಕ ಶಿವಪರವಾದ ಶ್ಲೋಕಗಳು ಜನಿಸಿವೆ ಎಂದು ಹೇಳಬಹುದು. ಈ ಶ್ಲೋಕವು ಇರುವ ಶಾಸನಗಳಲ್ಲಿ ತಾಲ್ಲೂಕಿನ ಮಾವಳೀಪುರದ ಶಾಸನ, ಕೊನಘಟ್ಟದ ತಾಮ್ರಶಾಸನ, ದೊಡ್ಡಬಳ್ಳಾಪುರದ ಕೋಟೆ ಶಾಸನಗಳನ್ನು ಪ್ರಮುಖವಾಗಿ ಹೆಸರಿಸಬಹುದು.

ವೈಷ್ಣವ ಶಾಸನಗಳ ಆರಂಭದಲ್ಲಿ

> ಜಯತ್ಯಾವಿಷ್ಕೃತಂ ವಿಷ್ಣೋರ್ವಾರಾಹಂ ಕ್ಷೋಭಿತಾರ್ಣವಂ
> ದಕ್ಷಿಣೋನ್ನತದಂಷ್ಟ್ರಾಗ್ರ ವಿಶ್ರಾಂತ ಭುವನಂ ವಪುಃ ॥

ಎಂಬ ವಿಷ್ಣು ಸ್ತುತಿಯನ್ನು ಗಮನಿಸಬಹುದು.

(ಸಮುದ್ರವನ್ನು ಕ್ಷೋಭೆಗೊಳಿಸಿ ಭೂದೇವಿಯನ್ನು ತನ್ನ ಬಲಕೋರೆ ದಾಡೆಯ ಮೇಲೆ ಕುಳ್ಳಿರಿಸಿ ಕೊಂಡಿರುವ ವರಾಹ ರೂಪಿಯಾದ ವಿಷ್ಣುವಿಗೆ ಜಯವಾಗಿಲಿ)

ಈ ಶ್ಲೋಕವು ಕ್ರಿ.ಶ.೭೦೮ರ ರಾಯಗಡದ ತಾಮ್ರಶಾಸನಗಳಲ್ಲಿ ಕಂಡುಬರುತ್ತದೆ. ಅಲ್ಲದೆ ಕ್ರಿ.ಶ.೯೩೦ರ ಕಳಸದ ಶಾಸನದಲ್ಲಿ ಮೊಟ್ಟ ಮೊದಲಬಾರಿಗೆ ಕನ್ನಡ ಶಾಸನಗಳ ಪರಂಪರೆಯಲ್ಲಿ ಕಂಡುಬರುತ್ತದೆ. ನಮ್ಮ ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ಲಿಂಗಾಪುರ, ರಾಮಪುರ, ದೊಡ್ಡಬೆಳವಂಗಲ, ಅಂತ್ರಹಳ್ಳಿ, ವಾಣಿಗರಹಳ್ಳಿ, ತೂಬಗೆರೆ, ಹಾಡೋನಹಳ್ಳಿ, ಸೋಮೇನಹಳ್ಳಿ, ಕುರುವಿಗೆರೆ, ಶಿವಪುರ, ನಾಗೇನಹಳ್ಳಿ ಇತ್ಯಾದಿ ಶಾಸನಗಳನ್ನು ಹೆಸರಿಸಬಹುದು.

ಜೈನ ಶಾಸನಗಳಾದರೆ ಸಾಮಾನ್ಯವಾಗಿ ಜಿನನ ಸ್ತುತಿಯಿಂದ ಆರಂಭವಾಗುತ್ತದೆ. ಪ್ರಾಚೀನ ಜೈನ ಶಾಸನಗಳಲ್ಲಿ 'ಭದ್ರಮಸ್ತು ಜಿನಶಾಸನಾಯ" ಎಂದಿರುತ್ತದೆ. ಹತ್ತು ಮತ್ತು ಹನ್ನೊಂದನೆಯ ಶತಮಾನದ ಜೈನ ಶಾಸನಗಳಲ್ಲಿ ಹೆಚ್ಚು ಈ ಶ್ಲೋಕವು ಕಾಣಬರುತ್ತದೆ.

> ಶ್ರೀಮತ್ಪರಮಗಂಭೀರ ಸ್ಯಾದ್ವಾದಾಮೋಘ ಲಾಂಛನಂ
> ಜೀಯಾತ್ ತ್ರೈಲೋಕ್ಯನಾಥಸ್ಯ ಶಾಸನಂ ಜಿನಶಾಸನಂ

(ಮೂರು ಲೋಕಗಳಿಗೆ ಒಡೆಯನೂ, ಪರಮಗಂಭೀರನೂ, ಅಮೋಘವಾದ ಸ್ಯಾದ್ವಾದವನ್ನೇ ಲಾಂಛನವಾಗಿ ಉಳ್ಳ ಜಿನನಿಗೆ, ಜಿನ ಶಾಸನಕ್ಕೆ ಜಯವಾಗಲಿ)

ಕ್ರಿ.ಶ.ಏಳನೆಯ ಶತಮಾನದ ಉತ್ತರಾರ್ಧದಲ್ಲಿದ್ದ ಅಕಳಂಕನ 'ಪ್ರಮಾಣ ಸಂಗ್ರಹ'ದ ಮಂಗಳ ಶ್ಲೋಕ, ವೈಷ್ಣವ ಮತ್ತು ಶೈವ ಪರವಾದ ಶ್ಲೋಕಗಳಷ್ಟೇ ಪ್ರಸಿದ್ಧವಾದುದು. ಈ ರೀತಿಯ ಶ್ಲೋಕಗಳು ಹದಿನೇಳನೆಯ ಶತಮಾನದ ಶಾಸನಗಳವರೆಗೂ ಮುಂದುವರೆದುಕೊಂಡು ಬಂದಿದೆ. ಶಾಸನಾರಂಭದ ಶ್ಲೋಕಗಳು ಅಥವಾ ಪ್ರಾರ್ಥನಾ ಪದ್ಯಗಳು ಕನ್ನಡದಲ್ಲಿರುವುದು ಬಹು ಅಪರೂಪ. ದೊಡ್ಡಬಳ್ಳಾಪುರ ತಾಲ್ಲೂಕಿನ ಅತ್ಯಂತ ಪ್ರಾಚೀನ ಶಾಸನಗಳಾದ ಮಲ್ಲೋಹಳ್ಳಿ ತಾಮ್ರಶಾಸನಗಳನ್ನು ಇಲ್ಲಿ ಉದಾಹರಿಸಬಹುದು.

ಪ್ರಾರ್ಥನಾ ಪದ್ಯವಾದ ನಂತರ ಶಾಸನವು ಯಾವ ಅರಸನ ಆಳ್ವಿಕೆಗೆ ಒಳಪಟ್ಟಿರುತ್ತದೆಯೋ ಆ ಅರಸನ ಪ್ರಸ್ತಾಪ ಬರುತ್ತದೆ. ರಾಜನ ವಂಶಾವಳಿಯ ಕುರಿತಾದ ಮಾತುಗಳು ಬರುತ್ತವೆ. ಹಲವು ಕಡೆ ರಾಜವಂಶದ ಸುಧೀರ್ಘವಾದ ವರ್ಣನೆಯೂ ಬರುತ್ತದೆ. ಮೂಲ ಪುರುಷನಿಂದ ಪ್ರಾರಂಭಿಸಿ ಆ ವಂಶದ ಕೊನೆಯ ರಾಜನವರೆಗೂ ವರ್ಣಿಸುತ್ತವೆ. ಉದಾ : ಗಂಗರ ತಾಮ್ರ ಶಾಸನವಾದ ಮಲ್ಲೋಹಳ್ಳಿ ತಾಮ್ರಶಾಸನವು ದೀರ್ಘವಾಗಿ ಗಂಗರ ವಂಶಾವಳಿಯನ್ನು ಹೆಸರಿಸುತ್ತದೆ. ಅಲ್ಲದೆ, ರಾಜರ ಬಿರುದುಗಳನ್ನು, ಅವರ ವಂಶದ ಸಾಹಸ ಪರಾಕ್ರಮಗಳನ್ನು, ಸದ್ಗುಣಗಳನ್ನು ಚಿತ್ರಿಸಿರುತ್ತದೆ. ಈ ಒಂದು ಭಾಗ ರಾಜಕೀಯ ಇತಿಹಾಸ ರಚನೆಗೆ ಅಮೂಲ್ಯ ಸಾಮಗ್ರಿಯನ್ನು ಒದಗಿಸುತ್ತದೆ. ಶಾಸನಗಳಲ್ಲಿ ಬರುವ ಈ ಭಾಗವನ್ನು ರಾಜಾವಳಿ ಎಂದು ಕರೆಯುತ್ತಾರೆ. ಈ ರಾಜಾವಳಿಗಳು ಅದನ್ನು ಅಧಿಕಾರಯುತವಾಗಿ ನಿರೂಪಿಸಬಲ್ಲ ಕವಿಗಳಿಂದ ನಿರ್ಮಾಣವಾಗುತ್ತಿದ್ದವು. ಅದಕ್ಕೆ ಸರ್ಕಾರದ ಸಮ್ಮತಿ ದೊರೆತ ಮೇಲೆ ಶಾಸನ ಕರ್ತೃಗಳು ಅದನ್ನು ಉಪಯೋಗಿಸಿಕೊಳ್ಳುತ್ತಿದ್ದರು.

ರಾಜನ ಪ್ರಶಸ್ತಿ, ರಾಜವಂಶ, ರಾಜನ ಪ್ರಸ್ತಾಪವಾದ ಮೇಲೆ ಶಾಸನವನ್ನು ತಯಾರು ಮಾಡಿದ ಅಥವಾ ದಾನವನ್ನು (ಕೊಟ್ಟ)ನೀಡಿದ ಕಾಲ ತೇದಿಯ ವಿವರಗಳನ್ನು ಶಾಸನದ ಪಾಠವು ಒಳಗೊಂಡಿರುತ್ತದೆ. ಇತಿಹಾಸ ರಚನೆಯ ಸಂದರ್ಭದಲ್ಲಿ ಇತಿಹಾಸಕಾರನಿಗೆ ಈ ಭಾಗ ಮುಖ್ಯ ವಾಗಿರುತ್ತದೆ. ಶಾಸನಗಳಲ್ಲಿ ಪಕ್ಷ, ತಿಥಿ, ನಕ್ಷತ್ರ, ಸಂವತ್ಸರ, ಶಕ ಕಾಲವು ದಾನ ಕೊಡುವ ರಾಜನ ರಾಜ್ಯಭಾರದ ವರ್ಷಗಳನ್ನು ಒಳಗೊಂಡಿರುತ್ತದೆ. ಶಾಸನಗಳಲ್ಲಿ ಉಕ್ತವಾಗಿರುವ ಕಾಲಗಣನೆಯ ಪದ್ಧತಿಯನ್ನು ಶಾಸನಗಳಲ್ಲಿ ಕಾಲದ ನಿರೂಪಣೆ ಎಂಬ ಪ್ರತ್ಯೇಕ ಭಾಗದಲ್ಲಿ ವಿವರವಾಗಿ ಚರ್ಚಿಸಲಾಗಿದೆ. ಕಾಲಗಣನೆಯ ನಂತರ ದಾನ ಕೊಟ್ಟವನ ವಿವರಗಳು, ದಾನವನ್ನು ಸ್ವೀಕರಿಸುವ ವ್ಯಕ್ತಿಯ, ಯಾವುದಾದರೂ ಸಂಸ್ಥೆಗೆ ದಾನ ನೀಡಿದ್ದರೆ, ಸಂಸ್ಥೆಯ ಪ್ರಸ್ತಾಪ ಬರುತ್ತದೆ.

ಒಂದು ಪ್ರದೇಶದ ಸಾಮಾಜಿಕ, ಆರ್ಥಿಕ ಇತಿಹಾಸವನ್ನು ಅಧ್ಯಯನ ಮಾಡುವವರಿಗೆ ಈ ದಾನ ವಿವರದ ಭಾಗವು ಅತ್ಯಮೂಲ್ಯವಾದ ಮಾಹಿತಿಯನ್ನು ಒದಗಿಸುತ್ತದೆ. (ಶಾಸನಗಳಲ್ಲಿ ಉಕ್ತವಾಗಿರುವ ದಾನದ ವಿವರಣೆ ಬಗ್ಗೆ 'ದಾನಶಾಸನಗಳು' ಎಂಬ ಪ್ರತ್ಯೇಕ ಅಧ್ಯಾಯದಲ್ಲಿ ಸವಿವರವಾಗಿ ಚರ್ಚಿಸಲಾಗುವುದು.)

ದಾನದ ವಿವರಣೆಯ ನಂತರ ತಾನು ನೀಡಿದ ದಾನವು ಮುಂದಿನ ತಲೆಮಾರಿನವರು ಸೂರ್ಯಚಂದ್ರರು ಇರುವವರೆಗೂ ಕಾಪಾಡಿಕೊಂಡು ಹೋಗಬೇಕೆಂಬ ದಾನಿಯ ವಿನಯಪೂರ್ವಕ ಆಗ್ರಹ ಇರುತ್ತದೆ. ಇದು ದಾನವನ್ನು ಕಾಪಾಡಿದವರಿಗೆ ದೊರೆಯುವ ಶ್ರೇಯಸ್ಸನ್ನು ಕುರಿತುದಾಗಿರುತ್ತದೆ. ದಾನವನ್ನು ಅಪಹರಿಸಿದವರಿಗೆ ಪ್ರಾಪ್ತವಾಗುವ ಪಾಪಗಳ ಬಗ್ಗೆ ಪ್ರಸ್ತಾಪವಿರುತ್ತದೆ. ಇವುಗಳು ಕೆಲವು ಶಾಸನಗಳಲ್ಲಿ ಬಿಡಿಯಾಗಿದ್ದರೆ, ಕೆಲವು ಶಾಸನಗಳಲ್ಲಿ ಶ್ಲೋಕಗಳೂ ಉಕ್ತವಾಗಿರುತ್ತವೆ. ಇದನ್ನು 'ದಾನಚ್ಛೇದೋಪವರ್ಣನ' ಎಂಬುದಾಗಿ ಕರೆಯುತ್ತಾರೆ. ಅಂದರೆ 'ಫಲಶ್ರುತಿ' ಎಂದು ಹೇಳಬಹುದು. ಕೆಲವು ಶಾಸನಗಳಲ್ಲಿ ದೇಶೀಯ ಭಾಷೆಯಲ್ಲಿ ಬೈಗುಳಗಳನ್ನೇ ಪ್ರಯೋಗಿಸಿರುವುದುಂಟು. ಈ ಭಾಗವನ್ನು 'ಶಾಪಾಶಯಗಳು' ಎಂಬುದಾಗಿ ಕರೆಯುತ್ತಾರೆ. ಈ ಶಾಸನಗಳಲ್ಲಿ ಉಕ್ತವಾಗಿರುವ ಶಾಪಾಶಯಗಳ ಬಗ್ಗೆ ಮುಂದಿನ ಅಧ್ಯಾಯದಲ್ಲಿ ಪ್ರತ್ಯೇಕವಾಗಿ ಚರ್ಚಿಸಲಾಗುವುದು, ಶಾಸನದ ಶಾಪಾಶಯ ಭಾಗವು ಮುಗಿದರೆ ಶಾಸನದ ಮುಖ್ಯವಾದ ಭಾಗವು ಮುಗಿದಂತೆಯೇ. ಆ ನಂತರ ಆ ಶಾಸನವನ್ನು ತಯಾರು ಮಾಡಿದವನ, ಶಾಸನವನ್ನು ಬರೆದವನ, ಕೆತ್ತಿದವನ ಹೆಸರುಗಳು ಬರುತ್ತವೆ. ಈ ಹೆಸರುಗಳು ಎಲ್ಲಾ ಶಾಸನಗಳಲ್ಲಿಯೂ ಉಲ್ಲೇಖಗೊಂಡಿರುತ್ತದೆ ಎಂದು ಹೇಳಲಾಗದು. ಶಾಸನ ಪಾಠವನ್ನು ಸಿದ್ಧಪಡಿಸಿದವರ ಬಗ್ಗೆ ಶಾಸನ ಕವಿಗಳು, ಲಿಪಿಕಾರ ಎಂಬ ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಲಾಗುವುದು.

ಶಾಸನಗಳ ಕೊನೆಯಲ್ಲಿ ಕೆಲವೊಮ್ಮೆ ಮಾತ್ರ ದತ್ತಿಯನ್ನು ನೀಡಿದವರ, ದತ್ತಿಯನ್ನು ನೀಡುವ ವೇಳೆಯಲ್ಲಿ ಸಾಕ್ಷಿಗಳಾಗಿದ್ದವರ 'ವೊಪ್ಪ' ಇರುತ್ತದೆ. ಆದರೆ ಇದು ಅವರ ಹಸ್ತಾಕ್ಷರವೇ ಆಗಿರುತ್ತದೆ ಎಂದು ಹೇಳಲು ಸಾಧ್ಯವಿಲ್ಲ. ಅಂತಹ ವ್ಯಕ್ತಿಯ ಒಪ್ಪಿತವಿದೆ ಎಂಬ ಅರ್ಥ ಬರುವಂತೆ ಶಿಲ್ಪಿಗಳೇ ಬರೆದಿರುವ ಸಾಧ್ಯತೆಗಳಿರುತ್ತವೆ. ಎಲ್ಲಾ ಶಾಸನಗಳು ಮೇಲೆ ವಿವರಿಸಿದ ಪ್ರಕಾರದಲ್ಲಿಯೇ ಇವೆ ಎಂದಾಗಲಿ, ಅವುಗಳು ಹೀಗೇ ಇರಬೇಕು ಎಂಬ ಯಾವ ನಿಯಮವೂ ಇಲ್ಲ. ಕೆಲವು ಶಾಸನಗಳಲ್ಲಿ ಕೆಲವೊಂದು ಭಾಗಗಳು ಮೊಟಕಾಗಿಯೋ, ಇಲ್ಲವೇ ದೀರ್ಘವಾಗಿಯೋ ಇರುವುವು. ಒಂದು ಶಾಸನ ಇದೇ ರೀತಿ ಇರಬೇಕು ಎಂಬ ಅಂಶ ಶಾಸನ ಲಿಪಿಕಾರರಲ್ಲಿ ಬಹುಪಾಲು ಕವಿ ಮತ್ತು ಲಿಪಿಕಾರರ ಉದ್ದೇಶವಾಗಿತ್ತು ಎಂಬುದಾಗಿ ಊಹಿಸಬಹುದು.



### ೩.೩. ದಾನ ಶಾಸನಗಳು

ನಮ್ಮ ಅಧ್ಯಯನದ ವ್ಯಾಪ್ತಿಯಲ್ಲಿ ದಾನಶಾಸನಗಳ ಸಂಖ್ಯೆಯೇ ಅಧಿಕ. ಇಲ್ಲಿ ದಾನ ಶಾಸನಗಳು ದೇವಾಲಯ ನಿರ್ಮಾಣ, ನಿರ್ವಹಣೆ, ಕೆರೆ ನಿರ್ಮಾಣ, ನಿರ್ವಹಣೆ, ಗೌಡಿಕೆ ದಾನಗಳು, ವ್ಯಕ್ತಿದಾನಗಳು ಮುಂತಾಗಿ ಹಲವು ರೀತಿಯ ದಾನಗಳ ವಿಷಯವನ್ನು ಒಳಗೊಂಡಿವೆ. ಅವುಗಳನ್ನು ಧಾರ್ಮಿಕವಾಗಿ ವಿಂಗಡಿಸಿ ಈ ಕೆಳಗಿಣಂತೆ ಚರ್ಚಿಸಲಾಗಿದೆ.

### ೩.೩.೧. ಶೈವದಾನ ಶಾಸನಗಳು

ಕನ್ನಡ ಶಾಸನಗಳಲ್ಲಿ ಬಹುತೇಕವಾಗಿ ಒಂದಲ್ಲ ಒಂದು ಬಗೆಯ ದಾನಶಾಸನಗಳ ಸಂಖ್ಯೆಯೇ ಅತ್ಯಧಿಕ. ಇವುಗಳಲ್ಲಿ ನೂರಕ್ಕೆ ಶೇಕಡ ೯೫ರಷ್ಟು ದಾನಶಾಸನಗಳು ಎನ್ನಬಹುದು. ಇವು ಕನ್ನಡ ನಾಡಿನ ಧಾರ್ಮಿಕ ಎಂಬ ಸಂಸ್ಕೃತಿಯ ಒಂದು ಪ್ರಧಾನ ಅಂಶವನ್ನು ಹೇಳುತ್ತದೆ. ಧರ್ಮಕ್ಕೆ ಪ್ರಥಮ ಪ್ರಾಶಸ್ತ್ಯವನ್ನಿತ್ತು ಧಾರ್ಮಿಕ ಸಂಸ್ಕೃತಿಯ ಸ್ವರೂಪ ಇಲ್ಲಿನ ಶಾಸನಗಳಲ್ಲಿ ಕಾಣಬಹುದು. ಜನರ ಜೀವನದ ಮೌಲ್ಯಗಳಲ್ಲಿ ಒಂದಾದ ಧರ್ಮ ಹಾಸು ಹೊಕ್ಕಾಗಿದೆ. ಶಾಸನಗಳ ಉಗಮಕ್ಕೆ ಈ ಮನೋಧರ್ಮವೇ ಪ್ರಮುಖ ಪ್ರೇರಕ ಶಕ್ತಿಯೆಂದು ಹೇಳಬಹುದು. ಒಬ್ಬ ವ್ಯಕ್ತಿ ಯಾವುದಾದರೂ ಒಂದು ಸಾಧಕವಾದ ಉದ್ದೇಶದಿಂದ ವ್ಯಕ್ತಿಗಾಗಲಿ, ಒಂದು ಸಂಸ್ಥೆಗಾಗಲಿ, ನೀಡುವ ಆರ್ಥಿಕ ಮೂಲವಾದ ನೆರವನ್ನು ದಾಖಲು ಮಾಡುವುದು ಈ ದಾನಶಾಸನಗಳ ಪ್ರಮುಖ ಉದ್ದೇಶ. ಅಂದರೆ ಈ ದಾನಗಳು ದೇವಾಲಯಗಳನ್ನು ನಿರ್ಮಿಸುವುದು ಈ ದೇವಾಲಯಗಳ ವ್ಯವಸ್ಥೆಗಾಗಿ, ಮಠಗಳಿಗಾಗಿ, ಮಹಾವ್ಯಕ್ತಿಗಳಿಗಾಗಿ, ಇಲ್ಲವೆ ಅನ್ನಸತ್ರಾದಿ ಧರ್ಮ ಕಾರ್ಯಗಳಿಗಾಗಿ, ವಿದ್ಯಾಭ್ಯಾಸಕ್ಕಾಗಿ ದಾನದತ್ತಿಗಳನ್ನು ವಿದ್ಯಾದಾನ ಮಾಡುವ ಅಧ್ಯಾಪಕ, ಹಾಗು ವಿದ್ಯಾರ್ಥಿ ವೃಂದಕ್ಕೆ, ದೇವಾಲಯಗಳಲ್ಲಿ ಪೂಜೆ ಮಾಡುವ ಪೂಜಾರಿಗಳಿಗೋ, ನರ್ತನ ಮಾಡುವ ನರ್ತಕಿಯರಿಗೋ, ವಾದ್ಯಗಾರರಿಗೆ ಸಾಂಸ್ಕೃತಿಕ ವಿಷಯಗಳಿಗೆ, ಅರವಟ್ಟಿಗೆ, ಕೆರೆ, ಭಾವಿ, ಇನ್ನು ಮುಂತಾದ ಜನೋಪಯೋಗಿ ಕಾರ್ಯಗಳಿಗೆ ಮತ್ತು ವ್ಯಕ್ತಿಯೊಬ್ಬನ ಸೇವೆ ಮತ್ತು ಪರಾಕ್ರಮಗಳನ್ನು ಮನ್ನಿಸಿ ನೀಡಿದ ದಾನವಾಗಿರುತ್ತವೆ. ಈ ರೀತಿ ದಾನವಾಗಿ ನೀಡುವ ಆರ್ಥಿಕ ಮೂಲವು ಭೂಮಿಯಾಗಿರಬಹುದು ನಗದುರೂಪದ ಹಣವಾಗಿರಬಹುದು. ಅಥವಾ ಅಗತ್ಯ ವಸ್ತುಗಳ ಪೂರೈಕೆ ಇರಬಹುದು. ಇವುಗಳನ್ನು ಅಂದಿನ ಜನತೆ. ಲೌಕಿಕ ಸಂಪತ್ತಿನ ಗಳಿಕೆಯ ಸಾರ್ಥಕತೆ ಎಂದು ನಂಬಿದ್ದವರು. ಈ ಮೌಲ್ಯವು ರಾಜಮಹಾರಾಜರುಗಳಿಂದ ಹಿಡಿದು ಜನಸಾಮಾನ್ಯರವರೆಗೂ, ಧಾರ್ಮಿಕ ಭಾವನೆ ಜೀವನದ ಸಹಜ ಗುಣವಾಗಿ ಹರಡಿತ್ತು. ಇದರ ನಿರ್ಣಾಯಕ ಫಲವೇ ಊರೂರಿನಲ್ಲಿಯೂ ದೇವಾಲಯಗಳು ತಲೆ ಎತ್ತಿದವು. ದಾನ ಧರ್ಮಗಳು ಜೀವನದ ತಳಹದಿಯಾದವು. ಇವುಗಳನ್ನು ದಾನಶಾಸನಗಳಲ್ಲಿ ನಾವು ಸ್ಪಷ್ಟವಾಗಿ ಕಾಣಬಹುದು. ಇಲ್ಲಿನ ಬಹುತೇಕ ಶಾಸನಗಳು ಆರ್ಥಿಕ ಮೂಲವಾದ ಭೂಮಿಯನ್ನು ದಾನವಾಗಿ ನೀಡಿರುವುದನ್ನು ಉಲ್ಲೇಖಿಸುತ್ತವೆ.

ಶಾಸನಗಳಲ್ಲಿ ದತ್ತಿಯ ಕಾಲದ ಉಲ್ಲೇಖದ ಬಳಿಕ ದತ್ತಿಯ ವಿವರಗಳು ಬರುತ್ತವೆ. ಇವು ನೇರವಾದ ನಿರೂಪಣೆಯನ್ನು ಉಳ್ಳವಾಗಿವೆ. ಆದರೆ ಕೆಲವೊಂದು ಶಾಸನಗಳಲ್ಲಿ ಒಂದು ವ್ಯವಸ್ಥೆ ಕಂಡುಬರುವುದಿಲ್ಲ. ಹತ್ತು-ಹನ್ನೊಂದನೇ ಶತಮಾನಗಳ ನಂತರದ ದಾನಶಾಸನಗಳು ಕ್ರಮಬದ್ಧದಲ್ಲಿದ್ದು, ನಿರ್ದಿಷ್ಟವಾದ ಸ್ವರೂಪ ಪಡೆದಿರುವುದನ್ನು ಗಮನಿಸಬಹುದಾಗಿದೆ. ದಾನದ ವಿಷಯ ನಿರೂಪಣೆಯಲ್ಲಿ,

ದಾನವನ್ನು ಕೊಡುವ ವಸ್ತುಗಳಲ್ಲಿ ಮತ್ತು ಉದ್ದೇಶಗಳಲ್ಲಿ ವ್ಯತ್ಯಾಸ ಮತ್ತು ವೈವಿಧ್ಯವಿದ್ದರೂ, ಶಾಸನಗಳಲ್ಲಿನ ಪ್ರಾರಂಭದ ಬೆಳವಣಿಗೆ ಮತ್ತು ಮುಕ್ತಾಯಗಳಲ್ಲಿ ಒಂದು ಸುವ್ಯವಸ್ಥಿತ ಕ್ರಮ ಗೋಚರವಾಗುತ್ತದೆ. ಅಂದಿನ ಜನ ಜೀವನದ ಅನುಭವ, ಅವರ ಮನೋಧರ್ಮ, ಮತ್ತು ಧಾರ್ಮಿಕ ಭಾವನೆಯ ವಿಕಾಸದ ಚಿತ್ರವನ್ನು ಈ ಶಾಸನಗಳ ಬೆಳವಣಿಗೆಯಲ್ಲಿ ಕಂಡುಕೊಳ್ಳಬಹುದು.[೮]

ಪ್ರಾಚೀನ ಕಾಲದಲ್ಲಿ ದಾನವನ್ನು ನೀಡುವುದು ಮತ್ತು ದಾನವನ್ನು ನೀಡುವುದರ ಬಗ್ಗೆ ಶಾಸನಗಳನ್ನು ಹಾಕಿಸುವ ಪ್ರಮೇಯವಾದರೂ ಏನು? ಎಂಬುದರ ಬಗ್ಗೆ ಅವಲೋಕನ ಮಾಡಿದಾಗ ತಾನು ಕೊಟ್ಟ ದತ್ತಿಯು ಶಾಶ್ವತವಾಗಿ ಸದುಪಯೋಗವಾಗಿ ಮುಂದುವರಿಯಬೇಕೆಂಬ ಉದ್ದೇಶದಿಂದ ಈ ರೀತಿಯ ಶಾಸನಗಳನ್ನು ಬರೆಯಿಸತೊಡಗಿದರು. ದಾನವನ್ನು ನೀಡಿದ ವ್ಯಕ್ತಿಯ ಮನೆತನ, ಆತನ ಸಂಸಾರದ ವಿವರಗಳು, ದಾನವನ್ನು ಸ್ವೀಕರಿಸಿದ ವ್ಯಕ್ತಿಯ ವಿದ್ಯೆ, ಆತನ ಶೌರ್ಯ, ಧರ್ಮ ಇತ್ಯಾದಿ ವಿಷಯಗಳು ಬರುತ್ತವೆ. ಭೂಮಿಯನ್ನು ದಾನವಾಗಿ ಕೊಟ್ಟಿದ್ದರೆ ಅದರ ಎಷ್ಟು ಪ್ರಮಾಣ, ಗುಣ, ಅದರ ಮೇರೆಗಳು, ಆ ದಾನವನ್ನು ಕಾಪಾಡಿಕೊಂಡು ಬರಬೇಕಾದ ಸಾಕ್ಷಿಗಳು ಈ ಎಲ್ಲಾ ವಿವರಗಳು ಬರುತ್ತವೆ. ದಾನದ ವಿಷಯವು ವ್ಯಾಪಾರದ ವಸ್ತುಗಳಿಗೆ ಸಂಬಂಧಪಟ್ಟಿದ್ದರೆ ಆ ಕಾಲದ ಆರ್ಥಿಕ ಪರಿಸ್ಥಿತಿ, ಅಂದಿನ ವ್ಯಾಪಾರ ಸ್ಥಿತಿಗತಿಗಳು, ವ್ಯಾಪಾರಗಳು, ಸುಂಕಗಳು, ಸುಂಕದ ವಸ್ತುಗಳು, ಸುಂಕದ ಅಧಿಕಾರಿಗಳು ಇತ್ಯಾದಿ ವಿವರಗಳು ಬರುತ್ತವೆ. ಪ್ರಾಚೀನ ಕರ್ನಾಟಕದ ಸಾಮಾಜಿಕ ಜೀವನವನ್ನು, ಸಂಸ್ಕೃತಿಯನ್ನು ಅರಿಯಲು ವಿಶೇಷವಾಗಿ ಸಹಾಯ ಮಾಡುವ ಶಾಸನಗಳ ಭಾಗ ಇದಾಗಿದೆ. ಅಂದಿನ ಕಾಲದ ಹಳ್ಳಿಗಳು, ನಗರಗಳು, ಅಗ್ರಹಾರಗಳು, ಅವುಗಳ ಆಡಳಿತ ವಿಧಾನ, ಯುದ್ಧ, ವೀರಮನೋಭಾವ, ಆ ಕಾಲದ ಸಾಮಾಜಿಕ ಮೌಲ್ಯಗಳು ಇತ್ಯಾದಿಗಳ ಪರಿಚಯವಾಗುವುದು ದತ್ತಿಯ ವಿವರಗಳ ಭಾಗದಲ್ಲಿ, ದತ್ತಿಯ ಉದ್ದೇಶವನ್ನು, ದತ್ತಿಯನ್ನು ಪಡೆದವನ ವಿವರಗಳನ್ನು, ನೀಡಿದ ದತ್ತಿಯ ಸಂಪೂರ್ಣ ವಿವರಣೆಯನ್ನು ನೀಡಿ ತನ್ನ ಉದ್ದೇಶವನ್ನು ಸಾರ್ಥಕಪಡಿಸಬೇಕೆಂದು ಶಾಸನಗಳಲ್ಲಿ ದಾನಿಯು ನಿವೇದನೆ ಮಾಡಿರುವುದನ್ನೂ ಗಮನಿಸಬಹುದು. ಈ ದಾನಶಾಸನಗಳು ಶೀಲಾಶಾಸನಗಳಾಗಿರಬಹುದು ಅಥವಾ ತಾಮ್ರ ಶಾಸನಗಳಾಗಿರಬಹುದು.

ಶಾಸನಗಳ ಶಿಲಾ ಫಲಕಗಳನ್ನು ನೋಡಿದಾಗ, ಅವುಗಳನ್ನು ಯಾವ ಪ್ರಕಾರದ ಶಾಸನ ಭಾಗಕ್ಕೆ ಸೇರಿಸಬೇಕು, ಯಾವ ಧರ್ಮ, ಪಂಥಕ್ಕೆ ಸೇರುತ್ತದೆ ಎಂಬುದನ್ನು ಅರಿಯಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿಯೇ ಶಾಸನಗಳನ್ನು ವಿಂಗಡಿಸಿ ಅಧ್ಯಯನ ಮಾಡಲಾಗುವುದು. ಪ್ರಾಚೀನ ಶಿಲಾಶಾಸನಗಳ ಮೇಲೆ ನಿರ್ದಿಷ್ಟವಾದ ಯಾವ ಶಿಲ್ಪಗಳೂ ಕಂಡುಬರುವುದಿಲ್ಲ. ಆದರೆ ನಂತರದ ಶಾಸನಗಳ ಮೇಲೆ, ಶಿವ, ನಂದಿ, ಗರುಡ, ವಿಷ್ಣು, ಮೊದಲಾದ ಶಿಲ್ಪಗಳು ಕಂಡುಬರುತ್ತವೆ. ಶೈವ, ವೈಷ್ಣವ ಧರ್ಮಗಳು ಪ್ರಬಲವಾಗಿ ಅದರ ಪ್ರಭಾವ ಶಾಸನಗಳ ಮೇಲೂ ತೋರುತ್ತದೆ. ಶಾಸನ

ಲಿಪಿಕಲ್ಲಿನ ಮೇಲಿರುವ ಶಿಲ್ಪಗಳನ್ನು ಕಂಡೊಡನೆ ಇದು ಶೈವಶಾಸನವೋ, ವೈಷ್ಣವ ಶಾಸನವೋ ಜೈನ ಶಾಸನವೋ ಎಂಬುದನ್ನು ಹೇಳಬಹುದು. ಶಾಸನಗಳಲ್ಲಿ ಪ್ರಾರಂಭದ ಶ್ಲೋಕಗಳನ್ನು ಬರುತ್ತಿದ್ದಂತೆಯೇ ಈ ಅಂಶ ಇನ್ನೂ ಸ್ಪಷ್ಟವಾಗಿ ಅರ್ಥವಾಗುತ್ತದೆ. ಶೈವರು ಶಿವನನ್ನು, ವೈಷ್ಣವರು ವಿಷ್ಣುವನ್ನು, ಜೈನರು ಜಿನನನ್ನು ಕುರಿತು ಸ್ತುತಿ ರೂಪವಾದ ಸಂಸ್ಕೃತ ಶ್ಲೋಕಗಳಿಂದ ಶಾಸನಗಳು ಪ್ರಾರಂಭವಾಗುತ್ತವೆ. ಎಲ್ಲಾ ಶಾಸನಗಳೂ ಶ್ಲೋಕಗಳಿಂದಲೇ ಪ್ರಾರಂಭವಾಗುತ್ತವೆ ಎನ್ನಲಾಗದು. ಆದರೆ ಇಲ್ಲಿನ ಕೆಲವು ಶಾಸನಗಳಲ್ಲಿ ಮಾತ್ರ ಶ್ಲೋಕಗಳಿಂದ ಕೂಡಿ ಶಾಸನಗಳು ಪ್ರಾರಂಭವಾಗುತ್ತವೆ. ಶೈವ ಶಾಸನಗಳಲ್ಲೆಲ್ಲಾ ಸಾಮಾನ್ಯವಾಗಿ ಕಾಣುವ ಶ್ಲೋಕವಿದು.

ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ |
ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ ||

ಚಾಮರದಂತಹ ಬಾಲಚಂದ್ರನಿಂದ ಚುಂಬಿತವಾದ ಉತ್ತುಂಗ ಜಟಾಜೂಟವನ್ನುಳ್ಳವನೂ ಮೂರು ಲೋಕಗಳ ರಚನೆಗೆ ಮೂಲಸ್ತಂಭ ರೂಪನೂ ಆದ ಶಂಭುವಿಗೆ ನಮಸ್ಕಾರ" ಎಂಬ ಅರ್ಥವುಳ್ಳ ಮಂಗಳ ಶ್ಲೋಕದಿಂದ ಆರಂಭವಾಗುವ ಶಾಸನಗಳನ್ನು ಇಲ್ಲಿ ಅಧ್ಯಯನ ಮಾಡಲಾಗುವುದು. ಈ ರೀತಿಯ ಹದಿನಾಲ್ಕು ದಾನಶಾಸನಗಳು ಈ ತಾಲ್ಲೂಕಿನಲ್ಲಿ ಕಂಡುಬರುತ್ತವೆ. ಆದರೆ ವೈಷ್ಣವದಾನ ಶಾಸನಗಳು ಅಧಿಕವಾಗಿ ಕಂಡುಬರುವವು. ಪ್ರಾರ್ಥನಾ ಶ್ಲೋಕದಿಂದ ಆರಂಭವಾಗುವ ಈ ಶಾಸನದ ಮೇಲು ಭಾಗದಲ್ಲಿ ಫಾರ್ಶಿ ಅಕ್ಷರದ ಎರಡು ಸಾಲಿನ ಶಾಸನವಿದೆ. ಕ್ರಿ.ಶ.೧೨೯೧ರ ಕಾಲಘಟ್ಟಕ್ಕೆ ಸೇರಿರುವ ಈ ಶಾಸನವು ಹೊಯ್ಸಳ ಚಕ್ರವರ್ತಿ, ಮೂರನೇ ನರಸಿಂಹ ಅರಸನನ್ನು ಕುರಿತಾದುದು. ಈ ದೊರೆಯನ್ನು ಪೃಥ್ವೀವಲ್ಲಭ, ಮಹಾರಾಜಾಧಿರಾಜ, ಪರಮೇಶ್ವರ, ದ್ವಾರಾವತೀ ಪುರವರಾಧೀಶ್ವರ, ಯಾದವ ಕುಲಕ್ಕೆ ಸೇರಿದ್ದ ಸರ್ಬ್ಬಜ್ಞ ಚೂಡಾಮಣಿ ಮಲಪರೊಳುಗಂಡ, ಕದನ ಪ್ರಚಂಡ, ಏಕಾಂಗವೀರ, ಪ್ರತಾಪ ಚಕ್ರವರ್ತಿ ಎಂಬುದಾಗಿ ವರ್ಣಿಸುತ್ತದೆ. ದೋರಸಮುದ್ರದಲ್ಲಿ ರಾಜ್ಯವಾಳುತ್ತಿದ್ದ ಕಾಲದಲ್ಲಿ, ಎಲಹಂಕ ನಾಡ ಪ್ರಭುಗಳಾದ ಏಚಿದೇವರಸನು ಸಮಕಾಲೀನರು ಈ ವಿಶಾಲ ಸಾಮ್ರಾಜ್ಯದಲ್ಲಿ ಜಂಬೂದ್ವೀಪದ ಅಯ್ಯಾವಳೆಯಿಂದ ಬಂದ ವರ್ತಕರು ತಾಲ್ಲೂಕಿನ ರಾಜಗಟ್ಟ ಗ್ರಾಮದಲ್ಲಿ ನಡೆಯುತ್ತಿದ್ದ (ವ್ಯಾಪಾರ ಕೇಂದ್ರ) ಸಂತೆಯಲ್ಲಿ ವ್ಯಾಪಾರ ವಹಿವಾಟು ಮಾಡುತ್ತಿದ್ದರು.

ವ್ಯಾಪಾರದಲ್ಲಿ ಬಂದ ವಸ್ತುಗಳ ಮೇಲೆ ವಿಧಿಸುತ್ತಿದ್ದ ತೆರಿಗೆ, ಸುಂಕಗಳಿಂದ ಬಂದ ಲಾಭವನ್ನು "ಶ್ರೀ ಗವರೇಶ್ವರ ದೇವರ ಶ್ರೀ ಕಾರ್ಯಕ್ಕಂ ಅಂಗರಂಗಭೋಗಕಂ ಪಂಚಾಮ್ರಿತ ಅಮ್ರಿತ ಪಡಿಗಂ ಶೋಡಸೋಪಚಾರಕ್ಕಂ ಖಂಡಸ್ಫುಟಿ(ತ) ಜೀರ್ಣ್ನೋರ್ಧಾರಕವೆಂದು ಚಂದ್ರಾರ್ಕತಾರಂಬರಂ ಕೊಟ್ಟು ನಡೆಸುವ ದತ್ತಿ..." ಎಂಬ ಮಾತು.[೯] ದೇವಾಲಯಗಳ ಜೀರ್ಣೋದ್ಧಾರಕ್ಕೆ ಅಂಗರಂಗ ಭೋಗಗಳಿಗೆ

ಪೂಜಾಕಾರ್ಯಕ್ಕೆ ನೀಡಲಾಗಿದೆ ಎಂದು ಈ ಶಾಸನ ಹೇಳುತ್ತದೆ. ಇಲ್ಲಿನ ಗವರೇಶ್ವರ ದೇವರ ದೇವಾಲಯ ಈಗಿನ ರಾಜಘಟ್ಟ ಗ್ರಾಮದ ಈಶ್ವರ ಅಥವಾ ಸೋಮೇಶ್ವರ ದೇವಾಲಯವಿರಬಹುದು ಎಂದು ಹೇಳಬಹುದು.

ಬಳ್ಳಿಗಾವೆಯ ಒಂದು ಶಾಸನದಲ್ಲಿ ವಡ್ಡವ್ಯವಹಾರಿ ಸೋವಿಸೆಟ್ಟಿ ಎಂಬುವನು ಸೋಮೇಶ್ವರ ದೇವರನ್ನು ಪ್ರತಿಷ್ಠಾಪಿಸಿ ಅದಕ್ಕೆ ಬೇಕಾದಷ್ಟು ಭೂಮಿ, ತೋಟ, ಅಂಗಡಿಗಳನ್ನು ದತ್ತಿಯಾಗಿ ಬಿಡುತ್ತಾನೆ. ಅದು ಕಾಲಕ್ರಮೇಣ ಜೀರ್ಣವಾಗುತ್ತದೆ. ಅದು ಜೀರ್ಣವಾದಾಗ ಅದರ ಜೀರ್ಣೋದ್ಧಾರದ ವಿಷಯದಲ್ಲಿ ನಗರಕ್ಕೆ ನಗರವೇ ತುಂಬಾ ಆಸಕ್ತಿಯನ್ನು ವಹಿಸುತ್ತದೆ. ಅಲ್ಲಿಯ ವರ್ತಕರು ಅವರ ನಾಯಕರಾದ ಪಟ್ಟಣಸಾವಿ, ಮೇಚಿಸೆಟ್ಟಿ, ಕೀರ್ತಿಸೆಟ್ಟಿ ಮುಂತಾದವರು ಸಮಸ್ತ ನಗರವೂ ಸೇರಿ ಆ ಊರಿನ ಪಂಚಮಠ, ಹಿರಿಯಮಠ, ಭೇರುಂಡೇಶ್ವರದಾಚಾರ್ಯ. ಮೂಲಿಗ ಮಧುಕೇಶ್ವರ ಪಂಡಿತದೇವರು ಮುಂತಾದ ಮಠಾಧಿಪತಿಗಳ ಮುಂದೆ, ಜೀರ್ಣೋದ್ಧಾರದ ಕಾರ್ಯವನ್ನು 'ತಮ್ಮ ಧರ್ಮವಾಗಿ ಕೊಂಡು' ಎಂದರೆ ಅದು ತಮ್ಮ ಧರ್ಮವೆಂಬಂತೆ ಭಾವಿಸಿ, ಜೀರ್ಣೋದ್ಧಾರದ ಬಳಿಕ ಅದಕ್ಕೆ ಗವರೇಶ್ವರ ದೇವರೆಂದು ಹೆಸರಿಟ್ಟಿರುವುದನ್ನು ಇಲ್ಲಿ ಅರ್ಥೈಸಬಹುದು.

ಕ್ರಿ.ಶ.೧೭೧೫ರ ಮಾವಳೀಪುರದ ಶಾಸನವು ಶೈವದಾನಶಾಸನವಾಗಿದ್ದು ಆವತಿನಾಡ ಪ್ರಭುಗಳ ಕಾಲಕ್ಕೆ ಸೇರಿದ್ದಾಗಿದೆ. ಈ ಆವತಿನಾಡ ಪ್ರಭುಗಳು, ದೊಡ್ಡಬಳ್ಳಾಪುರ ತಾಲ್ಲೂಕಿನ ಹುಲುಕಡಿ ನಾಡ ಪ್ರಭುಗಳ ಸಮಕಾಲೀನರು. ಚತುರ್ಥಗೋತ್ರದ ಆವತಿನಾಡ ಪ್ರಭುಗಳಾದ ಎರಡನೇ ಸೊಣ್ಣಬೈರೇಗೌಡನ ಮಗನಾದ ಗೋಪಾಲಗೌಡಯ್ಯ ಈತನ ಮಗನೇ ದೊಡ್ಡ ಬೈರೇಗೌಡಯ್ಯನವರು ಇವನು ಹರಿತ ಸಗೋತ್ತದ ಶಾಖಾಧ್ಯಾಯಿಗಳಾದ ಬ್ರಾಹ್ಮಣರಾದ ತಿರುಪತಿಭಟ್ಟರ ಪುತ್ರನಾದ ಯಲ್ಲಂಭಟ್ಟ ಈತನ ಮಗನಾದ ಸುಬ್ಬಾಭಟ್ಟರಿಗೆ ಒಂದು ಅಗ್ರಹಾರವನ್ನು ದಾನವಾಗಿ ನೀಡುವರು. "ದೇವಣಾಪುರದ ರಾಜ್ಯಕ್ಕೆ ಸಲುವ ಸೀಗೆಕೋಟೆ ಹೋಬಳಿಯಲ್ಲಿ ಕುರುಬರಹಳ್ಳಿ ಉಪಗ್ರಾಮ ಸಹಿತವಾದ ಮಾವಳೀಪುರಕ್ಕೆ ಪ್ರತಿನಾಮವಾದ ದೊಡ್ಡ ಬೈರಸಾಗರವೆಂದು ಏಕಭೋಗಸರ್ವಮಾನ್ಯಾಗ್ರಹಾರವನು ಶ್ರೀ ಗೋಪಾಲಸ್ವಾಮಿಗೆ ಪ್ರೀತಿಯಾಗಿ ಸಹಿರಣ್ಯೋದಧಾರಾಪೂರ್ವಕವಾಗಿ ತ್ರಿಕರಣ ತ್ರಿವಾಚಕವಾಗಿ ಧಾರೆನೆರೆದುಕೊಟ್ಟವಾದ ಈ ಗ್ರಾಮಕ್ಕೆ"[೧೦] ಇಲ್ಲಿನ ಶಾಸನ ಉಲ್ಲೇಖಿತ ದೇವಣಾಪುರ ಎಂಬುದು ಯಾವುದನ್ನು ಸೂಚಿಸುತ್ತದೆ ಎಂದು ಹೇಳುವುದು ಕಷ್ಟ!

ಸೀಗೆಕೋಟೆ ಹೋಬಳಿ. ಈಗಿನ ಮೆಳೆಕೋಟೆ ಗ್ರಾಮದ ಹತ್ತಿರದ ಸೀಗೆಹಳ್ಳಿ ಎಂದು ಹೇಳಬಹುದು. ಕುರುಬರಹಳ್ಳಿ ಮತ್ತು ಮಾವಳೀಪುರ ಗ್ರಾಮಗಳು ಇಂದಿಗೂ ಉಳಿದುಕೊಂಡು ಬಂದಿದೆ. ಆದರೆ ಮಾವಳೀಪುರಕ್ಕೆ ಪ್ರತಿನಾಮವಾದ ದೊಡ್ಡ ಭೈರಸಾಗರ ಎಂಬ ಅಗ್ರಹಾರ ಕಾಣಲಾಗದು. ಈ ಅಗ್ರಹಾರಗಳನ್ನು ಮತ್ತು ಈ ಗ್ರಾಮಗಳಿಗೆ ಸೇರುವ ನಿಧಿ ನಿಕ್ಷೇಪ ಜಲ

ಪಾಷಾಣ ಆಕ್ಷೀಣ ಆಗಾಯಿ ಸಿದ್ಧ ಸಾಧ್ಯಂಗಳೆಂಬ ಅಷ್ಟಭೋಗ ತೇಜಸ್ವಾಮಂಗಳನ್ನು ಸುಬ್ಬಾಭಟ್ಟರಿಗೆ ಮತ್ತು ಅವರ ಮಕ್ಕಳು ಅನುಭವಿಸುವಂತೆ ಆವತಿ ನಾಡಪ್ರಭುಗಳು ಈ ಅಗ್ರಹಾರಗಳನ್ನು ದಾನವಾಗಿ ನೀಡುತ್ತಾರೆ. ಗ್ರಾಮಗಳನ್ನು, ಅಗ್ರಹಾರಗಳನ್ನು ದಾನವಾಗಿ ನೀಡುವುದು ಒಂದು ಸಂಪ್ರದಾಯದಂತೆ ಗೋಚರಿಸುತ್ತದೆ ಎಂದು ಶಾಸನಗಳ ಆಧಾರದಿಂದ ಹೇಳಬಹುದು. ಹೊಯ್ಸಳ ವೀರಬಲ್ಲಾಳದೇವ ಲಕ್ಕುಂಡಿಯನ್ನು ಒಂದು ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯವಾಳುತ್ತಿರುವಾಗ, ಕಾಳಾಮುಖಾಚಾರ್ಯರಾದ ಸಿದ್ಧಾಂತಿ ಚಂದ್ರಭೂಷಣ ಪಂಡಿತ ದೇವರಿಗೆ ಹೊಂಬಳಲು ಎಂಬ ಗ್ರಾಮವನ್ನು ಧಾರೆಯೆರೆದು ಕೊಡುವ ವರ್ಣನೆ ಗದುಗಿನ ಒಂದು ಶಾಸನದಲ್ಲಿ ಬರುತ್ತದೆ.[೧೧] ರಾಜ ಮಹಾರಾಜರುಗಳಿಗಷ್ಟೇ ದಾನ ನೀಡುವುದು ಸೀಮಿತವಾಗಿರಲಿಲ್ಲ. ಅವರ ಅಧೀನದಲ್ಲಿದ್ದ ಪ್ರಭುಗಳೂ ಕೂಡ ಅವರ ಸಂಪ್ರದಾಯವನ್ನು ಮುಂದುವರಿಸಿಕೊಂಡು ಬಂದಿರುವುದು ಕಂಡುಬರುತ್ತದೆ.

### ೩.೩.೨. ವೈಷ್ಣವ ದಾನಶಾಸನಗಳು

ನಮ್ಮ ತಾಲ್ಲೂಕಿನಲ್ಲಿನ ಅತಿ ಹೆಚ್ಚಿನ ಶಾಸನಗಳು ವೈಷ್ಣವ ದಾನಶಾಸನಗಳೇ ಆಗಿವೆ. ದೇವಾಲಯದಲ್ಲಿ ನಡೆಯುವ ಪೂಜೆ ಪುನಸ್ಕಾರಗಳಿಗೆ ದೇವಾಲಯಗಳ ಜೀರ್ಣೋದ್ಧಾರಕ್ಕಾಗಿ, ಅಗ್ರಹಾರಗಳನ್ನು ನೀಡುವುದು, ಜನೋಪಯೋಗಿ ಕಾರ್ಯಗಳಿಗಾಗಿ ಕೆರೆ, ಗದ್ದೆ, ಭಾವಿ, ಭೂಮಿ, ದತ್ತಿ ನೀಡುವುದು ಮತ್ತು ನಿರ್ಮಿಸುವುದು ಮುಂತಾದ ವಿಷಯಗಳು ಕಂಡುಬರುತ್ತವೆ. ಧರ್ಮದ ತಳಹದಿಯ ಮೇಲೆ ನಿಂತು ಮಾಡುವ ದಾನವು ಶಾಸನಗಳ ರಚನೆಗೆ ತಳಹದಿಯಾದವು. ಕ್ರಿ.ಶ.೧೫೩೧ರ ಕಾಲದ ಕಾಡನೂರು ಗ್ರಾಮದ ಒಂದು ಶಾಸನವು ಗ್ರಾಮದ ಚನ್ನಕೇಶವ ಸ್ವಾಮಿ ದೇವಾಲಯಕ್ಕೆ ಬಿಟ್ಟ ದತ್ತಿಗಳನ್ನು ನಿರೂಪಿಸುತ್ತದೆ. ವಿಜಯನಗರ ಅರಸರ ತುಳುವ ವಂಶಕ್ಕೆ ಸೇರಿದ ಕೃಷ್ಣದೇವರಾಯನ ಬಲಸೋದರನಾದ ಅಚ್ಚುತರಾಯ ಕ್ರಿ.ಶ.೧೫೨೯ರಲ್ಲಿ ಪಟ್ಟಕ್ಕೆ ಬಂದು ರಾಜ್ಯವಾಳುತ್ತಿದ್ದನು. ವಿಜಯನಗರ ಅರಸರ ಅಧೀನದಲ್ಲಿದ್ದ ನಾಡ ಪ್ರಭುಗಳಾದ ಗಂಡ್ರಗೊಳ್ಳೀದಳವಾಯಿ ಸೊಣ್ಣಪ್ಪ ನಾಯಕರು ಈತನ ಮಗ ನಾಗಪ್ಪನಾಯಕರು ಹುಲುಕಡಿನಾಡನ್ನು ಆಳುತ್ತಿದ್ದರು. ಇವರು ತಮ್ಮ ಸೀಮೆಯ ಭಾಗವನ್ನು ಅಚ್ಚುತ ಮಹಾರಾಯರಿಗೆ ತುಂಗಭದ್ರಾತೀರದಲ್ಲಿರುವ ವಿರೂಪಾಕ್ಷದೇವರ ಸಾನ್ನಿಧ್ಯದಲ್ಲಿ ಹಣಬೆ ಸೀಮೆಯ ವ್ಯಾಪ್ತಿಯ ಕಾಡನೂರು ಗ್ರಾಮವನ್ನು ಸರ್ವಮಾನ್ಯವಾಗಿ ಧಾರೆಯೆರೆದು ಕೊಡುತ್ತಾರೆ. ಅಲ್ಲದೆ, ಕಾಡನೂರು ಗ್ರಾಮಕ್ಕೆ "ಸಲುವ ಚತುಸೀಮೆಯೊಳಗಾದ ಹಿರಿಯ ಕೆರೆ ಕೆಳಗಣಗದ್ದೆ ಪೆಜ್ಜಲು ಅಣೆಅಚ್ಚಕಟ್ಟು ಕಡೆ ಕಾಲುವೆ ತೋಟತುಡಿಕೆ ಕಾಡಾರಂಭನೀರಾರಂಭ ನಡೆವರುಯ್ಯಲುಗೂಡೆಗೊಯ್ಯಲುಸುಂಕಸವರ್ನಾದಾಯ ಮನೆದೆರೆಗೆ ಮಗ್ಗದೆರೆಗೆ ಪಟ್ಟಡಿಪಸರಾಯ ಗ್ರಾಮದೆರೆಗೆ ಸಕಲ ಸುವರ್ನಾದಾಯ ಸಕಲ ವಸ್ತುದಾಯವನ್ನೂ ಸರ್ವಮಾನ್ಯವಾಗಿ ಆ ಗ್ರಾಮಕ್ಕೆ ಸಲುವ ಆಕ್ಷೀಣ ಆಗಾಮಿ ನಿಧಿ ನಿಕ್ಷೇಪ ಜಲಪಾಷಾಣ ಸಿದ್ಧಸಾಧ್ಯಂಗಳೆಂಬ ಅಷ್ಟಭೋಗ ತೇಜಸ್ವಾಮ್ಯ

ಸಮಸ್ತವನ್ನೂ ಪಾಲಿಸಿ ಆಯಸ್ವಾಮ್ಯವಸೂಲಾದಿ ಮೇಲೆ ಕಂಡ ಕಾಡನೂರು ಚನ್ನಕೇಶವ ದೇವರ ಅಮೃತಪಡಿ ನೈವೇದ್ಯ ಅಂಗರಂಗ ವೈಭವ ರಥೋತ್ಸವವನ್ನು ನಡಿಸಿಕ್ಕೊಂಬಂದುಯಂದು ಗಂಡರಗೊಳ್ಳೀ ದಳವಾಯಿ ಸೊಂಣಪ್ಪನಾಯಿಕರ ಮಕ್ಕಳು ನಾಗಪ್ಪನಾಯಿಕರು ಕಾಡನೂರು ಚನ್ನಕೇಶವ ದೇವರಿಗೆ ತ್ರಿವಾಚಕ ಧಾರೆಯನ್ನೆರೆದು ಕೊಟ್ಟೆವು ಎಂದು ಶಾಸನವು ಹೇಳುತ್ತದೆ.[೧೨] ದತ್ತಿಗಳನ್ನು ಬಿಡುತ್ತಿದ್ದ ಕ್ರಮಕ್ಕೆ ಅತ್ಯುತ್ತಮ ನಿದರ್ಶನ ಕಾಡನೂರು ಚನ್ನಕೇಶವಸ್ವಾಮಿ ದೇವಾಲಯದ ಶಾಸನ. ಗಂಡಗೊಳ್ಳೀಪುರದ ದಳವಾಯಿಗಳು ಚನ್ನಕೇಶವಸ್ವಾಮಿ ದೇವಾಲಯದ ಜೀರ್ಣೋದ್ಧಾರಕ್ಕಾಗಿ, ಕೆರೆ, ಕೆರೆಯ ಕೆಳಗಿನ ಗದ್ದೆ, ಕಾಲುವೆ, ತೋಟ ತುಡಿಕೆ, ನೀರಾವರಿ ಭೂಮಿ, ಸುಂಕಗಳಾದ ಮನೆದೆರಿಗೆ, ಮಗ್ಗದ ಮೇಲಿನ ತೆರಿಗೆ, ಗ್ರಾಮಗಳ ಮೇಲಿನ ತೆರಿಗೆ, ಸರ್ವ ಆದಾಯವನ್ನು ಚನ್ನಕೇಶವದೇವರ ಅಮೃತ ಪಡಿ ನೈವೇದ್ಯಕ್ಕಾಗಿ, ಅಂಗರಂಗ ವೈಭವ ರಥೋತ್ಸವಕ್ಕಾಗಿ ನೀಡಿರುವುದು. ಇಲ್ಲಿನ ಅಂಗ ಮತ್ತು ರಂಗವೈಭವಗಳು. ವಿಗ್ರಹದ ಅಥವಾ ಮೂರ್ತಿಯ ದೇಹಕ್ಕೆ ಸಲ್ಲುವ ಭೋಗ ಎಂದರೆ ಸ್ನಾನ, ಗಂಧಲೇಪನ, ಧೂಪದೀಪ, ಪುಷ್ಪ ಇತ್ಯಾದಿಗಳು ಅಂಗವೈಭವ ಗರ್ಭಗುಡಿಯ ಮುಂದಿನ ರಂಗದ ಮೇಲೆ ಅಂದರೆ ದೇವತಾಮೂರ್ತಿಯ ಮುಂದೆ ನಡೆಯುವ ಗೀತ ಮತ್ತು ನೃತ್ಯಗಳೇ ರಂಗ ವೈಭವಗಳು. ಅಂಗರಂಗ ವೈಭವಗಳಿಂದ ರಥೋತ್ಸವವನ್ನು ನಡೆಸುವುದು ಮತ್ತು ಮುಂದೆಯೂ ತಪ್ಪದೆ ನಡೆಸಿಕೊಂಡು ಬರುವುದು ಎಂದು ಈ ಶಾಸನ ತಿಳಿಸುತ್ತದೆ. ಕರ್ನಾಟಕ ಶಾಸನಗಳಲ್ಲಿ ಹೆಚ್ಚಾಗಿ ಅಂಗಭೋಗ, ರಂಗಭೋಗ ಎಂಬ ಮಾತುಗಳು ಕಂಡುಬರುತ್ತವೆ.

ಕ್ರಿ.ಶ.೧೩೦೬ರ ಇಸ್ತೂರು ಗ್ರಾಮದ ಮತ್ತೊಂದು ಶಾಸನವು ಹೊಯ್ಸಳ ದೊರೆ ಮೂರನೇ ಬಲ್ಲಾಳನ ಕಾಲಕ್ಕೆ ಸೇರಿದೆ.[೧೩] ಈ ಶಾಸನದಲ್ಲಿ ವೇದಾಂತಚಾರ್ಯ ಎಂಬುವವನಿಗೆ ಅಂಗಭೋಗದ ಕಾರ್ಯವನ್ನು ನಿರ್ವಹಿಸುವಂತೆ ಹೇಳಲಾಗಿದೆ. ಸಂಗಮವಂಶದ ಹರಿಹರನ ಮಗನಾದ ಒಂದನೇ ದೇವರಾಯನ ಕಾಲದ ಕ್ರಿ.ಶ.೧೪೧೬ರ ಶಾಸನವು ತಿರುಮಲೆ ದೇವರಿಗೆ ದೀಪ ಕಂಬಗಳನ್ನು ಮಾಡಿಸಿ ಕೊಟ್ಟಿರುವಂತೆ ಹೇಳುತ್ತದೆ. ಆದರೆ ಹೆಚ್ಚಿನ ವಿವರಗಳನ್ನು ಊಹಿಸಲು ಕಷ್ಟಸಾಧ್ಯ. ಇದೇ ಗ್ರಾಮದ ಕ್ರಿ.ಶ.೧೫೨೮ರ ಶಾಸನವು "ಶ್ರೀಮನುಮಹಾ ರಾಜಾಧಿರಾಜ ರಾಜಪರಮೇಶ್ವರ ಶ್ರೀ ಕೃಷ್ಣರಾಯ ಮಹಾರಾಯ ಕಟ್ಟಿಸಿದ ಕಾಡಕೆಸವಕರಾಜನಾಯ" ಎಂದಿಷ್ಟೇ ಉಲ್ಲೇಖಿತವಾಗಿದೆ. ಇದು ಶ್ರೀಕೃಷ್ಣರಾಯ ಕಟ್ಟಿಸಿದ ದೇವಾಲಯವೆ ಎಂಬುದು ಈ ಶಾಸನದಿಂದ ಕಂಡುಬರುತ್ತದೆ. ಕ್ರಿ.ಶ.೧೫೫೫ ಕಸಬಾ ಹೋಬಳಿಯ ಶಿವಪುರದ ಗ್ರಾಮದ ಒಂದು ಶಾಸನವು "ಶಿವಪುರದ - ಮಾಡಿಸಿದ ಶೇವೆ' ಎಂದಿಷ್ಟೇ ಉಲ್ಲೇಖವಾಗಿದೆ. ಈ ಶಾಸನವು ಶಿವಪುರದ ಲಕ್ಷ್ಮೀರಮಣ ಸ್ವಾಮಿಯ ದೇವಾಲಯದಲ್ಲಿ ಇರುವುದರಿಂದ ಲಕ್ಷ್ಮೀರಮಣ ಸ್ವಾಮಿಯ ವಿಗ್ರಹವನ್ನು ಮಾಡಿಸಿಕೊಟ್ಟಿರುವಂತೆ ತಿಳಿದುಬರುತ್ತದೆ. ಇದೇ ಕಾಲದ ಗ್ರಾಮದ ಮತ್ತೊಂದು ಶಾಸನವು ಜಗನಾಥನಾಯಕ ಎಂಬುವನು ಕರಗದೇವರಿಗೆ ಶಿವಪುರ ಗ್ರಾಮವನ್ನು ದಾನವಾಗಿ ನೀಡಿರಬಹುದು. ದೇವಾಲಯಗಳನ್ನು

ನಿರ್ಮಿಸುವುದು ಜನರ ಜೀವನದಲ್ಲಿ ಅಂದು ಹಾಸು ಹೊಕ್ಕಾಗಿತ್ತು. ಆದರೆ ಒಬ್ಬ ವ್ಯಕ್ತಿಯಿಂದ ಕಟ್ಟಿಸಿದ ದೇವಾಲಯಗಳು ನಮಗೆ ಕಂಡುಬರುವುದಿಲ್ಲ. ಭಾರತದ ದೇವಸ್ಥಾನಗಳಲ್ಲಿ ಭಗವಂತನನ್ನು ದೈವವನ್ನು ಒಬ್ಬ ಜೀವಂತ ವ್ಯಕ್ತಿಯಂತೆ ಭಾವಿಸಿ, ವೈಭವದಲ್ಲಿ ಬಾಳುವ ಒಬ್ಬ ವ್ಯಕ್ತಿಯು ಎಲ್ಲವನ್ನೂ ಭಗವಂತನಿಗೆ ಅರ್ಪಿಸುವುದು ಇನ್ನೂ ನಮ್ಮಲ್ಲಿ ರೂಢಿಯಲ್ಲಿದೆ ಎಂದು ಹೇಳಬಹುದು.

ದಾನ ಶಾಸನಗಳ ರೂಪ ಮತ್ತು ರಚನೆಯನ್ನು ಸ್ವಲ್ಪ ಹೆಚ್ಚು ಕಡಿಮೆ ಒಂದೇ ಕ್ರಮದಂತೆ ಕಂಡರೂ ಮೂಲತಃ ಅವುಗಳ ವೈವಿಧ್ಯವನ್ನು, ವೈಶಿಷ್ಟ್ಯವನ್ನು ನಿರ್ಧರಿಸಿ ಹೇಳುವುದು ಸುಲಭ ಸಾಧ್ಯವಿಲ್ಲ. ದೇವಾಲಯಗಳಿಗೆ, ವ್ಯಕ್ತಿಗಳಿಗೆ ಕೊಟ್ಟ ದಾನಗಳು, ರಾಜರುಗಳಿಂದ ಚಕ್ರವರ್ತಿಗಳಿಂದ ಸಾಮಂತರಿಂದ ಊರ ಗಾವುಂಡನಿಂದ ವರ್ತಕರ ಗುಂಪಿನಿಂದ ಹೀಗೆ ಹಲವಾರು ರೀತಿಯ ಅಂತಸ್ತುಗಳನ್ನುಳ್ಳ ಜನರಿಂದ ಕೊಟ್ಟ ದಾನ ಶಾಸನಗಳು, ದೇವಾಲಯಗಳ ಜೀರ್ಣೋದ್ಧಾರಕ್ಕಾಗಿ ಅಂಗರಂಗಭೋಗಗಳಿಗೆ ಪೂಜಾಕಾರ್ಯಗಳಿಗೆ ಹೀಗೆ ಹಲವಾರು ಉದ್ದೇಶಗಳಿಗಾಗಿ ಕೆರೆಯನ್ನು, ಗದ್ದೆಯನ್ನು, ಗ್ರಾಮವನ್ನು ಕೊಟ್ಟದಾನ ಶಾಸನಗಳೆಂದು ಇಲ್ಲಿ ಕುಲಂಕಷವಾಗಿ ವಿಮರ್ಶಿಸಲಾಗಿದೆ.

ವಿಜಯನಗರ ಅರಸರ ಮಾಂಡಲಿಕರಾಗಿದ್ದ ಹುಲುಕಡಿ ನಾಡಿನ ಎಲ್ಲೆಯೊಳಗಿನ ಗಂಡ್ರಗೊಳ್ಳಿ ಪುರದ ದಳವಾಯಿಗಳು ಶಿವಗಂಗೆಯ ಮೇಲಣ ಗವಿ ಸಿಂಹಾಸನದ ಮಲೆಯಕಾಂತದೇವರಿಗೆ ಕೆರೆ ಭೂಮಿಯನ್ನು ದತ್ತಿ ಕೊಡುವ ಉಲ್ಲೇಖವು ಕ್ರಿ.ಶ.೧೫೪೧ರ ಶಾಸನದಲ್ಲಿ ಕಂಡುಬರುತ್ತದೆ.[೧೪] 'ತ್ರಿಪುರ ಮಹಾರಾಜಾಧಿರಾಜ ರಾಜ ಪರಮೇಶ್ವರ ಶ್ರೀ ವೀರ ಪ್ರತಾಪ ವೀರನರಸಿಂಹದೇವ ಮಹಾರಾಯರು ನಮಗೆ ನಾಯಕತನಕ್ಕೆ ಪಾಲಿಸಿದ ಹುಲುಕುಡಿ ನಾಡೊಳಗಣ ಹಣಬೆಯ ಸೀಮೆಗೆ ಸಲುವ ಶಿಂಪಾಡಿಪುರದ ಸೀಮೆಯೊಳಗಣ ಭೂಮಿಯಾಗಿದ್ದ ಹೊಲವನ್ನೂ ಒಂದು ಕುಂಟೆಯನ್ನೂ ನಾವು ನಿಮಗೆ ನರಸಿಂಗದೇವ ಮಹಾರಾಯರಿಗೆ ಧರ್ಮವಾಗಲಿಯೆಂದು ಗಂಡರಗೊಳ್ಳೀದಳವಾಯಿ ಸೊಂಣಪ್ಪನಾಯಕರ ಮಕ್ಕಳು ಬೈರಪ್ಪನಾಯಕರು ಗಂಡರಗೊಳ್ಳೀ ಪುರವೆಂಬುದನ್ನು ಮೊದಲು ದಾನವಾಗಿ ನೀಡುತ್ತಾರೆ. ಈ ಗಂಡರಗೊಳ್ಳೀಪುರದ ಸೀಮೆಗಳಲ್ಲಿನ ಪೂರ್ವಕ್ಕೆ ಇಸ್ತೂರು ಗ್ರಾಮ, ಉತ್ತರಕ್ಕೆ ಹೊನ್ನಾವರ ಮತ್ತು ಶಿಂಪಾಡಿಪುರದ ಎಲ್ಲೆಯ ಭಾಗ, ಪಶ್ಚಿಮ ದಿಕ್ಕಿಗೆ ಶಿಂಪಾಡಿಪುರದ ಕೆರೆಯ ಕಟ್ಟೆಯನ್ನು, ದಕ್ಷಿಣಕ್ಕೆ ಹೆಜ್ಜಾಜಿ ಮತ್ತು ಶಾಕಲದೇವನಪುರದ ಮೇರೆಗಳಲ್ಲಿನ ಕ್ಷೇತ್ರದ ನಿಧಿನಿಕ್ಷೇಪಗಳೆಲ್ಲವನ್ನು ದಳವಾಯಿ ಭೈರಪ್ಪ ನಾಯಕನು ಶಿವಗಂಗೆಯ ಮೇಲಣ ಗವಿಯ ಸಿಂಹಾಸನ ಮಲೆಯಕಾಂತ ದೇವರಿಗೆ ಸರ್ವಮಾನ್ಯವಾಗಿ ದಾನ ನೀಡಿರುವುದನ್ನು ಈ ಶಾಸನ ಸಮರ್ಥಿಸುತ್ತದೆ. ಇಲ್ಲಿಯ, ಧರ್ಮಗಳಿಗೆ ಸಮಾಜಮನ್ನಣೆ ನೀಡುವುದು. ನಮ್ಮ ಸಂಸ್ಕೃತಿಗೆ ಹಿಡಿದ ಕೈಗನ್ನಡಿಯಿದ್ದಂತೆ ತಿಳಿಯುತ್ತದೆ. ಇದೇ ಗ್ರಾಮದ ಮತ್ತೊಂದು ಶಾಸನ ಕ್ರಿ.ಶ.೧೫೬೨ ರ ಕಾಲಕ್ಕೆ ಸೇರಿದ್ದಾಗಿದೆ.[೧೫] ಈ ಶಾಸನವು ೧೫೪೧ರ ಶಾಸನವನ್ನೇ ಬಹುತೇಕವಾಗಿ

ಹೇಳುತ್ತದೆ. ಗಂಡರಗೊಳ್ಳೀಪುರದ ದಳವಾಯಿ ಬೈರಪ್ಪನಾಯಕ ಹೊಯ್ಸಳ ಚಕ್ರವರ್ತಿ ವೀರನರಸಿಂಗ ದೇವರಿಗೆ ಗ್ರಾಮವನ್ನು ದಾನ ನೀಡಿರುವುದು ಇಲ್ಲಿ ಉಲ್ಲೇಖಾರ್ಹ. ಕ್ರಿ.ಶ.೧೫೮೬ರ ಶಾಸನದಲ್ಲಿ ಆವತಿ ನಾಡಪ್ರಭು ಹಾವಳೀ ಬಯಪ್ಪಗೌಡರ ಕುಮಾರ ಎಂದಷ್ಟೇ ಇದ್ದು ಅಕ್ಷಗಳು ಗೋಚರಿಸು ವುದಿಲ್ಲ.[೧೬] ಆದರೆ ಕ್ರಿ.ಶ.೧೬೧೦ರ ಅಂತರಹಳ್ಳಿ ಗ್ರಾಮದಲ್ಲಿನ ಶಾಸನವು ಆವತಿನಾಡ ಪ್ರಭುಗಳ ಕೆಲವು ಹೆಸರುಗಳನ್ನು ಮಾತ್ರಹೇಳಿ ಕೆರೆ ದಾನದ ವಿಷಯವನ್ನು ಪ್ರಸ್ತಾಪಿಸುತ್ತದೆ.[೧೭] ಹದಿನಾಲ್ಕನೆಯ ಶತಮಾನದ ಸರಿ ಸುಮಾರಿಗೆ ರಣಭೈರೇಗೌಡನ ನೇತೃತ್ವ ಅಥವಾ ಮುಂದಾಳತ್ವದಲ್ಲಿ ಏಳು ಜನ ರೈತರು ಅತ್ಯಂತ ದುರಂತಮಯ ಸನ್ನಿವೇಶದಲ್ಲಿ ಕಂಚಿಯನ್ನು ತೊರೆದು ದೇವನಹಳ್ಳಿ ಸಮೀಪದ ಆವತಿಗೆ ಬಂದು ನೆಲೆಗೊಂಡರೆಂದು ಹೇಳಲಾಗುತ್ತದೆ. ಅನಂತರ ರಣಬೈರೇಗೌಡನು ಆವತಿಯಲ್ಲಿಯೇ ನೆಲೆಗೊಂಡು ಬೀಡುಬಿಟ್ಟನು. ಆದರೆ ಆತನ ಉಳಿದ ಸಹೋದರು ತಮ್ಮ ಭಾಗ್ಯವನ್ನರಸುತ್ತ ಬೇರೆ ಬೇರೆ ಊರುಗಳಿಗೆ ಹೋದರು. ನಂತರ ತಮ್ಮ ಸ್ವಂತ ಸ್ವಸಾಮರ್ಥ್ಯದಿಂದ ಚಿಕ್ಕಪುಟ್ಟ ಮನೆತನದ ಅರಸರಾಗಿರಬಹುದೆಂದು ಇಲ್ಲಿ ಹೇಳಬಹುದು. ಇಲ್ಲಿನ ರಣ ಭೈರೇಗೌಡನನ್ನು ನಾಗೇನಹಳ್ಳಿ ಶಾಸನ ಉಲ್ಲೇಖಿಸುತ್ತದೆ. ಆ ಏಳು ಜನ ಸಹೋದರರಲ್ಲಿ ಇಮ್ಮಡಿ ಹಾವಳಿ ಬಯಿರಪ್ಪಗೌಡನು ಶಾಸನದಲ್ಲಿ ಉಲ್ಲೇಖವಾಗಿರುವನು. ಆದರೆ ಇವರುಗಳು ಯಾವುದೇ ಯುದ್ಧಗಳನ್ನು ಮಾಡಿದ ಪ್ರಸಂಗ ಅಥವಾ ಸನ್ನಿವೇಶಗಳು ನಮಗೆ ಎಲ್ಲೂ ದೊರೆಯುವುದಿಲ್ಲ. ಹಾವಳಿ ಬಯಿರಪ್ಪ ಗೌಡನು ಪಂಙೆ ಸೊಣ್ಣಯ್ಯನಿಗೆ ಅಂತರಹಳ್ಳಿ ಗ್ರಾಮದ ಕೆರೆ, ಕೆರೆ ಕೆಳಗಿನಗದ್ದೆ, ಕೆರೆಯ ಗದ್ದೆಯಲ್ಲಿ ಬೆಳೆಯುವ ಧಾನ್ಯಗಳ ಪ್ರಮಾಣವನ್ನು, ಪುತ್ರ ಪಾರಂಪರಿಯಾಗಿ ಅನುಭವಿಸಬಹುದೆಂದು ಹೇಳಿ ದಾನ ನೀಡುತ್ತಾನೆ. ಕೊನೆಯಲ್ಲಿ ಈ ದಾನಕ್ಕೆ ತಪ್ಪಿದರೆ ಶಾಪ ಒದಗುತ್ತದೆ ಎಂದು ಹೇಳಿ ಶಾಸನ ಕೊನೆಗೊಳ್ಳುತ್ತದೆ. ರಾಜಘಟ್ಟ ಗ್ರಾಮದ ಶಾಸನವು ಮೇಲಿನ ಶಾಸನದ ಅಂಶವನ್ನೇ ಪ್ರಸ್ತಾಪಿಸುತ್ತಾ ದಳವಾಯಿ ಸಿಂಗರಿನಾಯಕ ಎಂಬುವನು ಕೆರೆಯನ್ನು ದಾನವಾಗಿ ಪಡೆದಿರುವುದನ್ನು ಹೇಳುತ್ತದೆ. ಆದರೆ ದಾನ ನೀಡಿದ ವ್ಯಕ್ತಿಯ ಹೆಸರು ಉಲ್ಲೇಖವಾಗಿಲ್ಲ. ಹದಿನಾರನೇ ಶತಮಾನದ್ದೆಂದು ಹೇಳಲಾದ 'ಕಸಾಗಟ್ಟ ಗ್ರಾಮ'ದಲ್ಲಿನ ಎರಡು ಶಾಸನಗಳು[೧೮] ಹೊಲಗದ್ದೆಗಳನ್ನು ದತ್ತಿಯಾಗಿ ನೀಡಿರುವುದು ದಾನಧರ್ಮದ ಬಗೆಗೆ ಜನರಲ್ಲಿದ್ದ ವಿಶೇಷ ಗುಣಗಳನ್ನು ತೋರಿಸುತ್ತದೆ. ಕಸಾಗಟ್ಟ ಗ್ರಾಮದ ಸಾ(ಶಾ)ಂತ ನಂಜೇದೇವರು. ತಳವಾರ ಕೆಂಪನಾಯಕನ ಮಗ ತಂಮನಾಯಕನಿಗೆ ಹೊಲಗದ್ದೆಯನ್ನು ದಾನವಾಗಿ ನೀಡುವರು. ಈ ಶಾಸನದ ವಿಶೇಷತೆಯೆಂದರೆ ಗ್ರಾಮದ ತಳವಾರನಿಗೆ ದಾನವಾಗಿ ನೀಡಿರುವುದನ್ನು ಹೇಳುತ್ತದೆ. ದಾನಗಳು ಎಲ್ಲಾ ವರ್ಗದ ಜನರಿಗೂ ಸಲ್ಲುತ್ತಿದ್ದವು ಎಂಬುದಾಗಿ ಇಲ್ಲಿ ಹೇಳಬಹುದು. ಇದೇ ಗ್ರಾಮದ ಮತ್ತೊಂದು ಶಾಸನದಲ್ಲಿ ಕಸಾಗಟ್ಟದ ಈರಯ್ಯ ದೇವನ ಮಗ ಗುಂಡಪ್ಪಗೆ ಬಯಣ್ಣಗೌಡ ಒಡೆಯರು ಗ್ರಾಮದ ಪಶ್ಚಿಮ ದಿಕ್ಕಿಗಿರುವ ೧/೨ ಭಾಗ ಗದ್ದೆಯನ್ನು ನೀಡುತ್ತಾನೆ. ಈ ಎರಡೂ ಶಾಸನಗಳು ವ್ಯಕ್ತಿಗಳಿಗೆ ವೈಯಕ್ತಿವಾಗಿ ನೀಡಿದ

ದಾನದತ್ತಿಗಳಾಗಿವೆ. ತಾಲ್ಲೂಕಿನ ಶಾಸನಗಳು ದೇವಾಲಯಗಳಿಗೆ ನೀಡಿದ ದಾನ ಭೂಮಿ, ಕೆರೆ, ಗದ್ದೆಗಳನ್ನಷ್ಟೇ ಹೇಳುವುದಿಲ್ಲ, ಬಹುತೇಕ ಶಾಸನಗಳು ಅಗ್ರಹಾರಗಳನ್ನು, ಗ್ರಾಮಗಳನ್ನು ದತ್ತಿಯಾಗಿ ಉಂಬಳಿಯಾಗಿ, ನೀಡಿರುವುದು ತಿಳಿಯುತ್ತದೆ. ಮುಂದಿನ ಶಾಸನಗಳು ಈ ರೀತಿಯ ಶಾಸನಗಳಾಗಿವೆ.

ಕ್ರಿ.ಶ.೧೫೪೪ರ ದೊಡ್ಡಬಳ್ಳಾಪುರದ ಆದಿನಾರಾಯಣಸ್ವಾಮಿ ದೇವಾಲಯದ ಪಕ್ಕದಲ್ಲಿನ ಒಂದು ಶಾಸನವು. ಗ್ರಾಮವನ್ನು ದೇವಾಲಯದ ಜೀರ್ಣೋದ್ಧಾರಕ್ಕೆ ದತ್ತಿಯಾಗಿ ನೀಡಿರುವುದನ್ನು ಪ್ರಸ್ತಾಪಿಸುತ್ತದೆ. "ಕಾಮಗೌಡ, ವೀರಣ ನಾಯಕರು ಮಾರಕ ದೇವರಿಗೆ ಸಮರ್ಪಿಸಿದ ಧರ್ಮ ಸಾಧನದ ಕ್ರಮವೆಂತೆಂದಡೆ ಸಿವನ ಸಮುದ್ರದ ಬೇಡನಾಡಸ್ಥಳಕ್ಕೆ ಸಲುವ ದಾಸಗೊಂಡನಹಳ್ಳಿಯ ಗ್ರಾಮವನ್ನೂ ಶ್ರೀ ಮನ್ಮಹಾಮಂಡಲೇಶ್ವರ ವಿಠಲೇಶ್ವರ ದೇವ ಮಹಾ ಅರಸುಗಳಿಗೆ ಆಯುರಾರೋಗ್ಯ ಆಯಿಶ್ವರ್ಯ ಎಂದು ಜೀರ್ಣೋದ್ಧಾರವಾಗಿ ಮಾರಕ ದೇವರಿಗೆ ಅಮೃತಪಡಿಗೆ ಸಮರ್ಪಿಸಿದಂಥಾ ಧರ್ಮ ಸಾಧನದ ಗ್ರಾಮಕೆ" ಎಂಬ ವಿವರ ಈ ಶಾಸನದಲ್ಲಿದೆ. ಹೊಯ್ಸಳ ಮತ್ತು ವಿಜಯನಗರ ಶಾಸನಗಳಲ್ಲಿ ಅನೇಕ ನಾಡ ಪ್ರಭುಗೌಡಗಳ ಉಲ್ಲೇಖಗಳು ಕಂಡುಬರುತ್ತವೆ. ಈ ಶಾಸನೋಕ್ತ ಕಾಮಗೌಡ, ವೀರಣ್ಣನಾಯಕರು, ಸಹೋದರರಂತೆ ಭಾವಿಸಬಹುದು. ಇವರು ಮಾರಕದೇವರ ದೇವಾಲಯದ ಜೀರ್ಣೋದ್ಧಾರಕ್ಕೆಂದು ಶಿವನಸಮುದ್ರದ ಸೀಮೆಯ ಬೇಡನಾಡ ಸ್ಥಳವನ್ನು ಮೆಳೆಕೋಟೆ ಸುತ್ತಲಿನ ಗ್ರಾಮಗಳ ಸಮುದಾಯವನ್ನೂ ದಾನ ನೀಡಿರುವರು. ಈ ಬೇಡನಾಡ ಸ್ಥಳವಾದ ಒಂದು ಗ್ರಾಮವೇ ದಾಸಗೊಂಡನಹಳ್ಳಿ. ಈ ಗ್ರಾಮವನ್ನೂ ದಾನವಾಗಿ ನೀಡುತ್ತಾರೆ. ಇಲ್ಲಿ ದಾನ ನೀಡಿದವರಿಗೂ ದಾನ ಪಡೆದವರಿಗೂ ಶುಭವಾಗಲಿ ಎಂದು ಹೇಳಿ ಶಾಸನ ಶಾಪಾಶಯದಿಂದ ಮುಕ್ತಾಯಗೊಳ್ಳುತ್ತದೆ.

ಹೊಯ್ಸಳರ ಮತ್ತು ವಿಜಯನಗರ ಕಾಲದಲ್ಲಿ ಅನೇಕ ಅಗ್ರಹಾರಗಳು ಊರ್ಜಿತದಲ್ಲಿದ್ದ ಬಗ್ಗೆ, ಈ ಅಗ್ರಹಾರಗಳನ್ನು ಗ್ರಾಮಗಳ ರೂಪದಲ್ಲಿ ದಾನ ನೀಡಿರುವುದರ ಬಗ್ಗೆ ಅನೇಕ ಶಾಸನಗಳು ಬೆಳಕು ಚೆಲ್ಲುತ್ತವೆ. 'ಅಗ್ರಹಾರ' ವಿದ್ಯಾದಾನ ನಡೆಯುತ್ತಿದ್ದ ಕೇಂದ್ರಗಳಲ್ಲೊಂದು. ದೇವಸ್ಥಾನ ಅಥವಾ ಮಠ, ಬ್ರಹ್ಮಪುರಿ, ಘಟಿಕಾ ಸ್ಥಾನಗಳೂ ಸಹ ವಿದ್ಯಾಕೇಂದ್ರಗಳು. ಇಲ್ಲಿನ ಬ್ರಹ್ಮಪುರಿಯು ಅಗ್ರಹಾರವನ್ನು ಹೋಲುತ್ತದೆ. ಅಗ್ರಾಹಾರ ಇದರ ಮೂಲ ರೂಪ 'ಅಗ್ರಹಾರ' ಎಂದಿರಬೇಕೆಂದೂ, ಅದು ಅಗ್ರ + ಆಹಾರ, ಎಂಬ ಎರಡು ಪದಗಳ ಸಮಾಸವೆಂದೂ, ಪ್ರೊ.ಡಿ.ಎಲ್.ನರಸಿಂಹಚಾರ್ಯರ ಅಭಿಪ್ರಾಯವಾಗಿದೆ. ಪದದ ಪೂರ್ವಾರ್ಧ ಅಗ್ರ' ಎಂದರೆ ಶ್ರೇಷ್ಠ ಎಂದೂ, ಉತ್ತಾರಾರ್ಧ ಪದವಾದ ಆಹಾರ' ಎಂದರೆ ದೇಶ ಅಥವಾ ಸ್ಥಳ ಎಂದೂ ಹೇಳಬಹುದು. ಹಾಗಾಗಿ ಅಗ್ರಹಾರವೆಂದರೆ. ಶ್ರೇಷ್ಠವರ್ಯರಿಗೆ ಕೊಟ್ಟಿರುವ ಸ್ಥಳ ಅಥವಾ ಊರು, ಗ್ರಾಮ ಎಂದರ್ಥ ಬರುತ್ತದೆ.[೯] ಸಾಮಾನ್ಯವಾಗಿ ಅಗ್ರಹಾರ ಎಂದ ತಕ್ಷಣ ನಮಗೆ ಹೊಳೆಯುವುದು ಬ್ರಾಹ್ಮಣರ ಕೇರಿಗಳು. ಇಲ್ಲಿ ಬ್ರಾಹ್ಮಣರೆ

ಇರಬೇಕಿಲ್ಲ. ಬೇರೆ ಬೇರೆ ಜಾತಿಯ ಜನಾಂಗಗಳೂ ಇರಬಹುದು. ಅಲ್ಲಿನ ಉತ್ಪತ್ತಿ ಎಲ್ಲವೂ ಬ್ರಾಹ್ಮಣ ವ್ಯಕ್ತಿಗಳಿಗೆ, ದೇವಾಲಯಗಳಿಗೆ ಸಲುತ್ತಿದ್ದವು. ಅಂದರೆ ಆ ಊರಿನಿಂದ ಬಂದ ರಾಜಾದಾಯಕ್ಕೆ ಸಲ್ಲಬೇಕಾಗಿದ್ದ ಐಶ್ವರ್ಯವನ್ನು, ಸಂಪತ್ತನ್ನು ಇವರಷ್ಟೇ ಅಲ್ಲದೆ ಬ್ರಾಹ್ಮಣರೂ ಸಂಪತ್ತಿನ ಒಡೆಯರಾಗಿದ್ದರು. ಅಥವಾ ಅನುಭವಿಸುತ್ತಿದ್ದರು. ತಾಲ್ಲೂಕಿನ ಯಾವುದೇ ಶಾಸನಗಳಲ್ಲಿ ಅಗ್ರಹಾರಗಳು ವಿದ್ಯಾಕೇಂದ್ರಗಳಾಗಿದ್ದ ವಿಷಯವಿಲ್ಲ. ಈ ರೀತಿಯ ಸಂಪ್ರದಾಯವು, ಪ್ರಾಚೀನವೆಂದೇ ಹೇಳಬೇಕು. ಕರ್ನಾಟಕದ ಶಾಸನಗಳಲ್ಲಿ ಕ್ರಿ.ಶ.ಐದನೇ ಶತಮಾನದಲ್ಲಿಯೇ ಅಗ್ರಹಾರಗಳು ಕಾಣಿಸಿಕೊಂಡಿರುವುದಕ್ಕೆ ಆಧಾರಗಳಿವೆ. ಇಂದಿಗೂ ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ 'ಅಗ್ರಹಾರ' ಎಂಬ ಹೆಸರನ್ನು ಹೊಂದಿರುವ ಅನೇಕ ಗ್ರಾಮಗಳನ್ನು ಕಾಣಬಹುದು.

ಕ್ರಿ.ಶ.೧೩೦೮ರ ಶಿವಪುರ ಗ್ರಾಮದ ಒಂದು ಶಾಸನ "ಹೊಯಿಸಣ ಶ್ರೀಮಂಯಲಳಪರ್ಸರು ಪುಣ್ಣಾಡಯಪತ್ತ ನಾಡವರಸಂ, ಕಥಾವಿನೋದದಿಂದ ರಾಜ್ಯಂಗೆಯ್ಯುತ್ತಿರಲುಯೆನಪಯ ಪ್ರಧಾನಂ... ವರಹರೇಸ್ವರ... ಯಹೆಂಗ... ಆಹಾರನು...ಗೊಟ್ಟಂ" ಹೊಯ್ಸಳ ದೊರೆಯಾದ 'ಮಲೆಪರೊಳಗಂಡ' ಎಂಬ ಬಿರುದನ್ನು ಪಡೆದ ನೃಪರಾಮನೇ ಶಾಸನೋಕ್ತ ಶ್ರೀಮಯಲಳಪ ಎಂದು ಹೇಳಬಹುದು.[೨೦] ಪುಣ್ಣಾಡಯಪತ್ತನಾಡು' ದೊಡ್ಡಬಳ್ಳಾಪುರ ತಾಲ್ಲೂಕಿನ ಸಾಂಪ್ರದಾಯಿಕವಾಗಿ ೭೦ ಗ್ರಾಮಗಳನ್ನೊಳ ಗೊಂಡ ಒಂದು ಆಡಳಿತ ವಿಭಾಗ ಇದಾಗಿತ್ತು. ಈ ಪುನ್ನಾಡ -೭೦ನ್ನು ಶಾಸನ ಉಲ್ಲೇಖಿತ ಆಹಾರ ಅಂದರೆ ಸ್ಥಳಗಳನ್ನು ವರಹರೇಶ್ವರ ಎಂಬಾತನಿಗೆ ದಾನವಾಗಿ ಕೊಟ್ಟಿರುವುದು ಎಂದು ತಿಳಿದುಬರುತ್ತದೆ.

ಕ್ರಿ.ಶ.೧೪೬೬ರ ಕನಸವಾಡಿ ಶಾಸನವು ಮಲ್ಲಿಕಾರ್ಜುನ ಎಂಬಾತನ ಮಗ ಜಂಜನರಾಯರು 'ಗಂಗಾಧರದೇವರಿಗೆ ಹರಿವಾಣದ ಅಮೃತಪಡಿಗೆ ಸಲ್ಲಬೇಕೆಂದು ಈಗಿನ ನೆಲಮಂಗಲದ ಸೀಮೆಗೆ ಇರುವ ಕನಸವಾಡಿ ಗ್ರಾಮವನ್ನು ನರಸಿಂಗರಾಯರ ಮಗ ತಿರಿದೇವನಾಯಕರಿಗೆ ದತ್ತಿಯಾಗಿ ಬಿಟ್ಟುಕೊಟ್ಟಿರುವುದಾಗಿ ತಿಳಿಯುತ್ತದೆ.[೨೧] ಈ ಗ್ರಾಮವು ಇಂದಿಗೂ ಅಸ್ತಿತ್ವದಲ್ಲಿದೆ. ಇದು ನಾಡಪ್ರಭುಗಳ ಆಳ್ವಿಕೆಗೆ ಒಳಪಟ್ಟಿದ್ದುದರಿಂದ ವಿಜಯನಗರ ಅರಸರ ಮಹಾಪ್ರಧಾನರಾಗಿರಬಹುದು. ಅಥವಾ ಸ್ಥಳೀಯ ಸಂಸ್ಥೆಯ ಪ್ರತಿನಿಧಿಗಳಾಗಿ ಸ್ಥಳೀಯ ಆಡಳಿತದ ಜವಾಬ್ದಾರಿಯನ್ನು ಹೊತ್ತಿರುವವರಾಗಿದ್ದಿರ ಬಹುದು. ಮೂರನೇ ದೇವರಾಯನ ಕಾಲಕ್ಕೆ ಸೇರಿದ್ದನ್ನೆಲಾದ ಒಂದು ಶಾಸನದಲ್ಲಿ ಗ್ರಾಮಗಳನ್ನು ಮತ್ತು ಕೆರೆಕುಂಟೆಗಳನ್ನು ದಾನವಾಗಿ ನೀಡಿರುವ ವಿಷಯವು ಕ್ರಿ.ಶ.೧೪೫೩ರ ಪುಟ್ಟೈಯನಅಗ್ರಹಾರದ ಶಾಸನದಲ್ಲಿ ಬಂದಿದೆ.[೨೨] ಶಾಸನೋಕ್ತ ಸೀಮೆಗಳ ಗ್ರಾಮಗಳು ವಿಜಯನಗರ ಅರಸರ ಅಧೀನದ ಹುಲುಕಡಿನಾಡಿನ ಆಡಳಿತದ ವ್ಯಾಪ್ತಿಗೆ ಒಳಪಟ್ಟಿರುವುದೆಂದು ಶಾಸನ ಸ್ಪಷ್ಟಪಡಿಸುತ್ತದೆ. ಹುಲುಕಡಿನಾಡ ಪ್ರಭು ಬಯಣಗಲುಡರ ಮಕ್ಕಳು ಬಯಿಪಗಲುಡರು ಕೊಟ್ಟ ಶಿಲಾಶಾಸನದ ಕ್ರಮವೆಂತೆಂದರೆ

ತಿಪುರಸ್ತಳಕೆ ಸಲುವ ಹೆಜ್ಜಾಜಿಯ ಸೀಮೆಯ ವರದೋಹಳ್ಳಿಗೆ ಮೂಡಲು ತೆಂಕಲಾದ ಸೀಮೆಯಲಿ ಬಯಿರಾಪುರವೆಂಬ ಆ ಪುರವನು ಸಿಂಗಪಯಗಳ ಮಕ್ಕಳು ತಿಪರಸಯನಿಗೆ ಮಕರ ಸಂಕ್ರಾಂತಿಯಲು ಮೇಕಭೋಗ್ಯವಾಗಿ ಧಾರೆಯನೆರೆದುಕೊಟ್ಟು, ಆ ಬಯಿರಾಪುರದ ಆ ಪುರದ ಚತುಸೀಮೆಯೊಳಗಣ ಕೆರೆ ಕುಂಟೆ ಆಕ್ಷೀಣ ಆಗಾಮಿಸಿದ್ದ ಸಾಧ್ಯವೆಂಬ ಅಷ್ಟಭೋಗ-ಪುತ್ರ ಪರಂಪರಿಯಾಗಿ ಯೇಕ ಭೋಗ್ಯದರು ಅನುಭವಿಸಿಕೊಯೆಂದು ಯಿ ಅಗ್ರಹಾರಕೆ..." ಎಂದು ೧೪೯೩ರ ಶಾಸನದಲ್ಲಿ ಉಲ್ಲೇಖಗೊಂಡಿದೆ. ಹುಲುಕಡಿ ನಾಡಪ್ರಭುಗಳಾದ ಬಯಣಗೌಡ ಮತ್ತು ಈತನ ಮಗ ಬೈಯಪ್ಪಗೌಡರು ಹೆಜ್ಜಾಜಿ ಸೀಮೆಗೆ ಇರುವ ವರದೋಹಳ್ಳಿ (ಈಗ ಈ ಗ್ರಾಮ ಅಸ್ಥಿತ್ವದಲ್ಲಿಲ್ಲ) ಬಯಿರಾಪುರಗಳನ್ನು ಸಂಗಪಯ್ಯನ ಮಕ್ಕಳಾದ ತಿಪ್ಪರಸಯ್ಯನಿಗೆ ಧಾರೆಯೆರೆದು ಕೊಟ್ಟಿದ್ದಾರೆ. ಬಯಿರಾಪುರ ಮತ್ತು ವರದೋಹಳ್ಳಿಯ ಕೆರೆಕುಂಟೆ ಮುಂತಾದವುಗಳಿಂದ ಬಂದ ಸಂಪತ್ತನ್ನು ಅನುಭವಿಸುವಂತೆ ವಂಶಪಾರಂಪರ್ಯವಾಗಿ ಮುಂದುವರಿಸಿಕೊಂಡು ಹೋಗುವುದು ಎಂದು ಹೇಳೀ ಶಾಸನ ಮುಕ್ತಾಯವಾಗುತ್ತದೆ. ಇಲ್ಲಿನ ಸಿಂಗಪಯ್ಯ ಮತ್ತು ತಿಪ್ಪರಸಯ್ಯ ಬ್ರಾಹ್ಮಣರೇ ಅಥವಾ ಅನ್ಯ ಜಾತಿಗೆ ಸೇರಿದವರೇ ಎಂಬುದು ಸ್ಪಷ್ಟವಾಗಿ ತಿಳಿಯುವುದಿಲ್ಲ. ಇಲ್ಲಿ ಸಾಮಾನ್ಯವಾದ ಊರುಗಳನ್ನು ಅಗ್ರಹಾರಗಳಾಗಿ ಪರಿವರ್ತಿಸಿರುವುದಕ್ಕೆ ಉತ್ತಮವಾದ ನಿರ್ದಶನಗಳಾಗಿವೆ. ಊರುಗಳನ್ನು ಅಗ್ರಹಾರವಾಗಿ ಮಾಡಿ ಬ್ರಾಹ್ಮಣರಿಗೆ ಅಥವಾ ಅನ್ಯಧರ್ಮದವರಿಗೆ ದಾನವಾಗಿ ನೀಡಿದರೆ ಪುಣ್ಯ ಬರುತ್ತದೆಂದು ರಾಜರುಗಳು, ಸಾಮಂತರು, ಮಹಾಪ್ರಧಾನರು, ದಂಣಾಯಕರು ನಂಬಿದ್ದಂತೆ ತಿಳಿಯುತ್ತದೆ. ಪುಟ್ಟೇನಗ್ರಹಾರ ಕ್ರಿ.ಶ.೧೪೯೩ರ ಮತ್ತೊಂದು ಶಿಲಾ ಶಾಸನ.[೨೩] ಹುಲುಕಡಿ ನಾಡನ್ನು ಪ್ರಸ್ತಾಪಿಸುತ್ತಾ ಮೇಲಿನ ಶಾಸನದ ವಿಷಯವನ್ನೇ ಹೇಳಿದೆ.

ತೂಬಗೆರೆ ಗ್ರಾಮದ ಒಂದು ಶಾಸನವು 'ರಾಕ್ಷಸ ಸಂ ಆಷಾಡ ಶು ೧ ಲು ದಾಸೆನಾಯಕರಿಗೆ ಪುಣ್ಯವಾಗಬೇಕೆಂದು ತೂಬರೆಯ (ತೂಬಗೆರೆ) ತಿರುಮಲದೇವರಿಗೆ ನಂದಾದೀಪಕ್ಕೆ ತಿಂಮಪನು ಕೊಟ್ಟ ಹೊಲ" ಎಂಬ ವಿವರವಿದೆ. ಇಂದಿಗೂ ಈ ಗ್ರಾಮ ಹೋಬಳಿ ಕೇಂದ್ರಸ್ಥಾನವಾಗಿದೆ. ತೂಬಗೆರೆ ಗ್ರಾಮದ ತಿರುಮಲದೇವರು ಈಗಿನ ವೆಂಕಟರಮಣಸ್ವಾಮಿ ದೇವಾಲಯ ಎಂದು ಕರೆಯಲ್ಪಟ್ಟಿರುವ ದೇವಾಲಯಕ್ಕೆ ನಂದಾದೀಪವನ್ನು ಉರಿಸಲು ತಿಂಮಪ್ಪನು ಹೊಲವನ್ನು ಬಳುವಳಿಯಾಗಿ ನೀಡಿರುವುದು ಈ ಶಾಸನದಲ್ಲಿ ಉಕ್ತವಾಗಿದೆ.

ಕ್ರಿ.ಶ.೧೫೧೯ರ ತಾಲ್ಲೂಕಿನ ಕಂಚಿಗನಾಳು ಗ್ರಾಮದ ಶಾಸನವೊಂದರಲ್ಲಿ "ಕೃಷ್ಣರಾಯ ಮಹಾರಾಯರು ಪೃಥ್ವೀರಾಜ್ಯಂಗೆಉತ್ತಿರಲು ಭಾರದ್ವಾಜಗೋತ್ರದ ಆಪಸ್ತಂಬ ಸೂತ್ರಾಯ ರಾಮಭಟ್ಟ ಪುರಾಣೀಕ... ಗೌಂಡಿಯಗೋತ್ರದಯಜು ಶಾಖೆಯ ಪಂಡಿತ...ನ ಸಮುದ್ರ...(ಶಿವನಸಮುದ್ರ) ಕಂಚಿಗಣಹಾಲು ಗ್ರಾಮ ಪ್ರತಿನಾಮ ಸಿಂಗಸಮುದ್ರ ಅಗ್ರಹಾರಕ್ಕೆ ಆ ಗ್ರಾಮವನು ನಿಮಗೆ" ಎಂಬ

ವಿವರವಿದೆ.[೨೪] ಇದು ವಿಜಯನಗರ ಅರಸರ ಕೃಷ್ಣದೇವರಾಯನನ್ನು ಪ್ರಸ್ತಾಪಿಸಿರುವುದರಿಂದ ಕಂಚಿಗನಾಳ ಗ್ರಾಮವೂ ವಿಜಯನಗರ ಶಾಖೆಗೆ ಒಳಪಟ್ಟಿತ್ತು ಎಂಬುದು ದೃಢವಾಗುತ್ತದೆ. ಅಲ್ಲದೆ ರಾಮಭಟ್ಟಪುರಾಣಿಕ ಎಂಬ ಒಂದು ಶಾಖೆಯ ಪಂಡಿತನಿಗೆ ಸಿಂಗಸಮುದ್ರವೆಂಬ ಗ್ರಾಮಕ್ಕೆ ಪ್ರತಿನಾಮವಾದ ಕಂಚಿಗನಹಾಳನ್ನು ಅಗ್ರಹಾರವಾಗಿ ಪರಿವರ್ತಿಸಿರುವುದು ಸ್ಪಷ್ಟವಾಗಿ ಅರ್ಥವಾಗುತ್ತದೆ. ಹಾಗಾಗಿ ಕಂಚಿಗನಾಳು ಗ್ರಾಮವನ್ನು ಬ್ರಾಹ್ಮಣಪಂಡಿತ ರಾಮಭಟ್ಟಪುರಾಣಿಕನಿಗೆ ಅಗ್ರಹಾರವನ್ನಾಗಿ ದಾನವಾಗಿ ನೀಡಿರುವುದು ತಿಳಿಯುವುದು. ಇಲ್ಲಿ ಉಲ್ಲೇಖವಾಗಿರುವ ಶಿವನಸಮುದ್ರ, ನಂಗಸಮುದ್ರ ಎರಡೂ ಭಿನ್ನ ಶಾಸನದಲ್ಲಿ...ನಸಮುದ್ರ(ಅಕ್ಷರಗಳು ಹೋಗಿವೆ) ಎಂದಿರುವುದರಿಂದ ಹೀಗೆ ಊಹಿಸಲು ಸಾಧ್ಯವಿದೆ. ಇದಕ್ಕೆ ಮತ್ತೊಂದು ಆಧಾರವೆಂದರೆ ಕ್ರಿ.ಶ.೧೫೩೨ರ ನೆಲಮಂಗಲ ತಾಲ್ಲೂಕಿನ ಹೆಸರುಘಟ್ಟ ಗ್ರಾಮದ ಶಾಸನವೊಂದರಲ್ಲಿ "ಚೇಲೂರು ಚಾವಡಿಗೆ ಸಲುವ ಎಲಹಂಕನಾಡ ಸಿವನ ಸಮುದ್ರ ಸೀಮೆಯೊಳಗಣ" ಎಂಬ ವಿವರದಲ್ಲಿ ಸಿವನ ಸಮುದ್ರವೆಂಬುದು ಅನೇಕ ಗ್ರಾಮಗಳನ್ನೊಳಗೊಂಡ ಸೀಮೆಯಾಗಿದೆ.[೨೫] ಇಂದಿಗೂ ಈ ಗ್ರಾಮಗಳು ಅಸ್ಥಿತ್ವದಲ್ಲಿರುವುದರಿಂದ ಹೀಗೆ ಅರ್ಥೈಸಬಹುದು.

ಅಗ್ರಹಾರವನ್ನು, ಆ ಅಗ್ರಹಾರಕ್ಕೆ ಒಳಪಟ್ಟ ಸೀಮೆಯ ಭಾಗವನ್ನು ಒಬ್ಬ ಶಾನುಭೋವ(ಗ)ನಿಗೆ ನೀಡಿರುವುದನ್ನು ಕ್ರಿ.ಶ.೧೫೩೫ರ ವಿಜಯನಗರ ಅರಸನಾದ ಅಚ್ಚುತರಾಯನ ಕಾಲದ ಒಂದು ಶಾಸನ ಸಮರ್ಥಿಸುತ್ತದೆ.[೨೬] ಆದರೆ ಶಾಸನದಲ್ಲಿ ಯಾವುದೇ ಗ್ರಾಮಗಳು ಉಲ್ಲೇಖಗೊಂಡಿಲ್ಲ. ಈ ಶಾಸನ ರಾಮಪುರ ಶಾಸನವಾದ್ದರಿಂದ. ಗ್ರಾಮದ ಸುತ್ತಮುತ್ತಲಿನ ಬಹುಭಾಗ ವಿಜಯನಗರ ಅರಸರ ಪ್ರಾದೇಶಿಕ ವಿಭಾಗವಾದ್ದರಿಂದ ರಾಮಪುರ ಊರನ್ನು ಶಾನುಭೋವನಿಗೆ ಅಗ್ರಹಾರ ದಾನವಾಗಿ ನೀಡಿರುವುದನ್ನು ಹೇಳುತ್ತದೆ. ಈ ಅಗ್ರಹಾರವನ್ನು ಮತ್ತು ಚತುಸ್ಸೀಮೆಯನ್ನು ದಾನವಾಗಿ ಪಡೆದ ಬ್ರಾಹ್ಮಣ ಶಾನುಭೋಗ 'ಮಹಾಜನ'ಗಳು ಅವರೇ ಆ ಅಗ್ರಹಾರದ ಪ್ರಭು ಎಂದು ಸಹ ಅರ್ಥೈಸಲು ಸಾಧ್ಯವಿದೆ.

ವಿಜಯನಗರ ಅರಸರ ಕಾಲದ ಪ್ರಾದೇಶಿಕ ವಿಭಾಗಗಳಲ್ಲಿ ಕಂಡುಬರುವ ಕೆಲವು ಮನೆತನಗಳ ಶಾಸನಗಳಲ್ಲಿಯೂ ಅವರ ವಂಶಾವಳಿಯನ್ನು ಕಾಣಬಹುದು. 'ಆವತಿನಾಡ ಪ್ರಭು... ಬಯಿರೇಗೌಡ ಅಯ್ಯನವರ ಪೌತ್ರರಾದ ಹಾವಳಿ ಬಯಿರಪಗಉಡರ ಅಯ್ಯನವರ ಪುತ್ರರಾದ ಯಿಂಮಡಿ ಹಾವಳಿ ಬಯಿರಪ ಗಉಡರು ಆತ್ರೆಗೋತ್ರದ ಅಶ್ವಲಾಯನ ಸೂತ್ರದರುಕುಶಾರ್ಕಾ ಧ್ಯಾಯಿಗಳಾದ.. ಪಂಡಿತ ಪಾತ್ರರಾದ ತಿರುಮಲ ಪಂಡಿತರ ಪುತ್ರರಾದ ಪುಟಂಣ ಪಂಡಿತರಿಗೆ-ಹಣಬೆ ನಾಮಕ್ಕೆ ಪ್ರತಿನಾಮವಾಗಿ ಯಿಂಯಡಿ ಬಯಿರಾಪುರವೆಂಬ ಸರ್ವಮಾನ್ಯ ಚತುರ್ಥಗೋತ್ರದ ಬಯಿಪಗಉಡರ ಪಾತ್ರರಾದ ಯಿಂಮಡಿಹಾವಳೀಬಯಿರೇಗಉಡರು ಆತ್ರೇಗೋತ್ರದ ಅಶ್ವಲಾಯನ ಸೂತ್ರದ ರುಕುಶಾಕಾಧ್ಯಾಯಿ ಗಳಾದ ಗಂಡ ಪಂಡಿತರ ಪಾತ್ರರಾದ ತಿರುಮಲ ಪಂಡಿತರ ಪುತ್ರರಾದ ತಿರುಮಲ ಪಂಡಿತರಿಗೆ

ಸೂರ್ಯೋಪರಾಗಪುಂಣಕಾಲದಲುತಂಮ ತಂದೆ ಹಾವಳಿಯ ಬಯರಯ ಗಲುಡ ಅಯನವರಿಗೆ ಆತ್ತೇಗೋತ್ರದ ಆಪ್ತಸ್ತಂಭ ಸೂತ್ರದರು ಕುಶಾಕಾಧ್ಯಾಯಿಗಳಾದ ಗೂಳೂರ ಪುಟಣ್ಣ ಪಂಡಿತರ ಪುತ್ರರಾದ ತಿಂಮಾಪಂಡಿತರ ಪುತ್ರರಾದ ತಿಂಮಣ ಪಂಡಿತರಿಗೆ... ಯಿಂಮಡಿಹಾವಳಿಬಯಿರೇ ಗಲುಡರು ದಾರೆನೆರೆದು ಕೊಟ್ಟಲು ಯೀ ಅಗ್ರಹಾರಕೆ... ಎಂಬುದಾಗಿ ಕ್ರಿ.ಶ.೧೬೧೦ ನಾಗೇನಹಳ್ಳಿ ಶಾಸನ ಹೇಳುತ್ತದೆ.[೨೭] ಕಾಂಚಿಯಿಂದ ಬಂದ ಏಳು ಜನ ರೈತರಲ್ಲಿ ಬೈರೇಗೌಡ ಎಂಬಾತನೇ ಆವತಿಯಲ್ಲಿ ನೆಲೆನಿಂತು ಎಲಹಂಕ ನಾಡಪ್ರಭುಗಳ ಸಮಕಾಲೀನಾಗಿ ಪ್ರಭುತ್ವ ಸಾಧಿಸಿದವರೆಂದು ತೋರುತ್ತದೆ. ಪ್ರಭು ಬಯಿರೇಗೌಡ ಪುತ್ರರಾದ ಹಾವಳಿ ಬಯಿರಪ್ಪಗೌಡ. ಈತನ ಮಗನಾದ ಯಿಂಮಡಿ ಹಾವಳಿ ಬಯಿರಪ್ಪ ಗಲುಡರು. ಹಣಬೆ ಗ್ರಾಮಕ್ಕೆ ಪ್ರತಿನಾಮವಾಗಿ ಬಯಿರಪುರ (ಬೈರಾಪುರ) ಎಂಬ ಗ್ರಾಮವನ್ನು ಬ್ರಾಹಣ ಪಂಡಿತರಾದ ಗೂಳೂರು ಪುಟಂಣ ಪಂಡಿತನ ಮಗನಾದ ತಿಮಣ ಪಂಡಿತರಿಗೆ ಅಗ್ರಹಾರವಾಗಿ ಉಡುಗೊರೆ ನೀಡುತ್ತಾರೆ. ಈ ಗೂಳೂರು ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ಯಾವ ಹೆಸರಿನಿಂದಲೂ ಇಲ್ಲ. ತುಮಕೂರು ಜಿಲ್ಲೆಯ ಗುಬ್ಬಿ ತಾಲ್ಲೂಕಿನ ಗೂಳೂರು ಎಂದು ಹೇಳಬಹುದು. ಈಗಲೂ ಹಣಬೆ, ಬೈರಾಪುರ ಗ್ರಾಮಗಳು ಅಸ್ತಿತ್ವದಲ್ಲಿವೆ. ಇಂತಹ ಊರುಗಳನ್ನು ಅಗ್ರಹಾರವಾಗಿ ಮಾಡಿ ಬ್ರಾಹ್ಮಣರಿಗೆ ದಾನವಾಗಿ ಕೊಟ್ಟರೆ ಬಹಳ ಪುಣ್ಯ ಬರುತ್ತದೆಂದು ನಂಬಿಕೆ ಇದ್ದಿರಬಹುದು. ಅಲ್ಲದೆ ಬ್ರಾಹ್ಮಣರಲ್ಲದೆ ಅನ್ಯ ಜಾತಿಯವರಿಗೂ ಗ್ರಾಮಗಳನ್ನು ದಾನವಾಗಿ ಬಿಟ್ಟುಕೊಟ್ಟಿರುವುದನ್ನು ಕ್ರಿ.ಶ.೧೬೪೬ರ ಹಂಚರಹಳ್ಳಿ ಶಾಸನ ಉಲ್ಲೇಖಿಸುತ್ತದೆ.[೨೮]

"ಸಂಬಾಜಿರಾಯನು ಚನ್ನಬಸವ ಅಪವಡೇರಿಗೆ ಕೊಟ ಹಚಿಪುರ ಯಿದಕೆ" ಎಂಬ ವಿವರ ಈ ಶಾಸನದಲ್ಲಿದೆ. ಶಾಸನೋಕ್ತ ಹಚಿಪುರವೇ ಈಗನ ಹಂಚರಹಳ್ಳೀ ಇದನ್ನು ಸಂಬಾಜಿರಾಯ ಎಂಬಾತನು ಚನ್ನಬಸಅಪ ಇದು ಚನ್ನಬಸವಪ್ಪ ವಡೇರಿಗೆ-ಒಡೆಯರಿಗೆ ಈ ಹಂಚರಹಳ್ಳಿ ಗ್ರಾಮವನ್ನು ನೀಡಿರುವುದು ತಿಳಿಯುತ್ತದೆ. ಎಲಹಂಕನಾಡ ಪ್ರಭು ಬಯಿರೇಗೌಡನ ಮಗ ಮಂಚೆಗೌಂಡರಿಗೆ ನಂದಿಗುಂದ ಗ್ರಾಮದ ಸುತ್ತಮುತ್ತಲಿನ ಬಹುಭಾಗವನ್ನು ದಾನವಾಗಿ ನೀಡುವುದನ್ನು ಕ್ರಿ.ಶ.೧೪೭೧ರ ನಂದಿಗುಂದ ಶಾಸನ ವಿವರ ನೀಡುತ್ತದೆ.[೨೯] ಈ ಎಲಹಂಕ ನಾಡ ಪ್ರಭುಗಳು, ಆವತಿನಾಡ ಪ್ರಭುಗಳು, ಹುಲುಕಡಿನಾಡ ಪ್ರಭುಗಳು, ವಿಜಯನಗರ ಅರಸರ ಆಳ್ವಿಕೆಯ ಕಾಲದಲ್ಲಿ ಹೆಚ್ಚು ಪ್ರಸಿದ್ಧಿಗೆ ಬಂದಂತೆ ತೋರುತ್ತದೆ. ಅಲ್ಲದೆ ಇವರೆಲ್ಲ ಅವರಿಗೆ ಅತ್ಯಂತ ವಿಧೇಯರಾಗಿದ್ದರು ಎನ್ನಬಹುದು. ಕ್ರಿ.ಶ.೧೬೫೪ ಕಾಮಾಕ್ಷಿಪುರದ ಶಾಸನವು "ಶ್ರೀ ವಿರೂಪಾಕ್ಷರಾಯ ಕಾಮಾಕ್ಷಿಪುರಕೆ ಸಲುವ ಆ ವಿಶ್ವನಾಥಮೂಲಿಪುರ ಅಗ್ರಹಾರಕೆ" ಎಂಬ ವಿವರ ಇದೆ.[೩೦] ಈ ಕಾಮಾಕ್ಷಿಪುರ ಕಾಕೋಳು ಸ್ಥಳಕ್ಕೆ ಸೇರಿದ್ದಾಗಿದ್ದು, ಎಲಹಂಕನಾಡಿಗೆ ಒಳಪಟ್ಟಿವೆ. ಆದರೂ ಇವುಗಳ ಮೇಲೆ ಹುಲುಕಡಿನಾಡ

ಪ್ರಭುಗಳ ಪ್ರಭಾವವಿದ್ದಂತೆ ತಿಳಿಯುತ್ತದೆ. ವಿರುಪಾಕ್ಷ ಎಂಬಾತ ಕಾಮಾಕ್ಷಿಪುರದ ಹತ್ತಿರದ ವಿಶ್ವನಾಥಪುರವನ್ನು ಅಗ್ರಹಾರವಾಗಿ ನೀಡುತ್ತಾನೆ. ಆದರೆ ಯಾರಿಗೆ ದಾನವಾಗಿ ಬಿಟ್ಟು ಕೊಡುತ್ತಾನೆ ಎಂಬುದಕ್ಕೆ ಎಲ್ಲೂ ಆಧಾರಗಳಿಲ್ಲ. ಕರ್ನಾಟಕದ ಬಹುತೇಕ ಶಾಸನಗಳಲ್ಲಿ ದೇವಾಲಯಗಳ ನಿರ್ಮಾಣಕ್ಕಾಗಿ, ಜೀರ್ಣೋದ್ಧಾರಕ್ಕಾಗಿ, ವ್ಯಕ್ತಿಗಳಿಗಾಗಿ ದಾನದತ್ತಿಗಳನ್ನು ಬಿಡುವುದು, ಅಗ್ರಹಾರಗಳನ್ನು ದತ್ತಿಯಾಗಿ ನಿಡುವುದು ಬಹಳಷ್ಟು ಹಿಂದೆಯೇ ಕಾಣಲಾರಂಭಿಸಿದ್ದವು ಎಂಬುದಕ್ಕೆ ಆಧಾರಗಳಿವೆ. ಇವುಗಳ ಜೊತೆಗೆ ಹೊಲ, ಗದ್ದೆ ಮತ್ತು ಭೂಮಿಯನ್ನು ದಾನ ಮಾಡುವ, ಬಳುವಳಿಯಾಗಿ ಬಿಡುವುದು ಬಹಳ ಹಿಂದಿನಿಂದಲೂ ನಡೆದುಕೊಂಡು ಬಂದಿದೆ. ಇದಕ್ಕೆ ಮೂಲತಃ ಧರ್ಮ ಪ್ರೇರಿತವೇ ಕಾರಣವಾಗಿದೆ ಎಂದು ಹೇಳಬಹುದು. ಇದಕ್ಕೆ ಉದಾಹರಣೆಯಂತೆ ದೊಡ್ಡಬಳ್ಳಾಪುರ ತಾಲ್ಲೂಕಿನ ಕೆಲವು ಶಾಸನಗಳು ವ್ಯಕ್ತಿಗೆ ನಾಡಪ್ರಭುಗಳಿಗೆ ಭೂಮಿಯನ್ನು ದಾನ ನೀಡಿರುವ ಬಗೆಗೆ ಆಧಾರಗಳಿವೆ. ಶೀಮೆಯ ದಂಣಾಯಕರಿಗೆ ಎಲಹಂಕನಾಡಿನ ಮಲದಿಪನಪುರ ಮತ್ತು ಹಡುವನಹಳ್ಳಿ (ಈಗಿನ ಹಾಡೋನಹಳ್ಳಿ) ಚತುಸ್ಸೀಮೆಯನ್ನು ಬರೆದುಕೊಟ್ಟಿರುವುದಾಗಿ ಶಾಸನ ವಿವರಿಸುತ್ತದೆ. ಇಲ್ಲಿನ ಮತ್ತೊಂದು ವಿಶೇಷತೆಯೆಂದರೆ ಎಲಹಂಕನಾಡನ್ನು ಪ್ರಸ್ತಾಪಿಸುವ ಹಲವಾರು ಶಾಸನಗಳು ಈ ತಾಲ್ಲೂಕಿನಲ್ಲಿ ದೊರೆತಿವೆ. ೧೩೨೮ರ ಶಾಸನದ ಕೆಲವು ಅಂಶಗಳನ್ನು ಹೇಳುವ ಮತ್ತೊಂದು ಶಾಸನ ಕುರುವಿಗೆರೆ ಗ್ರಾಮದಲ್ಲಿದೆ. ಹೊಯ್ಸಳ ಅರಸರು ಮಹಾಪ್ರಧಾನರಾದ ಪೊಂನಣನವರ ಮಕ್ಕಳು ಕಾಮದಂಣಾಯಕರಿಗೆ ಕುರುವಿಗೆರೆ ಗ್ರಾಮದ ಚತುಸ್ಸೀಮೆಯನ್ನು ಬಿಟ್ಟುಕೊಟ್ಟಿರುವುದಾಗಿ ತಿಳಿದುಬರುತ್ತದೆ. ಕ್ರಿ.ಶ.೧೩೨೮ರ ಶಾಸನ ಹಾಡೋನಹಳ್ಳಿಯಲ್ಲಿದೆ.[೩೧] ಇದು ಹೊಯ್ಸಳ ಚಕ್ರವರ್ತಿ ವೀರಬಲ್ಲಾಳನ ಕುರಿತುದಾಗಿದೆ. ಇವರ ಕಾಲದ ಮಹಾಪ್ರಧಾನ ಪೊನ್ನಣ್ಣನ ಮಕ್ಕಳು ಸೀಮೆಯ ದಂಣಾಯಕರಿಗೆ ಎಲಹಂಕನಾಡಿಗೆ ಮಲದಿಪನಪುರ ಹಾಗೂ ಹಾಡೋನಹಳ್ಳಿಯ ಚತುಸ್ಸೀಮೆಯನ್ನು ಬರೆದು ಕೊಟ್ಟಿರುವುದಾಗಿ ಶಾಸನ ವಿವರಿಸುತ್ತದೆ. ಇದೇ ಕಾಲದ ಮತ್ತೊಂದು ಶಾಸನ ಕುರುವಿಗೆರೆ ಗ್ರಾಮದಲ್ಲಿದೆ.[೩೨] ಪೊಂನಣನವರ ಮಕ್ಕಳು ಕಾಮದಂಣಾಯಕರಿಗೆ ಕುರುವಿಗೆರೆ ಗ್ರಾಮದ ಚತುಸ್ಸೀಮೆಯನ್ನು ಬಿಟ್ಟುಕೊಟ್ಟಿರುವುದಾಗಿ ತಿಳಿದುಬರುತ್ತದೆ. ಈ ಶಾಸನಗಳಲ್ಲಿನ ಮತ್ತೊಂದು ವಿಶೇಷತೆಯೆಂದರೆ ಎಲಹಂಕ ನಾಡನ್ನು ಪ್ರಸ್ತಾಪಿಸುತ್ತವೆ. ಈ ರೀತಿಯ ಹಲವು ಶಾಸನಗಳು ತಾಲ್ಲೂಕಿನಲ್ಲಿವೆ. ಶಾಸನ ಕ್ಷೇತ್ರದಲ್ಲಿ ಇದುವರೆವಿಗೂ ಗಮನಕ್ಕೆ ಬಾರದ ಕೆಲವು ಹೊಸ ವಿಷಯಗಳನ್ನು ಮಲ್ಲನಪಾಳ್ಯದ ತಾಮ್ರಶಾಸನ ಬೆಳಕು ಚೆಲ್ಲುತ್ತದೆ. ಕ್ರಿ.ಶ.೧೬೮೭ರ ಈ ತಾಮ್ರಶಾಸನದಲ್ಲಿ[೩೩] "ರಾಜಾಧಿರಾಜಗಳೂ ಕಂಠೀರಜು ಕಾಂತ್ಯೆಯರಾಜು ಮಾಂತ್ರೆಯ ರಾಜು ಖರಾ ಚೂರಿನಂಗ್ಯೆಯ ರಾಜುಲೆಳೊ ಸ್ವಾಮಿಗಳೂ ಕರ್ತರು ಮಾಗಡಿ ರಂಗಸ್ವಾಮಿಯಾ ಬಳೆ ಆನೆಯಗೆದೂ ಕಾಪೂಕೆ ಕೂಂಡಂತ್ತಾ ಆನೆಗೆ ಶೂನ್ಯ ಮಾಡಿಸಿದರು ಪಕ್ಕೆಯೊಳಗೆ ಕೊಡೆ ಕೊಡೆಕೊರಾ ಹುಳುಗಳು ಬಿದು

ಸಾಯೋದಾಗಿ ಯೀ ಆನೆಯಾ ಯರದರು ವಾಸಿ ಮಾಡಿದರೆ ಅವರಿಗೆ ರಾಜ್ಯದಯೆಲ್ಲಿ ದಾನ ಪತ್ರಾಂಗಳು ಕೊಡುತ್ತದೆಯೆಂಬುದಾಗಿ ಗಜಾಂಕುಶ ವಂಟಪುಲಿಬೈರವನೆ ರ್ತಯಿಂನು ಯಾರು ಯಿಲ್ಲ ಬೂವಿಯಲ್ಲಿ ಯಿಂತನೆ ಸಮರ್ಪನೂ ಯಬೂದಗಿ ಚೆರಲಾಲಯೆಚು ದಿನಕೆ ಯೀ ಆನೆಗೆ ಮಾಡಿದೀ ಸೂರಾನ್ಯವಂನೂ ವಾಸೆ ಮಾಡಲಾಗಿ ಮೆಚ್ಚಿದರು ಯರಡ ಕೈಗೆ ಪಚೆದ ಕಡಗವನು ಆಕಿತು ತುಂಬ ಉಡುಗೂರೆ ಮಾಡಿ ಸಾವಿರ ವರ ಆವಂನು ಕೊಟ್ಟು ಸಂತ್ರೈಸಿಕೆಳರ ಹಸುವಗಾ | ನಂಮರಾಜ್ಯದೊಳಗೆ ಯಿತ್ತನಿಗೆ ಮಾಡಿಕೊಟ್ಟಂತಾ ದಾನ ಪತ್ರಾ ವಿವರ" ಎಂಬ ಉಲ್ಲೇಖವಿದೆ. ಈ ಶಾಸನವು ಒಬ್ಬ ಆನೆ ವೈದ್ಯನನ್ನು ಕುರಿತ ಅಪರೂಪದ ತಾಮ್ರಶಾಸನವಾಗಿದೆ. ಮಾಗಡಿ ರಂಗನಾಥ ಸ್ವಾಮಿ ದೇವಾಲಯದಲ್ಲಿದ್ದ ಆನೆಯು, ಹುಳುಗಳು ಬಿದ್ದು ಸಾಯುವಂತಹ ಪರಿಸ್ಥಿತಿಗೆ ತಲುಪುತ್ತದೆ. ಕಾಂತ್ಯೆಯರಾಜ ಎಂಬಾತನು ಆನೆಯ ಕಾಲಿಗೆ ಬಿದ್ದ ಹುಳುಗಳನ್ನು ತೆಗೆದು ಆನೆಯನ್ನು ಕಾಪಾಡಿದವರಿಗೆ ರಂಗನಾಥಸ್ವಾಮಿಯ ಬಳೆಗಳನ್ನು, ರಾಜ್ಯದಲ್ಲಿ ಎಲ್ಲಿಯಾದರೂ ದಾನಪತ್ರಗಳನ್ನು ಕೊಡುವುದಾಗಿ ಹೇಳುತ್ತಾರೆ. ಆ ಸಂದರ್ಭದಲ್ಲಿ ಆನೆ ವೈದ್ಯನಾದ ಪುಲಿಬೈರವ ಎಂಬಾತನು ಆನೆಯ ಕಾಲಿಗೆ ಬಿದ್ದ ಹುಳುಗಳನ್ನು ತೆಗೆದು, ಔಷಧಿ ನೀಡಿ ಆನೆಯನ್ನು ಬದುಕುಳಿಸುತ್ತಾನೆ. (ಕಾಪಾಡುತ್ತಾನೆ) ದೇವಾಲಯದ ಕರ್ತರು ಈತನ ಕಾರ್ಯವನ್ನು ಮೆಚ್ಚಿ ಭುಮಿಯಲ್ಲಿ ಈತನೇ ಸಮರ್ಥನೆಂದು, ವೈದ್ಯನ ಎರಡೂ ಕೈಗೆ ಬಂಗಾರದ ಕಡಗವನ್ನು ಹಾಕಿ, ಸಾವಿರ ವರಹವನ್ನು ಉಡುಗೊರೆಯಾಗಿ ಕೊಟ್ಟು ಸಂತೈಸುತ್ತಾರೆ. ಅಲ್ಲದೆ ತಾವು ನೀಡಿದ ಮಾತಿನ ಪ್ರಕಾರ ಕೆಲವು ಗ್ರಾಮಗಳ ಭೂಮಿಯನ್ನು ನೀಡಿ, ದಾನಪತ್ರಗಳನ್ನು ನೀಡುತ್ತಾರೆ. ಒಬ್ಬ ಆನೆ ವೈದ್ಯನನ್ನು ಕುರಿತ ಪ್ರಥಮ ಶಾಸನ ಇದಾಗಿದೆ ಎಂದು ಹೇಳಬಹುದು.

ಕ್ರಿ.ಶ.೧೫೩೪ರ ಒಂದು ವೈಷ್ಣವ ದಾನಶಾಸನ ತಾಲ್ಲೂಕಿನ 'ಅಂಬಲಗೆರೆ' ಗ್ರಾಮದಲ್ಲಿದೆ.[೩೪] ಈ ಶಾಸನವನ್ನು ಗ್ರಾಮದಲ್ಲಿರುವ ಆಂಜನೇಯ ದೇವಾಲಯದ ಗೋಡೆ ಬಳಿ ನಿಲ್ಲಿಸಲಾಗಿದೆ. ಮೂರುವರೆ ಅಡಿ ಅಗಲ, ೬ ಅಡಿ ಎತ್ತರದ ಕಲ್ಲಿನ ಮೇಲೆ ಅಕ್ಷರಗಳನ್ನು ಸ್ಪಷ್ಟವಾಗಿ, ಸ್ಫೂಟವಾಗಿ ಕೆತ್ತಲಾಗಿದೆ. ಶಾಸನದ ಮೇಲ್ಭಾಗ ಸ್ವಲ್ಪ ಹಾಳಾಗಿದ್ದು, ಉಳಿದ ಭಾಗವು ಸುರಕ್ಷಿತವಾಗಿದೆ. ಇದರ ಮೇಲಿನ ಭಾಗದಲ್ಲಿ ಒಂದು ಸಂಸ್ಕೃತ ಪ್ರಾರ್ಥನಾ ಶ್ಲೋಕವಿದ್ದು, ಕೆಲವು ಅಕ್ಷರಗಳು ಮಾತ್ರ ಕಾಣುತ್ತವೆ. ಇನ್ನುಳಿದ ಇಪ್ಪತ್ತನಾಲ್ಕು ಸಾಲಿನ ಅಕ್ಷರಗಳು ಸ್ಫುಟವಾಗಿ ಕಾಣುತ್ತವೆ. ಮೇಲ್ಭಾಗದಲ್ಲಿ ಶಂಖ, ಚಕ್ರ ಮತ್ತು ನಾಮವನ್ನು ನಿರೂಪಿಸಲಾಗಿದೆ. ಈ ಶಾಸನವು ವಿಜಯನಗರದ ಅರಸು ಅಚ್ಚುತರಾಯನ ಕಾಲಕ್ಕೆ ಸೇರಿದ್ದಾಗಿದ್ದು ಇದು ಮೊದಲಿಗೆ 'ಶಾಸನ ಸಂಶೋಧನೆ' ಗ್ರಂಥದಲ್ಲಿ ಪ್ರಕಟವಾಗಿದೆ. ಅದರ ಸ್ಥೂಲ ಪಾಠ ಈ ಕೆಳಗಿನಂತಿದೆ.

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರುಷ ೧೪೫೬
ನೆಯ ಜಯ ಸಂವತ್ಸರ ಶ್ರಾವಣ ಶುದ್ಧ ೧೨ ಬುಧವಾರದಲು ಶ್ರೀಮ
ನ್ಮಹಾರಾಜಾಧಿರಾಜ ಪರಮೇಶ್ವರ ಶ್ರೀ ವೀರಪ್ರತಾಪ ಅಚ್ಚು
ತರಾಯ ಮಹಾರಾಯರು ಪೃಥ್ವಿರಾಜ್ಯಂ ಗೈಉತಿರಲಾಗಿ ಅಚ್ಚು
ತರಾಯ ಮಹಾರಾಯರ ನಿರೂಪದಿಂದ ಅಮರದ ತಿಂಮರಸರ ಮ
ಕ್ಕಳು ಕರಣಿಕ ರಾಮಕೃಷ್ಣಯ್ಯ ರಂಗಪ್ಪಗಳು ಬಟ್ಟರಯ್ಯಗಳ ಸಿ
ಶ್ಯರು ಅಂಬಲಿಗೆರೆಯ ಮೋಕ್ತಗಾರ ಚಿಕ್ಕಣ್ಣದಾಸರಿಗೆ ಕೊಟ್ಟ ಧರ್ಮಶಾ
ಸನದಾ ಕ್ರಮವೆಂತೆಂದರೆ ಸ್ವಾಮಿ ನಮಗೆ ನಾಯಕ ತನಕೆ ಪಾಲಿಸಿದ ಹು
ಲುಕಡಿನಾಡ ಹಣಬೆ ಸ್ಥಳಕೆ ಸಲುವ ಅಂಬಲಿಗೆರೆ
ಜಿರ್ನುದಾರವಾಗಿ ಸರ್ವಮಾನ್ಯವಾಗಿ ಶ್ರೀ ತಿರುವೆಂಗಳನಾತನ ಸಂನಿದಿಯ
ಸಂಮುಕದಲಿ ದ್ವಾದಸಿ ಪುಣ್ಯಕಾಲದಲಿ ಸಹಿರಣ್ಯೋದಕ ದಾನ ದಾರಾಪೂ
ರ್ವಕವಾಗಿ ದಂಮ ಸಹಾಯ ಸೇವಕಾ ವೃತ್ತಿಯಾಗಿ ಕೊಟ್ಟೆವಾಗಿ ಆ ಗ್ರಾಮಗ
ಳಿಗೆ ಸಲುವ ಚತುಸ್ಸೀಮೆವೊಳಗಾದ ಕಾಣಿಕೆ ಕಡಾಯ ಸುಂಕಬಿಟ್ಟ ಬಿರಾ
ಡ ನಿಧಿ ನಿಕ್ಷೇಪ ಆಗಾಮಿ ಸಿದ್ಧಸಾಮ್ಯ, ಜಲಪಾಶಾಣ ಅಷ್ಟಭೋಗ ತೇಜಸಾ
ಮ್ಯವನು ಆಗು ಮಾಡಿಕೊಂಡು ತಿರುವೆಂಗಳನಾತನ ಪರುಶೆಗೆ ಹಸು ಮಕ್ಕಳಿಗೆ
ಹಾಲು ಸಿಸುವಿಗೆ ಬೆಂಣೆಯನು ಎರಡು ಸೇವೆಯನು ಮಾಡಿಕೊಂಡು ಯಿರು
ಹುದು ಎಂದು ಅಮರದ ತಿಂಮರಸರ ಮಕ್ಕಳು ರಂಗಪ್ಪಗಳು ಅಂಬಲಿ
ಗೆರೆಯ ಹಾಲಿ ಮೋಕ್ತಗಾರ ಚಿಕ್ಕಣ್ಣದಾಸರಿಗೆ ತ್ರಿವಾಚಉಕಾರ ವಾ
ಗಿ ಯೀ ದಂಮಕೆ ತಪ್ಪಿದವರು ವಾರಣಾಸಿಲಿ ಗೋವು ಬ್ರಾಹ್ಮಣರ ಕೊಂದ ಪಾಪ
ಕೆ ಹೋಹರು"

ಇದರ ಕಾಲ "ಶಕವರುಷ ೧೪೫೬ನೆಯ ಜಯ ಸಂವತ್ಸರದ ಶ್ರಾವಣಶುದ್ಧ ೧೨ ಬುಧವಾರ" ಎಂದು ಉಲ್ಲೇಖಗೊಂಡಿದ್ದು ಅದು ಕ್ರಿ.ಶ.೧೫೩೪ ಜುಲೈ ೨೨ಕ್ಕೆ ಸರಿಯಾಗಿ ಹೊಂದಾಣಿಕೆಯಾಗುತ್ತದೆ.[೩೫] ವಿಜಯನಗರ ಅರಸ ಅಚ್ಚುತರಾಯನ ಹೇಳಿಕೆಯಂತೆ ಈಗಿನ ಹಣಬೆ ಸ್ಥಳದ ನಾಯಕರುಗಳಾದ ಅಮರದ ತಿಂಮರಸರು ಈತನ ಮಕ್ಕಳಾದ ಕರಣಿಕ ರಾಮಕೃಷ್ಣಯ್ಯ ರಂಗಪ್ಪ ಮತ್ತು ಭಟ್ಟರಯ್ಯಗಳ ಶಿಷ್ಯರಾದ ಮೋಕ್ತಗಾರ(ಮೋಕ್ತೇಸರ)ನಾದ ಚಿಕ್ಕಣ್ಣ ದಾಸರಿಗೆ ಅಂಬಲಗೆರೆ ಗ್ರಾಮವನ್ನು ದಾನವಾಗಿ ನೀಡುತ್ತಾರೆ. ಈ ದಾನವನ್ನು ನೀಡಿರುವುದು ತಿರುವೆಂಗಳನ ಪರುಶೆ ಅಥವಾ ಜಾತ್ರೆಯಲ್ಲಿ ಮಕ್ಕಳಿಗೆ ಹಾಲು ಮತ್ತು ಬೆಣ್ಣೆಯನ್ನು ಹಂಚುವುದಕ್ಕಾಗಿ ಎಂದು ಶಾಸನದಲ್ಲಿ ಉಲ್ಲೇಖಗೊಂಡಿದೆ. ಶಾಸನ ಉಲ್ಲೇಖಿತ ಹುಲುಕಡಿನಾಡು, ಹಣಬೆ ಸ್ಥಳಗಳು ಇದೇ ಹೆಸರುಗಳಿಂದ ಪ್ರಚುರದಲ್ಲಿವೆ. ಇವುಗಳು ಅಂಬಲಗೆರೆ ಗ್ರಾಮಕ್ಕೆ ಹತ್ತಿರದಲ್ಲಿಯೇ ಇವೆ. ಕ್ರಿ.ಶ.೧೩೬೭ರ ಶಾಸನದಲ್ಲಿ ಹುಲುಕಡಿನಾಡಿನ ಬಗ್ಗೆ

ಮೊದಲ ಉಲ್ಲೇಖ ದೊರೆಯುತ್ತದೆ.[೩೬] ಇದಲ್ಲದೆ ಇಲ್ಲಿನ ಏಳೂ ಶಾಸನಗಳಲ್ಲಿ ಈ ನಾಡಿನ ಉಲ್ಲೇಖ ದೊರೆಯುತ್ತದೆ.[೩೭] ಈ ಹುಲುಕಡಿನಾಡಿಗೆ ಈಗಿನ ಹೋಬಳಿ ಕೇಂದ್ರಸ್ಥಾನವಾದ ದೊಡ್ಡ ಬೆಳವಂಗಲದ ಬಹುತೇಕ ಭಾಗ ಹಾಗೂ ಮಧುರೆ ಸ್ಥಳದ ಹಲವು ಗ್ರಾಮಗಳು ಸೇರ್ಪಡೆಗೊಂಡಿದ್ದವು. ಪ್ರಸ್ತುತ ಹುಲುಕಡಿನಾಡ ಪ್ರಭುಗಳ ಆವಾಸ ಸ್ಥಾನವಾದ ಹುಲುಕಡಿ ಬೆಟ್ಟದಲ್ಲಿ, ಕೋಟೆಯ ಅವಶೇಷಗಳು ಉಳಿದಿವೆ. ೧೩ನೆಯ ಶತಮಾನದಲ್ಲಿ ರಚನೆಯಾದ ವೀರಭದ್ರ ದೇವಾಲಯ ಹೆಸರುವಾಸಿಯಾಗಿದೆ. ಹುಲುಕಡಿ ಬೆಟ್ಟದ ಪೂರ್ವಕ್ಕಿರುವ ಹಣಬೆ ಗ್ರಾಮ ಇಂದಿಗೂ ಅಸ್ಥಿತ್ವದಲ್ಲಿದೆ. (ಈಗಾಗಲೇ ಈ ಅಂಶಗಳನ್ನು ನಾಡುಗಳು-ಸೀಮೆಗಳು ಭಾಗದಲ್ಲಿ ವಿವರವಾಗಿ ಚರ್ಚಿಸಲಾಗಿದೆ) ಶಾಸನೋಕ್ತ ಅಮರದ ತಿಮ್ಮರಸ, ಕರಣಿಕ ರಾಮಕೃಷ್ಣಯ್ಯ, ರಂಗಪ್ಪ ಮತ್ತು ಭಟ್ಟರಯ್ಯಗಳ ಶಿಷ್ಯಂದಿರ ಹೆಸರುಗಳು ಬೇರೆ ಯಾವ ಶಾಸನಗಳಲ್ಲೂ ನಮಗೆ ದೊರೆಯುವುದಿಲ್ಲ. ಈ ಶಾಸನದ ಕಾಲಕ್ಕೆ ಹುಲುಕಡಿನಾಡು ಇವರ ಅಧೀನದಲ್ಲಿ ಇತ್ತು ಎಂಬ ಅಂಶ ಸ್ಪಷ್ಟವಾಗಿ ತಿಳಿಯಬಹುದಾಗಿದೆ. ದಾನವನ್ನು ಪಡೆದ ಅಂಬಲಗೆರೆ ಗ್ರಾಮದ ಮೊಕ್ತಗಾರ ಅಥವಾ ಮುಖ್ಯಸ್ಥನಾದ ಚಿಕ್ಕಣ್ಣದಾಸ ಈ ದಾನಕ್ಕಿಂತ ಏಳು ವರ್ಷಕ್ಕೆ ಮುಂಚಿತವಾಗಿಯೇ ಬೇರೆ ಬೇರೆ ಗ್ರಾಮಗಳನ್ನು ಮಾನ್ಯವಾಗಿ ಪಡೆದಿರುವುದಕ್ಕೆ ಶಾಸನಾಧಾರಗಳು ಲಭ್ಯವಾಗಿದೆ.

ಈ ಒಂದು ಶಾಸನ ಕೃಷ್ಣದೇವರಾಯನ ಕಾಲಕ್ಕೆ ಸೇರಿದ್ದು, ಶಿವಗಂಗೆ, ಗೂಳೂರು, ಮಣ್ಣೆಯನ್ನು ದಾನವಾಗಿ ಪಡೆದು ಕಾಲಾನಂತರ ಅಚ್ಚುತರಾಯನ ಕಾಲದಲ್ಲಿ ಅಂಬಲಗೆರೆಯನ್ನು ದಾನ ಪಡೆದಿರುವುದಾಗಿ ತಿಳಿಯುತ್ತದೆ.[೩೮]

ಶಾಸನೋಕ್ತ ಅಂಬಲಗೆರೆ ಗ್ರಾಮವನ್ನು ಅರಸ ವೀರಬಲ್ಲಾಳನು ಕ್ರಿ.ಶ.೧೩೧೯ರಲ್ಲಿ ಪ್ರಭುದೇವಗೌಡ ಎಂಬಾತನಿಗೆ ತಿರುವೆಂಗಳನಿಗಾಗಿ ಹಾಲು ಮತ್ತು ಬೆಣ್ಣೆ ಸೇವೆಗೆ ಅಂಬಲಗೆರೆ ಗ್ರಾಮದ ಪಕ್ಕದಲ್ಲಿರುವ ಪುರುಷನಹಳ್ಳಿ ಎಂಬ ಗ್ರಾಮವನ್ನು ಜೊತೆಗೆ ದಾನ ನೀಡಿದ್ದಾನೆ.[೩೯] ಇದರಿಂದ ಸ್ಪಷ್ಟವಾಗುವುದೆಂದರೆ ಹೊಯ್ಸಳರ ಕಾಲದಿಂದಲೂ ತಿರುವೆಂಗಳಿಗೆ ಹಾಲು ಬೆಣ್ಣೆ ಸೇವೆಗಾಗಿಯೇ ಅಂಬಲಗೆರೆ ಗ್ರಾಮ ಮೀಸಲಾಗಿತ್ತು ಎಂದು ತಿಳಿಯಬಹುದು. ಈಗಲೂ ಈ ಊರಿನ ಬೆಣ್ಣೆ ಪ್ರಸಿದ್ಧಿ ಪಡೆದಿದೆ.

ದೊಡ್ಡಬಳ್ಳಾಪುರ ತಾಲ್ಲೂಕಿನ ಶಾಸನಗಳು ಶಾಸನದಲ್ಲಿನ ವಿಷಯಗಳ ವಿವಿಧ ಮುಖಗಳನ್ನು ಸಂಪೂರ್ಣವಾಗಿ ಹೇಳುವುದು ತುಂಬಾ ಕಷ್ಟವೇ ಸರಿ. ಶಾಸನಗಳು ನಮ್ಮ ನಾಡಿನ ಭವ್ಯ ಪರಂಪರೆಯನ್ನು ಹಿಡಿದಿಟ್ಟಿರುವ ಶಾಶ್ವತ ಸಂಪತ್ತುಗಳಾಗಿವೆ. ಕನ್ನಡ ನಾಡಿನ ರಾಜಕೀಯ ಇತಿಹಾಸದ ಮೇಲೆ ಬೆಳಕು ಚೆಲ್ಲುವ ಸಾಮಗ್ರಿಗಳಾಗಿವೆ. ಈ ಸಾಮಗ್ರಿಗಳಿಂದಲೇ ಇತಿಹಾಸ ಭದ್ರವಾಗಿ ನೆಲೆಯೂರಲು ಸಾಧ್ಯವಾಯಿತು ಎಂದು ಹೇಳಬಹುದು. ಶಾಸನಗಳು ಒಂದು ನಾಡಿನ ಸಾಮಾಜಿಕ ಮತ್ತು

ರಾಜಕೀಯ ಪರಂಪರೆಯನ್ನು ತಿಳಿಯುವಲ್ಲಿ ಸಹಕಾರಿಯಾದವು. ಒಟ್ಟಾರೆ ಹೇಳುವುದಾದರೆ ಇತರ ಆಧಾರಗಳು ತುಂಬಿಕೊಡಲಾರದ ಕೆಲವು ಅಮೂಲ್ಯ ಅಂಶಗಳನ್ನು ಇಲ್ಲಿನ ಶಾಸನ ಸಂಪತ್ತು ಒದಗಿಸಿಕೊಟ್ಟಿವೆ.

### ೩.೩.೩. ಜೈನ ಶಾಸನಗಳು

ದೊಡ್ಡಬಳ್ಳಾಪುರ ತಾಲ್ಲೂಕಿನ ಅತ್ಯಂತ ಪ್ರಾಚೀನ ಜೈನಶಾಸನ ಮಲ್ಲೋಹಳ್ಳಿಯ ಶಾಸನವಾಗಿದೆ. ಇದು ಈ ತಾಲ್ಲೂಕಿನ ಮೊದಲ ಶಾಸನವೂ ಹೌದು. ಕ್ರಿ.ಶ.೪೫೯ರ ಈ ತಾಮ್ರಶಾಸನವು ಗಂಗರ ಕಾಲಕ್ಕೆ ಸೇರಿದ್ದಾಗಿದ್ದು, ಗಂಗರ ರಾಜವಂಶಾವಳಿಯನ್ನು ತಿಳಿಸುವ  ಶಾಸನವಾಗಿದೆ. ಈ ತಾಮ್ರ ಶಾಸನವು ಮೂರು ಪತ್ರಗಳನ್ನು ಒಳಗೊಂಡಿದ್ದು, ಪತ್ರಗಳನ್ನು  ಆನೆ ಮುದ್ರೆಯ ಉಂಗುರದಿಂದ ಬೆಸೆಯಲಾಗಿದೆ. ಈ ಶಾಸನದಲ್ಲಿ ಗಂಗರಾಜರುಗಳಾದ ಕೊಂಗಣಿವರ್ಮ, ಮಾಧವ, ವಿಷ್ಣುಗೋಪ, ಶ್ರಿಪುರುಷ ಮುಂತಾದ ರಾಜರುಗಳನ್ನು ವರ್ಣನೆಯ ಮೂಲಕ ಹೊಗಳಿರುವುದು ಶಾಸನದಿಂದ ತಿಳಿಯುತ್ತದೆ. ಕ್ರಿ.ಶ.೫೧೭ ಮಲ್ಲೋಹಳ್ಳಿ ಗ್ರಾಮದ ಮತ್ತೊಂದು ಶಾಸನವು ಗಂಗರ ರಾಜರುಗಳ ಬಗ್ಗೆ ಹೇಳುತ್ತದೆ.[೪೧] ಕೊಂಗಣಿವರ್ಮ, ಮಾಧವ, ಹರಿವರ್ಮ, ವಿಷ್ಣುಗೋಪ, ಮಾಧವ ಕೃಷ್ಣನ ಮಗ ಅವನೀತ ಮುಂತಾದ ರಾಜರುಗಳನ್ನು ಉಲ್ಲೇಖಿಸುತ್ತದೆ. ಶಾಸನದಲ್ಲಿ ಉಲ್ಲೇಖಿತಗೊಂಡಿರುವ 'ಪುನ್ನಾಡ' ಎಂಬುದು ಒಂದು ಪ್ರತ್ಯೇಕ ನಾಡನ್ನು ಸೂಚಿಸುವಂತಿದೆ. ಇವರ ಕಾಲದಲ್ಲಿ ಹಲವಾರು ತಟಾಕಗಳನ್ನು ನಿರ್ಮಿಸಿರುವುದು ಶಾಸನದಲ್ಲಿ ಉಲ್ಲೇಖಿತಗೊಂಡಿದೆ. ಜನೋಪಕಾರಿ ಕಾರ್ಯಗಳಿಗೂ ಇವರು ಸ್ಪಂದಿಸುತ್ತಿದ್ದರು ಎಂಬುದು ಇಲ್ಲಿ ನಮಗೆ ಮನದಟ್ಟಾಗುತ್ತದೆ. ಕ್ರಿ.ಶ.೧೫೩೦ರ ಕೊನಘಟ್ಟದ ತಾಮ್ರಶಾಸನವು ವಿಜಯನಗರ ಸಾಮ್ರಾಜ್ಯದ ದೊರೆ ಅಚ್ಚುತರಾಯನ ಕಾಲಕ್ಕೆ ಸೇರಿದ್ದಾಗಿದೆ.[೪೨] ಅಚ್ಚುತರಾಯನು ಕ್ರಿ.ಶ.೧೫೩೦ರಲ್ಲಿ ಹಂಪಿಯ ತುಂಗಭದ್ರಾತೀರದ ವಿಠಲೇಶ್ವರನ ಸನ್ನಿಧಿಯಲ್ಲಿ ಆಪಸ್ತಂಭಸೂತ್ರದ ಕೌಂಡಿನ್ಯಗೋತ್ರದ, ಯಜುರ್ ಶಾಖೆಯ ವೇದಾಂತ ಆಗಮಗಳಲ್ಲಿ ಪರಿಣಿತನಾದ ರಾಮಭಟ್ಟನ ಮಗನಾದ ವೆಂಕಟೇಶ್ವರನಿಗೆ ಹೊಸಕೋಟೆ ಸೀಮೆಯ ಮೊರಸುನಾಡ ಸ್ಥಳದ ಪೂರ್ವದಿಕ್ಕಿಗೆ ಇರುವ ಗೋಪುರಪಲ್ಲಿಯ ಬಹುಶಃ ಬೀಡಿಕೆರೆ ಹೆಸರಿನ ಗ್ರಾಮದ ಪಶ್ಚಿಮಕ್ಕೆ ಕುರುವಿಗೆರೆ ಹೆಸರಿನ ಗ್ರಾಮದ ದಕ್ಷಿಣಕ್ಕಿರುವ, ಮಾದಪಲ್ಯ ಗ್ರಾಮದ ಬಹುಶಃ ಇದು ಈಗಿರುವ ಮಾಚಗೊಂಡನಹಳ್ಳಿ ಉತ್ತರಕ್ಕಿರುವ ಸಾಂಬಾಪುರ ಅಗ್ರಹಾರವಾದ ತಿಮ್ಮನಪಲ್ಲಿ ಹತ್ತಿರದ ಉಪಗ್ರಾಮವಾದ ಕಂಚಿಗಜಾಲ ಈಗಿನ ಕಂಚಿಗನಹಾಳವನ್ನು ಸರ್ವಮಾನ್ಯವಾಗಿ ದಾನ ನೀಡಲಾಗಿದೆ. ಅಲ್ಲದೆ ಇವುಗಳ ಜೊತೆಗೆ ಹಲವು ವೃತ್ತಿಗಳನ್ನು ದಾನ ನೀಡಿರುವುದು ಈ ಶಾಸನದಿಂದ ತಿಳಿಯುತ್ತದೆ.

ಮಲ್ಲಯ್ಯನ ಮಗ ಸೋಮನಾಥನಿಗೆ ೨ ವೃತ್ತಿ

ವೆಂಕಟಾದ್ರಿ ಮಗ ಯಜ್ಞಾವಧಾನಿಗೆ ೨ ವೃತ್ತಿ

ವೆಂಕಟೇಶ್ವರನ ಮಗ ತಿಂಮ್ಮಾವಧಾನಿಗೆ ೨ ವೃತ್ತಿ
ಶ್ರೀಕೃಷ್ಣಭಟ್ಟನ ಮಗ ನೃಸಿಂಹನಿಗೆ ೨ ವೃತ್ತಿ
ಕೊಂಡಿಭಟ್ಟನ ಮಗ ರಾಘವನಿಗೆ ೨ ವೃತ್ತಿ
ಸೋಮನಾಥನ ಮಗ ಆಹೋಬಲನಿಗೆ ೧ ವೃತ್ತಿ
ಕೊಂಡಿಭಟ್ಟನ ಮಗ ರಾಘವೇಂದ್ರನಿಗೆ ೨ ವೃತ್ತಿ
ತಿಪ್ಪಾಶಾಸ್ತ್ರಿ ಮಗನಾದ ತಿರುಮಲಭಟ್ಟನಿಗೆ ೧ ವೃತ್ತಿ
ಐಯ್ಯಂಭಟ್ಟನ ಮಗನಾದ ದೊಡ್ಡಭಟ್ಟನಿಗೆ ೧ ವೃತ್ತಿ
ವೆಂಗಭಟ್ಟನ ಮಗ ತಿರುಮಲಭಟ್ಟನಿಗೆ ೧ ವೃತ್ತಿ

ಮಲ್ಲಣನ ಮಗನಾದ ವೀರಣಾಚಾರ್ಯ ಈ ಶಾಸನವನ್ನು ಬರೆದವನು ಎಂದು ಶಾಸನದ ಕೊನೆಯಲ್ಲಿದೆ. ಈ ಲಿಪಿಕಾರ ವಂಶದ ಮೂಲವು ಇಮ್ಮಡಿಹರಿಹರನ ಕಾಲಕ್ಕೆ ಸೇರಿದೆ. ಈ ವಂಶ ವಿಜಯನಗರ ಅರಸನ ನೂರಾರು ಶಾಸನಗಳನ್ನು ರಚಿಸಿ ಶಾಸನ ಲಿಪಿಕಾರರಾಗಿ ಮಾನ್ಯತೆಯನ್ನು ಪಡೆದಿರುವುದು ಅನೇಕ ಶಾಸನಗಳಿಂದ ತಿಳಿದುಬರುತ್ತದೆ. ಅಲ್ಲದೆ 'ಶ್ರೀ ವಿರೂಪಾಕ್ಷ' ಎಂಬ ಒಪ್ಪದಿಂದ ಶಾಸನ ಕೊನೆಯಾಗುತ್ತದೆ.

### ೩.೪. ಶಾಸನಗಳಲ್ಲಿ ಅಧಿಕಾರ ವರ್ಗ

ಪ್ರಾಚೀನ ಕರ್ನಾಟಕದ ಪರಂಪರಾಗತ ಆಡಳಿತ ವ್ಯವಸ್ಥೆಯು ಪ್ರಮುಖವಾಗಿ ಎರಡು ಭಾಗಗಳಿಂದ ಕೂಡಿದ್ದವು. ಅವುಗಳೇ ರಾಜ್ಯಾಡಳಿತ ಮತ್ತು ಊರುಗಳ ಆಡಳಿತ. ಇವುಗಳನ್ನು ಅಧಿಕಾರದ ಸೌಕರ್ಯಕ್ಕಾಗಿ ಮಾಡಿಕೊಂಡಿರುವುದು ಅಷ್ಟೇ. ಏಕೆಂದರೆ ಇವೆರಡಕ್ಕೂ ಅವಿನಾಭಾವ ಸಂಬಂಧವಿದೆ. ಇವೆರಡೂ ಒಂದರ ಸಹಕಾರದಿಂದ ಮತ್ತೊಂದು ನಡೆಯುತ್ತಿದ್ದಿತು. ಈ ಎರಡೂ ವಿಭಜನೆಯಲ್ಲಿ ಬಹಳಷ್ಟು ಮಹತ್ವವಿದೆ. ನಗರ ಮತ್ತು ಗ್ರಾಮಗಳ ಮೊತ್ತವೆ ರಾಜ್ಯ. ಇದಕ್ಕೆ ರಾಜನೇ ಅಧಿಪತಿ, ಎಲ್ಲವೂ ರಾಜನ ಆಳ್ವಿಕೆಗೆ ಒಳಪಟ್ಟಿದ್ದವು. ಪ್ರಾಚೀನ ಕರ್ನಾಟಕ ಶಾಸನ ಪರಂಪರೆಯಲ್ಲಿ ಉಕ್ತವಾಗಿರುವಂತೆ ಗ್ರಾಮಗಳ ಆಳ್ವಿಕೆಯನ್ನು ಪರಿಶೀಲಿಸಿದಾಗ ಅಲ್ಲಿನ ಕೆಲವು ವಿಷಯಗಳು ಆಡಳಿತದ ಪ್ರತ್ಯೇಕ ಘಟಕವೆಂಬಂತೆ ನಡೆದುಕೊಳ್ಳುತ್ತಿತ್ತು. ಇಲ್ಲಿನ ಒಂದೊಂದು ಗ್ರಾಮವು ದೊಡ್ಡ ಸಾಮ್ರಾಜ್ಯದ ರಾಜ್ಯದೊಳಗಿನ, ಪುಟ್ಟದಾದ ರಾಜ್ಯಗಳು ಎಂಬಂತೆ ಬಿಂಬಿತವಾಗಿವೆ. ಆದುದರಿಂದ ಮೊದಲಿಗೆ ರಾಜ್ಯದ ಆಡಳಿತ, ಅಧಿಕಾರಿಗಳ ವಿಷಯವನ್ನು ಪ್ರಸ್ತಾಪ ಮಾಡಿ, ನಂತರ ಗ್ರಾಮಾಧಿಕಾರಿಗಳ ಚರ್ಚೆಯನ್ನು ಮಾಡಬಹುದು.

ರಾಜ್ಯ ಎನ್ನುವುದು ರಾಜನಿಗೆ ಸೇರಿದುದಾಗಿರುತ್ತದೆ. ಇದರ ರಕ್ಷಣೆ ಈತನದೇ. ಪ್ರಜೆಗಳನ್ನು ರಕ್ಷಿಸಿದವನು ರಾಜನೇ ಅಲ್ಲ, ರಾಜ ಇರುವುದು ಪ್ರಜೆಗಳಿಗಾಗಿ ಮತ್ತು ಅವರ ಯೋಗಕ್ಷೇಮಕ್ಕಾಗಿ

ಎಂಬ ಭಾವನೆ ಸಾರ್ವತ್ರಿಕವಾಗಿದ್ದ ಕಾಲದಲ್ಲಿ ಪ್ರಜಾಪಾಲನೆಯೇ ರಾಜನ ನಿಜವಾದ ಯಜ್ಞ ಎಂದು ಭಾವಿಸಿದ್ದರು. ಪ್ರಜಾಪಾಲನೆಯೇ ತನ್ನ ಗುರಿ ಎಂದು ಭಾವಿಸಿ ರಾಜನ ಸ್ಥಾನಮಾನಗಳನ್ನು ಕುರಿತು, ಒಂದು ಗ್ರಾಮದ ಜೀವನವು ಆ ಗ್ರಾಮದ ದೇವಸ್ಥಾನದ ಸುತ್ತ ರೂಪಿತವಾಗುತ್ತಿದ್ದಂತೆ, ಒಂದು ದೇಶದ ಜನ ಜೀವನವು ಆ ದೇಶದ ರಾಜನನ್ನು ಅವಲಂಭಿಸಿದ್ದಿತು. ಅವನ ಏಳು ಬೀಳುಗಳೇ ರಾಜ್ಯದ ಏಳುಬೀಳುಗಳು. ಇಡೀ ಪ್ರಪಂಚಕ್ಕೆ ಮಳೆ ಮತ್ತು ರಾಜ ಆಧಾರಭೂತಗಳಾಗಿವೆ. ಒಂದು ಪಕ್ಷ ಮಳೆ ಇಲ್ಲದಿದ್ದರೆ ಜನ ಹೇಗೋ ನಿರ್ವಹಿಸುತ್ತಾರೆ. ಆದರೆ ರಾಜನಿಲ್ಲದೆ ನಿರ್ವಹಿಸ ಲಾರರು.[೪೩] ರಾಜನಿಗೆ ಇದ್ದ ಸ್ಥಾನಮಾನಗಳು ಮತ್ತು ಈತನಿಗೆ ಸಹಾಯಕರಾದ ಅಧಿಕಾರಿಗಳನ್ನು ಕುರಿತು ಚರ್ಚಿಸಿದರೆ ಶಾಸನಗಳಲ್ಲಿ ಅಧಿಕಾರಿವರ್ಗಗಳ ಭಾಗವನ್ನು ಅರ್ಥೈಸಿದಂತಾಗುತ್ತದೆ.

ರಾಜ್ಯದ ಉನ್ನತಿ ಮತ್ತು ಅವನತಿಗಳು ರಾಜನನ್ನು ಅನುಸರಿಸುತ್ತಿದ್ದವು. ಮತ್ತು ಆತನ ಅಧಿಕಾರಿಗಳ ವರ್ಗ ಅವಲಂಬಿಸಿತ್ತು ಎಂದು ಹೇಳಬಹುದು. ರಾಜ ಪ್ರಜಾಪರಿಪಾಲನೆಯನ್ನು ಮಾಡುವುದು ತನ್ನ ರಾಜ್ಯದ ಪ್ರಯೋಜನವನ್ನು ಮಾಡಿಕೊಳ್ಳಬೇಕಾದರೆ, ಆದರ್ಶ ರಾಜನಾಗ ಬೇಕಾದರೆ, ಅವನಿಗೆ ಉತ್ತಮ ಶಿಕ್ಷಣದ ಅವಶ್ಯಕತೆ ಬೇಕಾಗಿತ್ತು. ರಾಜ್ಯದ ಆಡಳಿತದ ದೃಷ್ಟಿಯಿಂದ ರಾಜಕುಮಾರನು ರಾಜನಾಗಬೇಕಾದರೆ ಆತನಿಗೆ ಸುಮಾರು ೨೪ ವರ್ಷವಾದರೂ ಆಗಿರಬೇಕಿತ್ತು. ಅಲ್ಲದೆ ರಾಜ್ಯವನ್ನಾಳುವ ರಾಜನ ಪದವಿಯು ವಂಶಪಾರಂಪರ್ಯವಾಗಿ ತಂದೆಯಿಂದ ಹಿರಿಯ ಮಗನಿಗೆ ಬಂದರೂ ಕೆಲವೊಂದು ಬಾರಿ ಅತ್ಯಂತ ಸಮರ್ಥನಾದ ಮಗನಿಗೆ ದೊರೆಯುತ್ತಿತ್ತು. ಇಲ್ಲಿ ರಾಷ್ಟ್ರಕೂಟ ದೊರೆ ಮೂರನೆಯ ಗೋವಿಂದನ್ನು ಉದಾಹರಿಸಬಹುದು.

ಶಾಸನಗಳಲ್ಲಿ ರಾಜಧಾನಿಯನ್ನು 'ನೆಲೆವೀಡು' ಎಂದು ಕರೆಯುತ್ತಿದ್ದರು.[೪೪] ಅಲ್ಲದೆ ರಾಜನು ಬೀಡು ಅಥವಾ ನೆಲೆ ಬಿಟ್ಟಿದ್ದರೆ ಅದನ್ನು 'ವಿಜಯ ಸ್ಕಂಧವಾರ' ಎಂದು ಕರೆದಿದ್ದಾರೆ. ಶಾಸನಗಳಲ್ಲಿ ರಾಜಾಸ್ಥಾನಗಳ ಒಂದು ಸಂಪೂರ್ಣ ಚಿತ್ರ ದೊರೆತಿರುವುದು ಎಲ್ಲೂ ಕಂಡುಬಂದಿಲ್ಲ. ಇಲ್ಲಿನ ಶಾಸನಗಳಲ್ಲಿ ರಾಜರುಗಳನ್ನು ಅನೇಕ ಬಿರುದುಗಳಿಂದ ಕರೆದಿರುವುದು ಆತನ ಪರಾಕ್ರಮವನ್ನು ಸೂಚಿಸುವಂತಹ ಪದಗಳೇ ಆಗಿವೆ. ಒಂದು ಶಾಸನದಲ್ಲಿ ಹೊಯ್ಸಳ ಚಕ್ರವರ್ತಿ ವೀರನರಸಿಂಹನನ್ನು "ಶ್ರೀ ಪೃಥ್ವೀ ವಲ್ಲಭಮಹಾರಾಜಾಧಿರಾಜ ಪರಮೇಶ್ವರಂ ದ್ವಾರಾವತೀ ಪುರವರಾಧ್ವೀಶ್ವರಂ ಯಾದವಕುಲಾಂಬರ ದ್ಯುಮಣಿ ಸರ್ಬ್ಬಜ್ಞ ಚೂಡಾಮಣಿಮಲೆರಾಜ ರಾಜ ಮಲಪರೊಳು ಗಂಡ ಪ್ರತಾಪ ಚಕ್ರವರ್ತಿ ಶ್ರೀ ವೀರಹೊಯ್ಸಳ" ಎಂದು ಹೊಯ್ಸಳ ರಾಜನನ್ನು ವರ್ಣಿಸಿರುವುದು ರಾಜನ ಘನತೆಗೆ ಎತ್ತಿಹಿಡಿದ ಗೌರವ ಸೂಚಕವಾಗಿದೆ. ಚತುರ್ವಿದ ರಾಜನೀತಿಗಳಾದ ದುಷ್ಟರನ್ನು ಶಿಕ್ಷಿಸುವುದು. ಸದ್ಭಕ್ತಿಗಳನ್ನು ಕಾಪಾಡುವುದು. ತನ್ನನ್ನು ತಾನು ರಕ್ಷಿಸಿಕೊಳ್ಳುವುದು ಧರ್ಮಕ್ಕೆ ಸಂಬಂಧಿಸಿದ ದಾನ, ದೇವಸ್ಥಾನ ನಿರ್ಮಾಣ ಮುಂತಾದ ಕಾರ್ಯಗಳನ್ನು ಕೈಗೊಳ್ಳುವುದು ರಾಜಾಧಿಕಾರಿಗಳ

ಕರ್ತವ್ಯವೂ ಆಗಿತ್ತು. ಇವುಗಳನ್ನು ನಾವು ಪ್ರಾಚೀನ ಕರ್ನಾಟಕದ ರಾಜರುಗಳ ಆದರ್ಶಗಳು ಎಂತಲೂ ಕರೆಯಬಹುದು. ಈ ಒಂದು ಅಧ್ಯಯನದ ಸಂದರ್ಭದಲ್ಲಿ ಶಾಸನಗಳಲ್ಲಿ ಎಲ್ಲೂ ರಾಣಿಯರುಗಳ ಹೆಸರುಗಳು ಉಲ್ಲೇಖಗೊಂಡಿಲ್ಲದಿರುವುದು ಇಲ್ಲಿನ ಶಾಸನಗಳ ಮಿತಿಯಾಗಿದೆ.

ರಾಜನ ಮಂತ್ರಿ ಮಂಡಲದಲ್ಲಿನ ಅಥವಾ ತನ್ನ ಅಧೀನದಲ್ಲಿದ್ದ ನಾಡುಗಳಲ್ಲಿನ ಅಧಿಕಾರಿ ವರ್ಗದ ಸಂಖ್ಯೆ ಎಷ್ಟು ಎಂಬುದು ನಿಖರವಾಗಿ ತಿಳಿಯುವುದಿಲ್ಲ. ಮಹಾಪ್ರಧಾನಿ, ಮಹಾಮಾತ್ಯ, ಮಹಾದಂಡನಾಯಕ, ಪ್ರಧಾನ ದಂಣಾಯಕ ಮುಂತಾದ ಹೆಸರುಗಳಿಂದ ಶಾಸನಗಳು ಕರೆದಿವೆ. ಕೆಲವೊಂದು ಶಾಸನಗಳಲ್ಲಿ ಮೇಲಿನ ಕೆಲವು ಹೆಸರುಗಳನ್ನು ಒಬ್ಬನೇ ವ್ಯಕ್ತಿಗೆ ನೀಡಿರುವುದು ತಿಳಿಯುತ್ತದೆ.

ರಾಜರುಗಳ ಅಧೀನದಲ್ಲಿ, ಸಣ್ಣಪುಟ್ಟ ರಾಜ್ಯಗಳನ್ನು ಆಳುತ್ತಿದ್ದ ಸಾಮಂತರುಗಳೇ ಇಲ್ಲಿ ಹೆಚ್ಚು. ಸಾಮಂತರುಗಳ ಆಳ್ವಿಕೆಯ ವ್ಯಾಪ್ತಿ ಪ್ರದೇಶದಲ್ಲಿ ಅಧಿರಾಜರಿಗಿದ್ದ ಸ್ಥಾನಮಾನಗಳು, ಗೌರವಗಳು ಹೊಣೆಗಾರಿಕೆಗಳು ಇವರಿಗೂ ಇದ್ದವು. ರಾಜರುಗಳಂತೆ ಇವರೂ ಸಹ ಮಂತ್ರಿಗಳನ್ನು, ಸೇನೆಯನ್ನು ಇತರ ಅಧಿಕಾರಿ ವರ್ಗದವರನ್ನೂ ಹೊಂದಿದ್ದರು. ಮಂಡಲೇಶ್ವರರು ಸಾಮಂತರಾಜರುಗಳ ಅಧಿರಾಜನ ಅಧೀನರು. ಇಂತಹ ವೇಳೆ ಇವರು ಸರ್ವಾಧಿಕಾರಿಗಳಾದರೂ ಇವರಿಬ್ಬರಿಗೂ ವ್ಯತ್ಯಾಸವಿದೆ. ಅಧಿರಾಜರು ತಮ್ಮನ್ನು ಗೆದ್ದಿರುವುದರಿಂದ ಅವನ ಅಧೀನರು ಮತ್ತು ಸಮಯ ಸಿಕ್ಕಿದಾಗ ಸ್ವತಂತ್ರರಾಗಲು ಹವಣಿಸುವರು. ಮಹಾಮಂಡಲೇಶ್ವರರನ್ನು ಬೇರೆ ಬೇರೆ ಮಂಡಲ ಅಥವಾ ಭಾಗಗಳಿಗೆ ಅದಿರಾಜರು ನೇಮಿಸುತ್ತಿದ್ದಂತೆ ಕಾಣುತ್ತದೆ. ಇದಕ್ಕೆ ಒಂದು ನಿದರ್ಶನವು ತಾಲ್ಲೂಕಿನ ತಿಪ್ಪೂರು ಶಾಸನದಲ್ಲಿದೆ. ಮಹಾಮಂಡಳೇಶ್ವರ ಎನ್ನುವುದು ಮಂಡಳೇಶ್ವರ ಎನ್ನುವ ಪದವಿಗಿಂತ ದೊಡ್ಡದು ಎಂದು ಇಲ್ಲಿ ಸ್ಪಷ್ಟವಾಗುತ್ತದೆ. ಒಬ್ಬ ಮಹಾಮಂಡಳೇಶ್ವರ ಅಧೀನದಲ್ಲಿ ಹಲವು ಮಂಡಳೇಶ್ವರರು ಇದ್ದರೆಂದು ಕಾಣುತ್ತದೆ. ಶ್ರೀ ಮನ್ಮಮಹಾಮಂಡಲೇಶ್ವರ ಮೇಧಿನೀಮೀಸರ ಕದಕೆ ಪಾಲಿಸಿ ಇರುವುದನ್ನು ದಯಮಾಡಿ ನರಸಿಂಗರಾಯರು ಮಹಾರಾಯರ ಕುಮಾರಸುತಿರಿದೇವನ ನಾಯಕರ ಧರ್ಮ ಶಾಸನಯಂಬದಾಗಿ... ಇಲ್ಲಿ ಮಹಾಮಂಡಳೇಶ್ವರರ ಅಧೀನದಲ್ಲಿ ದೇವನನಾಯಕನೆಂಬ ಮಂಡಳೇಶ್ವರನಿದ್ದನೆಂಬುದು ಸ್ಪಷ್ಟವಾಗುತ್ತದೆ. ಕ್ರಿ.ಶ.೧೩೬೭ರ ಶಾಸನವು[೪೬] 'ಸ್ವಸ್ತಿ ಶ್ರೀ ಮನ್ಮಹಾಮಂಡಲೇಶ್ವರಂ |ಅರಿರಾಯ ವಿಬಾಡ ಬಾಸಿಗೆ ತಪ್ಪುವರಾಯರ ಶಿರಗ್ಗಂಡ ಶ್ರೀವೀರಬುಕ್ಕಂಣವಡಿಯರು ಪೃಥ್ವೀರಾಜ್ಯಂಗೈಯುವ ಶಕವರುಷ ೧೨೮೯ನೆಯ ಪ್ಲವಂಗ ಸಂ| ಕಾರ್ತಿಕ ಶು ೧ ಸೋ ಶ್ರೀ ಮನ್ಮಹಾಸಾಮಾಂತಾಧಿಪತಿ..." ಎನ್ನುವಲ್ಲಿ ಸಾಮಂತ ರಾಜರು ಆಳ್ವಿಕೆ ನಡೆಸುತ್ತಿದ್ದರು ಎಂಬುದು ತಿಳಿದುಬರುತ್ತದೆ.

ವಿಸ್ತಾರವಾದ ರಾಜ್ಯವನ್ನು ಭೌಗೋಳಿಕವಾಗಿ, ಆಳ್ವಿಕೆಯ ಸೌಕರ್ಯದ ದೃಷ್ಟಿಯಿಂದ ಪ್ರಮುಖವಾಗಿ ಮೂರು ವಿಭಾಗಗಳಾಗಿ ವಿಂಗಡಿಸಬಹುದು. ಅವುಗಳೇ ಮಂಡಲ, ನಾಡು,

ಊರು. ತಮಿಳುನಾಡಿನಲ್ಲಿಯೂ ಮಂಡಲಂ ಕೊಟ್ಟಮ್ ಅಥವಾ ಪಳನಾಡು, ನಾಡು ಮತ್ತು ಊರು ಎಂದು ನಾಲ್ಕು ಭಾಗಗಳಾಗಿ ವಿಂಗಡಿಸಿದ್ದರು. ಇವುಗಳು ಈಗಿನ ಪ್ರಾಂತ, ಜಿಲ್ಲೆ, ತಾಲ್ಲೂಕು ಮತ್ತು ಊರುಗಳಿಗೆ ಸಮಾನವೆಂದು ಹೇಳಬಹುದು. ಸಾಮ್ರಾಜ್ಯದ ರಾಜಧಾನಿಯ ಸುತ್ತಲಿನ ಭೂಭಾಗವನ್ನು ನೇರವಾಗಿ ರಾಜನು ಆಳುತ್ತಿದ್ದು, ಇನ್ನುಳಿದ ರಾಜ್ಯವನ್ನು ಮಂಡಲಗಳಾಗಿ ವಿಂಗಡಿಸಿ, ಒಂದೊಂದು ಮಂಡಲಕ್ಕೂ ಮಂಡಲೇಶ್ವರರು ಎಂಬ ಅಧಿಕಾರಿಗಳನ್ನು ನೇಮಿಸುತ್ತಿದ್ದರು. ಈ ಒಂದೊಂದು ಮಂಡಲವನ್ನು ಮತ್ತೆ ಬೇರೆ ಬೇರೆ ನಾಡುಗಳಾಗಿ ವಿಂಗಡಿಸಿ, ಆ ಭಾಗಗಳಿಗೆ 'ನಾಡಗಾವುಂಡ'ಗಳನ್ನು ನೇಮಿಸುತ್ತಿದ್ದರು. ನಾಡಿನ ಆಯಾ ಊರಿಗೆ ಮುಖ್ಯಸ್ಥನಾಗಿ ಪ್ರಭುಗಾವುಂಡ ಅಥವಾ 'ಊರಗಾವುಂಡ'ನಿರುತ್ತಿದ್ದನು. ಇದಕ್ಕೆ ಹಲವು ನಿದರ್ಶನಗಳನ್ನು ಇಲ್ಲಿ ಕೊಡಬಹುದು. ಕ್ರಿ.ಶ.೧೫೪೧ರಲ್ಲಿ ವಿಜಯನಗರ ಅರಸರ ಅಧೀನದಲ್ಲಿದ್ದ ಹುಲುಕಡಿನಾಡ ಪ್ರಭುಗಳು ಗಂಡ್ರಗೊಳ್ಳೀ ದಳವಾಯಿ ಸೊಂಣಪ್ಪ ನಾಯಕರು ಆಳ್ವಿಕೆ ನಡೆಸುತ್ತಿದ್ದರು.[೪೭] ಈ ದಳವಾಯಿ ನಾಡಿನ ಮತ್ತು ಆಯಾ ಊರಿಗೆ ಮುಖ್ಯಸ್ಥನು ಆಗಿದ್ದನು. ಕ್ರಿ.ಶ.೧೭೧೫ರ ಶಾಸನವು[೪೮] ಆವತಿನಾಡ ಪ್ರಭುಗಳಾದ ಇಮ್ಮಡಿ ಸೊಣಬೈರೇಗೌಡಯ್ಯನವರ ಪುತ್ರರಾದ ಗೋಪಾಲ ಗೌಡಯ್ಯನವರು ಹುಲುಕಡಿ ನಾಡಪ್ರಭುಗಳು ಸಮಕಾಲೀನದಲ್ಲಿದ್ದು ಆವತಿ ನಾಡನ್ನು ಆಳುತ್ತಿದ್ದರು. ಹೀಗೆ ಇನ್ನು ಕೆಲವು ಶಾಸನಗಳನ್ನು ಪರಿಶೀಲಿಸಿದರೆ. ರಾಜ, ಅವನ ಕೆಳಗೆ ಮಂಡಳೇಶ್ವರ, ಅವನ ಕೆಳಗೆ ನಾಡಪ್ರಭು, ಅವನ ಕೆಳಗೆ ಊರಗಾವುಂಡ, ಈ ಕ್ರಮಾನುಗತಿಯಲ್ಲಿ ಅಧಿಕಾರಿಗಳಿರುತ್ತಿದ್ದರೆಂದು ಕಂಡುಬರುತ್ತದೆ.

ನಮ್ಮ ಪರಿಸರದ ಶಾಸನಗಳಲ್ಲಿ ಕೆಲವು 'ಅಗ್ರಹಾರ'ಗಳು ಉಲ್ಲೇಖಗೊಂಡಿವೆ. ಈ ಅಗ್ರಹಾರಗಳು ಬ್ರಾಹ್ಮಣರಿಗೆ ದತ್ತಿಯಾಗಿ ಬಿಟ್ಟುಕೊಟ್ಟ ಊರುಗಳು, ಅಗ್ರಹಾರವನ್ನು ದಾನವಾಗಿ ಪಡೆದ ಬ್ರಾಹ್ಮಣರೇ 'ಮಹಾಜನ'ಗಳು. ಇವರೇ ಅಗ್ರಹಾರದ ಪ್ರಭುಗಳು ಎಂದು ಹಲವಾರು ಶಾಸನಗಳು ಪ್ರತಿಬಿಂಬಿಸುತ್ತವೆ. ಮಹಾಜನಗಳು ಬ್ರಾಹ್ಮಣರೇ ಆಗಬೇಕಿಲ್ಲವೆಂದೂ, ಮಹಾಜನಗಳಲ್ಲಿ ಬ್ರಾಹ್ಮಣೇತರರೂ ಕಡಿಮೆ ಸಂಖ್ಯೆಯಲ್ಲಾದರೂ ಇದ್ದಿರಬಹುದೆಂದು ಡಾ. ಅಲ್ತೇಕರರು ಅಭಿಪ್ರಾಯಕ್ಕೇ ಇಲ್ಲಿನ ಶಾಸನಗಳು ಪುಷ್ಟಿ ಒದಗಿಸುವುದಿಲ್ಲ. ಶಾಸನಗಳಲ್ಲಿನ ಅಗ್ರಹಾರಗಳ ಅಸ್ಪಶಾನುಭೋವ, ಶಾನುಭೋವ ಎಂಬ ವಿಶೇಷಣಗಳನ್ನು ಗಮನಿಸಿದಾಗ ಅವರು ಬ್ರಾಹ್ಮಣರೇ ಇರಬೇಕು ಎಂಬುದು ಸ್ಪಷ್ಟವಾಗುತ್ತದೆ. ಕ್ರಿ.ಶ.೧೫೮೯ರ ಒಂದು ಶಾಸನವು[೪೯] "ಕಂಚಿಗಣಹಾಲು ಗ್ರಾಮ ಪ್ರತಿ ನಾಮಸಿಂಗ ಸಮುದ್ರ ಅಗ್ರಹಾರಕೆ ಆ ಗ್ರಾಮವನು ನಿಮಗೆ..." ಇಲ್ಲಿನ ಶಾಸನೋಕ್ತ ಗ್ರಾಮ ಈಗಿನ ಕಂಚಿಗನಾಳು. ಹಿಂದೆ ಇದು ಒಂದು ಅಗ್ರಹಾರವಾಗಿತ್ತು ಎಂದಷ್ಟೇ ಹೇಳುತ್ತದೆ. ರಾಮಪುರದ ಮತ್ತೊಂದು ಶಾಸನವು[೫೦] ವಿಜಯನಗರ ಅರಸ ಅಚ್ಚುತಮಹಾರಾಯರು ಒಬ್ಬ ಶಾನುಭೋವನಿಗೆ ಹಣಬೆ ಸುತ್ತಮುತ್ತಲಿನ ಪ್ರದೇಶವನ್ನು ಸಾಮಾಜಿಕ ಕಾರ್ಯಗಳಿಗೆ ಬಳುವಳಿಯಾಗಿ ನೀಡಿರುವುದು ಗೋಚರಿಸುತ್ತದೆ. ಇದೇ ವಂಶದ ಮತ್ತೊಬ್ಬ ಅರಸ ಮೂರನೇ ದೇವರಾಯನ ಕಾಲದ ಶಾಸನವು

ಕೆರೆ, ಕುಂಟೆಗಳನ್ನು ನಿರ್ಮಿಸಲು ಅಗ್ರಹಾರಕ್ಕೆ ದತ್ತಿಗಳನ್ನು ಬಿಟ್ಟುಕೊಟ್ಟಿದ್ದಾರೆ ಎಂದು ತಿಳಿಸುತ್ತದೆ. ಇಂದಿಗೂ ಅಗ್ರಹಾರ ಹೆಸರನ್ನು ಒಳಗೊಂಡ ಕೆಲವು ಗ್ರಾಮಗಳು ತಾಲ್ಲೂಕಿನಲ್ಲಿವೆ. ಚನ್ನದೇವಿ ಅಗ್ರಹಾರ, ಪುಟ್ಟಯ್ಯನ ಅಗ್ರಹಾರಗಳನ್ನು ಇಲ್ಲಿ ಹೆಸರಿಸಬಹುದು. ಆದರೆ ಈ ಗ್ರಾಮಗಳಿಗೆ ಅಗ್ರಹಾರ ಎಂದು ಹೇಗೆ ರೂಢಿಗೆ ಬಂತೆಂಬ ವಿಷಯ ಶಾಸನಗಳಿಂದ ತಿಳಿಯುವುದಿಲ್ಲ.

ಶಾಸನಗಳಲ್ಲಿ ಕಂಡುಬರುವ ಗಾವುಂಡ ಮತ್ತು ಪ್ರಭುಗಾವುಂಡಗಳು 'ಗೌಂಡ' ಎಂಬ ಅರ್ಥವನ್ನು ಕೊಡುತ್ತವೆ, ಗ್ರಾಮಗಳನ್ನು ಆಳುತ್ತಿದ್ದವನು ಗೌಂಡ, ಗಾವುಂಡ, ಬಹುಶಃ ಈತ ಊರೊಡೆಯನೂ ಇರಬಹುದು. ಕ್ರಿ.ಶ.೧೪೧೮ರ ಮಧುರೆ ವೀರಗಲ್ಲಿನಲ್ಲಿ[೫೧] "ಮಧುರೆಯ ಹೆಗಡೆ ಗೌಂಡನ ಮಗ" ಎಂದು ಸಂಬೋಧಿಸುತ್ತದೆ. ಈ ಹೆಗಡೆ ಮಧುರೆ ಗ್ರಾಮವನ್ನು ಆಳುತ್ತಿದ್ದವನು ಮತ್ತು ಊರಿನ ಒಡೆಯ ಎಂಬುದನ್ನು ಸೂಚಿಸುತ್ತದೆ. ಅಂದರೆ ಗ್ರಾಮಗಳಲ್ಲಿ ಈ ಊರಿನ ಒಡೆಯ ಗ್ರಾಮಸಭೆಗಳನ್ನು ನಡೆಸುತ್ತಿದ್ದನು ಎಂಬುದಕ್ಕೆ ಇಲ್ಲಿ ಉಲ್ಲೇಖಗಳು ದೊರೆಯುವುದಿಲ್ಲ.

ಗ್ರಾಮಾಡಳಿತಕ್ಕೆ ಸಂಬಂಧಿಸಿದ ಕೆಲವು ಹೆಸರುಗಳನ್ನು ಇಲ್ಲಿ ನೀಡಬಹುದು. ಒಬ್ಬಾತ ಶಾನುಭೋಗ ಅಥವಾ ಸೇನಭೋವ ಮತ್ತೊಬ್ಬಾತ ತಳವಾರ. ಇಲ್ಲಿನ ಸೇನಬೋವ ವಿದ್ಯಾವಂತನಾಗಿದ್ದು, ಗ್ರಾಮದ ಸಭೆಯ ಪ್ರಮುಖ ಲೆಕ್ಕಪತ್ರಗಳನ್ನು ನೋಡಿಕೊಳ್ಳುತ್ತಿದ್ದ ಜವಾಬ್ದಾರಿಯನ್ನು ಹೊತ್ತಿದ್ದನು ಎಂಬುದನ್ನು ಕ್ರಿ.ಶ.೧೫೮೬ರ ಶಾಸನವು[೫೨] "ಹಣಬೆ ತಿಪೂರ ಸೀಮೆಯೊಳಗಾಗಿ ಟೆಂಕಬಡಗಲು ಮೂಡ ಪಡುವಲು ನಡವಂತಾ ವೂರುಗಳಲಿ ಮೂಲೆಂಕೂ ರೂ ಒಂದಕ್ಕೆ ಮೂಲೆಗಾಸು ಒಂದು ಲೆಖದಲುತೆ ಕೊಂಬುದಾಯಿಮೂಲೆ ಗಾಸಿನ ಸೀಮೇ ಮೇಲೆ ಬಂದ ಪಾರುಪತ್ಯ ಗಾರನಾಗಲಿ ಸರ್ಕಾರದ ಗೌಡಸೇನ ಬೋವರಾಗಲಿ..." ಇಲ್ಲಿ ಸೇನಭೋವ ಅಥವಾ ಶಾನುಭೋಗ ಲೆಕ್ಕಪತ್ರಗಳ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದನು ಎಂದು ತಿಳಿಸುತ್ತದೆ. ಇವುಗಳನ್ನುಳಿದು ಕೆಲವು ವೇಳೆ ಎಷ್ಟೋ ಶಾಸನಗಳ ಪಾಠವನ್ನು ಸಿದ್ಧಪಡಿಸುತ್ತಿದ್ದವನು ಸೇನಬೋವನೇ ಆಗಿದ್ದನು.

ಶಾನುಭೋಗರ ಕೆಲಸ ವಂಶಪಾರಂಪರ್ಯವಾಗಿ ಬಂದಿರುವುದೇ ಎಂಬುದಕ್ಕೆ ಸ್ಪಷ್ಟಸೂಚನೆಗಳು ನಮಗೆ ದೊರೆಯುವುದಿಲ್ಲ. ಊರಿನ ರಕ್ಷಣೆ ತಳವಾರನದು. ಈ ಕೆಲವು ತಳವಾರರ ಹೆಸರುಗಳನ್ನು ಕಸಾಗಟ್ಟದಲ್ಲಿನ ವೀರಗಲ್ಲಿನಲ್ಲಿ ತಳವಾರ ಕೆಂಪೆನಾಯಕ ಎಂದು ಹೇಳುತ್ತದೆ. ರಾಜರುಗಳು ಊರಿನ ಗೌಡನಿಗೆ, ತಳವಾರರಿಗೆ, ಗೌಡಿಕೆಗಾಗಿ, ಭೂಮಿಯನ್ನು ಬಿಟ್ಟುಕೊಟ್ಟಿರುವುದನ್ನು ರಾಮಪುರ ಶಾಸನ ಮತ್ತು ಕಸಾಗಟ್ಟದ ಶಾಸನಗಳು ಉಲ್ಲೇಖಿಸುತ್ತವೆ.

**ಮಹಾಪ್ರಧಾನರು**

ನಾಡುಗಳನ್ನು ಉಲ್ಲೇಖಿಸುವ ಶಾಸನಗಳಲ್ಲಿ ಕಂಡುಬರುವ ಹೊಯ್ಸಳರ ಮತ್ತು ವಿಜಯನಗರ ಅರಸರ ಮಹಾಪ್ರಧಾನರೆಂದರೆ ಪುಂಣನ ಅಥವಾ ಪೊನ್ನಣ್ಣ. ತಾಲ್ಲೂಕಿನ ಹಾಡೋನಹಳ್ಳಿ

ಗ್ರಾಮದ ಒಂದು ಶಾಸನ[೫೩] "ಶ್ರೀಮನುಮಹಾ ಪ್ರಧಾನಂಪುಂಣನವರ ಮಕ್ಕಳು" ಎಂಬ ವಿವರ ನೀಡುತ್ತದೆ. ಶಾಸನೋಕ್ತ ಪೊನ್ನಣ್ಣನೇ ಮಹಾಪ್ರಧಾನ ಎಂಬುದು ತಿಳಿಯುತ್ತದೆ. ಈತನ ಹೆಸರನ್ನು ದೇವನಹಳ್ಳಿ ತಾಲ್ಲೂಕಿನ ಕ್ರಿ.ಶ.೧೩೨೯[೫೪] ಮತ್ತು ಹೊಸಕೋಟೆ ತಾಲ್ಲೂಕಿನ ೧೩೩೦ರ[೫೫] ಕಾಲದ ಶಾಸನಗಳು ಉಲ್ಲೇಖಿಸುತ್ತವೆ.

**ದಂಡನಾಯಕರು**

ಹೊಯ್ಸಳ ಮತ್ತು ವಿಜಯನಗರ ಅರಸರ ಅಧಿಕಾರಿಗಳಲ್ಲಿ ದಂಡನಾಯಕರ ಸ್ಥಾನವು ಮಹತ್ವ ಪಡೆದುಕೊಂಡಿತ್ತು ಎಂಬುದಕ್ಕೆ ತಾಲ್ಲೂಕಿನ ಶಾಸನಗಳು ನಿದರ್ಶನಗಳಾಗಿವೆ. ಶ್ರೀಮೆಯ ದಂಣಾಯಕ ಎಲಹಂಕನಾಡನ್ನು ಆಳುತ್ತಿದ್ದ ವಿವರ ಕ್ರಿ.ಶ.೧೩೨೮ರ ಹಾಡೋನಹಳ್ಳಿ ಶಾಸನದಲ್ಲಿ[೫೬] ಬಂದಿದೆ. ಈತ ಮಹಾಪ್ರಧಾನ ಪೊಂನ್ನಣ್ಣನ ಮಗನೂ ಹೌದು. ಇದೇ ವಿಭಾಗವನ್ನು ಒಳಗೊಂಡ ಚಿಕ್ಕಜಾಲದ ಕ್ರಿ.ಶ.೧೩೨೯ರ ಶಾಸನವೊಂದರಲ್ಲಿ[೫೭] ಶ್ರೀ ಹೊಯಿದಂಣಾಯಕನ' ಪ್ರಸ್ತಾಪವಿದ್ದು, ಈತನೂ ಮಹಾಪ್ರಧಾನ ಪೊಂನ್ನಣ್ಣನ ಮಗನೆಂದು ತಿಳಿದುಬರುತ್ತದೆ. ಕಾಲಘಟ್ಟದ ಕುರುವಿಗೆರೆ ಗ್ರಾಮದ ಶಾಸನವೊಂದರಲ್ಲಿ[೫೮] ಕಾಮಯದಂಣಾಯಕರ ಹೆಸರು ಕಂಡುಬರುತ್ತದೆ. ಅಲ್ಲದೆ ಕ್ರಿ.ಶ.೧೩೩೦ರ ಹೊಸಕೋಟೆ ತಾಲ್ಲೂಕಿನ ಶಾಸನದಲ್ಲೂ[೫೯] ಈತನ ಹೆಸರು ಉಲ್ಲೇಖವಾಗಿದೆ.

## ೩.೫. ತೆರಿಗೆ, ತೆರಿಗೆ ವಸ್ತುಗಳು ಮತ್ತು ಸುಂಕದ ವಿವರಗಳು

ಪ್ರಾಚೀನ ಕರ್ನಾಟಕದ ಆರ್ಥಿಕ ಮತ್ತು ಆಡಳಿತ ವ್ಯವಸ್ಥೆಯನ್ನು ತಿಳಿಯಲು ಈವರೆಗೆ ದೊರೆತಿರುವ ಶಾಸನಗಳು ವಿಪುಲವಾದ ಸಾಮಗ್ರಿಯನ್ನು ಒದಗಿಸುತ್ತದೆ. ದೊರೆತಿರುವ ಶಾಸನಗಳನ್ನು ಆಳವಾಗಿ ಅಧ್ಯಯನ ಮಾಡಿದಾಗ ಅಂದಿನ ಕಾಲದಲ್ಲಿದ್ದ ಆರ್ಥಿಕ ವ್ಯವಸ್ಥೆಯ ಸಮಗ್ರ ಪರಿಚಯವಾಗುತ್ತದೆ. ಈ ಆರ್ಥಿಕ ವ್ಯವಸ್ಥೆಯು ಸುಭದ್ರವಾಗಿ ನಿಲ್ಲಲು ರಾಜ್ಯಾದಾಯ ಬಹುಮುಖ್ಯ. ಈ ರೀತಿಯ ಆದಾಯವನ್ನು ವಿವಿಧ ವಸ್ತುಗಳು, ವೃತ್ತಿಗಳು, ಆಸ್ತಿಗಳು, ಸಾಮಾಜಿಕ ಕಾರ್ಯಗಳು ಮುಂತಾದವುಗಳ ಮೇಲೆ ವಿಧಿಸಲಾಗುತ್ತಿದ್ದ ಸುಂಕದಿಂದಲೇ ಬರುತ್ತಿತ್ತು. ವ್ಯಾಪಾರ ಸಾಮಾಗ್ರಿಗಳ ಮೇಲೆ ವಿಧಿಸುತ್ತಿದ್ದ ಸುಂಕವನ್ನು 'ತಳಭಾರದ ಸುಂಕ' ಎಂಬುದಾಗಿ ಕರೆಯುತ್ತಿದ್ದರು ಯಾವ ಸಾಮಗ್ರಿಗೆ ಎಷ್ಟು ಸುಂಕ, ಈ ರೀತಿಯ ಸುಂಕವು ಹಣದ ರೂಪದಲ್ಲಿ ಬರಬೇಕೆ ಅಥವಾ ವಸ್ತುಗಳ ರೂಪದಲ್ಲಿ ಬರಬೇಕೆ ಎಂಬುದನ್ನು ನಮೂದಿಸುತ್ತಿದ್ದರು. ಹಣದ ಜೊತೆಗೆ ವಸ್ತು ವಿನಿಮಯ ಪದ್ಧತಿಯೂ ನಡೆಯುತ್ತಿತ್ತು ಎಂಬುದನ್ನು ಹಲವಾರು ಶಾಸನಗಳು ತಿಳಿಸುತ್ತವೆ. ದೊಡ್ಡಬಳ್ಳಾಪುರದ ಕೋಟೆಯಲ್ಲಿದ್ದ ಒಂದು ಶಾಸನವು ತೆರಿಗೆ ಮತ್ತು ತೆರಿಗೆ ವಸ್ತುಗಳ ಬಗ್ಗೆ ಮಾಹಿತಿಯನ್ನು ನೀಡುವ ತಾಲ್ಲೂಕಿನ ಅಪರೂಪದ ಒಂದು ಶಾಸನವಾಗಿದೆ. ಈ ಶಾಸನವು ಐಯ್ಯಾಹೊಳೆ ವರ್ತಕರ ಹೆಸರುಗಳು, ತೆರಿಗೆ ರೂಪಗಳು, ತೆರಿಗೆ ವಸ್ತುಗಳನ್ನು ಹೆಸರಿಸುತ್ತದೆ. ಈ ಶಾಸನದ ಮೇಲ್ಭಾಗದಲ್ಲಿ

ಎರಡು ಸಾಲಿನ ಪಾರ್ಸಿ ಅಕ್ಷರಗಳಿವೆ. ಈ ಶಾಸನವು ಹೊಯ್ಸಳ ಚಕ್ರವರ್ತಿ ಮೂರನೇ ನರಸಿಂಹನ ಕ್ರಿ.ಶ.೧೨೬೭ರ ಕಾಲಕ್ಕೆ ಸೇರಿದ್ದಾಗಿದೆ.[೬೦]

ಪ್ರಾಚೀನ ದಕ್ಷಿಣ ಭಾರತದ ವರ್ತಕ ಶ್ರೇಣಿಗಳಲ್ಲಿ ಶಾಸನೋಕ್ತ 'ಅಯ್ಯಾವೊಳೆ ಅಯ್ನೂರ್ಬ್ಬ ಸ್ವಾಮಿಗಳು ಉಭಯ ನಾನಾದೇಶಿ ಮುಖ್ಯರಪ್ಪ...' ಎಂಬ ಹೆಸರು ಅತ್ಯಂತ ಪ್ರಸಿದ್ಧವಾದುದು. ಈ ಸಂಘದ ಕೇಂದ್ರ ಕಛೇರಿಯು ಕನ್ನಡನಾಡಿನ ಬಿಜಾಪುರ ಜಿಲ್ಲೆಯ (ಈಗ ಬಾಗಲಕೋಟೆ ಜಿಲ್ಲೆ) ಬಾದಾಮಿ ಸಮೀಪದ ಐಹೊಳೆಯಲ್ಲಿರುವುದು. ಈ ಐಹೊಳೆಯೇ ಅಯ್ಯಾವೊಳೆ ಎಂದು ಹೇಳಬಹುದಾಗಿದೆ. ಈ ಐನೂರ್ವರು ಎಂಬುದು ವರ್ತಕರ ಗುಂಪನ್ನು ಸೂಚಿಸುತ್ತದೆ. ಇವರುಗಳು ಶಾಸನಗಳು ರಚನೆಗೊಂಡ ಸಮಯದಲ್ಲಿ ಬಹಳ ಪ್ರಬಲರಾಗಿದ್ದರು. ಏಕೆಂದರೆ ಎಲ್ಲಾ ಶಾಸನಗಳಲ್ಲಿಯೂ ಐನೂರ್ವರ' ಹೆಸರು ಬಂದರೂ, ಎಷ್ಟೋ ಗ್ರಾಮಗಳಲ್ಲಿ ನಿಜವಾಗಿ ಇದ್ದ ವರ್ತಕರ ಸಂಖ್ಯೆ ಬೇರೆ ಬೇರೆಯಾಗಿರುತ್ತಿತ್ತು. ಇಲ್ಲಿ ಅಯ್ನೂರ್ವರ್ ಸ್ವಾಮಿಗಳು' ಎಂದರೆ ಸಂಖ್ಯೆಯನ್ನು ಸೂಚಿಸದೆ ವರ್ತಕ ಸಮುದಾಯವನ್ನು ಸೂಚಿಸುತ್ತದೆ. ಇವರು ಯಾವುದೇ ಒಂದು ಮತಕ್ಕೆ ಸೀಮಿತವಾಗದೆ ಎಲ್ಲರನ್ನೂ, ಸಮಾನತೆಯಿಂದ, ಸಮಾನ ಭಾವದಿಂದ ಗೌರವಯುತವಾಗಿ ನಡೆಸಿಕೊಳ್ಳುತ್ತಿದ್ದರು. ದಾನವನ್ನು ನೀಡುವ ಸಂದರ್ಭದಲ್ಲಿ ಈ ಐನೂರ್ವರು ಪ್ರತ್ಯಕ್ಷವಾಗಿ ಇರುತ್ತಿದ್ದರು ಎಂದು ಹಲವು ಶಾಸನಗಳು ಹೇಳುತ್ತವೆ.[೬೧] ಹಾಗಾಗಿ ಈ ಐನೂರ್ವರು ದಾನವನ್ನು ಕೊಟ್ಟ ವರ್ತಕರು. ಅವರ ಸಂಘದ ಹೆಸರೇ ಅಯ್ಯಾವೊಳೆಯ ಐನೂರ್ವರ್ ಎಂದಿರುವುದರಿಂದ ಅವರನ್ನು ಐನೂರ್ವರ್ ಎಂದೇ ದೊಡ್ಡಬಳ್ಳಾಪುರದ ಕೋಟೆ ಶಾಸನ ಉಲ್ಲೇಖಿಸುತ್ತದೆ. ಒಂದು ಕಾಲದಲ್ಲಿ ಐಹೊಳೆಯು ವ್ಯಾಪಾರ ಕೇಂದ್ರವಾಗಿದ್ದು, ಅಲ್ಲಿಯ ಐನೂರ್ವರು ದೇಶ ವಿದೇಶಗಳಲ್ಲಿ ವ್ಯಾಪಾರ ಮಾಡುತ್ತಿದ್ದರು ಎಂಬುದನ್ನು ಇದು ಸೂಚಿಸುತ್ತದೆ. ಮುಂದೆ ಬಂದ ವರ್ತಕರು ಅವರು ತಮ್ಮ ಮೂಲಪುರುಷರೆಂದು ತಿಳಿದು ಅವರ ಹೆಸರಿನಲ್ಲಿ ಸಂಘಗಳನ್ನು ಬೇರೆಡೆಯೂ ಸ್ಥಾಪಿಸಿಕೊಂಡಿರಬೇಕು. ಅಲ್ಲದೆ ಈ ಸಂಘವು ಅನೇಕ ಶಾಖೆಗಳನ್ನು ಹೊಂದಿತ್ತು. ಈ ಹೆಸರಿನ ಸಂಘಗಳು ಚೇರ, ಚೋಳ, ಪಾಂಡ್ಯ ಸಾಮ್ರಾಜ್ಯಗಳಲ್ಲೂ ಹರಡಿದ್ದವು. ಈ ಸಂಘದ ಮುಖ್ಯಸ್ಥನನ್ನು 'ಪಟ್ಟಣಸ್ವಾಮಿ' ಎಂದು ಕರೆಯುತ್ತಿದ್ದರು. (ಅಯ್ಯಾವಳೆಯ ಅಯ್ನೂರ್ಬ್ಬಸ್ವಾಮಿಗಳುಂ ಉಭಯನಾನಾದೇಶಿ ಮುಖ್ಯರಪ್ಪತ್ರೈಳೊಳ್ಯ ಪಟಣಸ್ವಾಮಿ ವೀರಬಲ್ಲಾಳ ಸೆಟ್ಟಿಯರುಂ ...") ಈ ಪಟ್ಟಣಸ್ವಾಮಿ ವರ್ತಕರಲ್ಲಿ ಶ್ರೀಮಂತ ಅಥವಾ ವೃದ್ಧನೂ ಆಗಿರಬಹುದು. ಇಲ್ಲಿನ ವರ್ತಕರ ಹೆಸರುಗಳನ್ನು ಗಮನಿಸಿದಾಗ ಇವರು ಸಂಘದ ವರ್ತಕರೇ ಆಗಿರಬಹುದೆಂದು ಊಹಿಸಬಹುದಾಗಿದೆ. "ಪಟ್ಟಣಸ್ವಾಮಿ ವೀರಬಲ್ಲಾಳ ಸೆಟ್ಟಿಯರುಂ, ಮರಿಯಹೊಲ, ಸೆಟ್ಟಿಯರುಂದೊಡಲ ಪೋತಿಸೆಟ್ಟಿಯರುಂ ಹೊಟೆಯ ಇರಿಗಿಸೆಟ್ಟಿಯರುಂ ಗುಡ್ಡಕಲ್ಲಿಸೆಟ್ಟಿಯರ ಮಗ ಮೈಲಾರಸೆಟ್ಟಿಯರುಂ ಹೊರವಡಿಯ ಮಲ್ಲ ಸೆಟ್ಟಿಯರುಂ ನಾಡಿಸೆಟ್ಟಿಯ

ಮಗ ಕಲ್ಲಿಸೆಟ್ಟಿಯರುಂ ಚಿಕ್ಕ ತಮ್ಮ... ಚಿಕ್ಕ ಗೌಡನುಂ..." ಎಂಬ ಹೆಸರುಗಳು ಇವರು ಐನೂರ್ವರೇ ಎಂದು ತಿಳಿಸುತ್ತವೆ.[೬೨]

ಕೋಟೆಯ ಶಾಸನವು ಶ್ರೀ ಗವರೇಶ್ವರ ದೇವರಿಗೆ ತೆರಿಗೆಗಳಿಂದ ಬಂದ ಹಣವನ್ನು ದಾನವಾಗಿ ನೀಡುತ್ತಿದ್ದರು ಎಂಬ ಅಂಶವನ್ನು ತಿಳಿಸುತ್ತದೆ. ಸೂರ್ಯಚಂದ್ರರು ಇರುವವರೆಗೆ ಮುಂದುವರಿದು ಕೊಂಡು ಹೋಗಲಿ ಎಂಬುದು ಇವರ ಆಶಯವಾಗಿತ್ತೆಂದು ತಿಳಿದುಬರುತ್ತದೆ. ಇಲ್ಲಿನ ಗವರೆ ಎಂಬುದು ಗೌರಿಯನ್ನು ಸೂಚಿಸುತ್ತಿದ್ದರೂ ಸಹ ವರ್ತಕರಿಗೆ ಇದ್ದ ಮತ್ತೊಂದು ಸಾಮಾನ್ಯ ಹೆಸರಿರಬಹುದೆಂಬ ಭಾವನೆಯು ಬರುತ್ತದೆ. ತಮಿಳಿನಲ್ಲಿ 'ಕವರೈ' ಎಂಬ ಪದವು ತೆಲುಗಿನಲ್ಲಿದನ 'ಉಲಿಜ' ಜಾತಿಗಿರುವ ಹೆಸರು ಆದರೆ ಆಧುನಿಕ ಕನ್ನಡದಲ್ಲಿ 'ಗವರೆಗ' ಎಂದರೆ ಮೇದರವನು ಎಂಬ ಅರ್ಥವನ್ನು ಸೂಚಿಸುತ್ತದೆ. ಗವರೇಶ್ವರ ಎಂಬುದು ೧೨ನೇ ಶತಮಾನದ ಮೇದರ ಕೇತಯ್ಯ ಎಂಬ ವಚನಕಾರನ ಅಂಕಿತನಾಮವು ಗವರೇಶ್ವರ ಈ ಗವರೇಶ್ವರ ಶಾಸನೋಕ್ತ ರಾಜಘಟ್ಟ ಗ್ರಾಮದಲ್ಲಿನ ಈಶ್ವರ ದೇವಾಲಯವೇ ಇರಬಹುದು ಎಂದು ಊಹಿಸಬಹುದಾಗಿದೆ. ಈ ದೇವಾಲಯಕ್ಕೆ ವರ್ತಕರು ಸಂಗ್ರಹಿಸಿದ ಸುಂಕದ ಹಣದಿಂದ ಜೀರ್ಣೋದ್ಧಾರಕ್ಕೆಂದು ದಾನವಾಗಿ ನೀಡಿದರು ಎಂಬುದಾಗಿ ತಿಳಿದುಬರುತ್ತದೆ.[೬೩]

ಶಾಸನದಲ್ಲಿ ಉಕ್ತವಾಗಿರುವ ವ್ಯಾಪಾರ ಸಾಮಗ್ರಿಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಬಹುದು. ಹತ್ತಿ, ಅರಿಸಿನ, ಬೆಂಬಡೆಯಮಳವೆ? ಬೆಲ್ಲ, ಉಪ್ಪು, ದವಸ, ಅಡಕೆ, ಮೆಣಸು, ಏಲಕ್ಕಿ, ಕಂಬಳಿ, ಗೂಲಮಳವೆ? ಸಂಭಾರು? ಸೀಮೆಯಮಳವೆ? ಕುದುರೆ, ಕೋಣ, ಎತ್ತು, ಕತ್ತೆ, ಬರಹದ ಸಾಮಗ್ರಿಗಳಾದ ಓಲೆ ಮೂಂತಾದವುಗಳ ವ್ಯಾಪಾರ ನಡೆಯುತ್ತಿತ್ತು. ಈ ವಸ್ತುಗಳಲ್ಲಿ ಯಾವು ವಸ್ತುಗಳನ್ನು ಹೊರದೇಶಗಳಿಂದ ತರಿಸಿಕೊಳ್ಳುತ್ತಿದ್ದರು ಹಾಗೂ ಹೊರ ದೇಶಗಳಿಗೆ ಕಳುಹಿಸಿಕೊಡುತ್ತಿದ್ದರು ಎಂಬುದರ ವಿವರಗಳು ತಿಳಿದುಬರುವುದಿಲ್ಲ. ಶಾಸನದಲ್ಲಿ ಉಲ್ಲೇಖಗೊಂಡಿರುವ ರಾಜಘಟ್ಟ ಗ್ರಾಮ ಒಂದಾನೊಂದು ಕಾಲದಲ್ಲಿ ಸಂತೆ ಅಥವಾ ವ್ಯಾಪಾರಕೇಂದ್ರವಾಗಿತ್ತು. ಇಲ್ಲಿ ಅಡಕೆ, ಎಲೆ, ಮೆಣಸು, ಅರಿಸಿನ ಮುಂತಾದ ಪದಾರ್ಥಗಳು ಮಾರಾಟವಾಗುತ್ತಿದ್ದು, ಇವುಗಳ ಮೇಲೆ ತೆರಿಗೆಗಳನ್ನು ವಿಧಿಸುತ್ತಿದ್ದರು. (ಅಲ್ಲದೆ, ವ್ಯವಸಾಯಕ್ಕೆಂದು ಕೃಷಿ ಸಾಧನಗಳಾದ ಕೋಣ, ಎತ್ತು, ಕತ್ತೆ, ಕುದುರೆಗಳ ಮಾರಾಟವೂ ನಡೆಯುತ್ತಿದ್ದು ಇವುಗಳ ಮೇಲೂ ತೆರಿಗೆಗಳನ್ನು ವಿಧಿಸುತ್ತಿದ್ದರು. ಇಂದಿಗೂ ಈ ಗ್ರಾಮದ ಸುತ್ತಮುತ್ತ ಕೃಷಿ ಸಮೃದ್ಧವಾಗಿ ನಡೆಯುತ್ತಿರುವುದನ್ನು ಕಾಣಬಹುದಾಗಿದೆ. ಅಲ್ಲದೆ ಇದೊಂದು ಪುರಾತನ ಬೌದ್ಧ ನೆಲೆ ಎಂಬುದೂ ಅಷ್ಟೇ ಸತ್ಯ.)

ಕುದುರೆ, ಎತ್ತು, ಕತ್ತೆ, ಕೋಣ ಮುಂತಾದ ಪ್ರಾಣಿಗಳನ್ನು ಭೂ ಮಾರ್ಗದ ವ್ಯಾಪಾರಕ್ಕಾಗಿ ಈ ಪ್ರಾಣಿಗಳ ಮೇಲೆ ಸಾಮಾನುಗಳನ್ನು ಹೇರಿ ಸಾಗಿಸಲು ಉಪಯೋಗಿಸುತ್ತಿದ್ದಿರಬಹುದು. (ಅಂದು ಭೂಮಾರ್ಗವು ವ್ಯಾಪಕವಾಗಿ ಪ್ರಚಲಿತವಾಗಿತ್ತು ಎಂಬುದನ್ನು ಹೇಳಬಹುದು)

ಪ್ರಾಚೀನ ಕರ್ನಾಟಕದಲ್ಲಿ ನಾಣ್ಯಗಳು ಚಲಾವಣೆಯಲ್ಲಿದ್ದರೂ ವಸ್ತು ವಿನಿಮಯ ಪದ್ಧತಿ, ಆಚರಣೆಯಲ್ಲಿತ್ತು ಎಂಬುದನ್ನು ಹಲವಾರು ಶಾಸನಗಳು ಹೇಳುತ್ತವೆ. ಅಂದಿನ ನಾಣ್ಯ ಪದ್ಧತಿಯಲ್ಲಿ ಅತ್ಯಂತ ಪ್ರಸಿದ್ಧವಾದುದು ಗದ್ಯಾಣ ಮತ್ತು ಪಣ, ಒಂದು ಗದ್ಯಾಣಕ್ಕೆ ಹತ್ತು ಪಣ ಅಥವಾ ಹಣ ಸಮಾನವಾದುದು. ವಸ್ತುಗಳ ಮೇಲಿನ ತೆರಿಗೆಯನ್ನು ಈ ರೀತಿಯಾಗಿ ಹೇರುತ್ತಿದ್ದರು. ಶಾಸನದಲ್ಲಿ ಉಲ್ಲೇಖಗೊಂಡಿರುವಂತೆ 'ಹೇಱು' ಎಂಬ ಪದವು ಅಳತೆಯ ಮಾಪನವನ್ನು ಸೂಚಿಸುವಂತಿದೆ. ಇದರ ಮೂಲಾರ್ಥ ಅಧಿಕ ಎಂಬರ್ಥವಿರುವುದರಿಂದ ಆ ವಸ್ತುವಿನ ತೂಕವನ್ನು ಹೇಳುವಂತಿದೆ.

ಹತ್ತಿಯ ಹೇಱು ೧೦ಕ್ಕೆ ೧ ಪಣ<br>
ಬೆಂಬಡೆಯ ಮಳವೆ? ೧೦ಕ್ಕೆ ೧ ಪಣ<br>
ಅರಿಸಿಣದ ಹೇಱು ೧೦ಕ್ಕೆ ೨ ಪಣ<br>
ಮೆಣಸಿನ ಹೇಱು ೧೦ಕ್ಕೆ ೧ ಪಣ<br>
ಬೆಲ್ಲದ ಹೇಱು ೧೦ಕ್ಕೆ ೧ ಪಣ<br>
ಉಪ್ಪಿನ ಹೇಱು ೨೦ಕ್ಕೆ ೧ ಪಣ<br>
ಓಲೆಯ ಮಳವೆ ೧೦ಕ್ಕೆ ೧ ಪಣ<br>
ದವಸದ ಹೇಱು ೨೦ಕ್ಕೆ ೧ ಪಣ<br>
ಅಡಕೆಯ ಹೇಱು ೧೦ಕ್ಕೆ ೧ ಪಣ<br>
ಏಲಕ್ಕಿಯ ಹೇಱು ೧೦ಕ್ಕೆ ೨ ಪಣ<br>
ಕಂಬಳಿಯಮಳವೆ ೧೦ಕ್ಕೆ ೧ ಪಣ<br>
ಕುದರೆ ಕೊಂಡಲ್ಲಿ ೧ ಪಣ<br>
ಕುದುರೆ ಕೊಟ್ಟಲ್ಲಿ ೧ ಪಣ<br>
ಸಂಭಾರದ ಹೇಱು ೧೦ಕ್ಕೆ ೧ ಪಣ<br>
ಸೀಮೆಯ ಮಳವೆ? ೧೦ಕ್ಕೆ ೧ ಪಣ

ಈ ರೀತಿಯಾದ ವ್ಯಾಪಾರ ಸಾಮಗ್ರಿಗಳ ಪಟ್ಟಿಯು ಶಾಸನದಲ್ಲಿ ಉಕ್ತವಾಗಿದೆ. ಇವುಗಳಲ್ಲಿ ಯಾವ ವಸ್ತುಗಳು ಹೊರದೇಶಗಳಿಂದ ತರಿಸಿಕೊಳ್ಳುತ್ತಿದ್ದರು ಮತ್ತು ಹೊರದೇಶಗಳಿಗೆ ಕಳುಹಿಸಿಕೊಡುತ್ತಿದ್ದರು ಎಂಬುದು ತಿಳಿಯುವುದಿಲ್ಲ.

ದಕ್ಷಿಣ ಭಾರತದ ಶಾಸನಗಳನ್ನು ಅಧ್ಯಯನ ಮಾಡುವಾಗ ಸಾಮಾನ್ಯವಾಗಿ ಎದ್ದು ಕಾಣುವ ಅಂಶವೆಂದರೆ ಅವುಗಳಲ್ಲಿ ಕಂಡುಬರುವ ಅಸಂಖ್ಯಾತ ತೆರಿಗೆಗಳು. ಶಾಸನಗಳನ್ನು ಅಧ್ಯಯನ ಮಾಡುವಾಗ ಎಷ್ಟೋ ತೆರಿಗೆಯ ಅರ್ಥಗಳು ಈವರೆಗೂ ನಮಗೆ ಅರ್ಥವಾಗಿಲ್ಲ. ಕ್ರಿ.ಶ.೧೫೩೧ರ ಶಾಸನವು ಕೆರೆಕೆಳಗಣ ಗದ್ದೆ ಹೆಜ್ಜಲು ಅಣೆ ಅಚ್ಚುಕಟ್ಟು ಕಡೆ ಕಾಲವೆ ತೋಟ ತುಡಿಕೆ ಕಾಡಾರಂಭ

ನೀರಾರಂಭ ನಡೆವರೊಯ್ಯಲುಗೊಡೆ ಗೊಯ್ಯಲು ಸುಂಕ ಸುವರ್ನಾದಾಯಮನೆದೆರಿಗೆ, ಮಗ್ಗದೆರಿಗೆ ಪಟ್ಟದಿಪಸರಾಯ ಗ್ರಾಮದೆರಿಗೆ ಸಕಲಸುವರ್ನಾದಾಯ ಸಕಲ ವಸ್ತುದಾಯವನ್ನೊಸರ್ವ ಮಾನ್ಯವಾಗಿ..." ಎಂಬಲ್ಲಿ ತೆರಿಗೆ ಮತ್ತು ಸುಂಕಗಳನ್ನು ಪ್ರಸ್ತಾಪಿಸುತ್ತದೆ[೬೪] ಮನೆದೆರಿಗೆ-ಮನೆಗಳ ಮೇಲೆ ವಿಧಿಸುವ ತೆರಿಗೆ ಅಥವಾ ಮನೆಗಂದಾಯ ಇದನ್ನು ಮನೆದೆಜು,[೬೫] ಮನೆವಣ[೬೬] ಎಂಬರ್ಥದಲ್ಲಿಯೂ ಕರೆಯಬಹುದು. ಮಗ್ಗದೆರಿಗೆ -ಬಟ್ಟೆ ನೇಯುವ ಮಗ್ಗಗಳ ಮೇಲೆ ಹಾಕುವ ತೆರಿಗೆ, ಗ್ರಾಮದೆರಿಗೆ -ಗ್ರಾಮಗಳ ಮೇಲೆ ಹಾಕುವ ತೆರಿಗೆ. ಇಂತಹ ತೆರಿಗೆಗಳನ್ನು ಸಂಗ್ರಹಿಸಿ ಕಾಡನೂರು ಚನ್ನಕೇಶವ ದೇವರ ದೇವಾಲಯದ ಜೀರ್ಣೋದ್ಧಾರಕ್ಕಾಗಿ ದಾನ ನೀಡುತ್ತಿದ್ದರು. ಅಲ್ಲದೆ ಹೆಜ್ಜಾಜಿಯ ಕೆರೆಕೆಳಗಣಗದ್ದೆ, ಕಾಲುವೆ, ತೊಟಕುಡಿಕೆ, ನೀರಾವರಿ ಪ್ರದೇಶಗಳ ಮೇಲೆ ಸುಂಕವನ್ನು ವಿಧಿಸುವ ಪರಿಪಾಠವಿತ್ತು. ಅಪರೂಪವೆಂಬಂತೆ ಒಂದು ಜನಾಂಗದ ಮೇಲೆ ಅಥವಾ ವೃತ್ತಿಗಳ ಮೇಲೆ ತೆರಿಗೆ ಹಾಕುವುದನ್ನು ಕಾಣಬಹುದಾಗಿದೆ. ಬಡಗಿ, ಕಮ್ಮಾರ, ಅಕ್ಕಸಾಲಿಗರ ಮೇಲೆ ಸುಂಕವನ್ನು ಹಾಕುವುದು ಕಂಡುಬರುತ್ತಿತ್ತು.[೬೭] ಇನ್ನು ಮುಂತಾದ ಅಂಶಗಳನ್ನು ಹೇಳುವ ಕುಱುಂಬದೆಜು[೬೮] ಕುರುಬ ಜನರ ಮೇಲೆ ವಿಧಿಸುತ್ತಿದ್ದ ತೆರಿಗೆ ಇರಬಹುದು. ಕೊಡತಿವಣ[೬೯] ಕಮ್ಮಾರ ಮತ್ತು ಬಡಗಿಗಳ ಮೇಲಿನ ತೆರಿಗೆಗಳು ಎಂದು ಅರ್ಥೈಸಬಹುದಾಗಿದೆ. ಈ ಶಾಸನ ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲೇ ವಿಶೆಷವಾದ ಮತ್ತು ಅಪರೂಪವಾದ ಶಾಸನ ಎಂದು ಹೇಳಬಹುದು.

## ೩.೬. ಅಗ್ರಹಾರಗಳು, ಪುರಗಳು, ಮಂಗಲಗಳು

ಅಗ್ರಹಾರಗಳು ವಿಶೇಷವಾಗಿ ಬ್ರಾಹ್ಮಣರಿಗೆ ಜೀವನಾಧಾರಕ್ಕಾಗಿ ಬಿಟ್ಟುಕೊಟ್ಟ ಗ್ರಾಮಗಳು. ಇವನ್ನು ಚತುರ್ವೇದಿ ಮಂಗಲ, ಶ್ರೋತ್ರಿಯ ಗ್ರಾಮ ಎಂದು ಕರೆಯುವರು. ವೇದ ವೇದಾಂಗ ಪಾರಂಗತರಾದ ಷಟ್ಕರ್ಮನಿರತರಾದ ಬ್ರಾಹ್ಮಣೋತ್ತಮರಿಗೆ ಆಳರಸರು ನೆಲಹೊಲಗಳನ್ನು ಬ್ರಹ್ಮದೇಯ ಅಥವಾ ಬ್ರಹ್ಮದಾಯವಾಗಿ ದಾನ ಕೊಡುವ ಪದ್ಧತಿ ಕರ್ನಾಟಕವೂ ಸೇರಿದಂತೆ ಭಾರತದ ಎಲ್ಲೆಡೆಗಳಲ್ಲಿಯೂ ಹಿಂದಿನಿಂದಲೂ ವಾಡಿಕೆಯಿತ್ತು. ನಾನಾ ರೀತಿಯ ಗೋತ್ರಗಳಿಗೆ ಪ್ರವರಗಳಿಗೆ, ಶಾಖೆಗಳಿಗೆ ಸೇರಿದ ನಿರ್ದಿಷ್ಟ ಸಂಖ್ಯೆಯ ಬ್ರಾಹ್ಮಣರಿಗೆ ಅವರು ಗೃಹಸ್ಥಾಶ್ರಮ ನೀತಿನಿಯಮಗಳನ್ನು ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ ಪ್ರತಿಗ್ರಹ ಎಂಬ ಈ ಸ್ಮೃತಿಸಿದ್ಧವಾದ ಕಾರ್ಯಗಳನ್ನು ನೆರವೇರಿಸಿಕೊಂಡು ಹೋಗಲೆಂದು ಒಂದು ಗ್ರಾಮದ ನೆಲಹೊಲ, ತೋಟ ತುಡಿಕೆಗಳನ್ನು, ಮನೆಯ ನಿವೇಶನಗಳನ್ನು ವೃತ್ತಿಗಳಾಗಿ ವಿಂಗಡಿಸಿ ಸಾಮೂಹಿಕವಾಗಿ ದಾನಕೊಟ್ಟಲ್ಲಿ ಅಗ್ರಹಾರಗಳ ಸೃಷ್ಟಿಯಾಗಿರಬೇಕು. ಶಾಸನಗಳಲ್ಲಿ ಈ ಪಾರಿಭಾಷಿಕ ಪದವನ್ನು 'ಅಗ್ರಹಾರ' ಎಂದು ಬರೆಯಲಾಗಿದೆ. ಈ ಅಗ್ರಹಾರದ ಮೂಲರೂಪ ಅಗ್ರಾಹಾರ (ಅಗ್ರ+ಆಹಾರ) ಎಂದಿರಬೇಕು.

ಕರ್ನಾಟಕದಲ್ಲಿ ಗೌತಮಸಗೋತ್ರದ ಶುಕ್ಲಯುಜುರ್ವೇದದಲ್ಲಿ ಪಾರಂಗತನಾದ ಬದಿರಕುಲದ ಬ್ರಾಹ್ಮಣನೊಬ್ಬನಿಗೆ ಮಹಿಷ ವಿಷಯದ ಪೆರ್ಬ್ಬಟ ಗ್ರಾಮವನ್ನು 'ಬ್ರಹ್ಮದೇಯ ನ್ಯಾಯ'ದ ರೀತ್ಯ

ಅಗ್ರಹಾರವಾಗಿ ಕೊಡಲಾಯಿತೆಂದು ಕ್ರಿ.ಶ.೫ನೆಯ ಶತಮಾನದ ಉತ್ತರಾರ್ಧದ್ದೆನ್ನಲಾದ ಕದಂಬ ಕೃಷ್ಣವರ್ಮನ ಹೆಬ್ಬಟ ತಾಮ್ರಶಾಸನದಲ್ಲಿ ಉಲ್ಲೇಖವಾಗಿದೆ. ಕ್ರಿ.ಶ.೧೦-೧೧ನೆಯ ಶತಮಾನಗಳ ಶಾಸನಗಳಿಂದ ತಿಳಿದುಬರುವಂತೆ ಸ್ಥಾನಕುಂದೂರ ಇಂದಿನ ತಾಳಗುಂದ ನಿಷ್ಠಾವಂತ ವೈದಿಕ ಬ್ರಾಹ್ಮಣರ ವಾಸಸ್ಥಾನವಾಗಿತ್ತು. ವಾತಾಪಿ ಇಂದಿನ ಬಾದಾಮಿ ಎರಡುನೂರು ಸದಸ್ಯರನ್ನೊಳಗೊಂಡ ಮಹಾಚಾತುರ್ವಿದ್ಯ ಸಮುದಾಯದ(ಇದು ಬಹುಶಃ ವೈದಿಕ ಬ್ರಾಹ್ಮಣ ಸಂಘವೆಂದು ಹೇಳಬಹುದು). ನೇರ ಆಡಳಿತಕ್ಕೆ ಒಳಗಾಗಿದ್ದು, ಚತುರ್ದಶ ವಿದ್ಯಾಸ್ಥಾನ ಎಂದು ಹೆಸರುವಾಸಿಯಾಗಿತ್ತು. ಅದರಂತೆಯೇ ಅಯ್ಯಾವೊಳೆ(ಇಂದಿನ ಐಹೊಳೆ) ಐದುನೂರು ಸದಸ್ಯರನ್ನೊಳಗೊಂಡ ಮಹಾಚಾತುರ್ವಿದ್ಯ ಸಮುದಾಯದ ಆಡಳಿತಕ್ಕೆ ಒಳಗಾಗಿತ್ತು ಎಂಬುದನ್ನು ಕ್ರಿ.ಶ.೧೨೯೭ರ ದೊಡ್ಡಬಳ್ಳಾಪುರದ ಕೋಟೆ ಶಾಸನವು 'ಆಯಾವಳೆಯ ಅಯ್ನೂರ್ಬರ್ಸ್ವಾಮಿಗಳಂ' ಎಂಬುದಾಗಿ ತಿಳಿಸುತ್ತದೆ.[೭೦] ಆದರೆ ಇವು ಅಗ್ರಹಾರಗಳೆಂದು ಶಾಸನಗಳಲ್ಲಿ ಸ್ಪಷ್ಟವಾಗಿ ಹೇಳಿಲ್ಲ. ಆದರೆ ಪ್ರಸಿದ್ಧವಾದ ಕೇಂದ್ರಗಳು ಅಗ್ರಹಾರಗಳೇ ಆಗಿರಬೇಕು ಎಂಬುದಾಗಿ ಊಹಿಸಲು ಸಾಧ್ಯ. ಪ್ರಾಚೀನವಾದ ಅಗ್ರಹಾರಗಳ ನಿಜವಾದ ಇತಿಹಾಸ ಕಳೆಗುಂದಿ ಮಧ್ಯಯುಗದ ಶಾಸನಗಳಲ್ಲಿ ಗ್ರಾಮಗಳಿಗೆ ಅಗ್ರಹಾರಗಳು ಎಂದು ಕರೆಯಲಾಗಿದೆ. ತಾಲ್ಲೂಕಿನಲ್ಲಿ ಇಂದಿಗೂ ಪುಟ್ಟಯ್ಯನ ಅಗ್ರಹಾರ, ಚನ್ನಾದೇವಿ ಅಗ್ರಹಾರ, ಜೋಯಿಸ ಅಗ್ರಹಾರ ಎಂಬ ಗ್ರಾಮಗಳು ಅಸ್ತಿತ್ವದಲ್ಲಿರುವುದನ್ನು ಕಾಣುತ್ತೇವೆ.

ಅಗ್ರಹಾರ ಎಂಬುದು ಬ್ರಾಹ್ಮಣರ ವಾಸಕ್ಕಾಗಿ ಮೀಸಲಿರಿಸಿದ ಗ್ರಾಮಗಳನ್ನು ಸೂಚಿಸುತ್ತವೆಯಾದರೆ ಬ್ರಹ್ಮಪುರಿ ಎಂಬುದು ನಗರ ಪಟ್ಟಣಗಳಲ್ಲಿ ಬ್ರಾಹ್ಮಣರ ವಾಸಕ್ಕಾಗಿ ಮೀಸಲಿರಿಸಿದ್ದ ಕೇರಿಗಳನ್ನು ಸೂಚಿಸುತ್ತವೆ. ಅಲ್ಲೆ ಶೈವಧರ್ಮಾವಲಂಬಿಗಳ ಅದರಲ್ಲೂ ಮುಖ್ಯವಾಗಿ ವೀರಶೈವರ ವಾಸಕ್ಕೆಂದು ಸೃಷ್ಟಿಸಲಾದ ಗ್ರಾಮಗಳನ್ನು ಶಿವಪುರಗಳೆಂದು ಕರೆಯಲಾಗಿದೆ. ತಾಲ್ಲೂಕಿನ ಬೈರಾಂಪುರ ಗ್ರಾಮವು ಹಿಂದೆ ಒಂದು ಪುರವಾಗಿತ್ತು ಎಂಬುದನ್ನು ಕ್ರಿ.ಶ.೧೪೯೩ರ ಶಾಸನವು "ತಿಪ್ಪೂರುಸ್ಥಳಕೆ ಸಲುವ ಹೆಜ್ಜಾಜಿ ಸೀಮೆಯ ಹಳ್ಳಿಗೆ ಮೂಡಲು ತೆಂಕಲು ಸೀಮೆಯಲ್ಲಿ ಬೈರಾಪುರವೆಂಬ ಅ ಪುರವನ್ನು ಸಿಂಗಪೈಯಿಗಳ ಮಕ್ಕಳು ತಿಪ್ಪೂರಸ್ಯೆಯನಿಗೆ ಮಕರ ಶಂಕರಾಂತಿಯಲ್ಲು ಯೇಕಬೋಗ್ಯವಾಗಿ ದಾರೆಯನೆರೆದುಕೊಟ್ಟು ಆ ಬೈರಾಪುರದ ಅಗ್ರಹಾರದ.... ಎಂದು ತಿಳಿಸುತ್ತದೆ. ಶಾಸನೋಕ್ತ ಈ ಬೈರಾಪುರ ಗ್ರಾಮ ಮತ್ತು ಇದರ ಸುತ್ತಮುತ್ತಲಿನ ತಿಪ್ಪೂರು, ಹೆಜ್ಜಾಜಿಗಳು ಇದಕ್ಕೆ ಒಳಪಟ್ಟಿದ್ದವು. ಈ ಅಗ್ರಹಾರವನ್ನು ದಾನವಾಗಿ ನೀಡಿರುವುದು ಸಹ ಈ ಶಾಸನದಿಂದ ತಿಳಿದುಬರುತ್ತದೆ.[೭೧] ಈ ಶಾಸನದಿಂದ ಅಗ್ರಹಾರವನ್ನು ಪುರವೆಂದೂ ಕರೆಯುತ್ತಿದ್ದರೆಂದು ತಿಳಿದುಬರುತ್ತದೆ.

ಈ ಬೈರಾಪುರ ಗ್ರಾಮದ ಪರಿಸರದಲ್ಲಿ ಗಂಗರ ಕಾಲದ ಪ್ರಾಚೀನ ಶಿವಾಲಯವೊಂದು ದೊರೆತಿದೆ. ಶಿವಾಲಯದ ಶಿವಲಿಂಗವು ಕಪ್ಪುಕಲ್ಲಿನಿಂದ ಕೂಡಿದ್ದು ಬಹಳ ಸುಂದರವಾಗಿದೆ.

ಪ್ರಾಚೀನ ಶೈಲಿಯ ಬ್ರಹ್ಮಸೂತ್ರವನ್ನು ಒಳಗೊಂಡಿದೆ. ಶಿಥಿಲಗೊಂಡ ಪಾಣಿಪೀಠದ ಮೇಲಿನ ಶಿವಲಿಂಗವು ಎರಡೂವರೆ ಅಡಿ ಎತ್ತರವಿದೆ. ದೇವಾಲಯದ ಅವಶೇಷಗಳು ಭೂಮಿಯೊಳಗೆ ಹೂತು ಚೆಲ್ಲಾಪಿಲ್ಲಿಯಾಗಿ ಚದುರಿ ಹೋಗಿವೆ. ಈ ಶಿವಲಿಂಗದ ಎದುರು ಮೂವತ್ತು ಅಡಿ ದೂರದಲ್ಲಿ ಭಗ್ನಗೊಂಡ ನಂದಿ ವಿಗ್ರಹವೂ ಸಹ ಇದೆ. ಇದು ಗ್ರಾನೈಟ್ ಕಣಶಿಲೆಯಿಂದ ಕೂಡಿದೆ. ಪ್ರಾಚೀನ ಕಾಲದ ಎರಡು ಅಥವಾ ಮೂರು ಸಾವಿರ ದೊಡ್ಡ ದೊಡ್ಡ ಇಟ್ಟಿಗೆಗಳು ಈ ಶಿವಾಲಯದ ಪರಿಸರದಲ್ಲಿ ನಮಗೆ ದೊರೆತಿವೆ. ವಿಗ್ರಹ ಲಕ್ಷಣಗಳ ಆಧಾರದಿಂದ ಈ ಶಿವಾಲಯವನ್ನು ಗಂಗರ ಕಾಲಕ್ಕೆ ಸೇರಿದ್ದೆಂದು ಹೇಳಬಹುದು. ಇಲ್ಲಿ ದೊರೆತಿರುವ ಇಟ್ಟಿಗೆಗಳು ಗಂಗರ ಕಾಲಕ್ಕೆ ಸೇರಿದವುಗಳಾದರೂ, ಮೇಲ್ನೋಟಕ್ಕೆ ಆದಿ ಚರಿತ್ರೆ ಕಾಲದ ಇಟ್ಟಿಗೆಗಳಂತೆ ಗೋಚರಿಸುತ್ತವೆ. ಬಹುತೇಕವಾಗಿ ಮಣ್ಣೆಯ ಕಪಿಲೇಶ್ವರ ದೇವಾಲಯದ ಅಧಿಷ್ಠಾನದ ಇಟ್ಟಿಗೆ ಹಾಗೂ ತಲಕಾಡಿನ ಗಂಗರ ದೇವಾಲಯಗಳ ಇಟ್ಟಿಗೆಗಳನ್ನೇ ಹೋಲುತ್ತವೆ. ಇಲ್ಲಿನ ಇಟ್ಟಿಗೆಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಪ್ರಾಚೀನ ಇಟ್ಟಿಗೆ ಗೋಪುರವು ಈ ಶಿವಾಲಯದ್ದೇ ಇರಬೇಕು. ಇದನ್ನು ನಿಖರವಾಗಿ ಹೀಗೆ ಎಂದು ಹೇಳಲು ಅವಶೇಷಗಳ ಆಧಾರ ಸಾಲದು. ಈ ದೇವಾಲಯದ ಕಾಲವನ್ನು ಕ್ರಿ.ಶ.೫–೬ನೇ ಶತಮಾನದೆಂದು ಊಹಿಸಿ ತಾಲ್ಲೂಕಿನಲ್ಲೇ ಗಂಗರ ಅತಿ ಪ್ರಾಚೀನ ಶಿವಾಲಯವೆಂದು ಹೇಳಬಹುದು. ಬೈರಾಪುರ ಗ್ರಾಮದ ಶಿವದೇವಾಲಯ ಶೈವಪಂಥಕ್ಕೆ ಸೇರಿದ್ದಾಗಿದ್ದು, ಈ ಒಂದು ಪ್ರದೇಶದಲ್ಲಿ ಬ್ರಾಹ್ಮಣರು ವೀರಶೈವರು ಅಧಿಕವಾಗಿದ್ದರೆಂದು ಹೇಳಬಹುದು. ಅಗ್ರಹಾರಗಳಲ್ಲಿ ಪ್ರಾಚೀನ ವಿದ್ಯಾಕೇಂದ್ರ ಗಳೆಂಬುದಕ್ಕೆ ತಾಲ್ಲೂಕಿನಲ್ಲಿ ಯಾವುದೇ ಆಧಾರಗಳು ದೊರೆತಿಲ್ಲ. ಆದರೆ ಮಹಾಜನರು ಒಂದು ದೇವಸ್ಥಾನದಲ್ಲೋ, ಮಂಟಪದಲ್ಲೋ, ಸಭೆ ಸೇರಿ ಗ್ರಾಮಾಡಳಿತಕ್ಕೆ ಸಂಬಂಧಿಸಿದ ವಿಷಯಗಳನ್ನು ಚರ್ಚಿಸುತ್ತಿದ್ದರು. ಸಾಮಾನ್ಯವಾಗಿ ಎಲ್ಲ ಮುಖ್ಯ ಗ್ರಾಮ ಕಾರ್ಯಗಳು ನಡೆಯುತ್ತಿದ್ದುದು ಬ್ರಾಹ್ಮಣರ ಸನ್ನಿಧಿಯಲ್ಲೇ. ಕೆರೆ–ಕಾಲುವೆಗಳನ್ನು ನಿರ್ಮಾಣ ಮಾಡುವುದರ ಮೂಲಕ ವ್ಯವಸಾಯವನ್ನು ಅಭಿವೃದ್ಧಿಗೊಳಿಸುವುದು ಮಠ ದೇವಸ್ಥಾನಗಳ ಆಡಳಿತವನ್ನು ನಿರ್ವಹಿಸುವುದು, ದಾನಿಗಳು ಭೂಮಿಯನ್ನೋ, ಹಣವನ್ನೋ ದಾನ ಮಾಡಿದರೆ ಅದನ್ನು ರಕ್ಷಿಸಿ ಧರ್ಮಕಾರ್ಯಗಳಿಗಾಗಿ ವಿನಿಯೋಗಿಸುವುದು ಅಗ್ರಹಾರದ ಜನಗಳ ಕರ್ತವ್ಯವಾಗಿರುತ್ತಿತ್ತು ಎಂಬುದು ಶಾಸನಗಳಿಂದ ತಿಳಿದುಬರುತ್ತದೆ. ಬ್ರಾಹ್ಮಣರಿಗೆ ದಾನ ನೀಡಿದ ಅನೇಕ ಮಂಗಲಗಳೂ ನಮ್ಮ ವ್ಯಾಪ್ತಿಯಲ್ಲಿವೆ. ಚಿಕ್ಕಬೆಳವಂಗಲ, ದೊಡ್ಡಬೆಳವಂಗಲ, ಕನ್ನಮಂಗಲ ಹೆಸರಿನ ಗ್ರಾಮಗಳು ಕ್ರಿ.ಶ. ೫ನೇ ಶತಮಾನದಿಂದ ಇದ್ದ ಗ್ರಾಮಗಳಾಗಿವೆ.

**ಪುರ**

ನಮ್ಮ ತಾಲ್ಲೂಕಿನಲ್ಲಿ ವೀರಶೈವರಿಗೆ ದಾನ ನೀಡಿದ ಅನೇಕ ಪುರಗಳು ಇವೆ. ಗಂಡರಾಜಪುರ, ಕಾರೇಪುರ, ಶಿವಪುರ, ಲಿಣಗನಹಳ್ಳಿ, ಗಂಡ್ರಗೊಳಿಪುರ, ಶಾಕಲದೇವನಪುರ, ರಾಮಪುರ,

ಲಿಂಗಾಪುರ, ಮೊದಲಾದ ಗ್ರಾಮಗಳಿವೆ. ಆದರೆ ಈ ಗ್ರಾಮಗಳು ಯಾವಾಗ ಪುರಗಳಾದವು ಎಂಬುದಕ್ಕೆ ಶಾಸನಾಧಾರಗಳಿಲ್ಲ. ಚಿಕ್ಕಹೆಜ್ಜಾಜಿಯ ಒಂದು ಶಾಸನ[೨೨] ಶರಣರ ಹೆಸರನ್ನು ಉಲ್ಲೇಖಿಸುವುದರಿಂದ ಪ್ರಸಿದ್ಧವಾಗಿದೆ. ಅದರ ಪಾಠ ಹೀಗಿದೆ.

ವೀರ ಶರಣರು ಆರು ಸಹ
ಜಂಗಮರ ವಿನಯನುಡಿ
ಬಿಕ್ಷನಹಶ್ಚಚಣಜಯ
ನೆಯಲಂಕಾಹಾರ
ಯಲಕಣ ಅ
ಯ..ಬಸವಣ
ವಾಕ್ಯ ಸರಣವಾಕ್ಯ
......................
ಪ್ರಭುವಿನ ವಾಕ್ಯ
ಪರಮೇಶ್ವರ
ಗಂಗಾಧರ ವಾಕ್ಯಗಳು
ವೀರ ಸಿಂಗೇಶ್ವರ

ಎಂದು ಹೇಳಿದೆ. ಈ ಶಾಸನದಲ್ಲಿ ಉಲ್ಲೇಖವಾಗಿರುವ ಬಸವಣ ಪ್ರಭುಗಳ ಹೆಸರು ೧೨ನೆಯ ಶತಮಾನದ ಬಸವಣ್ಣ ಮತ್ತು ಅಲ್ಲಮ ಪ್ರಭುವಿನ ಹೆಸರಾಗಿವೆಯೆಂದೂ ಇದು ದಾಸೋಹದ ಪರಂಪರೆಯನ್ನು ತಿಳಿಸುತ್ತದೆಯೆಂದು ಖ್ಯಾತ ಸಂಶೋಧಕರಾದ ಡಾ.ಎಂ.ಎಂ.ಕಲಬುರ್ಗಿ ಅವರು ಹೇಳಿದ್ದಾರೆ.[೨೩] ಕ್ರಿ.ಶ.೧೬೪೬ರ ಹಂಚರಹಳ್ಳಿ ಶಾಸನವು ಪುರಗಳನ್ನು ಬ್ರಾಹ್ಮಣರಿಗೆ ದಾನವಾಗಿ ನೀಡಿರುವುದನ್ನು ಉಲ್ಲೇಖಿಸುತ್ತದೆ. ಈ ಶಾಸನದಲ್ಲಿ ಸಂಬಾಜಿರಾಯನು ಚನ್ನಬಸವ ಒಡೆಯರಿಗೆ ಹಂಚಿಪುರವನ್ನು ಮಠಕ್ಕಾಗಿ ದಾನ ನೀಡಿರುವುದು ತಿಳಿಯುತ್ತದೆ. ಶಾಸನೋಕ್ತ ಚನ್ನಬಸವಡೆಯರು ವೀರಶೈವರು ಎಂಬುದು ೧೨ನೇ ಶತಮಾನದ ವಚನಕಾರರಾದ ಚನ್ನಬಸವಣ್ಣನ ಹೆಸರಿಗೆ ಸರಿ ಹೊಂದುವುದರಿಂದ ಈತನು ಸಹ ಶಿವಶರಣನಾಗಿರಬಹುದು ಎಂದು ಊಹಿಸಲು ಸಾಧ್ಯವಿದೆ. ಈ ತಾಲ್ಲೂಕಿನ ಗಂಡ್ರಗೊಳ್ಳಿಪುರದ ಒಂದು ಶಾಸನ ಕ್ರಿ.ಶ.೧೫೪೧ರ ಕಾಲಕ್ಕೆ ಸೇರಿದ್ದು.[೨೪] ವಿಜಯನಗರ ಅರಸ ವೀರನರಸಿಂಹದೇವರ ಆಳ್ವಿಕೆಯ ಅಧೀನದಲ್ಲಿದ್ದ ಗಂಡ್ರಗೂಳ್ಳಿ ದಳವಾಯಿ ಸೊಣ್ಣಪ್ಪನಾಯಕರ ಮಕ್ಕಳು ಬೈರಪ್ಪನಾಯಕರು ಗಂಡ್ರಗೊಳ್ಳಿಪುರವನ್ನು ಶಿವಗಂಗೆಯ ಮೇಲಣ ಗವಿಸಿಂಹಾಸನದ ಮಲೆಯಕಾಂತದೇವರಿಗೆ ಶಿಷ್ಯ ಪಾರಂಪರೆಯಾಗಿ ಸೂರ್ಯಚಂದ್ರರು ಇರುವ ತನಕ ಪೂಜತೆ ಮಾಡಿಕೊಂಡು ಸುಖದಿಂದ ಅನುಭವಿಸುವುದಕ್ಕಾಗಿ ಈ ಪುರವನ್ನು ದಾನವಾಗಿ ದೇವಾಲಯಕ್ಕೆ

ನೀಡುತ್ತಾರೆ. ಕ್ರಿ.ಶ.೧೫೬೨ರ ಇದೇ ಗ್ರಾಮದ ಮತ್ತೊಂದು ಶಾಸನ[೭೫] ಮೇಲಿನ ಸಂಗತಿಗಳನ್ನೇ ಹೇಳುತ್ತದೆ. ಈ ಶಾಸನದಲ್ಲಿ ವಿಜಯನಗರ ಅರಸ ವೀರನರಸಿಂಹದೇವರಿಗೆ ಗಂಡ್ರಗೊಳ್ಳಿಪುರವನ್ನು ದಾನವಾಗಿ ನೀಡುವುದನ್ನು ಉಲ್ಲೇಖಿಸುತ್ತದೆ. ಕ್ರಿ.ಶ.೧೫೩೧ರ ಶಾಸನವು[೭೬] ಅಚ್ಯುತರಾಯನ ಕಾಲಕ್ಕೆ ಸೇರಿದೆ. ಈ ಶಾಸನದಲ್ಲಿ ಕಾಡನೂರು ಪುರವನ್ನು ಕಾಡನೂರು ಚನ್ನಕೇಶ್ವ ದೇವರಿಗೆ ಗಂಡರಗೊಳ್ಳಿ ದಳವಾಯಿ ಸೊಣ್ಣಪ್ಪನಾಯಕರ ಮಕ್ಕಳಾದ ನಾಗಪ್ಪನಾಯಕರು ದಾನವಾಗಿ ನೀಡಿರುವುದು ಈ ಶಾಸನದಿಂದ ತಿಳಿದುಬರುತ್ತದೆ. ವೈಷ್ಣವ ದೇವರಿಗೆ ದಾನವನ್ನು ನೀಡಿರುವುದು ಇಲ್ಲಿನ ಒಂದು ವಿಶೇಷತೆ ಎಂದು ಹೇಳಬಹುದು. ಕ್ರಿ.ಶ.೧೪೬೪ರ[೭೭] ಕನಸವಾಡಿ ಶಾಸನವು ಸಹ ನೆಲಮಂಗಲದ ಸೀಮೆಗೆ ಸೇರಿದ್ದ ಈ ಪುರವನ್ನು ಗಂಗಾಧರ ದೇವರಿಗೆ ದಾನ ನೀಡಿರುವುದು ವಿಶೇಷತೆ ಎಂದು ಹೇಳಬಹುದು. ಪ್ರಾಚೀನ ಕಾಲದಲ್ಲಿ ದೇವಾಲಯಗಳಿಗೆ, ಬ್ರಾಹ್ಮಣರಿಗೆ ಪುರಗಳನ್ನು ದಾನವಾಗಿ ನೀಡುವುದು ಒಂದು ಪರಂಪರೆಯಾಗಿ ಬೆಳೆದು ಬಂದುದು ಅಂದಿನ ಸಮಾಜದ ಗೌರವಕ್ಕೆ ಅರ್ಹವಾದುದು ಮತ್ತು ಧಾರ್ಮಿಕ ನಂಬಿಕೆಯ ಮೂಲ ಪ್ರೇರಣೆ ಎನ್ನಬಹುದು.

## ೩.೭. ಶಾಸನಗಳಲ್ಲಿ ಜನಸಾಮಾನ್ಯರ ಚಿತ್ರಣ

ಶಾಸನಗಳು ಒಂದು ದೇಶದ ರಾಜಕೀಯ ಇತಿಹಾಸವನ್ನು ರೂಪಿಸುವ ಪ್ರಮುಖ ಸಾಮಗ್ರಿಗಳು. ರಾಜನವಂಶಾವಳಿಯನ್ನು ಕುರಿತ ಮಾತುಗಳು, ದಾನಕೊಟ್ಟ ವಿವರ, ದಾನ ನೀಡಿದ ಕಾಲ, ದಾನವನ್ನು ಸ್ವೀಕರಿಸಿದ ವ್ಯಕ್ತಿಗಳ ಪ್ರಸ್ತಾಪ, ದಾನವನ್ನು ಕಾಪಾಡಿದವರಿಗೆ ಶ್ರೇಯಸ್ಸು, ಹಾಳು ಮಾಡಿದರೆ ಒದಗುವ ಆಪತ್ತುಗಳು ಶಾಸನಗಳಲ್ಲಿ ಉಲ್ಲೇಖಗೊಂಡಿದ್ದರೆ ಬಹುತೇಕವಾಗಿ ರಾಜರ ವಿಚಾರಗಳೇ ಪ್ರಸ್ತಾಪವಾಗುತ್ತವೆ. ಆದರೆ ಜನಸಾಮಾನ್ಯರನ್ನು ಕುರಿತಾದ ಮಾತುಗಳು ಕಡಿಮೆಯೇ ಎಂದು ಹೇಳಬಹುದು. ತಾಲ್ಲೂಕಿನಲ್ಲಿ ದೊರೆತ ಶಾಸನಗಳಲ್ಲಿ ಗೌಡಪ್ರಭುಗಳು, ಸಾಮಂತರು, ಪ್ರಧಾನರು, ಮಹಾಪ್ರಧಾನರು, ದಂಡನಾಯಕರು ಮುಂತಾದ ವರ್ಗದವರನ್ನು ಉಲ್ಲೇಖಿಸುವ ಶಾಸನಗಳೂ ಇವೆ. ಇವುಗಳ ಜೊತೆಗೆ ಜನಸಾಮಾನ್ಯರಾದ ತಳವಾರ, ಶಾನುಭೋಗ ಮುಂತಾದವರುಗಳ ಹೆಸರುಗಳೂ ಉಲ್ಲೇಖವಾಗಿರುವುದನ್ನು ಗಮನಿಸಿದರೆ ಜನಸಾಮಾನ್ಯರಿಗೂ ಬ್ರಾಹ್ಮಣರಿಗೂ ವಿಶೇಷ ಗೌರವ ನೀಡಲಾಗಿತ್ತೆಂಬುದುನ್ನು ಊಹಿಸಬಹುದು. ಶಾಸನಶಿಲ್ಪಗಳಲ್ಲೂ ಕೂಡ ಕೆಲವು ವೀರಗಲ್ಲುಗಳಲ್ಲಿ ವೀರರನ್ನು ಸಾಮಾನ್ಯರಂತೆ ಚಿತ್ರಿಸಿರುವುದು ತಿಳಿದುಬರುತ್ತದೆ. ಕ್ರಿ.ಶ,.೧೫೮೬ರ ತಿಪ್ಪೂರ ಗ್ರಾಮದ ಶಾಸನವೊಂದರಲ್ಲಿ ಸೇನಭೋವ ಎಂದು ಉಲ್ಲೇಖಿಸಿದೆ.[೭೮] ಇದೇ ಹೆಸರನ್ನು ಹೊಂದಿರುವ ರಾಮಪುರದ ಶಾಸನವೊಂದರಲ್ಲಿದೆ.[೭೯] ಕೆಲವು ವೀರಗಲ್ಲುಗಳಲ್ಲಿ ಬಂದಿರುವ ಬಹುತೇಕ ಹೆಸರುಗಳು ಸಾಮಾನ್ಯವಾಗಿ ಕಂಡುಬಂದಿವೆ. ಬಯ್ಯಪದೇವ, ಬಸವಸೆಟ್ಟಿ, ಚಬ್ಬಿಸೆಟ್ಟಿ,[೮೦] ಸಿರಿಸೆಟ್ಟಿ,[೮೧] ಸಾಂಬಾಜಿರಾಯ, ಚನ್ನಬಸವ[೮೨] ಜಗನಾಥ,[೮೩] ಶಾಂತನಂಜದೇವ, ಕೆಂಪನಾಯಕ, ತಮ್ಮನಾಯಕ[೮೪]

ಮುಂತಾದ ಹೆಸರುಗಳು ಶಾಸನಗಳಲ್ಲಿ ಉಲ್ಲೇಖಗೊಂಡಿವೆ. ಈ ಹೆಸರುಗಳ ವ್ಯಕ್ತಿಗಳು ಇಂದಿಗೂ ಸಮಾಜದಲ್ಲಿ ಹೆಸರುಗಳನ್ನು ಹೊಂದಿರುವುದನ್ನು ಕಾಣುತ್ತೇವೆ. ಜನಸಾಮಾನ್ಯರೂ ಕೂಡ ಶತ್ರುಗಳೊಡನೆ ಹೋರಾಡಿರುವುದು ಇವರಿಂದ ತಿಳಿದು ಬರುತ್ತದೆ.

## ೩.೮. ಗ್ರಾಮನಾಮಗಳು, ವ್ಯಕ್ತಿನಾಮಗಳು, ಸ್ಥಳವಿಶೇಷತೆಗಳು

ಬೆಂಗಳೂರು ಜಿಲ್ಲೆಯ ಶಾಸನ ಸಂಪುಟವನ್ನು ಅವಲೋಕಿಸಿದಾಗ ಶಾಸನೋಕ್ತ ಹಲವಾರು ಗ್ರಾಮನಾಮಗಳು ಮತ್ತು ವ್ಯಕ್ತಿನಾಮಗಳ ಹೆಸರುಗಳು ನಮ್ಮ ಗಮನ ಸೆಳೆಯುತ್ತವೆ. ಮಧ್ಯಕಾಲೀನ ಬೆಂಗಳೂರು ಜಿಲ್ಲೆಯ ಇತಿಹಾಸದ ಪ್ರಖ್ಯಾತ ನಾಡುಗಳಲ್ಲಿ ಗ್ರಾಮಗಳು ಅಂತರ್ಗತವಾಗಿರುವುದನ್ನು ಕಾಣುತ್ತೇವೆ. ಶಾಸನಗಳಲ್ಲಿ ಉಲ್ಲೇಖಗೊಂಡಿರುವ ಗ್ರಾಮದ ಹೆಸರುಗಳು ಮಾರ್ಪಡಾಗಿರುವುದನ್ನು ಗಮನಿಸಬಹುದು. ಕ್ರಿ.ಶ.೧೨೬೭ರ ಹೊಯ್ಸಳ ದೊರೆ ಮೂರನೇ ನರಸಿಂಹನ ಕಾಲಕ್ಕೆ ಸೇರಿದ ದೊಡ್ಡಬಳ್ಳಾಪುರದ ಶಾಸನವು ರಾಜಘಟ್ಟ ಗ್ರಾಮವನ್ನು ಹೆಸರಿಸುತ್ತದೆ.[೮೫] ಶಾಸನದಲ್ಲಿ ಇದು 'ರಾಜಘಟ್ಟ' ಎಂಬುದು 'ಗ' ಅಕ್ಷರ ಅಲ್ಪಪ್ರಾಣದಿಂದ ಕೂಡಿದ್ದು, ಇಂದು ಮಹಾಪ್ರಾಣ ಅಕ್ಷರವಾಗಿ ರಾಜಘಟ್ಟ ಎಂದು ನಮೂದಿಸಲ್ಪಟ್ಟಿದೆ. ಕ್ರಿ.ಶ.೧೫೯೬ರ ಅಂತ್ರಹಳ್ಳಿ ಶಾಸನದಲ್ಲಿ ಅಂತರವಳ್ಳಿ ಎಂದು ಉಲ್ಲೇಖಿಸಲ್ಪಟ್ಟಿದು. ಇಂದು ಅದು ಅಂತ್ರಹಳ್ಳಿ ಎಂಬುದಾಗಿ ಕರೆಯಲಾಗಿದೆ. ಕ್ರಿ.ಶ.೧೩೨೮ರ ಕಾಲದ ಮತ್ತೊಂದು ಶಾಸನದಲ್ಲಿ[೮೭] ಹಾಡೋನಹಳ್ಳಿ ಗ್ರಾಮಕ್ಕೆ ಪರ್ಯಾಯವಾಗಿ 'ಹಡುವನಹಳ್ಳಿ' ಎಂದು ಉಲ್ಲೇಖವಾಗಿರುವುದನ್ನು ಗಮನಿಸಬಹುದು. ತಾಲ್ಲೂಕಿನ ಕ್ರಿ.ಶ.೧೫೧೯ರ ಕಾಲಕ್ಕೆ ಸೇರಿದ ಶಾಸನದಲ್ಲಿ[೮೮] 'ಕಂಚಿಗಣಹಾಲು' ಎಂಬುದಾಗಿ ಉಲ್ಲೇಖಿಸಲ್ಪಟ್ಟಿರುವುದು ತಿಳಿದುಬರುತ್ತದೆ. ಈ ಕಂಚಿಗನಹಾಲು ಗ್ರಾಮ ಈಗ ಕಂಚಿಗನಾಳು ಎಂದು ಅಕ್ಷರ ಸ್ಥಾನಾಂತರ ಹೊಂದಿರುವುದನ್ನು ಅರಿಯಬಹುದು. ಶಾಸನೋಕ್ತ ಗ್ರಾಮಗಳಲ್ಲಿ ಹುಲುಕಡಿನಾಡನ್ನು ಆಳುತ್ತಿದ್ದ ಗಂಡ್ರಗೊಳ್ಳಿಪುರದ ದಳವಾಯಿ ಬೈರಪ್ಪನಾಯಕನಿಂದ ಬಹು ಪ್ರಸಿದ್ಧಿ ಪಡೆದಿತ್ತೆನ್ನಲಾಗಿದೆ. ಈ ಗಂಡ್ರಗೊಳ್ಳಿಪುರವನ್ನು ಕ್ರಿ.ಶ.೧೫೪೧ರ ಇದೇ ಗ್ರಾಮದ ಒಂದು ಶಾಸನ[೮೯] ಮತ್ತೊಂದು ಕ್ರಿ.ಶ.೧೫೬೮ರ ಕಾಲದ ಶಾಸನ[೯೦] ಈ ದಳವಾಯಿಗಳ ಹೆಸರಿನ ಮುಂದಿರುವ ಗಂಡರಗೂಳಿ ಎಂಬುದು ಅದರ ಶೌರ್ಯತನಕ್ಕೆ ಬಳುವಳಿಯಾಗಿ ಬಂದ ಬಿರುದಾಗಿರಬೇಕು ಎಂದು ಊಹಿಸಬಹುದು. ಅಲ್ಲದೆ ಗಂಡರಗೂಳಿಪುರ ಅಥವಾ ಗಂಡ್ರಗೊಳ್ಳಿಪುರ ಎಂಬ ಗ್ರಾಮಗಳು ಇಂದಿಗೂ ಅಸ್ತಿತ್ವದಲ್ಲಿವೆ. ಹುಲುಕಡಿನಾಡು ಇವರ ಆಳ್ವಿಕೆಗೆ ಒಳಪಟ್ಟಿತ್ತೆಂದು ಮೇಲಿನ ಶಾಸನಗಳು ಪುಷ್ಟಿ ಒದಗಿಸುತ್ತವೆ. ಆದರೆ ಹುಲುಕಡಿ ಎಂಬ ಹೆಸರಿನ ಯಾವ ಗ್ರಾಮವೂ ಕಂಡುಬರುವುದಿಲ್ಲ. ದೊಡ್ಡಬೆಳವಂಗಲದ ಉತ್ತರಕ್ಕೆ ನಾಲ್ಕು ಮೈಲಿ ದೂರದಲ್ಲಿರುವ ಬೆಟ್ಟವನ್ನು ಮಾತ್ರ ಹುಲುಕಡಿಬೆಟ್ಟ ಎಂಬ ಹೆಸರಿನಿಂದ ಇಂದಿಗೂ ಕರೆಯುತ್ತಾರೆ. ಶಾಸನೋಕ್ತ ಹುಲುಕಡಿನಾಡು ಮಣ್ಣೆನಾಡಿನ ಒಂದು ಭಾಗವಾಗಿದ್ದರೂ ಕಾಲಕ್ರಮೇಣ ಇದೇ

ಒಂದು ನಾಡಾಗಿ ಬೆಳವಣಿಗೆ ಆಗಿದೆ ಎನ್ನಬಹುದು. ಈ ನಾಡಿನಲ್ಲಿ ಅಂತರ್ಗತವಾಗಿದ್ದ ಗ್ರಾಮಗಳೆಂದರೆ ಅಂಬಲಗೆರೆ, ಕಾಡನೂರು, ಬೈರಾಪುರ, ಅಗ್ರಹಾರ, ಇಸ್ತೂರು, ಸಿಂಪಾಡಿಪುರ, ಹೊನ್ನಾವರ, ವರದೋಹಳ್ಳಿ(ಈಗ ಅಸ್ತಿತ್ವದಲ್ಲಿಲ್ಲ) ಶಾಕಲದೇವನಪುರ, ತಿಪ್ಪೂರು, ಹೆಜ್ಜಾಜಿ, ಹಣಬೆ, ಗ್ರಾಮಗಳು ಶಾಸನಗಳಲ್ಲಿ ಉಲ್ಲೇಖಗೊಂಡಿವೆ. ಇವುಗಳಷ್ಟೇ ಅಲ್ಲ. ಶಿವಪುರ, ಕಸಾಗಟ್ಟ(ಶಾಸನದಲ್ಲಿ ಕಸವಗಟ ಆಗಿದೆ) ಮಾವಳೀಪುರ ಪ್ರತಿನಾಮ ದೊಡ್ಡಬೈರಸಾಗರ ಎಂಬ ಗ್ರಾಮಗಳು ಇಂದಿಗೂ ಅಸ್ತಿತ್ವದಲ್ಲಿರು ವುದನ್ನು ಕಾಣಬಹುದು. ವಿಜಯನಗರ ಅರಸರ ಆಳ್ವಿಕೆಗೆ ಒಳಪಟ್ಟಿದ್ದ ಎಲಹಂಕನಾಡಿನಲ್ಲೂ ತಾಲ್ಲೂಕಿನ ಕೆಲವು ಗ್ರಾಮಗಳು ಉಲ್ಲೇಖಗೊಂಡಿವೆ. ಆದ್ದರಿಂದ ಹುಲುಕಡಿನಾಡು, ಎಲಹಂಕನಾಡು ಗಳು ಕೆಲವು ಸಾಮ್ಯತೆಗಳನ್ನು ಹೊಂದಿದಂತೆ ಕಾಣುತ್ತವೆ. ಮಲದಿವನಪುರ ಗ್ರಾಮ ಈಗ ಅಸ್ತಿತ್ವದಲ್ಲಿಲ್ಲ. ಕುರುವಿಗೆರೆ, ನಂದಿಗುಂದ ಗ್ರಾಮಗಳು ಎಲಹಂಕನಾಡಿಗೂ ದಾಸಗೊಂಡನಹಳ್ಳಿ ಮತ್ತು ಸುತ್ತಮುತ್ತಲಿನ ಗ್ರಾಮಗಳು ಬೇಡನಾಡ ಸ್ಥಳದಲ್ಲಿ ಸೇರಿದ್ದವು ಎಂಬುದು ಶಾಸನಗಳಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ.

ತಾಲ್ಲೂಕಿನಲ್ಲಿ ಹುಲುಕಡಿನಾಡು, ಎಲಹಂಕನಾಡು, ಮೊರಸುನಾಡು, ಆವತಿನಾಡುಗಳ ಪ್ರಸ್ತಾಪ ಹಲವು ಶಾಸನಗಳಿಂದ ನಮಗೆ ತಿಳಿದುಬರುವುದಾದರೂ ಆ ನಾಡುಗಳಲ್ಲಿ ಉಲ್ಲೇಖಿಸಲ್ಪಟ್ಟ ಗ್ರಾಮಗಳು ಇಂದಿಗೂ ಅಸ್ತಿತ್ವದಲ್ಲಿದ್ದು ಅವುಗಳನ್ನು ಗುರುತಿಸಬಹುದಾಗಿದೆ. ಇಲ್ಲಿ ಮನಗೆ ನಾಡುಗಳನ್ನಾಳಿದ ವ್ಯಕ್ತಿನಾಮಗಳು ಪ್ರಸ್ತುತವೆನಿಸುತ್ತವೆ. ರಾಜಮಹಾರಾಜರುಗಳಿಂದ ಹಿಡಿದು ಗ್ರಾಮಗಳನ್ನು ನೋಡಿಕೊಳ್ಳುತ್ತಿದ್ದ ವ್ಯಕ್ತಿಗಳ ಹೆಸರುಗಳನ್ನು ಶಾಸನಗಳು ಹೆಸರಿಸುತ್ತವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಉದಾಹರಿಸಬಹುದಾಗಿದೆ. ಹುಲುಕಡಿನಾಡನ್ನು ಆಳಿದ ಬುಮ್ಮರಳ ಎಂಬ ಅರಸನನ್ನು ಕ್ರಿ.ಶ.೧೩೬೭ರ ಶಾಸನ ಉಲ್ಲೇಖಿಸುತ್ತದೆ.[೧] ಈತನ ಬಗೆಗೆ ಹೆಚ್ಚಿನ ಮಾಹಿತಿಗಳು ಲಭ್ಯವಾಗಿಲ್ಲವೆಂದೇ ಹೇಳಬೇಕು. ಈ ನಾಡನ್ನು ಆಳಿದ ಬೈಯಂಣಗಾವುಡ, ಬೈಪಗವುಡ ಇವರು ಪ್ರಭುಗಳಾಗಿದ್ದರು. ಹುಲುಕಡಿನಾಡಿನಲ್ಲಿ ದೊರೆಯುವ ಶಾಸನಗಳಲ್ಲಿ ಹಲವಾರು ಹೆಸರುಗಳು ನಮಗೆ ಕಂಡುಬರು ವುದುಂಟು. ಸೊಣ್ಣಪ್ಪನಾಯಕ ಈತನ ಮಗ ನಾಗಪ್ಪನಾಯಕರು, ಬೈರಪ್ಪ ನಾಯಕರು ಸಹ ಹೆಸರುಗಳು ಗೋಚರಿಸುತ್ತವೆ. ಆವತಿನಾಡ ಪ್ರಭುಗಳ ಹೆಸರುಗಳನ್ನು ಉಲ್ಲೇಖಿಸುವ ಶಾಸನಗಳು ಇಲ್ಲಿ ದೊರೆತಿರುವುದರಿಂದ ಇವರು ಸಮಕಾಲೀನ ಪ್ರಭುಗಳು ಎಂಬುದು ಇಲ್ಲಿ ಮನದಟ್ಟಾಗುವುದು. ಕ್ರಿ.ಶ.೧೬೧೦ರ ನಾಗೇನಹಳ್ಳಿ ಶಾಸನದಲ್ಲಿ[೨] ಆವತಿನಾಡಿನ ಪ್ರಭುಗಳ ಹೆಸರುಗಳು. ಇವರು ಆ ವಂಶಸ್ಥರು ಎಂದು ಊಹಿಸಬಹುದು. ಶಾಸನೋಕ್ತ ಬೈರೇಗೌಡ ಈತನ ಮಗ ಹಾವಳಿಬೈರಪ್ಪಗೌಡ, ಈತನ ಮಗ ಇಮ್ಮಡಿಹಾವಳಿ ಬೈರಪ್ಪಗೌಡರು ಕ್ರಮವಾಗಿ ಆಡಳಿತ ನಡೆಸಿರಬಹುದು. ಕ್ರಿ.ಶ.೧೭೧೫ರ[೩] ಮಾವಳೀಪುರದ ಶಾಸನದಲ್ಲಿ ಆವತಿನಾಡಪ್ರಭುಗಳ ಹೆಸರುಗಳನ್ನು ಉಲ್ಲೇಖಿಸುತ್ತದೆ. ಇದರಲ್ಲಿ ಇಮ್ಮಡಿ ಸೊಣ್ಣಬೈರೇಗೌಡ, ಗೋಪಾಲಗೌಡಯ್ಯ ಮತ್ತು ದೊಡ್ಡಬೈರೇಗೌಡರುಗಳ ಹೆಸರು ಕಂಡುಬರುತ್ತದೆ. ಎಲಹಂಕನಾಡನ್ನು ಉಲ್ಲೇಖಿಸುವ ಶಾಸನಗಳಲ್ಲಿ ಎಲಹಂಕನಾಡ ಹಿರಿಯ

ಬಯಿರೇಗೌಡನ ಮಗ ಮಂಚೇಗೌಡ ಎಂಬ ಹೆಸರುಗಳು ಸಹ ಇಲ್ಲಿ ಕಂಡುಬರುವುದನ್ನು ಗಮನಿಸಿದರೆ ಇವರೆಲ್ಲ ಕನ್ನಡ ನಾಮದೇಯಗಳನ್ನು ಹೊಂದಿರುವವರು ಎಂಬುದಾಗಿ ಹೇಳಬಹುದು. ಅಲ್ಲದೆ ಶಾಸನಗಳಲ್ಲಿ ದಾನವನ್ನು ತೆಗೆದುಕೊಂಡವರು, ಕೊಟ್ಟವರ ಹೆಸರುಗಳು, ಅಗ್ರಹಾರಗಳನ್ನು ಪಡೆದವರ ಹೆಸರುಗಳು, ಜನಸಾಮಾನ್ಯರ ಹೆಸರುಗಳು ಇಲ್ಲಿ ಉಕ್ತವಾಗಿವೆ. ಉದಾ. ತಿರುಪತಿಭಟ್ಟ, ಯಲ್ಲಂಭಟ್ಟ, ಸುಬ್ಬಾಭಟ್ಟ ಎಂಬ ಬ್ರಾಹ್ಮಣರ ಹೆಸರುಗಳನ್ನು ಕ್ರಿ.ಶ.೧೭೧೫ರ ಶಾಸನದಲ್ಲಿ ಕಾಣಬಹುದು. ಕ್ರಿ.ಶ.೧೪೦೬ರ ಶಾಸನದಲ್ಲಿ[೧೦] 'ವೆಂಕಟ' ಎಂಬ ಸಾಮಾನ್ಯರ ಹೆಸರುಗಳನ್ನು ತಾಲ್ಲೂಕಿನ ಶಾಸನಗಳಲ್ಲಿ ದೊರೆಯುತ್ತವೆ.

## ಸ್ಥಳ ವಿಶೇಷತೆಗಳು

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರ ತಾಲ್ಲೂಕಿನ ದೊಡ್ಡ ಬೆಳವಂಗಲ ಹೋಬಳಿಗೆ ಸೇರಿರುವ ಗ್ರಾಮವೇ ಚಿಕ್ಕಹೆಜ್ಜಾಜಿ ಇದರ ಸಮೀಪದಲ್ಲೇ ದೊಡ್ಡಹೆಜ್ಜಾಜಿ ಗ್ರಾಮವಿದೆ. ಈ ಚಿಕ್ಕಹೆಜ್ಜಾಜಿ ಗ್ರಾಮವು ಅಡಿಕೆಯ ಕಣಜ, ತೋಟಗಳ ಗ್ರಾಮ, ವಿಜಯ ವೆಂಕಟರಮಣ ಕವಿಯು ಜನಿಸಿದ ಊರು, ಗುಡಾಣಗಂಗೇ ಗೌಡನ ದೊಡ್ಡ ಕೆರೆಯ ಊರು ಎಂಬ ಹೆಸರುಗಳಿಂದ ಪ್ರಸಿದ್ಧಿಯಾಗಿದೆ. ರಾಜಧಾನಿ ಬೆಂಗಳೂರಿಗೆ ಐವತ್ತು ಕಿ.ಮೀ. ಅಂತರದಲ್ಲಿ ತಾಲ್ಲೂಕು ಕೇಂದ್ರಕ್ಕೆ ಹತ್ತು ಕಿ.ಮೀ ಅಂತರದಲ್ಲಿದೆ. ನೆಲಮಂಗಲ ಮತ್ತು ದೊಡ್ಡಬೆಳವಂಗಲ ರಸ್ತೆಯ ಮಧ್ಯ ಇರುವ ಧಾರ್ಮಿಕ ಪುಣ್ಯಸ್ಥಳ ಕನಸವಾಡಿ(ಮಧುರೆ)ಯ ಶನಿದೇವರ ದೇವಾಲಯಕ್ಕೆ ಸುಮಾರು ಐದು ಕಿ.ಮೀ.ಗಳ ಚಿಕ್ಕಹೆಜ್ಜಾಜಿ ಗ್ರಾಮವಿದೆ. ಇದರಿಂದ ಪ್ರತ್ಯೇಕಿಸುವ ಗ್ರಾಮವೇ ಜಾಜಿ ಹೂವಿಗೆ ಹೆಸರಾದ ದೊಡ್ಡಹೆಜ್ಜಾಜಿ. (ಇದನ್ನು ಮತ್ತೆ ಈ ರೀತಿಯಾಗಿ ವಿಶ್ಲೇಷಣೆ ಮಾಡಬಹುದು) ಈ ಗ್ರಾಮ ಹಿಂದೆ ಜಾಜಿ ಹೂಗಳಿಗೆ ಪ್ರಸಿದ್ಧಿಯಾಗಿತ್ತು. ಬಹುಶಃ ಇಂದು ಹಿರಿದು +ಜಾಜಿ =ಹೆಜ್ಜಾಜಿ ಆಗಿರಬಹುದು. ಕೆರೆಯ ದಂಡೆಗಳ ಎರಡೂ ಕಡೆ ಇರುವುದರಿಂದ ಒಂದನ್ನು ಚಿಕ್ಕಹೆಜ್ಜಾಜಿ ಎಂದೂ, ಮತ್ತೊಂದನ್ನು ದೊಡ್ಡ ಹೆಜ್ಜಾಜಿ ಎಂಬುದಾಗಿ ಕರೆದಿರಬಹುದು. ಈ ಎರಡೂ ಗ್ರಾಮಗಳಿಗೂ ನಿಸರ್ಗದ ಸೌಂದರ್ಯ ಆವರಿಸಿದೆ. ಗ್ರಾಮದ ಅಮಾನಿಕೆರೆ ಸಂಪೂರ್ಣವಾಗಿ ತುಂಬಿದಾಗ ನೋಡಲು ಬಲು ಸೊಗಸು. ಕೆರೆಯ ದಂಡೆಯ, ಎತ್ತರದ ವಿಶಾಲ ಬಯಲಿನಲ್ಲಿ ಊರನ್ನು ಕಟ್ಟಿದ್ದು, ಸಮತಟ್ಟಾದ ಭೂಮಿ ಇದ್ದು, ಹೊಲಗದ್ದೆ ಮರಗಿಡಗಳು ಮತ್ತೊಂದು ಕಡೆ ಅಡಿಕೆ ತೋಟಗಳು ಹಸಿರಿನಿಂದ ಕಂಗೊಳಿಸುತ್ತವೆ.

ಇಲ್ಲಿಯ ಕೆರೆ ಚಿಕ್ಕಹೆಜ್ಜಾಜಿ ಗ್ರಾಮಕ್ಕೆ ಜೀವವನ್ನು ತುಂಬಿದೆ. ಆಕರ್ಷಣೆಯುತವಾಗಿಯೂ, ವಿಶಾಲವಾಗಿಯೂ ಇದೆ. ಅಡಿಕೆ, ವೀಳ್ಯದೆಲೆ, ತೆಂಗು, ಬಾಳೆ, ಶುಂಠಿ ಹರಿಷಿಣ, ಮೆಣಸು, ರಾಗಿ, ಭತ್ತ, ವಿವಿಧ ಬಗೆಯ ಹಣ್ಣು ತರಕಾರಿಗಳನ್ನು ಸುಮಾರು ಒಂದು ಸಾವಿರ ಎಕರೆ ಭೂಮಿಗೆ ಚಿಕ್ಕ

ಹೆಜ್ಜಾಜಿ ಕೆರೆಯಿಂದ ನೀರನ್ನು ಒದಗಿಸುತ್ತದೆ. ಈ ಗ್ರಾಮದ ಕೆರೆಯ ಬಗ್ಗೆ ಜಾನಪದ ಕತೆಯೊಂದು ಈ ರೀತಿ ಹೇಳುತ್ತಿದೆ. "ಈ ಕೆರೆಯನ್ನು ಊರಿನ ಗವುಡನಾದ ಲಿಂಗಾಯಿತರ ಗುಡಾಣ ಗಂಗೇಗೌಡ ನಿರ್ಮಿಸಿದನೆಂದು ಈ ಕೆರೆಯನ್ನು ಸುಮಾರು ೪೦೦ ವರ್ಷಗಳ ಹಿಂದೆ ಕಟ್ಟಿರಬಹುದು. ಈತ ಬಹಳ ಶೂರ ಪರಾಕ್ರಮಿ ಹಾಗೂ ಮಹಾತ್ವಕಾಂಕ್ಷಿಯಾಗಿದ್ದನು. ಜೊತೆಗೆ ರಸಿಕನೂ ಹೌದು. ಒಮ್ಮೆ ಅವನ ಕಣ್ಣು ಮದುವೆಯಾದ ಅಪ್ರತಿಮ ಸುಂದರಿ ಮಹಿಳೆಯಾದ ಕೆಂಪಾಜಮ್ಮನ ಮೇಲೆ ಬಿದ್ದು ಪೀಡಿಸುತ್ತಿದ್ದನು. ಆದರೆ ಅವನ ಮುಂದೆ ಯಾರೂ ಮಾತನಾಡುವ ಹಾಗಿಲ್ಲ. ಒಂದು ಗಂಡು ಮಗುವಿನ ತಾಯಿಯಾಗಿದ್ದ ಈಕೆ ಗುಡಾಣ ಗಂಗೇಗೌಡನ ಕಾಟವನ್ನು ತಾಳಲಾರದೆ ಧನಕರುಗಳನ್ನು ಮೇಯಿಸಲು ಊರಿಂದ ಊರಿಗೆ ಹೋಗುತ್ತಾಳೆ. ಅಲ್ಲಿಯೂ ಗೌಡ ಆಕೆಯನ್ನು ಬಿಡದೆ ಹಿಂಬಾಲಿಸುತ್ತಾನೆ. ಬೆಳೆದುನಿಂತಿದ್ದ ಅಡಿಕೆ ತೋಟಗಳ ಮರೆಯಲ್ಲಿ, ಕೆರೆಯ ಮೂಲೆಯ ತಗ್ಗು ಪ್ರದೇಶದಲ್ಲಿ ಬೆಳೆದಿದ್ದ ತಾಳೇಗರಿಯ ಮರಗಳ ಜೋಡಿನಲ್ಲಿ ಕೆಂಪಾಜಮ್ಮ ಅವಿತುಕೊಳ್ಳುತ್ತಾಳೆ. ಅವಳನ್ನು ಪತ್ತೆ ಹಚ್ಚಿದ ಊರಿನ ಜನ ಗೌಡನಿಗೆ ತಂದು ಒಪ್ಪಿಸುತ್ತಾರೆ. ಗೌಡ ಅವಳನ್ನು ಬಲಾತ್ಕಾರಪಡಿಸಲು ಪ್ರಯತ್ನ ಮಾಡುತ್ತಾನೆ. ಪತಿವ್ರತೆಯಾದ ಕೆಂಪಾಜಮ್ಮ ವಿರೋಧಿಸುತ್ತಾಳೆ. ರಾವಣನನ್ನು ತಿರಸ್ಕರಿಸುವ ಸೀತೆಯಂತೆ ಅನ್ನ ಆಹಾರಗಳನ್ನು ಬಿಟ್ಟು ಬಿಡುತ್ತಾಳೆ. ಗೌಡನ ಕಲ್ಲು ಮನಸ್ಸು ಕರಗುವುದೇ ಇಲ್ಲ. ಕೋಣೆಯೊಂದರಲ್ಲಿ ಆಕೆಯನ್ನು ಕೂಡಿ ಹಾಕುತ್ತಾನೆ. ಕೊನೆಗೆ ಆಕೆ ಮತ್ತು ಮಗ ಉಪವಾಸ ಮಾಡಿ ಸಾವನಪ್ಪುತ್ತಾಳೆ. ಬೆಳಿಗ್ಗೆಯ ಕಾಲಕ್ಕೆ ಇಬ್ಬರೂ ಮೃತರಾಗಿರುತ್ತಾರೆ. ಇಡೀ ಊರಿಗೆ ಊರೇ ಕಣ್ಣೀರು ಸುರಿಸುತ್ತದೆ. ಆದರೆ ಗೌಡನ ಮುಂದೆ ಯಾರೂ ವಿರೋಧಿಸದ ಹಾಗೆ ಇರುತ್ತಾರೆ. ಕೆಂಪಾಜಮ್ಮ ಸಾಯುತ್ತಿದ್ದಂತೆ ಗೌಡನಿಗೆ ಮೈಯಲ್ಲಿ ಉರಿ, ಯಾತನೆ ತಾಳಲಾರದೆ ಬಾಯಿಬಡಿದುಕೊಳ್ಳುತ್ತಾನೆ. ವೈದ್ಯರು ಬಂದು ಉಪಚಾರ ಮಾಡಿದರೂ ತಗ್ಗುವುದಿಲ್ಲ. ಮಲಗಿದ್ದ ಗೌಡನಿಗೆ ಒಂದು ರಾತ್ರಿ ಕನಸಿನಲ್ಲಿ ಬಂದು ಕೆಂಪಾಜಮ್ಮ ಅವನ ಸ್ಥಿತಿಗೆ ತಾನೇ ಕಾರಣ ಎನ್ನುತ್ತಾಳೆ. ಇತ್ತ ಗೌಡನಿಗೆ ತಾನು ಮಾಡಿದ ತಪ್ಪಿನ ಅರಿವಾಗುತ್ತದೆ. ಇದಕ್ಕೆ ಪ್ರಾಯಶ್ಚಿತ್ತ ಏನು ಎಂದು ಕೇಳಲು ಅದಕ್ಕೆ ಕೆಂಪಾಜಮ್ಮ ಜನರಿಗೆ ಉಪಕಾರವಾಗುವಂತಹ ದೊಡ್ಡ ಕೆರೆ ನಿರ್ಮಿಸು ಎನ್ನುತ್ತಾಳೆ. ಗುಡಾಣ ಗಂಗೇಗೌಡನು ಚಿಕ್ಕದಾಗಿದ್ದ ಹಾಗೂ ಬಹಳಷ್ಟು ಶಿಥಿಲವಾಗಿದ್ದ ನೀರಿನ ಕಟ್ಟೆಯನ್ನು ದೊಡ್ಡ ಕೆರೆಯಾಗಿ ನಿರ್ಮಾಣ ಮಾಡಿಸುತ್ತಾನೆ. ಕೆರೆಯ ಪೂರ್ವದಿಕ್ಕಿಗೆ ಮಹಾಸತಿಯಾದ ಕೆಂಪಾಜಮ್ಮನ ಗುಡಿಯನ್ನು ಸಹ ಕಟ್ಟಿಸುತ್ತಾನೆ. ಇಂದಿಗೂ ಅದು ಮಲ್ಲವೀರಪ್ಪ ಮರಿಹೊನ್ನಮ್ಮನವರ ಮಗನಾದ ಗಂಗಪ್ಪನವರ ಹೊಲದಲ್ಲಿ ಇದೆ. ಮಾಸ್ತಿಕಲ್ಲಿಗೆ ಜನರು ಪೂಜೆ ಸಲ್ಲಿಸುತ್ತಿದ್ದಾರೆ. ಊರಿನ ಹಾಗೂ ಪಕ್ಕದ ಊರುಗಳಲ್ಲಿನ ಹೆಣ್ಣು ಮಕ್ಕಳು ಹಬ್ಬ ಹರಿದಿನಗಳಲ್ಲಿ ಹಾಗೂ ಮದುವೆ ಸಮಾರಂಭಗಳಲ್ಲಿ ತಪ್ಪದೆ ಬಂದು ಕೆಂಪಾಜಮ್ಮಗೆ ಪೂಜೆ ಸಲ್ಲಿಸುತ್ತಾರೆ.

ಕೆರೆಯ ದಕ್ಷಿಣ ದಿಕ್ಕಿಗೆ ಇರುವ ತೋಟಗಳ ಸಾಲಿನಲ್ಲಿ ಜಡೆಮುನೇಶ್ವರ ಆಲಯವಿದೆ. ಇದು ಲಿಂಗಾಯಿತರಾದ ಜಮೀನ್ದಾರ್ ಸಿದ್ದಲಿಂಗಯ್ಯನವರ ತೋಟದಲ್ಲಿದೆ. ಜಡೇ ಮುನೇಶ್ವರರು ತಪಸ್ವಿಗಳೂ, ಸಿದ್ಧರೂ, ಸಾಧಕರೂ ಆಗಿದ್ದರು. ಚಿಕ್ಕಹೆಜ್ಜಾಜಿ ಮತ್ತು ದೊಡ್ಡಹೆಜ್ಜಾಜಿ ಗ್ರಾಮಗಳಿಗೆ ಆರು ಕಿ.ಮೀ ಅಂತರದಲ್ಲಿರುವ ಹುಲುಕಡಿ ಬೆಟ್ಟದ ವೀರಭದ್ರ ದೇವಾಲಯಕ್ಕೂ ಚಿಕ್ಕ ಹೆಜ್ಜಾಜಿಯ ತೋಟದ ಆಲಯಕ್ಕೂ ರಾತ್ರಿಯ ವೇಳೆ ಆಗಾಗ ತಮ್ಮ ಗಣಗಳೊಂದಿಗೆ ಸಂಚರಿಸುತ್ತಾರೆ ಎಂಬುದು ಅಲ್ಲಿಯ ಜನರ ನಂಬಿಕೆ. ಚಿಕ್ಕ ಹೆಜ್ಜಾಜಿ ಗ್ರಾಮದ ಕೆರೆಯ ದಂಡೆಗೆ ಹತ್ತಿರದಲ್ಲಿ ಪ್ರಸಿದ್ಧವಾದ ಬಸವೇಶ್ವರ ಮಠವಿದ್ದು, ಸುಂದರವಾದ ನಂದಿಯ ವಿಗ್ರಹವಿದೆ. ಇಲ್ಲಿಯ ಜನರು ಇದಕ್ಕೆ ಪೂಜೆಯನ್ನು ಸಲ್ಲಿಸುತ್ತಾರೆ. ಇತ್ತೀಚೆಗೆ ಇದು ಜೀರ್ಣೋದ್ದಾರಗೊಂಡಿದೆ. ಈ ಸ್ಥಳದಲ್ಲಿ ಹುಟ್ಟಿದವರೇ ವಿಜಯ ವೆಂಕಟರಮಣ ಕವಿಗಳು. ಹದಿನೆಂಟನೆಯ ಶತಮಾನಕ್ಕೆ ಸೇರಿದ ಬ್ರಾಹ್ಮಣ ಕವಿಗಳಾದ ಇವರು ವಾರ್ಧಕ ಷಟ್ಪದಿಯಲ್ಲಿರುವ 'ಭಗವಚ್ಚರಿತ' ಎಂಬ ಕಾವ್ಯವನ್ನು ರಚಿಸಿದ್ದಾರೆ. ಈ ಗ್ರಂಥದಲ್ಲಿ ಕೃತಿಕಾರರು ಭಕ್ತಧೃವನ ಕತೆಯನ್ನು ಬರೆದಿದ್ದಾರೆ. ಹಂಪಿ ಕನ್ನಡ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿರುವ ಹಾಗೂ ಸಂಶೋಧಕರಾದ ಡಾ.ಡಿ.ವಿ.ಪರಮಶಿವಮೂರ್ತಿಯವರು ಇದು ಶಾಸನಗಳ ಗ್ರಂಥದಲ್ಲಿ ಉಲ್ಲೇಖವಾಗಿದ್ದು ಊರಿನ ಹಿಂದೆ ವೆಂಟಸುಬ್ಬಯ್ಯನವರ ಜಮೀನಿನಲ್ಲಿ ಅದನ್ನು ಇನ್ನೂ ಸಂಶೋಧಿಸಬೇಕಾದ ಅಗತ್ಯವಿದೆ.

ಅಡಿಕೆಯಿಂದ ಪ್ರಸಿದ್ಧಿಯಾದ ಚಿಕ್ಕಹೆಜ್ಜಾಜಿ ಗ್ರಾಮದಲ್ಲಿ ಸುಮಾರು ಐದುನೂರು ಎಕರೆ ಅಡಿಕೆ ತೋಟಗಳಿದ್ದು, ತಾಲ್ಲೂಕಿನಲ್ಲೇ ಅಡಿಕೆಗೆ ಹೆಸರುವಾಸಿಯಾಗಿದೆ. ವರ್ಷದಲ್ಲಿ ಸುಮಾರು ಐದು ತಿಂಗಳು ಇಲ್ಲಿ ಅಡಿಕೆ ಬೇಸಾಯ ಮತ್ತು ಸಂಸ್ಕರಣೆ ಮಾಡುತ್ತಾರೆ. ಜನಸಂಖ್ಯೆ ಬಹಳ ಕಡಿಮೆಯಾಗಿದ್ದು, ಆಧುನಿಕತೆ, ನಗರೀಕರಣದ ಸೋಂಕು ತಗುಲಿದೆ. ಅಡಿಕೆ ಸುಲಿಯುವ, ಚೂರು ಹಾಕುವ ಮತ್ತು ಒಣಗಿಸಿ ಸಂಸ್ಕರಿಸುವ ನುರಿತ ಕೆಲಸಗಾರರು ಇಲ್ಲಿದ್ದಾರೆ. ನೆಲಮಂಗಲ, ಮಾಗಡಿ, ದೊಡ್ಡಬಳ್ಳಾಪುರ ತುಮಕೂರುಗಳಿಗೆ ಸೇರಿದ ದೂರದ ಊರುಗಳಿಂದ ಚೇಣೀಮಾಡಿ ಅಡಿಕೆ ಕಾಯಿ ತಂದೂ ಸಹ ಅಡಿಕೆ ಮಾಡಿ ಸಂಸ್ಕರಿಸುತ್ತಾರೆ.

ಈ ಗ್ರಾಮದಲ್ಲಿ ಸುಮಾರು ೨೦೦೦ ಜನಸಂಖ್ಯೆಯನ್ನು ಹೊಂದಿದ ಐದುನೂರು ಮನೆಗಳಿವೆ. ಕೃಷಿ ಪ್ರಧಾನ ಕಸುಬು, ತೋಟಗಾರಿಕೆ ಮತ್ತು ವ್ಯಾಪರ, ಇಲ್ಲಿನ ಸುತ್ತಮುತ್ತಲ ಗ್ರಾಮಗಳಲ್ಲಿ ವಿದ್ಯಾವಂತರ ಸಂಖ್ಯೆ ಹೆಚ್ಚಿದ್ದು, ಬುದ್ಧಿಜೀವಿಗಳು, ವಿದ್ವಾಂಸರು ವೈದ್ಯರುಗಳು ದೇಶವಿದೇಶಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ವ್ಯಕ್ತಿಯ ಹಿರಿಮೆಯಿಂದ, ಹಾಗೂ ದೇವಾಲಯಗಳ ಪ್ರಭಾವದಿಂದ ತನ್ನದೇ ಆದ ಪ್ರಾಕೃತಿಕ ವೈಶಿಷ್ಯಗಳಿಂದ ಗ್ರಾಮ್ಯಭಾಷೆಯಿಂದ ರೂಪಾಂತರ ಹೊಂದಿ

ಮೂಲ ಸ್ಥಳನಾಮಗಳು ಹೊಸರೂಪವನ್ನು ತಾಳುತ್ತವೆ. ಉದಾ : ಹುಲುಕಡಿ ಎಂಬ ಶಬ್ದವು ಪೆರ್ಕಡಿ, ಪೆರ್ಕಾಡಿ, ಪೆರ್ಕೊಡಿ, ಹುಲ್ಲುಕಡಿ, ಹುಲುಕುಡಿ, ಹುಲುಕಡಿ ಎಂಬ ಗ್ರಾಂಥಿಕ ರೂಪ ಗ್ರಾಮ್ಯಭಾಷೆಯಲ್ಲಿ ಹುಲುಕಡಿ, ಹುಲ್ಲುಕುಡಿ, ಹುಲ್ಲಿನ ಕುಡಿ, ಹುಲುಕುಡಿ ಎಂಬ ರೂಪ ತಾಳುತ್ತದೆ. ಅದೇ ರೀತಿಯಲ್ಲಿ ಮಠಕುಂಠೆ, ಮಠದ ಬಳಿ ಕುಂಟೆ ಇದ್ದು, ಇದು ಮಠಕುಂಠೆಯಾಗಿ ಮಟ್ಕುಂಟೆ ರೂಪ ತಾಳಿದೆ. ಕೋಡಳ್ಳಿ ಕೆರೆಯ ನೀರು ತುಂಬಿ ಕೋಡಿ ಹರಿಯುವ ಸ್ಥಳ ಊರು ಬೆಳೆದು ಕೋಡಳ್ಳಿಯಾಗಿದೆ.

ಸಾಸಲು ಈ ಸ್ಥಳ ಒಂದು ಕಾಲದಲ್ಲಿ ಹೋರಾಟ ಮಾಡಿ ಸಾಹಸವನ್ನು ಮೆರೆದ ಊರು ಸಾಹಸ, ತೆಲುಗು ಪ್ರಭಾವದಿಂದ ಸಾಸಲು ಆಗಿರಬಹುದು. ಹುಲ್ಕುಂಟೆ - ಹುಲಿ ಬೇಟೆ ಆಡಿದ ಸ್ಥಳ ಹಾಗೂ ಅಲ್ಲಿ ಕುಂಟೆ ಇದೆ ಆದ್ದರಿಂದ ಅಲ್ಲಿಗೆ ಹುಲಿಗಳು ನೀರು ಕುಡಿಯಲು ಬರುತ್ತಿದ್ದವಂತೆ, ಹಾಗಾಗಿ ಹುಲಿಕುಂಟೆ - ಹುಲುಕುಂಟೆ-ಹುಲ್ಕುಂಟೆ ಆಗಿರಬಹುದು. ಕಾಡನೂರು - ಕಾಡು ದಟ್ಟವಾಗಿದ್ದು ಕಾಡಿನ ಮಧ್ಯೆ ಊರು ಬೆಳೆದು ಕಾಡೂರು- ಕಾಡನೂರು ಆಗಿರಬಹುದು. ಕೊನಘಟ್ಟ - ಇದು ಪ್ರದೇಶದ ಘಟ್ಟಗಳಲ್ಲಿ ಕೊನೆಯ ಗ್ರಾಮವಾಗಿದ್ದು ನಂತರ ಬೆಳೆದು ಕೊನೆಯ ಘಟ್ಟ - ಕೊನೆಘಟ್ಟ, ಕೊನಘಟ್ಟ, ಮಂಡಿಬ್ಯಾಡರಹಳ್ಳೀ-ಬೇಡರಿದ್ದ ಊರು - ಇವರು ಮೊಂಡರಾಗಿದ್ದರು ಇದು ಮೊಡರ ಬ್ಯಾಡರಳ್ಳಿ ಮಂಡಿಬ್ಯಾಡ್ರಳ್ಳಿ ಆಗಿದೆ. ದರ್ಗಾಪುರ -ದುರ್ಗಿದೇವಾಲಯವಿದ್ದು, ಮುಸಲ್ಮಾನರ ದರ್ಗಾ ಅಭಿವೃದ್ಧಿಯಾಗಿ ದರ್ಗಾಪುರವಾಗಿ ರೂಪುಗೊಂಡಿರಬೇಕು. ಮಲ್ಲನಪಾಳ್ಯ - ವೀರಮಲ್ಲನ ಆಳ್ವಿಕೆಯಲ್ಲಿ ಮಲ್ಲ ಇದ್ದಿರಬೇಕು. ಅದು ಮುಂದೆ ಮಲ್ಲನಪಾಳ್ಯ ಆಗಿರಬೇಕು. ಶಿವಪುರ-ಶಿವನ ದೇವಾಲಯವಿದೆ - ಹಾಗಾಗಿ ಈ ಊರು ಶಿವಪುರವೆಂದಾಗಿದೆ. ಗೌಡಳ್ಳಿ ಗೌಡರ ವಾಸ - ಗೌಡಹಳ್ಳಿ - ಗೌಡಳ್ಳಿ ಆಗಿದೆ. ಜೋಗಳ್ಳಿ - ಜೋಗಿಗಳು ವಾಸವಾಗಿದ್ದ ಸ್ಥಳ - ಜೋಗಳ್ಳಿ, ಸೋಸ್ವಳ್ಳಿ - ಸೋಮಶೆಟ್ಟಿ ಎಂಬುವನಿದ್ದುದರಿಂದ - ಸೋಮಶೆಟ್ಟನಹಳ್ಳಿ ಸೋಷ್ವಹಳ್ಳಿ - ಸೋಸ್ವಲ್ಲಿ ಆಗಿದೆ. ಬೈರಾಪುರ - ಭೈರನೆಂಬುವವನ ಸ್ಥಳ ಅದು ಬೈರಾಪುರ. ಸೀಗಳ್ಳಿ - ಸೀಗೆಕಾಯಿ ಬಿಡುವ ಪೊದೆ ದಟ್ಟವಾಗಿ ಬೆಳೆದ ಜಾಗ ಸೀಗಳ್ಳಿ. ಸೂಲುಕುಂಟೆ - ಕುಂಟೆ - ಸೂಳೆಯರು ಇದ್ದು ಸೂಳಿ ಕುಂಟೆ - ಮುಂದೆ ಸೂಲುಕುಂಟೆ ಆಗಿದೆ. ವಾಣಿಗರಹಳ್ಳಿ ಗಾಣಿಗರು ಇದ್ದ ಊರು ವಾಣಿಗರಹಳ್ಳಿಯಾಗಿದೆ. ಪುಟ್ಟಯ್ಯನ ಅಗ್ರಹಾರ ಅಗ್ರಹಾರದಲ್ಲಿ ಪುಟ್ಟಯ್ಯನು ಪ್ರಖ್ಯಾತಿ ಹೊಂದಿದ್ದರಿಂದ - ಪುಟ್ಟಯ್ಯನ ಅಗ್ರಹಾರ, ನಾಗದೇನಹಳ್ಳಿ - ನಾಗದೇವರುಗಳಿದ್ದ ಜಾಗ - ಅದು ನಾಗದೇವನಹಳ್ಳಿ - ನಾಗದೇನಹಳ್ಳಿ - ನಾಗ್ದೇನಹಳ್ಳಿ, ಹಣಬೆ-ಹಣದ ಭಂಡಾರ ದೊರೆತ ಜಾಗ ಅದು ಹಣಬೆ. ಅಕ್ಕಿರಾಂಪುರ - ಹಕೀಮರು ಇದ್ದ ಸ್ಥಳ. ಹಕ್ಕಿರಾಮ್‌ಪುರ - ಅಕ್ಕಿರಾಮಪುರ - ಅಕ್ಕಿರಾಂಪುರ. ಕಸಾಘಟ್ಟ - ಕಸುವಿನಘಟ್ಟ - ಕೇಶವನ ದೇವಾಲಯವಿದ್ದುದರಿಂದ ಕೇಶವನಘಟ್ಟ, ಕಸಾಘಟ್ಟವಾಗಿದೆ. ಗಲಿಬಿಲಿಕೋಟೆ - ಕಲ್ಲಿನಕೋಟೆ ಇಲ್ಲಿದೆ. ಸದಾ ಜಗಳ ಗದ್ದಲ ಗಲಿಬಿಲಿ ಜಗಳ

-ಗಲಿಬಿಲಿ ಕೋಟೆ. ಮಾಡೇಶ್ವರ -ಮೃಡೇಶ್ವರನ ದೇವಾಲಯವಿದ್ದು ಅಭಿವೃದ್ಧಿ ಹೊಂದಿದೆ. ಅದು ಮಾಡೇಶ್ವರ -ಮಾಳೇಶ್ವರ ಆಗಿದೆ. ಜಾಲಿಗೆರೆ -ಬೆಟ್ಟ ಪ್ರದೇಶದ ತಪ್ಪಲು ಮತ್ತು ಕೆರೆ ಇದ್ದುದರಿಂದ ಜಾಲಿಗೆರೆಯಾಗಿರಬಹುದು.

ಹಳೇ ಕೋಟೆ -ಹಾಳುಬಿದ್ದ ಕೋಟೆಗಳಲ್ಲಿ ಈ ಗ್ರಾಮ ಬೆಳೆದಿದ್ದರಿಂದ ಹಳೇಕೋಟೆಯಾಗಿದೆ. ಕಲ್ದೇವನಹಳ್ಳಿ -ಇಲ್ಲಿ ದೇವಾಲಯವಿದ್ದು ಕಲ್ಲುದೇವನಹಳ್ಳಿ, ಕಲ್ದೇವನಹಳ್ಳಿ -ಕಲ್ಲೇವನಹಳ್ಳಿ ಎಂದು ಕರೆಯುತ್ತಾರೆ. ತೂಬಗೆರೆ -ಇಲ್ಲಿ ಒಂದು ವಿಶಾಲವಾದ ಕೆರೆಯಿದೆ. ಕೆರೆಯ ನೀರು ಯಾವಾಗಲು ತೂಬಿನ ಮೂಲಕ ಹೊರಬರುತ್ತಿದ್ದರಿಂದ ಅಲ್ಲಿ ಗ್ರಾಮವಾಗಿ ಬೆಳೆದಿರಬಹುದು. ಅದು ತೂಬಿನ ಕೆರೆ -ತೂಬಗೆರೆ. ನಂದಿಗುಂದ -ನಂದಿಯ ತಪ್ಪಲಿನಲ್ಲಿದೆ. ದೊಡ್ಡ ಗುಂಡುಗಳು ಇದ್ದುದರಿಂದ ಅದು ನಂದಿಗುಂಡವಾಗಿ ನಂದಿಗುಂದವಾಗಿದೆ. ಕಂಚಿಗನಾಳ -ಕಂಚುಗರು ಹಳ್ಳದಲ್ಲಿ ಕೆಲಸ ಮಾಡುತ್ತಿದ್ದರು. ಕಂಚುಗರು ಅದು ಮುಂದೆ ಕಂಚಿಗರಹಳ್ಳಿ -ಕಂಚುಗನಾಳ ಆಗಿರಬಹುದು. ಮೆಳೆಕೋಟೆ -ಕೋಟೆ ಇದ್ದುದರಿಂದ -ಮೇಳೆಯ ಕೋಟೆ -ಮೇಳೇ ಕೋಟೆ ಬಹುಶಃ ಬಿದಿರು ಮೆಳೆ ದಟ್ಟವಾಗಿ ಬೆಳೆಯುತ್ತಿದ್ದ ಸ್ಥಳವಿರಬಹುದು.

ಒಂದು ಹಳ್ಳಿಯಲ್ಲಿ ಬ್ರಾಹ್ಮಣ ಜೋಯಿಸನು, ಭತ್ತಹಾಕಲು ಒಂದು ದಿನ ರಾತ್ರಿ ಹೆಂಡತಿಯ ಬಳಿ "ಬೆಳಿಗ್ಗೆ ಒಂದು ಶುಭ ನಕ್ಷತ್ರದೊಳಗೆ ಭತ್ತ ಭಿತ್ತಿದರೆ ಹೊನ್ನಾಗಿ ಬೆಳೆಯುತ್ತದೆ" ಎಂದು ಹೇಳುತ್ತಿದ್ದನು. ಈ ಮಾತುಗಳನ್ನು ಪಕ್ಕದ ಮನೆಯಲ್ಲಿದ್ದ ರೈತನೊಬ್ಬ ಕೇಳಿಸಿಕೊಂಡನು. ಜೋಯಿಸರಿಗೆ ಉಳಲು ನೇಗಿಲು ಎತ್ತುಗಳನ್ನು ಸಿದ್ಧಪಡಿಸುವುದರೊಳಗೆ ರೈತ ಭತ್ತವನ್ನು ಹೊಲದಲ್ಲಿ ಬಿತ್ತಿ ಬಂದನು. ರೈತನಿಗೆ ಹೊನ್ನು ಹೆಚ್ಚಿತು. ಆಗ ಜೋಯಿಸ ಊರಿನಲ್ಲಿ ಪಂಚಾಯಿತಿ ಸೇರಿಸಿದನು. ನಡೆದ ಕಥೆಯನ್ನು ಸವಿವರವಾಗಿ ಅಲ್ಲಿ ಹೇಳಿ, ಆ ಹೊನ್ನು ನನಗೆ ಸೇರಬೇಕು. ನನ್ನಿಂದಲೇ ಆತ ಹೊನ್ನು ಪಡೆದನೆಂದು ವಾದಿಸಿದನು. ಆಗ ಹೊನ್ನಿನಲ್ಲಿ ಅರ್ಧಭಾಗವನ್ನು ಕೊಡಿಸಿದರು. ಹೊನ್ನು ಆತನಿಗೂ ದಕ್ಕಿತು. ಅಂದಿನಿಂದ ಆ ಊರು 'ಹೊನ್ನಾವರ' ಎಂದು ಪ್ರಸಿದ್ಧಿಯನ್ನು ಪಡೆಯಿತು. ಇಂದಿಗೂ ಅದನ್ನು 'ಹೊನ್ನಾವರ' ಎಂದು ಕರೆಯುತ್ತಾರೆ. ಅಕ್ಕ ತಮ್ಮನಹಳ್ಳಿ ಎಂಬ ಗ್ರಾಮ ಅಕ್ಕ ಮತ್ತು ತಮ್ಮ ಪ್ರಸಿದ್ಧಿ ಪಡೆದ ಸ್ಥಳ. ಇದರ ಬಗ್ಗೆ ಅಲ್ಲಿ ವೀರಗಲ್ಲುಗಳೂ ಇವೆ. ಇವರು ವಾಸವಾಗಿದ್ದ ವಾಸಸ್ಥಾನಕ್ಕೆ ಅಕ್ಕತಮ್ಮನಹಳ್ಳಿ ಎಂದು ಹೆಸರು ಬಂದಿದೆ. ಕೊಡಿಗೆಹಳ್ಳಿ -ರಾಜನ ಕಾಲದಲ್ಲಿ ಕೊಡುಗೆಯಾಗಿ ಪಡೆದ ಊರು, ಕೊಡೆಗೆಹಳ್ಳಿ -ಕೊಡಿಗಳ್ಳಿ ಆಗಿದೆ. ಕತ್ತಿಹೊಸಹಳ್ಳಿ -ಹಿಂದೆ ಕತ್ತಿಗಳನ್ನು ತಯಾರಿಸುವ ಸ್ಥಳವಾಗಿದ್ದು, ಹೊಸ ಊರು ಬೆಳೆದು ಕತ್ತಿಹೊಸಳ್ಳಿ ಅದು ಕತ್ತಿ ಹೊಸಹಳ್ಳಿ ಆಗಿದೆ. ದೇವಾಲಯಗಳ ಹಿರಿಮೆಯಿಂದ ಕೆಲವು ಗ್ರಾಮಗಳು ಹೆಸರುಗಳ ಹಾಗೆಯೇ ಉಳಿದಿವೆ. ಲಕ್ಷ್ಮೀ ದೇವಿಪುರ, ಕಲ್ದೇವನಹಳ್ಳಿ, ಶಿವಪುರ, ಹೊನ್ನಾದೇವಿಪುರ, ಹೊನ್ನಾದೇವಿ ಅಗ್ರಹಾರ,

ನಾಗದೇವನಹಳ್ಳಿ, ರಾಮೇಶ್ವರ, ಲಿಂಗನಹಳ್ಳಿ ಆಗಿವೆ. ತಿರುಮಗೊಂಡನ ಹಳ್ಳಿ, ಮಾದಗೊಂಡನಹಳ್ಳಿ, ಸಿದ್ದೇನಾಯಕನಹಳ್ಳಿ ಸುಬ್ರಮಣ್ಯಘಾಟಿ, ಭೈರಾಪುರ, ರಾಜಘಟ್ಟ, ವಡ್ಡರಹಳ್ಳಿ, ಚೋಗಂಡನಹಳ್ಳಿ, ಗಂಡ್ರೊಗಳ್ಳಿಪುರ, ಮಲ್ಲನಪಾಳ್ಯ, ವೀರಾಪುರ, ಮರಾಠರಪಾಳ್ಯ, ಪುಟ್ಟಯ್ಯನ ಅಗ್ರಹಾರ, ನಂದಿಗುಂದ, ಮಠಕುಂಟೆಗಳು ರಾಜರು ಪಾಳೇಯಗಾರರು ಇದ್ದು ಅವರ ಹೆಸರುಗಳಲ್ಲಿ ಬೆಳೆದ ಗ್ರಾಮಗಳು ಎನ್ನಬಹುದು.

ದಿನ್ನಳ್ಳಿ, ಕೋಡಿಹಳ್ಳಿ, ಸೀಗಳ್ಳಿ, ಹೊನ್ನಾಘಟ್ಟ, ಗುಡ್ಡದಹಳ್ಳಿ, ನೇರಳಘಟ್ಟ, ಮೆಣಸಿ, ತೊಗರಿಘಟ್ಟ, ಸಕ್ಕರೆಗೊಲ್ಲಹಳ್ಳಿ, ಕೊನೆಘಟ್ಟ, ಹಳೇಕೋಟೆ, ಕಾಡನೂರು, ಕಾಡಅಲಪನಹಳ್ಳಿ, ಕಂಚಿಗನಾಳ ಗುಂಡಸಂದ್ರ, ಮೆಳೇಕೋಟೆ, ಜಿಂಕೆಬಚ್ಚಹಳ್ಳಿ, ಜಾಲಿಗೆರೆ, ಅರಳುಮಲ್ಲಿಗೆ, ಹಣಬೆ, ಹೊನ್ನಾವರ, ಗ್ರಾಮಗಳು ಭೌಗೋಳಿಕವಾಗಿ ರೂಪುಗೊಂಡ ಗ್ರಾಮಗಳಾಗಿವೆ ಎನ್ನಬಹುದು. 'ಸಂದ್ರ' ಎಂಬ ಪದ 'ಸಮುದ್ರ' ಎಂಬರ್ಥದಲ್ಲಿದ್ದರೂ ಕೆರೆ ಎಂಬ ಅಥವೂ ಇದೆ. ಮುತ್ಸಂದ್ರ, ಮಲ್ಲಸಂದ್ರ, ತಿಪ್ಪಸಂದ್ರ, ಅಳ್ಳಾಳಸಂದ್ರ, ಲಕ್ಕಸಂದ್ರ, ಜಕ್ಕಸಂದ್ರ, ಗುಣಸಂದ್ರಗಳು ಇವೆ. ಕುಂಟೆಗಳು ಇದ್ದ ಸ್ಥಳದಲ್ಲಿ ಗ್ರಾಮಗಳು ಹುಟ್ಟಿ, ಆ ಗ್ರಾಮಗಳಿಗೆ ನೆಲ್ಲುಕುಂಟೆ, ಹುಲ್ಲುಕುಂಟೆ, ಕಾಡುಕುಂಟೆ ಗೌಡನಕುಂಟೆ ಎಂಬ ಹೆಸರುಗಳು ಅಭಿದಾನಗಳಾಗಿ ಹಾಗೆಯೇ ಆ ಹೆಸರುಗಳು ಉಳಿದುಕೊಂಡುಬಂದಿವೆ.

ಈ ರೀತಿಯಾಗಿ ಒಂದೊಂದು ಹಳ್ಳಿ ಅಥವಾ ಗ್ರಾಮಗಳು ತಮ್ಮದೇ ಆದ ಇತಿಹಾಸವನ್ನು ಹೊಂದಿರುತ್ತವೆ. ಐತಿಹ್ಯವಿಲ್ಲದೆ ಎಷ್ಟೋ ಊರುಗಳನ್ನು ತಾಲ್ಲೂಕಿನಲ್ಲಿ ನೋಡುತ್ತೇವೆ. ಒಂದು ವೇಳೆ ಬರಹಗಳ ಮೂಲಕ ದಾಖಲಿಸಿದ್ದರೆ, ನಾವು ಇಂದು ಊಹೆ ಮಾಡುವಂತಿರಲಿಲ್ಲ. ಕ್ಷೇತ್ರಕಾರ್ಯ ಇನ್ನೂ ಅಧಿಕಗೊಂಡರೆ ಅದೇಷ್ಟೋ ಮಾಹಿತಿಗಳು ಲಭ್ಯವಾಗಲಿವೆ ಎನ್ನಬಹುದು.

**ಬೆಸೆಂಟ್ ಪಾರ್ಕ್**

ದೊಡ್ಡಬಳ್ಳಾಪುರದಿಂದ ಎರಡು ಕಿ.ಮೀ. ದೂರದಲ್ಲಿ ರೈಲುನಿಲ್ದಾಣಕ್ಕೆ ಹತ್ತಿರವಿರುವ ಕಾಡಿನ ಮಧ್ಯೆ ಇರುವ ಸುಂದರವಾದ ಉದ್ಯಾನವನವೇ ಬೆಸೆಂಟ್ ಪಾರ್ಕ. ಅಂದಿನ ಜಿಲ್ಲಾಧಿಕಾರಿಕಯಾಗಿದ್ದ ಅನಂತರಾಮರವರ ಪೂರ್ಣ ಸಹಕಾರದೊಂದಿಗೆ ಅಸ್ತಿತ್ವಕ್ಕೆ ಬಂದ ಶಿಬಿರವೇ ಸ್ಕೌಟ್ ಮತ್ತು ಗೈಡ್‌ಗಳ ತರಬೇತಿ ಶಿಬಿರ. ಇಡೀ ಏಶಿಯಾ ಖಂಡದಲ್ಲೇ ಶಿಬಿರಾರ್ಥಿಗಳಿಗೆ ವಿಶಾಲವಾದ ಸ್ಥಳ ಇದೊಂದೇ ಎಂದು ಹೇಳುತ್ತಾರೆ. ಸಾವಿರಾರು ಶಿಬಿರಾರ್ಥಿಗಳಿಗೆ ತರಬೇತಿ ನೀಡಿದ್ದಾರೆ. ಅಲ್ಲದೆ, ಯಾವುದಾದರೂ ಅಧಿವೇಶನಗಳು, ಸಮ್ಮೇಳನಗಳು, ಚರ್ಚಾಕೂಟಗಳು, ಮಹಾಗಣೇಶ ಉತ್ಸವಗಳನ್ನು ನಡೆಸಲು ಅನುಕೂಲರವಾಗಿದೆ. ದಟ್ಟವಾದ ಗಿಡಮರಗಳು, ಹೂವಿನ ವನಗಳು, ಕಲ್ಲು ಗುಂಡುಗಳಿಂದ ಈ ಸ್ಥಳ ತುಂಬಿದೆ. ಸಿನಿಮಾದವರು ಅಲ್ಲಿ ಚಿತ್ರೀಕರಣವನ್ನು ಮಾಡಿದ್ದಾರೆ. ಬೆಸೆಂಟ್‌ಪಾರ್ಕ್ ಎಂದು ಹೆಸರು ಪಡೆದಿರುವ ಈ ಪ್ರಾಕೃತಿಕ ಸ್ಥಳಕ್ಕೆ ಕವಿಗಳು, ಪಂಡಿತರು, ಸ್ವಾಮಿಗಳು, ದೇಶ

ವಿದೇಶಿ ಸ್ಕೌಟ್ ತಜ್ಞರು ಬಂದು ಹೋಗಿದ್ದಾರೆ. ನೂರು ಎಕರೆ ಸ್ಥಳದಲ್ಲಿ, ೧೯೩೯ರಲ್ಲಿ ಪ್ರಾರಂಭಗೊಂಡಿತು. ಇಲ್ಲಿರುವ ಬಯಲು ರಂಗ ಮಂದಿರ ವೀಕ್ಷಣಾಗೋಪುರ, ಶಿಬಿರಾರ್ತಿ ವೃತ್ತ, ಮರದ ಕುಟೀರಗಳು, ಈ ವಿಶಾಲವಾದ ಆಟದ ಮೈದಾನ ಅತಿಥಿ ವಿಶ್ರಾಂತಿ ಗೃಹಗಳು, ವಾಚನಾಲಯ, ಚರ್ಚಾವೃತ್ತಗಳು ಈ ಪಾರ್ಕ್‌ನಲ್ಲಿವೆ. ಈ ಬೆಸೆಂಟ್ ಪಾರ್ಕ್ ಅಧ್ಯಯನ ಕೇಂದ್ರವಾಗಿಯೂ ಈಗ ಮಾರ್ಪಟ್ಟಿದೆ.

## ೩.೯. ನಾಡುಗಳು ಮತ್ತು ಸೀಮೆಗಳು

ಕನ್ನಡ ನಾಡು ತನ್ನದೇ ಆದ ಒಂದು ಸಂಸ್ಕೃತಿಯ ಪರಂಪರೆ ಮತ್ತು ಹಿರಿಮೆಯನ್ನು ಹೊಂದಿದೆ. ಇಂತಹ ಸಂಸ್ಕೃತಿಯು ಆಯಾ ಕಾಲ, ದೇಶ, ಭಾಷೆ, ಪ್ರದೇಶದ ಮೇಲೆ ತನ್ನ ಪ್ರಭಾವ ಬೀರಿದೆ. ಈ ಹಿನ್ನೆಲೆಯಲ್ಲಿ ವಿಭಿನ್ನ ಆಡಳಿತ ವಿಭಾಗಗಳಾಗಿದ್ದ ಕಲಿಸೆನಾಡು, ಎಡೆನಾಡು, ಕುಣಿಗಲ್‌ನಾಡು, ಕುಕ್ಕಲನಾಡು, ಕೋಳಾಲನಾಡು, ಕೈವಾರನಾಡು, ಬಲ್ಲಕುಂದೆನಾಡು, ಪುಲಿನಾಡು, ಮೊರಸುನಾಡು, ಬೆಮ್ಮತ್ತೂರು ನಾಡು, ಹುಲುಕಡಿನಾಡು, ಸಿಗಲ್ ನಾಡು, ಹೊಸಗುಂದನಾಡು, ಹೊಮ್ಮಳಿಗೆನಾಡು, ಹೊಳೆಹೊನ್ನೂರು ನಾಡುಗಳಲ್ಲಿ ಮಾಂಡಲೀಕರು, ಸಾಮಂತರುಗಳು, ಪ್ರಭು ನಾಯಕರುಗಳು, ರಾಜರುಗಳ ಅಧೀನದಲ್ಲಿ ಆಳಿ ಅಳಿದಿದ್ದಾರೆ.

### ಹುಲುಕಡಿನಾಡು

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪ್ರಾಚೀನ ಆಡಳಿತ ವಿಭಾಗಗಳಲ್ಲಿ ಒಂದಾದ ಹುಲುಕಡಿನಾಡು ಸಹ ಇವುಗಳಲ್ಲಿ ಒಂದಾಗಿದೆ. ಈ ಹಾದಿಯಲ್ಲಿಯೇ ಹುಲುಕಡಿ ಪದ ನಿಷ್ಪತ್ತಿಯ ಚರ್ಚೆಯೂ ಈ ಕೆಳಗಿನ ಆಧಾರದ ಹಿನ್ನೆಲೆಯನ್ನು ಆಧರಿಸಿ ಚರ್ಚಿಸಲಾಗಿದೆ.

### ೩.೯.೧. ಜಾನಪದ ಹಿನ್ನೆಲೆ

ಜನಪದ-ಜಾನಪದ ದೃಷ್ಟಿಯಲ್ಲಿ ಹುಲುಕಡಿನಾಡು ಮೂಲದ ನಾಡಗೌಡ ಪ್ರಭುಗಳ ಆಳ್ವಿಕೆಯ ಆವಾಸಸ್ಥಾನವಾಗಿದ್ದ ಹುಲುಕಡಿ ಬೆಟ್ಟದಲ್ಲಿ ಅಗಸ್ತ್ಯಮುನಿ ತನ್ನ ಆಹಾರ ಸೇವನೆಗಾಗಿ ಹುಲ್ಲಿನ ಕುಡಿಯನ್ನು ಆರಿಸಿ, ಅದನ್ನು ಕುಟ್ಟಿ ಅದರಿಂದ ಬರುವ ರಸವನ್ನು ಸೇವಿಸುತ್ತಿದ್ದನು. ಆದುದರಿಂದ ಹುಲ್ಲುಕುಡಿ > ಹುಲುಕುಡಿ > ಹುಲುಕಡಿ ಎಂಬ ಪದ ಜನಿಸಿರಬೇಕು ಎಂಬುದು ಸ್ಥಳೀಯ ದಂತಕತೆ. ಇದಕ್ಕೆ ಪೂರಕವಾಗಿ ಬೆಟ್ಟದಲ್ಲಿನ ಗವಿಗಳು ಸಾಕ್ಷಿಯನ್ನು ಒದಿಗಿಸುತ್ತವೆ. ಬೆಟ್ಟದ ಪೂರ್ವ ಮತ್ತು ಉತ್ತರದಿಕ್ಕಿನ ನಡುವೆ ಇರುವ ಲಕ್ಷ್ಮೀ ಚನ್ನಿಗರಾಯ ಸ್ವಾಮಿ ದೇವಾಲಯದ ಪಕ್ಕದಲ್ಲಿ ಒಂದು ದಾಸರ ಗವಿಯಿರುವುದು ಇಂದಿಗೂ ಪ್ರಚಲಿತದಲ್ಲಿದೆ.

ಅನೇಕ ಶಾಸನಗಳು 'ಹುಲುಕಡಿ' ಶಬ್ದವ್ಯುತ್ಪತ್ತಿಯು ಅಧ್ಯಯನಕ್ಕೆ ಮತ್ತೊಂದು ಆಕರವಾಗಿದೆ. ಶಾಸನಗಳು 'ಹುಲುಕಡಿನಾಡು' ಎಂಬ ಶಬ್ದವನ್ನು ಉಪಯೋಗಿಸಿವೆ. ಇದುವರೆವಿಗೂ ನಮಗೆ

ದೊರೆತಿರುವ ಶಾಸನಗಳನ್ನು ಲಕ್ಷಿಸಿದರೆ ದೊಡ್ಡಬಳ್ಳಾಪುರ ತಾಲ್ಲೂಕಿನ ಏಳು ಶಾಸನಗಳಲ್ಲಿ ಹುಲುಕಡಿ ನಾಡುವಿನ ಬಗ್ಗೆ ಸ್ಪಷ್ಟ ಉಲ್ಲೇಖ ದೊರೆಯುತ್ತದೆ.

(ಕ್ರಿ.ಶ.೯ನೇ ಶತಮಾನದಲ್ಲಿನ ದೊಡ್ಡಬಳ್ಳಾಪುರ ತಾಲೂಕಿನ ಸುತ್ತ ಆಳಿದ) ಗಂಗರ ದೊರೆಯಾದ ದುರ್ವಿನೀತನ ಕ್ರಿ.ಶ.೪೮೨[೯೫]ರ ತಾಮ್ರ ಶಾಸನ ತುಮಕೂರು ಜಿಲ್ಲೆಯಲ್ಲಿನ ವೈಷ್ಣವ ಧರ್ಮದವರಿಗೆ ದಾನವನ್ನು ನೀಡಿದ ಮೊದಲ ಉಲ್ಲೇಖಿತ ಶಾಸನವೆಂದು ತಿಳಿದುಬರುತ್ತದೆ. ಬ್ರಾಹ್ಮಣ ಸ್ಕಂದವರ್ಮನಿಗೆ ಮಣ್ಣೆ ನಾಡಿನ ಪೆರುಕದ ಬಳಿಯ ತಿಪ್ಪೆರೂರು ಗ್ರಾಮವನ್ನು ದಾನ ನೀಡಿದ ವಿಷಯವು ಈ ಶಾಸನದಿಂದ ತಿಳಿದುಬರುತ್ತದೆ. ಪೆರುಕ ಎಂಬುದು ಈಗಿನ ಹುಲ್ಲುಕಡಿಬೆಟ್ಟದ ಪ್ರದೇಶವೇ ಆಗಿರಬೇಕು. ಇದನ್ನು ೧೧ನೇ ಶತಮಾನದ ಚೋಳರ ಒಂದು ಶಾಸನದಲ್ಲಿ ಪುರ್ಕೋಡಿ ಎಂದು ಉಲ್ಲೇಖಿಸಲ್ಪಟ್ಟಿದೆ.[೯೬] ಈ ಪೆರುಕ ಸ್ಥಳ ಪೆರ್ಕ >ಪೆರ್ಕನಾಡು >ಪೆರ್ಕಡಿ >ಪೆರ್ಕಾಡಿ >ಪೆರ್ಕೊಡಿ > ಹುರ್ಕೋಡಿ >ಹುರ್ಕೋಡಿ >ಹುಲುಕಡಿ ಎಂದು ಬದಲಾಗಿರಬೇಕು (ಬಹುಶಃ ಇದು 'ಪ' ಕಾರ, 'ಹ' ಕಾರವಾಗಿ ಮಾರ್ಪಟ್ಟಿದೆ. ಹಳಗನ್ನಡ ಭಾಷೆಯ ಲಕ್ಷಣಗಳಲ್ಲಿ ಒಂದಾದ ಪ>ಹ ಕ್ರಿ.ಶ.೫ನೇ ಶತಮಾನದ ಹಲ್ಮಿಡಿ ಶಾಸನದಿಂದ ತಿಳಿದು ಬರುತ್ತದೆ. ಇದರ ಛಾಯೆಯೂ ಇಲ್ಲಿ ಆಗಿರಬೇಕು) ೫ನೇ ಶತಮಾನದಿಂದ ಪುರ್ಕೋಡಿಗೆ 'ಪೆರುಕ' ಎಂಬ ಹೆಸರಿದ್ದಿರಬೇಕು. ಈ ಹುಲುಕಡಿ ಬೆಟ್ಟದಲ್ಲಿ ಅನೇಕ ಪುರಾತನ ಕಟ್ಟಡಗಳು, ಅವಶೇಷಗಳು, ಮತ್ತು ಕೋಟೆಯ ಅವಶೇಷಗಳು ಇಂದಿಗೂ ಇವೆ.

ಕ್ರಿ.ಶ.೧೧೧೫ರ ತಮಿಳು ಶಾಸನವೊಂದನ್ನು ಹೊರತುಪಡಿಸಿದರೆ, ಉಳಿದ ಶಾಸನಗಳಲ್ಲಿ 'ಹುಲುಕಡಿನಾಡು' ಎಂದು ಪ್ರಸ್ತಾಪವಾಗಿದೆ. ದೊಡ್ಡಬಳ್ಳಾಪುರ ತಾಲ್ಲೂಕಿನ ಅರಳು ಮಲ್ಲಿಗೆ ಗ್ರಾಮದಲ್ಲಿ ದೊರೆತಿರುವ ಕ್ರಿ.ಶ.೧೩೬೭ರ ಶಾಸನದಲ್ಲಿ[೯೭] "ಬೊಮ್ಮಯ್ಯನಾಯಕರು ಅಣಪ್ಪನವರು ಶ್ರೀ ಮನ್ಮಹಾ ಹುಲುಕಡಿನಾಡ ಪ್ರಭುಬುಮ್ಮರಳ" ಕ್ರಿ.ಶ.೧೪೬೭ರ ಪುಟ್ಟಯ್ಯನಗ್ರಹಾರದ ಶಾಸನ[೯೮]ದಲ್ಲಿ ಹುಲುಕಡಿ ನಾಡ ಪ್ರಭುಬಯಣಗ ಉಡರ ಮಕ್ಕಳು ಬಯಿಪಗವುಡರು ಕೊಟ್ಟಶಿಲಾಶಾಸನ..." ಕ್ರಿ.ಶ.೧೪೯೩ರ ಪುಟ್ಟಯ್ಯನಗ್ರಹಾರದ ಶಿಲಾಶಾಸನ[೯೯]ದ ಪ್ರಕಾರ "ತಿಪ್ಪೂರು ಸೀಮೆಯ ರಾಜ್ಯಂಗೈವಲ್ಲಿ ಶ್ರೀಮನ್ನಹಾ ಕುಲುಕಡಿನಾಡ ಪ್ರಭು ಬೈಯಣಗ ಉಡರ ಮಕ್ಕಳು" ಕ್ರಿ.ಶ.೧೫೩೧ರ ಕಾಡನೂರು ಗ್ರಾಮದ ಚನ್ನಕೇಶವ ದೇವಾಲಯದ ಮುಂಭಾಗದಲ್ಲಿ ನಿಲ್ಲಿಸಿರುವ ಶಾಸನದ[೧೦೦] ಪ್ರಕಾರ "ಕಾಡನೂರು ಚನ್ನಕೇಶವದೇವರಿಗೆ ಕೊಟ್ಟ ಧರ್ಮ ಶಾಸನವೆಂತೆಂದರೆ ಸ್ವಾಮಿ ನಮಗೆ ನಾಯಕತನಕ್ಕೆ ಪಾಲಿಸಿ ಹುಲುಕಡಿ ನಾಡಿಗೆ ಸಲುವ ಹಣಬೆಯ ಸೀಮೆಯೊಳಗಣ ಎಂಬುದಾಗಿಯೂ, ಕ್ರಿ.ಶ.೧೫೪೧ರ ಗಂಡ್ರಗೊಳ್ಳೀಪುರದ ಶಾಸನ[೧೦೧] ವೀರನರೆಸಿಂಗದೇವರು' ಮಹಾರಾಯರು ನಮಗೆ ನಾಯಕತನಕ್ಕೆ ಪಾಲಿಸಿದ ಹುಲುಕಡಿ ನಾಡೊಳಗೆ ಹಣಬೆಯ ಸೀಮೆಗೆ ಸಲುವ ಸಿಂಪಾಡಿಪುರದ" -ಕ್ರಿ.ಶ.೧೫೬೨ರ

ಗಂಡ್ರಗೊಳಿಪುರದ ಬಸವನಗುಡಿಗೆ ದಕ್ಷಿಣದಲ್ಲಿ "ಶ್ರೀ ವಿರನರಸಿಂಗದೇವ ಮಹಾರಾಯರು ನಮಗೆ ನಾಯಕತನಕ್ಕೆ ಪಾಲಿಸಿದ ಹುಲುಕಡಿನಾಡೊಳಗಣ ಸೀಮೆಗೆ ಸಲುವ ಗಂಡ್ರಗೊಳ್ಳಿಪುರದ ಸೀಮೆಯೊಳಗಣ ಭೂಮಿಯೂ ಎಂಬುದಾಗಿ ಶಾಸನದಲ್ಲಿ ಉಲ್ಲೇಖವಾಗಿರುವುದು. ಹಿಂದೆ ಇದ್ದ ಪೆರು > ಪುರ್ಕೋೞಿಡಿಯಾಗಿ ನಂತರ ಹುಲುಕಡಿಯಾಗಿ ಮಾರ್ಪಾಡು ಹೊಂದಿರಬೇಕೆನಿಸುತ್ತದೆ. ಈ ಹುಲುಕಡಿ ನಾಡು ೬೫ ಗ್ರಾಮಗಳನ್ನು ಹೊಂದಿದ್ದು ಹಣಬೆ, ತಿಪ್ಪೂರೂ ಗಂಡ್ರಗೊಳ್ಳಿಪುರದ ಸೀಮೆಯೋಳಗೆ ಆವೃತವಾಗಿವೆ.

ಹುಲಕಡಿ ನಾಡಿನ ಭೌಗೋಳಿಕ ಹಿನ್ನೆಲೆಯೂ ಚಾರಿತ್ರಿಕ ಮಹತ್ವವನ್ನು ಹೊಂದಿದೆ. ಪ್ರತಿಯೊಂದು ಜನಾಂಗದ ಜೀವನವೂ ಆಯಾ ಭೌಗೋಳಿಕ ಪರಿಸರದ ಬೆಟ್ಟಗುಡ್ಡ ನದಿ, ತೊರೆ ಮೊದಲಾದ ನೈಸರ್ಗಿಕ ಸಂಪತ್ತನ್ನು ಅವಲಂಬಿಸಿದೆ. ಆಡಳಿತ ಸೌಕರ್ಯಕ್ಕಾಗಿ ವಿಭಾಗಗಳನ್ನು ಮಾಡುವಾಗ (ರಾಜ್ಯಡಳಿತ ಮತ್ತು ಊರುಗಳ ಆಡಳಿತ ಎಂಬ ಈ ಎರಡು ವಿಭಜನೆಗಳು ಒಂದನ್ನು ಬಿಟ್ಟು ಮತ್ತೊಂದು ಇಲ್ಲ. ಈ ಆಡಳಿತಗಳು ಒಂದರ ಸಹಕಾರದಿಂದ ಮತ್ತೊಂದು ನಡೆಯುತ್ತಿದ್ದಿತು ಗಮನಾರ್ಹ, ಪ್ರಾಚೀನ ಕಾಲದಿಂದಲೂ ಆಡಳಿತ ವಿಭಾಗಗಳು ನೈಸರ್ಗಿಕಸಂಪತ್ತನ್ನು ಅವಲಂಬಿಸಿದೆ.[೧೦೨] ಅಂತೆಯೇ ಭೂಗೋಳ ಮತ್ತು ಇತಿಹಾಸದಲ್ಲಿ ಪ್ರಥಮ ಪ್ರಾಶಸ್ತ್ಯ ಯಾವುದಕ್ಕೆ ಎಂಬ ಪ್ರಶ್ನೆ ಬಂದಾಗ Geography lees at the basis of history" ಎನ್ನುತ್ತಾರೆ ಕಾಂಟ್.[೧೦೩]

ಅಧ್ಯಯನಕ್ಕಾಗಿ ಆಯ್ದುಕೊಂಡ ಪ್ರದೇಶದ ಮತ್ತು ಪರಿಸರದ ಭೌಗೋಳಿಕ ಹಿನ್ನೆಲೆಯನ್ನು ಅರಿತುಕೊಳ್ಳುವುದು ಅತ್ಯಂತ ಅವಶ್ಯಕ. ಇಲ್ಲಿ ಕಂಡುಬರುವ ವಾಯುಗುಣ ಉಷ್ಣಾಂಶ, ಮಳೆ ಮತ್ತು ಭೌತಿಕ ಲಕ್ಷಣಗಳನ್ನು ಅರಿಯದಿದ್ದರೆ ಒಂದು ಪ್ರಧಾನ ನೆಲೆಯನ್ನು ಉಪೇಕ್ಷಿಸಿದಂತಾಗುತ್ತದೆ. ಐತಿಹಾಸಿಕ ಪ್ರಕ್ರಿಯೆ ಮತ್ತು ಭೌಗೋಳಿಕ ಸನ್ನಿವೇಶಗಳು ಹಾಗು ಪರಂಪರೆ ಒಂದಕ್ಕೊಂದು ಪೂರಕವಾಗಿರುವಾಗ ಇದರ ಪ್ರಭಾವವೇ ಭೌಗೋಳಿಕ ವೈಶಿಷ್ಟ್ಯತೆ ಎಂದು ಹೇಳಬಹುದು. ಹೀಗೆ ಹುಲುಕಡಿನಾಡಿನ ಬಗ್ಗೆ ಅರಿಯಲು ಇತಿಹಾಸದ ಅಧ್ಯಯನಕ್ಕೆ ಒತ್ತು ಕೊಡುವ ಮೊದಲು ಇದರ ಮೇಲ್ಮೈ ಲಕ್ಷಣವನ್ನು ಅರಿಯುವುದು ಅಷ್ಟೇ ಅವಶ್ಯಕ.

ಹುಲುಕಡಿನಾಡಿನ ಪೂರ್ವಕ್ಕೆ ಆವತಿನಾಡು, ಪಶ್ಚಿಮಕ್ಕೆ ಮಣ್ಣೆನಾಡು, ಉತ್ತರಕ್ಕೆ ಮುರಗಲ್ ನಾಡು, ದಕ್ಷಿಣಕ್ಕೆ ಎಲಹಂಕ ನಾಡುಗಳ ಮಧ್ಯೆ ಹುಲುಕಡಿನಾಡು ತನ್ನದೇ ಆದ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಇದು ಪೂರ್ವ ಪಶ್ಚಿಮವಾಗಿ ೨೫ ಕಿ.ಮೀ, ಉತ್ತರ ದಕ್ಷಿಣಾಭಿಮುಖವಾಗಿ ೩೫ ಕಿ.ಮೀಗಳಷ್ಟು ವಿಸ್ತೀರ್ಣ ಹೊಂದಿದ್ದು, ಒಟ್ಟಾರೆ ಸುತ್ತಮುತ್ತಲಿನ ಪರಿಸರ ಸುಮಾರು ೬೫ ಗ್ರಾಮಗಳನ್ನು ಒಳಗೊಂಡಿದೆ. ಇದು ಅಕ್ಷಾಂಶ ೧೩.೧೮ ಉತ್ತರ ರೇಖಾಂಶ, ೭೭.೩೭ ಪೂರ್ವ ದಲ್ಲಿದೆ.[೧೦೪]

ಹುಲುಕಡಿನಾಡಿನ ವ್ಯಾಪ್ತಿಗೆ ಮೂರು ಬೆಟ್ಟಗಳು ಪಸರಿಸಿದ್ದು, ಸುತ್ತಮುತ್ತಲಿನ ಪರಿಸರದಲ್ಲಿ ಚಿಕ್ಕ ಚಿಕ್ಕ ಬೆಟ್ಟಗಳು ಇಲ್ಲಿನ ಸೌಂದರ್ಯಕ್ಕೆ ಪ್ರತೀಕವಾಗಿದೆ. ಮುಖ್ಯವಾಗಿ ಹುಲುಕಡಿನಾಡ ಪ್ರಭುಗಳ ಆವಾಸ ಕೇಂದ್ರಸ್ಥಾನವಾಗಿದ್ದ ಹುಲುಕಡಿ ಬೆಟ್ಟ ಐತಿಹಾಸಿಕತೆಯ ದೃಷ್ಟಿಯಿಂದ ಬಹಳ ಮಹತ್ವ ಪಡೆದಿದೆ ಇದರ ಎತ್ತರ ೧೨೦೦ ಮೀ ಇದ್ದು, ಈ ದುರ್ಗದಲ್ಲಿ ೧೨ ಮತ್ತು ೧೩ನೆಯ ಶತಮಾನಕ್ಕೆ ಸೇರಿರಬಹುದಾದ ವೀರಭದ್ರದೇವಾಲಯವಿದೆ. ಈ ದೇವತಾ ಮೂರ್ತಿ ಹಲವಾರು ಜನಾಂಗಗಳ ಆರಾಧಕ ಮತ್ತು ಕುಲದೈವವೂ ಹೌದು.

ಬಹಳಷ್ಟು ಕಡಿದಾದ ಹುಲುಕಡಿನಾಡು ಬೆಟ್ಟದ ಉತ್ತರ ಮತ್ತು ಪೂರ್ವದ ಮಧ್ಯಭಾಗದಲ್ಲಿ ಮಾಕಳಿ ಮತ್ತು ಉಜ್ಜನಿ ಬೆಟ್ಟಗಳಿವೆ. ಇವುಗಳ ಜೊತೆ ಜೊತೆಗೆ ಅಲ್ಲಲ್ಲಿ ಸಣ್ಣ ಪುಟ್ಟ ಬೆಟ್ಟಗಳನ್ನು ನರಿಬೆಟ್ಟ, ಹಂದಿಬೆಟ್ಟ, ಕೆರೆ ಹಿಂದಿನ ಬೆಟ್ಟ ಎಂಬ ಹಲವು ಹೆಸರುಗಳಿಂದ ಕರೆಯುತ್ತಾರೆ. ಪ್ರಸ್ತುತ ಹುಲುಕಡಿನಾಡಿನ ಈ ಪರಿಸರ ಸಾಂಸ್ಕೃತಿಕ ಅಧ್ಯಯನಕ್ಕೆ ಸಹಕಾರಿಯಾಗಿದೆ.

ಹುಲುಕಡಿನಾಡಿನ ಪೂರ್ವಕ್ಕೆ ನಂದಿದುರ್ಗದಲ್ಲಿ ಉಗಮವಾಗುವ ಅರ್ಕಾವತಿ ನದಿ ೩೦ ಕಿ.ಮೀ. ದೂರದಲ್ಲಿದೆ. ಜೊತೆಗೆ ಕನ್ನಡ ನಾಡಿನ ಜೀವಂತ ನದಿಗಳಲ್ಲಿ ಒಂದಾದ ಕಾವೇರಿ ಕರ್ನಾಟಕದ ದಕ್ಷಿಣ ಭಾಗಕ್ಕೆ ಅತಿ ಉಪಯುಕ್ತ ನದಿಗಳಾಗಿವೆ. ಕನಸವಾಡಿ ಕೆರೆ, ದೊಡ್ಡ ಹೆಜ್ಜಾಜಿ ಕೆರೆ. ತಿಪ್ಪೂರು ಕೆರೆ, ಹಣಬೆ ಕೆರೆ ಹೀಗೆ ಹಲವಾರು ಸಣ್ಣಪುಟ್ಟ ಕೆರೆಗಳು ಇಲ್ಲಿನ ಜೀವನ ಆಧಾರಕ್ಕೆ ಮಾಧ್ಯಮವಾಗಿವೆ. ಹುಲುಕಡಿ ನಾಡಿನ ಪರಿಸರದ ಸುತ್ತ ಮುತ್ತ ಕೆಂಪು ಮಣ್ಣು, ಕಪ್ಪುಮಣ್ಣು, ಮರಳುಮಣ್ಣು ಎಂಬ ಮೂರು ವಿಧಗಳಿಂದ ಕೂಡಿದ್ದು, ತಿಪ್ಪೂರು, ಹಣಬೆ, ಕಾಡನೂರು, ಅರಳುಮಲ್ಲಿಗೆ, ನೇರಳಘಟ್ಟ, ಭೂ ಪ್ರದೇಶವು ಕಪ್ಪು ಮಣ್ಣಿನಿಂದ ಕೂಡಿವೆ. ಬೈರಾಪುರ, ಜಕ್ಕಸಂದ್ರ ಭೂ ಪ್ರದೇಶವು ಕೆಂಪು ಮಣ್ಣಿನಿಂದ ಕೂಡಿದೆ. ಸ್ವಲ್ಪ ಮಟ್ಟಿಗೆ ಈ ಭೂ ಪ್ರದೇಶವು ಏರಿಳಿತಗಳಿಂದ ಕೂಡಿದ್ದು ಹಿಂಗಾರು ಮತ್ತು ಮುಂಗಾರು ಬೆಳೆಗಳು ಇಲ್ಲಿನ ಫಲವತ್ತೆಯನ್ನು ಸೂಚಿಸುತ್ತದೆ. ಹೀಗೆ ಭೂ ಮತ್ತು ಭೌಗೋಳಿಕ ಸಂಪತ್ತು, ನದಿ, ಕೆರೆ, ಬಾವಿಗಳು, ಬೆಟ್ಟಗಳು ಇಲ್ಲಿನ ಜನಸಮುದಾಯಗಳಿಗೆ ನಿಸರ್ಗದ ವರದಾನವಾಗಿದೆ. ಇನ್ನೂ ಹೆಚ್ಚಿನ ವಿಷಯಗಳನ್ನು ಪ್ರತ್ಯೇಕವಾದ ಅಧ್ಯಾಯದಲ್ಲಿ ಚರ್ಚಿಸಲಾಗುವುದು.

### ೩.೯.೨. ಐತಿಹಾಸಿಕ ಹಿನ್ನೆಲೆಯಾಗಿ ಹುಲುಕಡಿನಾಡು

'ಹುಲುಕಡಿ' ಬಗೆಗಿನ ಮೊದಲ ಉಲ್ಲೇಖ ದೊರೆತಿರುವುದು. ಕ್ರಿ.ಶ.೧೧೧೪ರ ಶಾಸನದಲ್ಲಿ[೧೦೪] "ಸ್ವಸ್ತೀ ಶ್ರೀಮತಮಹಾಮಂಡಳೇಶ್ವರ ತ್ರಿಭುವನಮಲ್ಲ ತಳಕಾಡುಕೊಂಡ ಭುಜಬಲ ವೀರಗಂಗ ಪೊಯಿಸಳ ದೇವರ್ ರಾಜ್ಯಂ ೧೨ ಸಂವತ್ಸರತ್ತಿಲ್ ವಿಕ್ಕಿರಮಸೋಳ ಮಂಡಲತ್ತಿಲ್ ಮಣ್ಣೈನಾಟ್ಟು,

ನಾಟ್ಟುಕ್ಕಾಮುಂಡನ್ ವಿರುಂತರಾಯ ಭಯಂಕರ ಮಣ್ಣೈನಾಡ್ ಆಳ್ವನ್ ಮಗನ್ ಸತ್ಯನ್ ಆನ ವಿರುಂತರಾಯ ಭಯಂಕರ ಮಣ್ಣೈನಾಡ ಆಳ್ವನೇನ ಪುರ್ಕೋಡಿಯಲ್ ಮಲೈ ಕ್ಕುಕ್ಕಿಳಕ್ಕಿಲ್ .... ಎಂಬಲ್ಲಿ 'ಹುಲುಕಡಿ'ಗೆ ಪುರ್ಕೋಡಿ ಎಂದು ಉಲ್ಲೇಖಿಸಲ್ಪಟ್ಟಿದೆ. ವಿಜಯನಗರ ಸಾಮ್ರಾಜ್ಯದ ಅದಿಪತ್ಯ "ನಡೆಸುತ್ತಿದ್ದಾಗ ಇವರ ಅಧೀನದಲ್ಲಿ ಹುಲುಕಡಿ ನಾಡ ಪ್ರಭುಗಳು ಆಳ್ವಿಕೆ ನಡೆಸುತ್ತಿದ್ದರು. ಇದರ ವಿವರಗಳನ್ನು ಉಲ್ಲೇಖಿಸಲ್ಪಟ್ಟ ಕ್ರಿ.ಶ.೧೩೬೯ರ ಅರಳುಮಲ್ಲಿಗೆ ಶಾಸನದಲ್ಲಿ[೧೦೬] "...ಬೊಮ್ಮಯ್ಯ ನಾಯಕರು ಅಣಪ್ಪನವರು ಶ್ರೀಮನ್ಮಹಾಹುಲುಕಡಿ ನಾಡ ಪ್ರಭುಭುಮ್ಮರಳ ಕೋಟಗೌಡತನವಂ..." ಇಲ್ಲಿ ಹುಲುಕಡಿ ಎಂದು ಉಲ್ಲೇಖಿಸಲ್ಪಟ್ಟಿದೆ. ಕೇಂದ್ರ ಸ್ಥಾನವಾದ ಈ ನಾಡನ್ನು ಬುಮ್ಮರಳ ಆಳುತ್ತಿದ್ದನೆಂದು ಹೇಳಿದೆ. ಹಾಗಾಗಿ ಈ ಎಲ್ಲಾ ಅಂಶಗಳು ಹುಲುಕಡಿನಾಡಿನ ಐತಿಹಾಸಿಕ ಹಿನ್ನೆಲೆಯ ಪ್ರಸ್ತಾವನೆಯಲ್ಲಿ ಚರ್ಚಿಸಲಾಗಿದೆ.

ಕರ್ನಾಟಕವನ್ನು ಆಳಿದ ರಾಜಮನೆತನಗಳಾದ ಗಂಗರಿಂದ ಹಿಡಿದು ಕಲ್ಯಾಣ ಚಾಲುಕ್ಯರ ವರಗಿನ ಕಾಲಾವಧಿಯಲ್ಲಿ ಅಸ್ತಿತ್ವದಲ್ಲಿದ್ದ ಬಹಳಷ್ಟು ಆಡಳಿತ ವಿಭಾಗಗಳನ್ನು ರಾಷ್ಟ್ರ, ವಿಷಯ ನಾಡು, ದೇಶ, ಮಂಡಲ ಮುಂತಾದ ಪದಗಳಿಂದ ಕರೆಯುತ್ತಿದ್ದರು. ವಿಭಾಗಗಳು ದೊಡ್ಡದಿದ್ದರೆ ಅದನ್ನು ಉಪವಿಭಾಗ ಮಾಡಲಾಗುತ್ತಿತ್ತು. ಶಾತವಾಹನರ ಕಾಲದಲ್ಲಿ ಭುಕ್ತಿ, ರಟ್ಟ, ಎಂಬ ಉತ್ತರ ಪದಗಳನ್ನು ಬಳಸಲಾಗಿದೆ. ಕದಂಬರ ಕಾಲದಲ್ಲಿ ವಿಷಯ, ಮಂಡಲ, ರಾಷ್ಟ್ರ ಎಂಬ ಪದಗಳು, ಬಾದಾಮಿ ಚಾಲುಕ್ಯರ ಕಾಲದಲ್ಲಿ ಭೋಗ, ರಾಷ್ಟ್ರಕೂಟರ ಕಾಲದಲ್ಲಿ ನಾಡು, ನಾಟ್ಟು, ವಾಡಿ, ಮಂಡಲ ಜನಪದಭೋಗ ಪದಗಳು ಬಳಕೆಗೊಂಡಿವೆ. ಕಲಚೂರಿ, ಯಾದವ, ಮತ್ತು ಹೊಯ್ಸಳರ ಕಾಲದವರೆಗೆ ಮುಂದುವರೆದು ರಾಜ್ಯ, ವೇಂಠೆ, ವೇಂಠಕ, ವಳಿತ, ಚಾವಳಿ, ಸಾಗಣಿ, ಸೀಮೆ ಪದಗಳು ದೊರೆಯುತ್ತವೆ.(ಸಿಗುತ್ತವೆ) ಮರಾಠರ ಕಾಲದಲ್ಲಿ ಮಹಲು ಇತ್ಯಾದಿ ಪದಗಳು[೧೦೭] ಬಳಕೆಗೊಂಡಿವೆ. ವಿಜಯನಗರ ಕಾಲಕ್ಕೆ ಸಂಬಂಧಿಸಿದಂತೆ ಆಡಳಿತ ವಿಭಾಗಗಳು ಶಾಸನಗಳಲ್ಲಿ ಉಲ್ಲೇಖಗೊಂಡಂತೆ ರಾಜ್ಯದ ಬದಲು ಸೀಮೆ, ಸ್ಥಳ, ವಳಿತ, ವೇಂಠೆ ಎಂಬ ಪದಗಳನ್ನು ಬಳಸಲಾಗಿದೆ. ವಿಜಯನಗರ ಕಾಲದ ಆಡಳಿತ ವಿಭಾಗಗಳ ಹಂತಗಳನ್ನು ಒಟ್ಟಾರೆಯಾಗಿ ದೇಶ, ಚಾವಡಿ, ಮಾಗಣಿ, ಸ್ಥಳ, ಗ್ರಾಮ ಎಂಬುದಾಗಿ ಗುರುತಿಸಲಾಗಿದೆ. ಇವುಗಳ ಜೊತೆಗೆ ಪಟ್ಟಣ, ಅಗ್ರಹಾರ ಸ್ಥಳಗಳು ಪ್ರತ್ಯೇಕ ಸ್ವಾಯುಕ್ತ ಘಟಕಗಳಾಗಿದ್ದವು.[೧೦೮]

ಪ್ರಸ್ತುತ ಹುಲುಕಡಿ ನಾಡು ಮತ್ತು ಪರಿಸರದ ಸುತ್ತಮುತ್ತಲಿನ ಗ್ರಾಮಗಳು ವಿಜಯನಗರ ಕಾಲದ ಆಳ್ವಿಕೆಗೆ ಒಳಪಟ್ಟಿದ್ದವು. ಬಹುಶಃ ದೊಡ್ಡಬಳ್ಳಾಪುರ ತಾಲ್ಲೂಕಿನ ಹುಲುಕಡಿ ಬೆಟ್ಟದ ಸ್ಥಳಕ್ಕೆ ವಿಜಯನಗರ ಕಾಲದಲ್ಲೇ ಹುಲುಕಡಿ ನಾಡು ಎಂಬ ಶಬ್ದ ಅನ್ವಯವಾಗಿರಬೇಕು.

ಬೆಂಗಳೂರು ಜಿಲ್ಲೆಯಲ್ಲಿನ ಕ್ರಿ.ಶ.೧೪೦೦ರ ಕಾಲಕ್ಕೆ ವಿಜಯನಗರ ಕಾಲದ ಶಾಸನಗಳಲ್ಲಿ ಈ ಸ್ಥಳಕ್ಕೆ ನಾಡು ಎಂಬ ಶಬ್ದ ಪ್ರಚಲಿತವಿದ್ದರೂ ಶಬ್ಧ ಪದ ಪ್ರಯೋಗ ಅದರ ಪ್ರಭಾವದಿಂದಲೇ

ಉಳಿದುಕೊಂಡು ಬಂದಿರಬಹುದು. ಉದಾಹರಣೆಗಾಗಿ 'ಬೊಮ್ಮಯ್ಯನಾಯಕರು ಅಣಪ್ಪನವರು ಶ್ರೀಮನ್ಮಹಾ ಹುಲುಕಡಿನಾಡ ಪ್ರಭು"ಎಂಬಲ್ಲಿ 'ನಾಡು' ಎಂಬ ಪದ ಬಳಕೆ ಮಾಡಿರುವುದು ತಿಳಿಯುತ್ತದೆ.[೧೦೯]

ವಿಜಯನಗರ ಕಾಲದಲ್ಲಿ ಹೊಸದಾಗಿ ಸೇರ್ಪಡೆಯಾದ ಇಲ್ಲಿನ ನಾಡುಗಳೆಲ್ಲವೂ 'ಸೀಮೆ' ಎಂಬ ಪ್ರತ್ಯಯವನ್ನು ಪಡೆದಿವೆ. ಇಲ್ಲಿನ ಸೀಮೆ ಎಂಬುದು ವಿಜಯನಗರ ಕಾಲದಲ್ಲಿ ಒಂದು ಆಡಳಿತದ ವಿಭಾಗವಾಗಿ ಅರ್ಥೈಸಲ್ಪಟ್ಟಿದೆ. ಹುಲುಕಡಿನಾಡೊಳು ಹಣಬೆಯ ಸೀಮೆಗೆ ಸಲುವ ಗಂಡ್ರಗೊಳ್ಳಿಪುರದ ಸೀಮೆಯೊಳಗಣ ಎಂಬಲ್ಲಿ ಸೀಮೆ ಪದಗಳು ಉಲ್ಲೇಖಗೊಂಡು ಎಲ್ಲೆ ಎಂಬ ಅರ್ಥವನ್ನು ಊಹಿಸಬಹುದು. ಕರ್ನಾಟಕ ಮತ್ತು ಆಂಧ್ರಪ್ರದೇಶಗಳ ಹಿಂದೆ ಇದ್ದ ನಾಡು ಎಂಬ ವಾಚಕಕ್ಕೆ 'ಸೀಮೆ', ನಾಡು ಎಂಬ ಪದಗಳು ಬಳಕೆಗೆ ಬಂದಿರಬಹುದು. ಈ ಹಿನ್ನೆಲೆಯಲ್ಲಿ ಸೀಮೆ ಮತ್ತು ನಾಡು ಎಂಬ ಪದ ಪ್ರಯೋಗ ಆಡಳಿತ ವಿಭಾಗಗಳನ್ನು ಸೂಚಿಸುತ್ತದೆ. ಹೀಗೆ ಈ ಒಂದು ಐತಿಹಾಸಿಕ ಹಿನ್ನೆಲೆ ಬೆಂಗಳೂರು ಜಿಲ್ಲೆಯ ಮೇಲೂ ಪ್ರಭಾವವನ್ನು ಬೀರಿದೆ. ಈ ಜಿಲ್ಲೆಯೂ ಹುಲುಕಡಿನಾಡ ಪ್ರಭುಗಳು ಮತ್ತು ಎಲಹಂಕ ನಾಡ ಪ್ರಭುಗಳ ಆಳ್ವಿಕೆಯಲ್ಲಿತ್ತು. ನಾಡ ಪ್ರಭುಗಳ ಆಳ್ವಿಕೆಯಲ್ಲಿದ್ದ ದೊಡ್ಡಬಳ್ಳಾಪುರ ತಾಲ್ಲೂಕಿನ ಪಶ್ಚಿಮಭಾಗದ ಬಹುತೇಕ ಪ್ರದೇಶವು ವಿಜಯನಗರ ಅರಸರ ಆಡಳಿತದ ಅವಧಿಯಲ್ಲಿ ಹುಲುಕಡಿನಾಡು ಎಂದು ಕರೆಸಿಕೊಂಡಿತ್ತು ಎಂಬುದು ನಿಸ್ಸಂದೇಹ. ಈ ನಾಡಿನ ಇತಿಹಾಸವನ್ನು ಅರಿಯಲು ನಮಗೆ ಶಾಸನಗಳನ್ನು ಹೊರುತಪಡಿಸಿದರೆ ಹೆಚ್ಚಿನ ಆಕರ ಸಾಮಗ್ರಿಗಳು ದೊರೆತಿಲ್ಲವೆಂದೇ ಹೇಳಬಹುದು.

ಹುಲುಕಡಿನಾಡು ವಿಜಯನಗರ ಅರಸರ ಆಳ್ವಿಕೆಗೆ ಒಳಪಟ್ಟಿತ್ತಾದರೂ ಇದಕ್ಕಿಂತಲೂ ಮೊದಲು ಈ ನಾಡು ಗಂಗರ ಆಳ್ವಿಕೆಗೆ ಒಳಪಟ್ಟು ಅವರ ನೆಲೆವೀಡಾಗಿತ್ತು. ಎಂಬುದನ್ನು ತುಮಕೂರು ಜಿಲ್ಲೆಯ ಒಂದು ಶಾಸನ ಉಲ್ಲೇಖಿಸುತ್ತದೆ.[೧೧೦]

ತುಮಕೂರು ಜಿಲ್ಲೆಯಲ್ಲಿ ದೊರೆತಿರುವ ಈ ಒಂದು ಶಾಸನ ಪೆರುಕ ಎಂಬುದು ಹುಲುಕಡಿ ನಾಡಿನ ಪ್ರದೇಶವಾಗಿರಬಹುದು. ಗಂಗರ ದೊರೆ (ಕ್ರಿ.ಶ.೪೮೨) ಸ್ಕಂದಶರ್ಮ ಎಂಬ ಬ್ರಾಹ್ಮಣನಿಗೆ ಮಣ್ಣೆನಾಡಿನ ಪೆರುಕದ ಬಳಿಯ ತಿಪ್ಪೆರೂರು ಗ್ರಾಮವನ್ನು ದಾನಮಾಡಿದ ವಿಷಯವಿದೆ. ಹಾಗಾಗಿ ಈ 'ಪೆರುಕ' ಎಂಬ ಸ್ಥಳವು ಈಗಿನ ಹುಲಕಡಿ ಪ್ರದೇಶವನ್ನು ಸೂಚಿಸುತ್ತದೆ. ಅಂದರೆ ಈ ಹುಲುಕಡಿ ನಾಡಿನ ಮೇಲೂ ಗಂಗರು ಆಳ್ವಿಕೆಯನ್ನು ನಡೆಸಿದ್ದರು ಎಂಬ ಅಂಶ ಸ್ಪಷ್ಟವಾಗಿ ತಿಳಿಯುತ್ತದೆ. ಈ ಗಂಗ ಮನೆತನವನ್ನು ಹೊರತುಪಡಿಸಿ ವಿಜಯನಗರ ಕಾಲದ ಅರಸೊತ್ತಿಗೆಯವರೆಗೆ ಯಾವೊಂದು ಮನೆತನವೂ ಈ ಪ್ರದೇಶದ ಮೇಲೆ ಆಳ್ವಿಕೆ ನಡೆಸಿದ್ದರೆಂಬುದಕ್ಕೆ ಯಾವ ಪುರಾವೆಗಳು ಸದ್ಯಕ್ಕೆ ದೊರೆತಿಲ್ಲ.

ಈ ಹುಲುಕಡಿ ನಾಡಿಗೆ ೫.ಕಿ.ಮೀ. ದೂರವಿರುವ ಈಗಿನ ತಿಪ್ಪೂರು ಗ್ರಾಮವೇ ಮೇಲಿನ ಶಾಸನದಲ್ಲಿ ಉಲ್ಲೇಖಿತವಾಗಿರುವ ತಿಪ್ಪೆರೂರು ಗ್ರಾಮವಾಗಿದೆ. ಈ ಪೆರುಕ ಎಂಬುದು ೧೨ನೇ ಶತಮಾನದ ಚೋಳರ ಶಾಸನದಲ್ಲಿ[೧೧೧] 'ಪುರ್ಕೋಡಿ'ಎಂದು ಕರೆಯಲಾಗಿದೆ. ಈ ಪೆರುಕ ೭ ಪುರ್ಕೋಡಿ ಹೇಗಾಯಿತೆಂದು ಊಹಿಸುವುದು ಕಷ್ಟ. ಪುರ್ಕೋಡಿಯು >ಹುಲುಕಡಿ ಎಂದು ಆದುದೂ ಊಹಿಸುವುದು ಅಸಾಧ್ಯ. ಬಹುಶಃ ಪೆರುಕ>ಪೆರ್ಕ>ಪೆರ್ಕನಾಡು>ಪೆರ್ಕಾಡು>ಪುರ್ಕೋಡಿ> ಹುರ್ಕೋಡಿ>ಹುಲುಕಡಿ ಎಂದು ಕಾಲಕ್ರಮೇಣ ಬದಲಾಗಿರಬೇಕು. ಈ ಶಾಸನದ ಪ್ರಕಾರ ೫ನೇ ಶತಮಾನದಲ್ಲಿ ಮಣ್ಣೆನಾಡಿಗೆ ಸೇರಿದ್ದ ಹುಲುಕಡಿಯು ೧೫ನೆಯ ಶತಮಾನದ ಹೊತ್ತಿಗೆ ಹುಲುಕಡಿನಾಡಾಗಿ ಪ್ರಸಿದ್ಧವಾಗಿದೆ.[೧೧೨]

ಕ್ರಿ.ಶ.೧೧೧೫ರ ತಮಿಳು ದಾನಶಾಸನದ ಪ್ರಕಾರ[೧೧೩] ಹುಲುಕಡಿ ನಾಡಿಗೆ 'ಪುರ್ಕೋಡಿ' ಎಂಬ ಹೆಸರಿದ್ದತೆ ಸ್ಪಷ್ಟವಾಗಿ ತಿಳಿದುಬರುತ್ತದೆ. ಈ ದಾನಶಾಸನವು ಹೊಯ್ಸಳರ ಕಾಲದ್ದಾಗಿದ್ದು ಈ ಅವಧಿಯಲ್ಲಿ ಈ ಭಾಗವು ಚೋಳ ಮಂಡಲದ ಮಣ್ಣೆನಾಡಿಗೆ ಸೇರಿತ್ತೆಂದೂ ತಿಳಿದುಬರುತ್ತದೆ. ಈ ಶಾಸನದ ನಂತರ ನಮಗೆ ಇನ್ನೂರೈವತ್ತು ವರ್ಷಗಳವರೆಗೆ ಈ ನಾಡಿನ ಉಲ್ಲೇಖ ಯಾವ ಶಾಸನದಲ್ಲಿ ದೊರಕುವುದಿಲ್ಲ.

ವಿಜಯನಗರ ಅರಸ ಒಂದನೇ ಬುಕ್ಕನ ಕ್ರಿ.ಶ.೧೩೬೭ರ ಒಂದು ಶಾಸನದಲ್ಲಿ[೧೧೪] 'ಹುಲುಕಡಿ ನಾಡು'ವಿನ ಉಲ್ಲೇಖ ಕಂಡುಬರುವುದಲ್ಲದೆ ಇದನ್ನು ಬುಮ್ಮರಳ ಎಂಬ ಅರಸನು ಆಳುತ್ತಿದ್ದನೆಂದು ಮಾತ್ರ ತಿಳಿಸುತ್ತದೆ. ಆದರೆ ಈತನ ಬಗ್ಗೆ ಹೆಚ್ಚಿನ ಮಾಹಿತಿ ದೊರೆತಿಲ್ಲ.

ಕ್ರಿ.ಶ.೧೪೯೩ರ ಒಂದು ಶಾಸನದಲ್ಲಿ[೧೧೫] ಬೈಯಣವುಡರ ಮಕ್ಕಳು ಬೈಪಗವುಂಡರು ಹುಲುಕಡಿ ನಾಡಿನ ಪ್ರಭುವಾಗಿದ್ದಂತೆ ತಿಳಿದುಬರುತ್ತದೆ. ಇವರ ವಂಶಾವಳಿಯ ಬಗ್ಗೆ ಅಧಿಕ ಮಾಹಿತಿಗಳು (ದೊರೆತಿಲ್ಲ)

ಇದುವರೆವಿಗೂ ಹುಲುಕಡಿನಾಡು ಮಣ್ಣೆನಾಡಿಗೆ ಒಳಪಟ್ಟಿತ್ತಾದರೂ ಕಾಲಾನಂತರ ವಿಜಯನಗರ ಅರಸರ ಆಳ್ವಿಕೆಗೆ ಒಳಪಟ್ಟಿತ್ತೆಂದು ಇವರ ಅಧೀನದಲ್ಲಿ ಹುಲುಕಡಿ ನಾಡ ಪ್ರಭುಗಳು ಆಳ್ವಿಕೆಯನ್ನು ನಡೆಸುತ್ತಿದ್ದರೆಂದು ಸ್ಪಷ್ಟವಾಗಿ ಶಾಸನಗಳು ತಿಳಿಸುತ್ತವೆ. ಕ್ರಿ.ಶ.೧೫೩೦ರವರೆಗೂ ಹುಲುಕಡಿನಾಡ ಪ್ರಭುಗಳು ಆಳ್ವಿಕೆ ನಡೆಸುತ್ತಿದ್ದು, ಅಲ್ಲಿನ ಅರಸರ ಕೈತಪ್ಪಿ ಗಂಡ್ರಗೊಳ್ಳೀ ದಳವಾಯಿಗಳ ಕೈ ಸೇರುತ್ತದೆ. ಈ ಅಂಶವನ್ನು ಕ್ರಿ.ಶ.೧೫೩೧ರ ಶಾಸನ ಉಲ್ಲೇಖಿಸುತ್ತದೆ.[೧೧೬] ಈ ಶಾಸನದ ಪ್ರಕಾರ ಗುಂಡ್ರಗೊಳ್ಳೀ ದಳವಾಯಿ ಸೊಂಣಪ್ಪನಾಯಕರ ಮಕ್ಕಳು ನಾಗಪ್ಪನನಾಯಕರ ವಶಕ್ಕೆ ಸೇರುತ್ತದೆ. ಈ ಅವಧಿಯಲ್ಲಿ ವಿಜಯನಗರದಲ್ಲಿ ಅಚ್ಚುತದೇವರಾಯ ಆಳ್ವಿಕೆ ನಡೆಸುತ್ತಿರುತ್ತಾರೆ. ಆದರೆ ಈ ಹುಲುಕಡಿನಾಡು ಅರಸರ ಕೈತಪ್ಪಿ ಅವರ ಕೈಕೆಳಗಿನ ಗಂಡ್ರಗೊಳ್ಳೀ ದಳವಾಯಿಗಳಿಗೆ,

ಸೇರಿದ್ದರ ಕಾರಣ ಇದುವರೆಗೂ ತಿಳಿದುಬರುವುದಿಲ್ಲ. ಬಹುಶಃ ಕಪ್ಪಕಾಣಿಕೆ ಸಂದಾಯ ಮಾಡದ ಅಥವಾ ಸಂತಾನವಿಲ್ಲದುದರ ಕಾರಣ ಅರಸರಿಂದ ಹುಲುಕಡಿನಾಡು, ದಳವಾಯಿಗಳ ಕೈಗೆ ಹಸ್ತಾಂತರಗೊಂಡಿರಬಹುದು ಎಂಬುದಾಗಿ ಶಾಸನಗಳ ನೆರವಿನಿಂದ ಊಹಿಸಬಹುದು. ಅಲ್ಲದೆ, ಈ ಶಾಸನದ ಪ್ರಕಾರ ಈ ದಳವಾಯಿಗಳು ತುಂಗಭದ್ರಾ ತೀರದ ಸಾನ್ನಿಧ್ಯದಲ್ಲಿಯೇ ಅಚ್ಚುತದೇವರಾಯರಿಗೆ ಪುಣ್ಯವಾಗಲೆಂದು ಗ್ರಾಮವನ್ನು ದಾನನೀಡಿರುವುದರಿಂದ ಆಳ್ವಿಕೆಯ ಬದಲಾವಣೆಗೆ ಅರಸರ ಸಮ್ಮತಿಯಿತ್ತೆಂದು ಭಾವಿಸಬಹುದಾಗಿದೆ.

ಹುಲುಕಡಿ ನಾಡ ಪ್ರಭುಗಳ ಅಧೀನದಲ್ಲಿ ಗಂಡ್ರಗೊಳ್ಳಿದಳವಾಯಿಗಳ ಆಳ್ವಿಕೆಯನ್ನು ತಿಳಿಸುವ ಮತ್ತೆರಡು ಶಾಸನಗಳು ಇವೆ. ಈ ಎರಡೂ ಶಾಸನಗಳು ವಿಜಯನಗರ ಅರಸ ವೀರನರಸಿಂಗ ದೇವರಾಯನ ಕಾಲಕ್ಕೆ ಸೇರಿದ್ದಾಗಿವೆ. ಕ್ರಿ.ಶ.೧೫೪೧ರ ಗಂಡ್ರಗೊಳ್ಳಿಪುರದಲ್ಲಿರುವ ಒಂದು ಶಾಸನದಲ್ಲಿ[೧೧೭] ಗಂಡ್ರಗೊಳ್ಳಿಪುರಕ್ಕೆ ಬಡಗಲು ಹೆಜ್ಜಾಜಿ ಶಾಕಲದೇವನಪುರದ ಮೇರೆ ಅದರೊಳಗಾದದ್ದು ಸರಾಮಕ್ಷೇತ್ರನಿಧಿ ನಿಕ್ಷೇಪ ಜಲಪಾಷಾಣ ಅಕ್ಷೀಣಯಾಗಾಮಿ ಸಿದ್ಧಸಾಧ್ಯಂಗಳೆಂಬ ಅಷ್ಟಭೋಗತೇಜ ಸ್ವಾಮ್ಯವನ್ನೂ ಗಂಡ್ರಗೊಳ್ಳೀ ಸೊಂಣಪ್ಪನಾಯಕರ ಮಕ್ಕಳು ಬೈರಪ್ಪನಾಯಕರು ಈ ಗಂಡ್ರಗೊಳ್ಳಿ ಪುರವನ್ನು ಶ್ರೀ ವೀರನರಸಿಂಗ ದೇವ ಮಹಾರಾಯರಿಗೆ ಧರ್ಮವಾಗಿ ಶ್ರೀ ಮತುಗಂಡ್ರಗೊಳ್ಳಿದಳವಾಯಿ ಸೊಂಣಪ್ಪನಾಯಕರ ಮಕ್ಕಳು ಬೈರಪ್ಪನಾಯಕರು ಶಿವಗಂಗೆಯ ಮೇಲಣಗವಿ ಸಿಂಹಾಸನದ ಮಲೆಯಕಾಂತ ದೇವರಿಗೆ ಶಿಷ್ಯಪರಂಪರೆಯಾಗಿ ಅಚಂದ್ರಾರ್ಕ ಸಾಕ್ಷಿಗಳಾಗಿ ಶಿವಪೂಜೆಯಂ ಮಾಡಿಕೊಂಡು ಸುಖದಿಂದಾ ಅನುಭವಿಸುವುದುಯಂದು ಕೊಟ್ಟ ಪುರಧರ್ಮಶಾಸನ" ಹಾಗಾಗಿ ಗಂಡ್ರಗೊಳ್ಳಿದಳವಾಯಿ ಸೊಂಣಪ್ಪನಾಯಕರ ಮಕ್ಕಳು ಬೈರಪ್ಪನಾಯಕರು ಶಿವಗಂಗೆಯ ಮೇಲಿನ ಗವಿಯ ಸಿಂಹಾಸನದ ಮಲೆಯಕಾಂತದೇವರಿಗೆ ಗ್ರಾಮದಾನ ನೀಡುತ್ತಾನೆ. ಇದನ್ನೇ ಸಮರ್ಥಿಸುವ ಮತ್ತೊಂದು ಶಾಸನ[೧೧೮] ಅದೇ ಗ್ರಾಮದಲ್ಲಿದೆ. ದಾನ ನೀಡುವುದು, ಅದರ ಬಗ್ಗೆ ಶಾಸನ ನೆಡುವುದು, ರಾಜಮಹಾರಾಜರಿಗೆ ಮಾತ್ರ ಸೀಮಿತವಾಗಿರಲಿಲ್ಲ. ರಾಜರ ಅಧೀನದಲ್ಲಿ ಆಳ್ವಿಕೆ ನಡೆಸುತ್ತಿದ್ದ ನಾಡ ಪ್ರಭುಗಳು, ದಳವಾಯಿಗಳು ಶಾಸನ ಹಾಕಿಸುತ್ತಿದ್ದರು. ಇವರ ನಂತರದ ಕಾಲದಲ್ಲಿ ಹುಲುಕಡಿನಾಡುವಿನ ಪ್ರಸ್ತಾಪ ಎಲ್ಲೂ ದೊರೆಯುವುದಿಲ್ಲ. ಹೀಗಾಗಿ ಈ ನಾಡು ವಿಜಯನಗರ ಅರಸರ ಅವಧಿಯಲ್ಲೇ ಪತನಗೊಂಡಿತೆಂದು ಹೇಳಬಹುದು.

ಈ ಹುಲುಕಡಿನಾಡು ಮೊದಲಿಗೆ ಮಣ್ಣೆನಾಡಿನ ಒಂದು ಭಾಗವಾಗಿದ್ದರೂ ಕಾಲಾನಂತರ ಇದೇ ಒಂದು ನಾಡಾಗಿ ಬೆಳವಣಿಗೆ ಕಂಡು ಹುಲುಕಡಿನಾಡ ಪ್ರಭುಗಳು ಈ ಹುಲುಕಡಿ ಬೆಟ್ಟವನ್ನೇ ಮುಖ್ಯ ಅವಾಸಸ್ಥಾನವಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ್ದರೆಂದು ತಿಳಿದುಬರುತ್ತದೆ.

ಕ್ರಿ.ಶ.೧೦೩೮ರಲ್ಲಿ ಮೊಘಲರ ದೊರೆ ರಣದುಲ್ಲಾಖಾನ್ ನ ಹಿಂಸೆಯನ್ನು ತಾಳಲಾರದೆ ಈ ಹುಲುಕಡಿ ನಾಡಪ್ರಭುಗಳು ಕೋಲಾರ ಜಿಲ್ಲೆಯ ಪುಂಗನೂರು ಸಂಸ್ಥಾನದ ಕಡೆಗೆ ಹೋದರೆಂಬು

ದಾಗಿಯೂ ಊಹಿಸಬಹುದು. ಒಟ್ಟಾರೆ ಈ ನಾಡು ವಿಜಯನಗರ ಅವಧಿಯಲ್ಲಿಯೇ ಪತನಗೊಂಡಿತೆಂದು ಹೇಳಬಹುದು.

ಶಾಸನಗಳ ಸಹಾಯದಿಂದ ಪ್ರಾಚೀನ ಕರ್ನಾಟಕದ ರಾಜಕೀಯ ಸ್ಥಿತಿ, ಆಡಳಿತ ಕ್ರಮ, ಸಮಾಜ, ಅಲ್ಲಿನ ಕಲೆ, ಧರ್ಮ, ಆರ್ಥಿಕ ಸ್ಥಿತಿ, ತೆರಿಗೆ ಪರಿಸ್ಥಿತಿಗಳನ್ನು ಅರಿಯಲು ಮತ್ತು ಅವುಗಳ ಇತಿಹಾಸವನ್ನು ಪುನರ್ರಚಿಸಲು ಸುಲಭ ಸಾಧ್ಯವಾಗಿದೆ. ಶಾಸನಗಳ ಚರಿತ್ರೆ, ಇತಿಹಾಸದ ಪುನರ್ರಚನೆಯಲ್ಲಿ ವಹಿಸಿರುವ ಪಾತ್ರ ಬಹಳ ಮಹತ್ವದ್ದು ಇತಿಹಾಸದ ಸ್ವರೂಪಕ್ಕೆ ಶಾಸನ ಸಾಮಗ್ರಿಯೇ ಜೀವನಾಡಿ, ಅವುಗಳು ಪ್ರಾಚೀನ ಬದುಕಿನ ಸಮಸ್ತ ಸಂವೇದನೆಗಳು, ನಮ್ಮ ನಾಡಿನ ಜನ ಜೀವನವು ಶಾಸನಗಳಲ್ಲಿ ಅಭಿವ್ಯಕ್ತಗೊಂಡಿರುವಂತೆ ಪ್ರಾಯಶಃ ಇನ್ನೆಲ್ಲೂ ವ್ಯಕ್ತವಾಗಲಿಕ್ಕಿಲ್ಲ. ಅಂತೆಯೇ ಅವು ಐತಿಹಾಸಿಕ ಸಂಶೋಧನಾ ಅಧ್ಯಯನದ ಪ್ರತಿ ಹಂತದಲ್ಲೂ ಅಧಿಕೃತ ಭೂಮಿಕೆಯಾಗಿವೆ. ಈ ಹಿನ್ನೆಲೆಯಲ್ಲಿ ದೊಡ್ಡಬಳ್ಳಾಪುರ ತಾಲ್ಲೂಕಿನ ಹುಲುಕಡಿ ನಾಡಿನ ವ್ಯಾಪ್ತಿಯಲ್ಲಿ ಬರುವ ಸುಮಾರು ೨೫ ಶಾಸನಗಳ ಅಧ್ಯಯನವನ್ನು ಇಲ್ಲಿ ಕೈಗೊಳ್ಳಲಾಗಿದೆ.

ಹುಲುಕಡಿನಾಡಿಗೆ, ಸಂಬಂಧಿಸಿದಂತೆ ಇಲ್ಲಿರುವ ಹೆಚ್ಚಿರುವ ಶಾಸನಗಳು ದಾನಶಾಸನಗಳಾಗಿವೆ. ಇನ್ನುಳಿದವು ಸ್ಮಾರಕ ಶಾಸನಗಳು ದೊರೆತಿರುವ ಶಾಸನಗಳಲ್ಲಿ ಇವುಗಳಿಂದ ದೊರೆತ ವಿಷಯ, ನಾಡಿನ ಇತಿಹಾಸಕ್ಕೆ ಮೂಲ ಸಾಮಗ್ರಿಯಾಗಿದೆ. ಇವುಗಳು ಹುಲುಕಡಿನಾಡಿನ ವಿಸ್ತಾರ, ಸೀಮೆ, ಎಲ್ಲೆಗಳನ್ನು ಗುರುತಿಸಲಿಕ್ಕೆ ಸಹಕಾರಿಯಾಗಿವೆ ಹುಲುಕಡಿ ನಾಡಿಗೆ ಒಳಪಟ್ಟಿರುವ ಶಾಸನಗಳ ಪಟ್ಟಿ ಇಂತಿದೆ.

೧. ಕ್ರಿ.ಶ.೯೧೮ರ ಜಕ್ಕಸಂದ್ರದ ಶಾಸನ

೨. ಕ್ರಿ.ಶ.೧೧೫ರ ಹುಲುಕಡಿಬೆಟ್ಟದ ಪೂರ್ವಕ್ಕೆ ಮಾಡೇಶ್ವರ ಗ್ರಾಮದ ಶಾಸನ

೩. ಕ್ರಿ.ಶ.೧೩೦೬ರ ಇಸ್ತೂರು ಗ್ರಾಮದ ಶಾಸನ

೪. ಕ್ರಿ.ಶ.೧೩೨೮ರ ವಾಣಿಗರಹಳ್ಳಿ ಶಾಸನ

೫. ಕ್ರಿ.ಶ.೧೩೪೦ರ ಶಾಕಲದೇವನಪುರದ ಶಾಸನ

೬. ಕ್ರಿ.ಶ.೧೩೪೦ರ ಚಿಕ್ಕಹೆಜ್ಜಾಜಿ ಶಾಸನ

೭. ಕ್ರಿ.ಶ.೧೩೬೭ರ ಅರಳುಮಲ್ಲಿಗೆ ಶಾಸನ

೮. ಕ್ರಿ.ಶ.೧೪೧೮ರ ಮಧುರೆ ಸ್ಮಾರಕ ಶಾಸನ

೯. ಕ್ರಿ.ಶ.೧೪೬೪ರ ಕನಸವಾಡಿ ಶಾಸನ

೧೦. ಕ್ರಿ.ಶ.೧೪೯೩ರ ಪುಟ್ಟಯ್ಯನಗ್ರಹಾರದ ಶಾಸನ

೧೧. ಕ್ರಿ.ಶ.೧೫೩೧ರ ಕಾಡನೂರು ಶಾಸನ

೧೨. ಕ್ರಿ.ಶ.೧೫೩೪ರ ಕಲ್ಲದೇವನಹಳ್ಳಿ ಶಾಸನ

೧೩. ಕ್ರಿ.ಶ.೧೫೩೪ರ ಅಂಬಲಗೆರೆ ಶಾಸನ

೧೪. ಕ್ರಿ.ಶ.೧೫೩೫ರ ರಾಂಪುರ ಶಾಸನ

೧೫. ಕ್ರಿ.ಶ.೧೫೪೧ರ ಗಂಡ್ರಗೊಳ್ಳಿಪುರ ಶಾಸನ

೧೬. ಕ್ರಿ.ಶ.೧೫೫೧ರ ಲಿಂಗಾಪುರ ಶಾಸನ

೧೭. ಕ್ರಿ.ಶ.೧೫೬೨ರ ಗಂಡ್ರಗೊಳ್ಳಿಪುರದ ಶಾಸನ

೧೮. ಕ್ರಿ.ಶ.೧೫೮೬ರ ತಿಪ್ಪೂರು ಶಾಸನ

೧೯. ಕ್ರಿ.ಶ.೧೬೧೦ರ ನಾಗೇನಹಳ್ಳಿ ಶಾಸನ

ಈ ಶಾಸನಗಳು ಬಹುತೇಕವಾಗಿ ಎಫಿಗ್ರಾಫಿಯಾ ಕರ್ನಾಟಕದ ೯ನೇ ಸಂಪುಟದ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಅಡಿಯಲ್ಲಿ ಪ್ರಕಟವಾಗಿವೆ. ಅಂಬಲಗೆರೆ ಶಾಸನವು ಅಚ್ಯುತರಾಯರ ಕಾಲಾವಾಧಿಯದಾಗಿದ್ದು 'ಶಾಸನ ಸಂಶೋಧನೆ' ಎಂಬ ಕೃತಿಯಲ್ಲಿ ಒಡಮೂಡಿದೆ.[೧೯] ಈ ಶಾಸನಗಳ ನೆರವಿನಿಂದ ಕ್ಷೇತ್ರಕಾರ್ಯದಲ್ಲಿ ಕಂಡುಬರುವ, ಹುಲುಕಡಿನಾಡಿಗೆ ಸಂಬಂಧಿಸಿದ ಸಂಸ್ಕೃತಿ, ಆಡಳಿತ ಕ್ರಮಗಳು ಮೊದಲಾದವುಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಕ್ರಿ.ಶ.೧೫೩೪ರ ಅಂಬಲಗೆರೆಯು ಅಂಜನೇಯಸ್ವಾಮಿ ದೇವಾಲಯದ ಮುಂಭಾಗದಲ್ಲಿ ದೊರೆತಿರುವ ಈ ಶಾಸನದ ಪ್ರಕಾರ ಅಚ್ಚುತರಾಯನು ವಿಜಯನಗರದಲ್ಲಿ ಆಳುತ್ತಿರುವಾಗ ಈ ಹುಲುಕಡಿನಾಡು ಅಮರದ ತಿಮ್ಮರಸದ ಮಕ್ಕಳಾದ ಕರಣಿಕ ರಾಮಕೃಷ್ಣಯ್ಯ ರಂಗಪ್ಪಗಳ ನಾಯಕ ತನದಲ್ಲಿತ್ತೆಂದು ಸ್ಪಷ್ಟವಾಗಿ ತಿಳಿದುಬರುತ್ತದೆ. ಇವರುಗಳು ಅಂಬಲಗೆರೆಯ ಮೊಕ್ತಕಾರನಾದ ಚಿಕ್ಕಣ್ಣದಾಸರಿಗೆ ದಾನ ನೀಡಿದ ವಿಷಯವನ್ನು ಪ್ರಸ್ತಾಪ ಮಾಡುತ್ತದೆ. ಅಲ್ಲದೆ ಅಂಬಲಗೆರೆ ಗ್ರಾಮವು ಹಣಬೆ ಸ್ಥಳಕ್ಕೆ ಸೇರಿತ್ತೆಂದೂ, ಈ ಹಣಬೆಯು ಹುಲುಕಡಿ ನಾಡಿಗೆ ಒಳಪಟ್ಟಿತ್ತೆಂದೂ, ಈ ಹಣಬೆಗ್ರಾಮವು ಹುಲುಕಡಿನಾಡಿನ ಸೀಮೆ ಎಂದು ತಿಳಿಯಬಹುದು.

ಹುಲುಕಡಿನಾಡ ಪ್ರಭುಗಳು ಆವತಿನಾಡ ಪ್ರಭುಗಳ ವಂಶಸ್ಥರೆಂಬುದು ಕ್ರಿ.ಶ.೧೫೮೬ರ[೨೦] ತಿಪ್ಪೂರು ಶಾಸನ ಹಾಗೂ ಹುಲುಕಡಿ ನಾಡಿನ ಸೀಮೆ ಎಲ್ಲೆಯನ್ನು ಇತರ ಶಾಸನಗಳು ಹೇಳುತ್ತವೆ. "...ಶ್ರೀಮನ್ಮಾಹಾ ಆವತಿಯ ನಾಡ ಪ್ರಭು ಹಾವಳಿ ಬಯಿಪ್ಪಗಉಡರು ತಿಪ್ಪೂರಲಿನ ಮಶಿವಾಯ"

ಎಂದೂ ಇದೇ ಗ್ರಾಮದ ಕ್ರಿ.ಶ.೧೫೪೬ರ ಮತ್ತೊಂದು ಶಾಸನ[೧೧] ಆವತಿನಾಡ ಪ್ರಭುಗಳು ಹಾವಳಿಬಯಪ್ಪಗೌಡ ಮತ್ತು ಈತನ ಮಗನನ್ನು ಹೆಸರಿಸುತ್ತದೆ.

ಇವರ ವಂಶಾವಳಿಯನ್ನು ಕ್ರಿ.ಶ.೧೬೧೦ರ ಅಂತರಹಳ್ಳಿ ಶಾಸನದಲ್ಲಿ[೧೨] ಈ ರೀತಿ ಉಲ್ಲೇಖ ಗೊಂಡಿದೆ. "...ಆವತಿನಾಡ ಪ್ರಭು ಬಯಿರೇಗಉಡ ಅಯ್ಯನವರ ಪುತ್ರರಾದ ಹಾವಳಿ ಬಯಿರಪಗಉಡರ ಅಯ್ಯನವರ ಪುತ್ರರಾದ ಯಿಂಮಡಿಹಾವಳಿ ಬಯಿರಪಗಉಡರು ಆತ್ರೆಗೋತ್ರದಾಶ್ವಲಾಯನ ಸೂತ್ರದವರು ಕುಳಾಕಾಧ್ಯಾಯಿಗಳಾದ... ಪಂಡಿತರ ಪುತ್ರರಾದ ಪುಟ್ಟಂಣ ಪಂಡಿತರಿಗೆ... ಹಣಬೆನಾಮಕ್ಕೆ ಪ್ರತಿನಾಮವಾಗಿ ಯಿಂಮಡಿ ಬಯಿರಾಪುರವೆಂಬ ಸರ್ವಮಾನ್ಯ" ಎಂದಿದೆ.

ಬಯಿರೇಗಉಡ

ಹಾವಳೀಬಯಿರಪ ಗಉಡ

ಇಮ್ಮಡಿ ಹಾವಳಿಬಯಿರಪಗಉಡ

ಇವರ ಮೂಲವನ್ನು ತಿಳಿಸುವ ಮತ್ತೊಂದು ಶಾಸನ ಕ್ರಿ.ಶ.೧೭೧೫ರ ಕಾಲಕ್ಕೆ ಸೇರಿದ ತಾಲ್ಲೂಕಿನ ಮಾವಳೀಪುರದ ಗ್ರಾಮದಲ್ಲಿದೆ.[೧೩] "ಶ್ರೀ ಮದ್ರಾಜಾಧಿರಾಜ ರಾಜ ಪರಮೇಶ್ವರಾಭಿವಂದಿತ ಶ್ರೀ ವೆಂಕಟೇಶ್ವರ ಸ್ವಾಮಿ ವೆಂಕಟಾಚಲದಲ್ಲು ಸಿಂಹಾಸನಾರೂಢರಾಗಿ ಪೃಥ್ವೀ ಸಾಮ್ರಾಜ್ಯಂಗೈವುತ್ತಾಯಿರಲು ಚತುರ್ಥಗೋತ್ರದ ಶ್ರೀ ಮನ್ಮಹಾ ಆವತಿನಾಡ ಪ್ರಭುಗಳಾದ ಇಮ್ಮಡಿ ಸೊಣಬೈರೇ ಗೌಡರಯ್ಯನವರ ಪುತ್ರರಾದ ಗೋಪಾಲಗೌಡರಯ್ಯನವರ ಪುತ್ರರಾದ ದೊಡ್ಡಬೈರಪ್ಪಗೌಡಯ್ಯನವರು..." ಎಂದು ಉಲ್ಲೇಖಿಸಲ್ಪಟ್ಟಿದೆ.

ಈ ಶಾಸನದಲ್ಲಿಯೂ ಹಣಬೆ ತಿಪ್ಪೂರು ಗ್ರಾಮಗಳು ಆವತಿನಾಡ ಪ್ರಭುಗಳ ನಾಮಧೇಯಗಳು ಹುಲುಕಡಿ ಸೀಮೆಯಲ್ಲಿ ಉಲ್ಲೇಖಗೊಂಡಿರುವುದರಿಂದ ಇವರ ಸಂಬಂಧಗಳು ಅತಿ ಸಾಮಿಪ್ಯಯಿರುವುದರಿಂದಲೂ ಇವರ ಅವತಿನಾಡ ಪ್ರಭುಗಳ ವಂಶಸ್ಥರೆಂಬುದಾಗಿ ಊಹಿಸಬಹುದು

ಹುಲುಕಡಿನಾಡಿನಲ್ಲಿ ದೊರೆತಿರುವ ಶಾಸನಗಳು ಇವರ ವಂಶಸ್ಥರ ಬಗ್ಗೆ ಸ್ವಲ್ಪ ಮಾಹಿತಿಯನ್ನು ಕೊಡುತ್ತವಾದರೂ ಇವರ ವಂಶದ ಬಗ್ಗೆ ಪೂರ್ಣ ಮಾಹಿತಿ ದೊರೆಯುವುದಿಲ್ಲ ಹುಲುಕಡಿನಾಡಿನ ಅರಸರ ಆಳ್ವಿಕೆ ಕೈತಪ್ಪಿ ಇವರ ಕೈ ಕೆಳಗಿನ ದಳವಾಯಿಗಳ ಕೈ ಸೇರಿರಬಹುದು. ಹೀಗಾಗಿ ಹುಲುಕಡಿ ನಾಡಿನ ಇತಿಹಾಸವನ್ನು ಅರಿಯಲು ಸದ್ಯ ನಮಗೆ ದೊರಕಿರುವುದು ಏಳು ಶಾಸನಗಳು ಮಾತ್ರ, ಸುತ್ತಮುತ್ತಲಿನ ಪರಿಸರದಲ್ಲಿ ದೊರಕಿರುವ ಶಾಸನಗಳು ಹುಲುಕಡಿನಾಡಿನ ಇತಿಹಾಸ ರಚನೆಗೆ ಪರೋಕ್ಷವಾಗಿ ಕಾರಣವಾಗಿದೆ.

ತಾಲ್ಲೂಕಿನ ಕ್ರಿ.ಶ.೧೧೧೫ರ ಶಾಸನವು[೧೨೪] ತಮಿಳು ಭಾಷೆಯಲ್ಲಿದ್ದು ಈ ಹುಲುಕಡಿನಾಡಿಗೆ ಪುರ್ಕೋಡಿ ಎಂಬ ಹೆಸರಿದ್ದುದನ್ನು ತಿಳಯಬಹುದು. ಮಾಡೇಶ್ವರಗ್ರಾಮದ ಪುರ್ಕೋಡಿ ಹುಲುಕಡಿ ಬೆಟ್ಟದ ಪೂರ್ವ ತಪ್ಪಲಿನ ಉಭಯ ಮಹಾದೇವಾಲಯದ ಶಿಲಾಶಾಸನ ಮುಕ್ಕಣೇಶ್ವರ ದೇವಾಲಯ ಹಾಗೂ ಲಕ್ಷ್ಮೀ ದೇವಾಲಯ ಕ್ರಿ.ಶ.೧೧೫೬ನೆಯ ತ್ರಿಭುವನಮಲ್ಲ ಮಹಾಮಂಡಳೇಶ್ವರ ವಿರುತರ ಭಯಂಕರ ಮಣ್ಣಯ್ಯನಾಡಗಾಮುಂಡರಾದ ಸತ್ತಿಯನ್ ಅನ್ನುವನು ಜಲಧಾರೆಯಲ್ಲಿ ಶಿವಬ್ರಾಹ್ಮಣನಿಗೆ ಪೊನ್ನಭಟ್ಟನಿಗೆ ಮಡೀತ್ತಪುರಂ ಉಭಯಮಹಾದೇವಾಲಯವನ್ನು ಕೊಟ್ಟಿದ್ದಾರೆ. ನನ್ನ ಸಂತಾನವು ಪೊನ್ನಭಟ್ಟನ ಸಂತಾನವಿರುವವರೆಗೂ ಪೂಜೆಯು ನಡೆದುಕೊಂಡು ಬರತಕ್ಕದ್ದು ಎಂಬ ಹೊಸ ವಿಷಯದ ಮೇಲೆ ಬೆಳಕು ಚೆಲ್ಲಿದೆ. ಪೊನ್ನಭಟ್ಟನಿಗಾಗಲಿ ಅವನ ವಂಶಸ್ಥರಿಗಾಗಲಿ ಯಾರಾದರೂ ಮುಡೀಶ್ವರನ್ ಒಡೆಯರ ದೇವರನ್ನು ಪೂಜಿಸಬೇಡವೆಂದು ಬೋಧಿಸಿದಲ್ಲಿ ಅಂತಹವನು ಗಂಗೆ ಮತ್ತು ಕುವರಿಯರ ನಡುವೆ ಗರ್ಭಸ್ತ ಗೋವನ್ನು ಕಡಿದಂತಹ ಪಾಪಕ್ಕೆ ಗುರಿಯಾಗುತ್ತಾನೆ ಎಂಬ ಶಾಪವನ್ನು ಈ ಶಾಸನ ದೃಢಪಡಿಸುತ್ತದೆ.

ಹೊಯ್ಸಳರ ಕಾಲಕ್ಕೆ ಸೇರಿದ್ದ ಈ ದಾನ ಶಾಸನ ಈ ಅವಧಿಯಲ್ಲಿ ಈ ಭಾಗ ಚೋಳಮಂಡಲದ ಮಣ್ಣೆನಾಡಿಗೆ ಸೇರಿದೆ ಎಂದು ತಿಳಿದರೂ, ಈ ಶಾಸನದ ನಂತರ ಸುಮಾರು ೨೫೦ ವರ್ಷಗಳವರೆಗೆ ಹುಲುಕಡಿನಾಡಿನ ಉಲ್ಲೇಕ ದೊರೆಯುವುದಿಲ್ಲ. ವಿಜಯನಗರ ಅರಸನಾದ ಒಂದನೇ ಬುಕ್ಕನ ಕ್ರಿ.ಶ.೧೩೬೭ರ ಶಾಸನದಲ್ಲಿ[೧೨೫] ಹುಲುಕಡಿ ನಾಡಿನ ಉಲ್ಲೇಖ ಕಂಡುಬಂದಿದ್ದು, ಈ ನಾಡನ್ನು ಬುಮ್ಮರಳ ಎಂಬುವನು ಆಳುತ್ತಿದ್ದನು.

ಕ್ರಿ.ಶ.೧೪೯೩ರ ಒಂದು ಶಾಸನ[೧೨೬] ಬೈಯಿಣಗವುಡರ ಮಕ್ಕಳು ಬೈಪಗಲುಡರು ಹುಲುಕಡಿನಾಡ ಪ್ರಭುವಾಗಿದ್ದಂತೆ ಪುಟ್ಟಯ್ಯಗ್ರಹಾರ ಶಾಸನ ಹೇಳುತ್ತದೆ... ಮಹಾರಾಯರ ಕೊಮಾರ ಸುರ್ರೆಯ ವಿದ್ಯಾವಪ್ಪನಾಯಕರು ತಿಪ್ಪೂರು ಸೀಮೆಯ, ರಾಜ್ಯಂಗೈವಲ್ಲಿ ಶ್ರೀಮನ್ಮಹಾ ಹುಲುಕಡಿನಾಡ ಪ್ರಭು ಬೈಯಣ ಗಲುಡರ ಮಕ್ಕಳು ಬೈಪಗಲುಡರು ಕೊಟ್ಟ ಶಿಲಾಶಾಸನದ ಕ್ರಮವೆಂದರೆ ತಿಪ್ಪೂರು ಸ್ಥಳಕ್ಕೆ ಸಲುವ ಹೆಜ್ಜಾಜಿ ಸೀಮೆಯ ಹಳ್ಳಿಗೆ ಮೂಡಲು ತೆಂಕಲು ಸೀಮೆಯಲ್ಲಿ ಬೈರಾಪುರವೆಂಬ ೬ ಪುರವನ್ನು ಮಕರ ಸಂಕ್ರಾಂತಿಯಂದು ತಿಪ್ಪರಸಯ್ಯ ಎಂಬುವವನಿಗೆ ಹೆಜ್ಜಾಜಿ ಸೀಮೆಯ ಅಗ್ರಹಾರವನ್ನು ದಾನ ನೀಡುತ್ತಾನೆ. ಇದು ಒಂದು ದಾನವನ್ನು ನೀಡುವಂತ ವಿಷಯ ಪ್ರಸ್ತಾಪಿಸುವುದರ ಜೊತೆಗೆ ಅವರ ವಂಶಾವಳಿಯನ್ನು ಕೊಡುವುದರಿಂದ ಅತಿ ಮಹತ್ವವನ್ನು ತಿಳಿಯಲು ಸಹಕಾರಿಯಾದುದು.

ಹೊಯ್ಸಳರ ಕಾಲಕ್ಕೆ ಸೇರಿದ ಮತ್ತೊಂದು ಶಾಸನ ಕಾಡನೂರು ಗ್ರಾಮದಲ್ಲಿದೆ. ಕ್ರಿ.ಶ. ೧೪೫೧ರ[೧೨೭] ಕಾಲಕ್ಕೆ ಸೇರಿದ ಈ ಶಾಸನದಲ್ಲಿ ಹುಲುಕಡಿನಾಡಿನ ಅರಸರ ಕೈತಪ್ಪಿ ಹೋಗಿ,

ಗಂಡರಗೊಳ್ಳೀ ದಳವಾಯಿ ಸೊಣ್ಣಪ್ಪನಾಯಕರ ಮಕ್ಕಳು ನಾಗಪ್ಪನಾಯಕನ ಕೈ ಸೇರಿದಂತೆ ತಿಳಿಯುತ್ತದೆ. ಈ ಅವಧಿಯಲ್ಲಿ ವಿಜಯನಗರ ಅರಸ ಅಚ್ಚುತರಾಯನ ಆಳ್ವಿಕೆ ನಡೆಯುತ್ತಿದ್ದಾಗ ಇವರ ಅಧೀನದಲ್ಲಿದ್ದ ನಾಡಪ್ರಭುಗಳಿಂದ ದಳವಾಯಿಗಳಿಗೆ ಆಳ್ವಿಕೆ ಹಸ್ತಾಂತರಗೊಂಡಿರಬೇಕು. ಅಲ್ಲದೆ ಗಂಡುಸಂತಾನವಿಲ್ಲದ ಕಾರಣ ಹುಲುಕಡಿನಾಡು ದಳವಾಯಿಗಳ ಕೈಗೆ ಹಸ್ತಾಂತರಗೊಂಡಿರಬಹುದು. ಶಾಸನಗಳ ಆಧಾರದಲ್ಲಿ ಈ ದಳವಾಯಿಗಳನ್ನು ತುಂಗಭದ್ರಾ ತೀರದ ವಿರೂಪಾಕ್ಷದೇವರ ಸನ್ನಿಧಿಯಲ್ಲಿ ಅಚ್ಚುತದೇವ ರಾಯರಿಗೆ ಪುಣ್ಯವಾಗಲೆಂದು ಗ್ರಾಮದಾನವನ್ನು ನೀಡುತ್ತಾರೆ. ಈ ಗಂಡ್ರಗೊಳ್ಳೀ ದಳವಾಯಿಗಳ ಕಾಲದಲ್ಲೇ ನಿರ್ಮಾಣವಾದ ಸುಂದರವಾದ ದೇವಾಲಯ ಕಾಡನೂರು ಚನ್ನಕೇಶವ ದೇವಲಯಕ್ಕೆ ತೋಟ ತುಡಿಕೆಯನ್ನು ದತ್ತಿಯಾಗಿ ನೀಡಿರುವುದು ಕಂಡುಬರುತ್ತದೆ.

ದಾನ ಧರ್ಮಗಳಿಗೆ ಸಮಾಜ ಮನ್ನಣೆ ನೀಡುವುದು ನಮ್ಮ ಸಂಸ್ಕೃತಿಗೆ ಹಿಡಿದ ಕೈಗನ್ನಡಿಯಿದ್ದಂತೆ ಗಂಡ್ರಗೊಳ್ಳೀ ದಳವಾಯಿಗಳ ಆಳ್ವಿಕೆಯನ್ನು ತಿಳಿಸುವ ಮತ್ತೊಂದು ಶಿಲಾಶಾಸನ ೧೫೪೧ರ ಶಾಸನ[೧೨೮] ವೀರನರಸಿಂಗ ದೇವರಾಯನ ಕಾಲಕ್ಕೆ ಸೇರಿದೆ. ದಳವಾಯಿ ಬೈರಪ್ಪನಾಯಕನು ಶಿವಗಂಗೆಯ ಮೇಲಣ ಸಿಂಹಾಸನ ಮಲೆಯಕಾಂತ ದೇವರಿಗೆ ಗ್ರಾಮದಾನ ನೀಡುವುದನ್ನು ಗಂಡ್ರಗೊಳ್ಳೀಪುರದಲ್ಲಿನ ಮತ್ತೊಂದು ಶಾಸನ ಸಮರ್ಥನೆ ನೀಡುತ್ತದೆ. ಈ ದಳವಾಯಿಗಳ ಹೆಸರಿನ ಮುಂದಿರುವ ಗಂಡರಗೊಳಿ ಎಂಬುದು ಅವರ ಶೌರ್ಯತನಕ್ಕೆ ಬಂದಿರಬಹುದಾದ ಬಿರುದಾಗಿರಬೇಕು. ಅಲ್ಲದೆ ಗಂಡ್ರಗೊಳ್ಳೀಪುರ ಎಂಬ ಗ್ರಾಮ ಇಂದಿಗೂ ಅಸ್ಥಿತ್ವದಲ್ಲಿದೆ. ಇವರ ಕಾಲದ ನಂತರ ಹುಲುಕಡಿ ನಾಡಿನ ಪ್ರಸ್ತಾಪ ಎಲ್ಲೂ ದೊರೆಯುವುದಿಲ್ಲ. ಹಾಗಾಗಿ ಈ ನಾಡು ವಿಜಯನಗರ ಅರಸರ ಕಾಲದ ಅವಧಿಯಲ್ಲಿಯೇ ಪತನಗೊಂಡಿತೆಂದು ಹೇಳಬಹುದು.

ಹುಲುಕಡಿನಾಡಿನಲ್ಲಿ ದೊರೆತಿರುವ ಶಾಸನಗಳಲ್ಲಿ ಬಹುತೇಕವು ದಾನಶಾಸನಗಳೆಂಬುದಷ್ಟೆ ಸ್ಪಷ್ಟವಾಗಿದೆ. ಕರ್ನಾಟಕದಲ್ಲಿ ದೊರೆತಿರುವ ಅಧಿಕ ಸಂಖ್ಯೆಯ ಶಾಸನಗಳು ದಾನ ಶಾಸನಗಳಾದುದರಿಂದ ಕರ್ನಾಟಕದ ಸಂಸ್ಕೃತಿಯ ಒಂದು ಪ್ರಧಾನವಾದ ಅಂಶವನ್ನು ಎತ್ತಿ ತೋರಿಸುತ್ತದೆ. ಜೀವನದ ಮೌಲ್ಯಗಳಲ್ಲಿ ಧರ್ಮಕ್ಕೆ ಪ್ರಥಮ ಸ್ಥಾನವನಿತ್ತ ಧಾರ್ಮಿಕ ಸಂಸ್ಕೃತಿಯ ಸ್ವರೂಪ ಈ ಶಾಸನಗಳಲ್ಲಿ ಪ್ರತಿಬಿಂಬಿತವಾಗಿದೆ.

ನ್ಯಾಯ ಪರಿಪಾಲನೆಗಾಗಿ ಪಂಚಾಯಿತಿ ಕಟ್ಟೆಗಳನ್ನು, ಕೃಷಿ ಪರಿಪಾಲನೆಗೆ ಆದ್ಯತೆ ನೀಡಿ ಗುಡಿ ಗೋಪುರಗಳನ್ನು ಕಟ್ಟಿಸಿ ಹೆಚ್ಚಿನ ಕೊಡುಗೆಯನ್ನು ನೀಡಿದ್ದಾರೆ. ಮೂಲತಃ ಶೈವ ಪಂಥದವರಾದ ನಾಡ ಪ್ರಭುಗಳು ಶಿವನ ಅರಾಧಕರು ಮತ್ತು ಶಕ್ತಿ ದೇವತೆಗಳ ಆರಾಧಕರು. ಇವರ ಅವಧಿಯಲ್ಲೇ ನಿರ್ಮಾಣಗೊಂಡ ಸೋಮಶೆಟ್ಟಿಹಳ್ಳಿಯ ಮಾರಮ್ಮ ದೇವಾಲಯವನ್ನು ಸಾಕ್ಷೀಕರಿಸಬಹುದು.

ಹುಲುಕಡಿನಾಡ ಪ್ರಭುಗಳು ಕಲಾ ನೈಪುಣ್ಯಕ್ಕೆ ಮಹತ್ವ ನೀಡಿದ್ದರು ಎಂಬುದಕ್ಕೆ ಸಾಕ್ಷಿಯಾಗಿ ಮುಳಬಾಗಿಲು ಜಾಲಿಗೆರೆ, ನೇರಳಘಟ್ಟ ಗ್ರಾಮಗಳ ಕೆಲವು ಮನೆಗಳಲ್ಲಿ ದೇವಾಲಯಗಳಲ್ಲಿ ಕಲಾತ್ಮಕ ಸ್ತಂಭಗಳನ್ನು ಇಂದಿಗೂ ಕಾಣಬಹುದು.

ಕ್ರಿ.ಶ.೧೫೨೦ರ ನಂತರ ಮೊಘಲರ ರಣದುಲ್ಲಾಖಾನ್ ನ ಆಳ್ವಿಕೆಯಲ್ಲಿ ಇವರ ಆಳ್ವಿಕೆಯು ಕೊನೆಗೊಂಡಿತು. ಪದೇ ಪದೇ ದಾಳಿಯ ಪರಿಣಾಮವಾಗಿ ಈತನ ಹಿಂಸೆಯ ಆಳ್ವಿಕೆಯನ್ನು ತಡೆಯಲಾರದೆ, ಗೌಡ ಪ್ರಭುಗಳ ಪ್ರಾಬಲ್ಯ ಕುಸಿದು ಹೋಯಿತು. ೧೫೫೮ರ ವೇಳೆಗೆ ಗೌಡ ಪ್ರಭುಗಳು ಪುಂಗನೂರು ಸಂಸ್ಥಾನದ ಕಡೆಗೆ ಹೋದರು. ಇಲ್ಲಿಗೆ ಗೌಡ ಪ್ರಭುಗಳ ಆಳ್ವಿಕೆ ಕೊನೆಗೊಂಡಿತು. ಈ ಹುಲುಕಡಿ ನಾಡನಲ್ಲಿ ದೊರೆತ ಶಾಸನಗಳು ಮುಂದೆ ಸಾಂಸ್ಕೃತಿಕ ಅಧ್ಯಯನಕ್ಕೆ ಸಹಕಾರಿಯಾಗಿವೆ.

### ೩.೯.೩. ಎಲಹಂಕ ನಾಡು

ದಕ್ಷಿಣ ಭಾರತದ ಇತಿಹಾಸದಲ್ಲಿ ೧೩೩೬ರಲ್ಲಿ ಉದಯವಾದ ವಿಜಯನಗರ ಆಳ್ವಿಕೆಯು ವಿಶಿಷ್ಟತೆಯನ್ನು ಪಡೆದಿದೆ. ದಕ್ಷಿಣಭಾಗದ ನಾಲ್ಕು ಭಾಷಾ ಪ್ರದೇಶಗಳ ಬಹುಭಾಗವನ್ನು ಒಳಗೊಂಡಿದ್ದ ವಿಜಯನಗರ ಸಾಮ್ರಾಜ್ಯದಲ್ಲಿ ಆಡಳಿತದ ಅನುಕೂಲಕ್ಕಾಗಿ ಆಡಳಿತ ವಿಭಾಗಕ್ಕೆ ಕೆಲವು ಹಂತಗಳನ್ನು ರೂಪಿಸಿಕೊಂಡಿದ್ದರು ಎಂದು ಹೇಳಬಹುದು. ನಮ್ಮ ಕರ್ನಾಟಕ ಪ್ರದೇಶವನ್ನು ಆಳಿದ ಗಂಗ ಮತ್ತು ಚಾಲುಕ್ಯರ ಕಾಲಾವಧಿಯಲ್ಲಿ ಪ್ರಚಲಿತಕ್ಕೆ ಬಂದ ಆಡಳಿತ ವಿಭಾಗಗಳು ಸಂಖ್ಯೆಗಳಿಂದ ಕೂಡಿದ್ದವು. ಇದು ಕರ್ನಾಟಕದ ಅರಸು ಮನೆತನಗಳ ಒಂದು ವಿಶೇಷ. ಈ ಅವಧಿಯಲ್ಲಿಯೇ ಸಾಮ್ರಾಜ್ಯವಾಳಿದ ಹೊಯ್ಸಳರು ಬಹು ಭಿನ್ನವಾಗಿದ್ದರು. ಇದಕ್ಕೆ ಮೂಲ ಕಾರಣ ಅವರ ವಿಸ್ತಾರವಾದ ಸಾಮ್ರಾಜ್ಯ ಅವರ ಸಾಮ್ರಾಜ್ಯ ಕಾವೇರಿಯಿಂದ ದಕ್ಷಿಣದ ತಮಿಳು ಪ್ರಾಂತ್ಯದ ಬಹಳಷ್ಟು ಪ್ರದೇಶಗಳನ್ನು ಒಳಗೊಂಡಿತ್ತು. ಇವರು ಹೆಚ್ಚಿನ ಕಾಲಾವಧಿಗೆ ಆಯಾ ಪ್ರದೇಶದಲ್ಲಿದ್ದ ಆಡಳಿತ ವಿಭಾಗ ಕ್ರಮಗಳನ್ನೇ ಹೆಚ್ಚಿನ ಬದಲಾವಣೆಗೊಳಪಡಿಸದೆ ಉಳಿಸಿಕೊಂಡಿದ್ದುದೇ ಆಗಿದೆ. ಹಾಗೂ ಹೊಯ್ಸಳರ ಇಡೀ ಸಾಮ್ರಾಜ್ಯದಲ್ಲಿ ಆಡಳಿತ ವ್ಯವಸ್ಥೆಯಲ್ಲಿ ಏಕರೂಪತೆಯ ಕೊರತೆಯಾಯಿತು. ಇವರ ನಂತರ ಬಂದ ವಿಜಯನಗರ ಅರಸರು ಅಳ್ವಿಕೆ ಮಾಡತೊಡಗಿದಾಗ ಹಿಂದೆ ಹೊಯ್ಸಳರ ಪ್ರದೇಶಗಳಲ್ಲಿ ಪ್ರಚಲಿತವಿದ್ದ ಬೇರೆ ಬೇರೆ ವಿಧವಾದ ಆಡಳಿತ ವಿಭಾಗ ಕ್ರಮಗಳನ್ನು ಕ್ರೋಢೀಕರಿಸಿ, ಒಂದು ಸಾಮಾನ್ಯೀಕರಣಗೊಂಡ ಇಡೀ ಸಾಮ್ರಾಜ್ಯಕ್ಕೆ ಸೂಕ್ತವೆನಿಸಬಹುದಾದ ಒಂದು ಪದ್ಧತಿಯನ್ನು ಜಾರಿಗೆ ತರಬೇಕಾದ ಅವಶ್ಯಕತೆಯಿತ್ತು. ಈ ಒಂದು ಹಿನ್ನೆಲೆಯಲ್ಲಿಯೇ ಮೂಡಿಬಂದ ಹೊಯ್ಸಳರು ಮತ್ತು ವಿಜಯನಗರ ಅರಸರ ಕಾಲದ ಆಡಳಿತ ವಿಭಾಗಗಳನ್ನು ರಾಜ್ಯ, ವೇಂಠೇ, ವಳಿತ, ಚಾವಡಿ, ನಾಡು, ಸೀಮೆ, ಸ್ಥಳ ಮತ್ತು ಗ್ರಾಮ ಎಂದು ಕರೆದರು. ತಾಲ್ಲೂಕಿನ ಶಾಸನಗಳ

ಹಿನ್ನೆಲೆಯಲ್ಲಿ ಹೊಯ್ಸಳರು ಮತ್ತು ವಿಜಯನಗರ ಕಾಲದ ಆಡಳಿತ ವಿಭಾಗಗಳ ಅನುಶ್ರೇಣಿಯನ್ನು ಗುರುತಿಸುವಲ್ಲಿ ಅನೇಕ ತೊಡಕುಗಳು ಎದುರಾಗುತ್ತವೆ. ರಾಜ್ಯದ ಬದಲು ಸೀಮೆ, ಸ್ಥಳ, ನಾಡು, ವಳಿತ, ವೇಂಠೆ ಎಂಬ ಪದಗಳು ಪ್ರಯೋಗವಾಗಿವೆ. ಇಲ್ಲಿನ ಸ್ಥಳಗಳು ರಾಜ್ಯದೊಳಗಿನ ಸಣ್ಣ ವಿಭಾಗಗಳನ್ನು ಸೂಚಿಸಲು ಉಪಯೋಗಿಸುತ್ತಿದ್ದಿರಬಹುದು. ಪ್ರದೇಶಗಳು ಮತ್ತು ರಾಜವಂಶಗಳ ಬೇರೆ ಬೇರೆ ಕಾಲಗಳ ಆಡಳಿತ ವಿಭಾಗಗಳ ಹಂತಗಳು ಹಲವು ಗೊಂದಲಗಳಿಗೆ ಎಡೆಮಾಡಿಕೊಡುವುದರಲ್ಲಿ ಸಂದೇಹವಿಲ್ಲ. ವಿಜಯನಗರ ಕಾಲದ ಆಡಳಿತ ವಿಭಾಗಗಳ ಹಂತಗಳನ್ನು ದೇಶ/ರಾಜ್ಯ, ಚಾವಡಿ-ಮಾಗಣಿ-ವಳಿತ-ವೇಂಠೆ, ನಾಡು-ಸೀಮೆ-ಸ್ಥಳ-ಗ್ರಾಮ ಎಂದು ಕರೆಯಬಹುದು. ಇವುಗಳ ಜೊತೆಗೆ ಪಟ್ಟಣ, ಅಗ್ರಹಾರ ಮತ್ತು ವ್ರಿತ್ತಿಯಾಗಿ ನೀಡಲಾಗಿದ್ದ ಸ್ಥಳಗಳು ಸ್ವಾಯಕ್ತ ಆಡಳಿತ ಘಟಕಗಳಾಗಿದ್ದವು. ವಿಜಯನಗರ ಕಾಲದ, ಬೆಂಗಳೂರು ಜಿಲ್ಲಾ ಪ್ರದೇಶದಲ್ಲಿನ ಅದರಲ್ಲೂ ದೊಡ್ಡ ಬಳ್ಳಾಪುರ ತಾಲ್ಲೂಕಿನ ಶಾಸನಗಳಲ್ಲಿ ದಾಖಲಾಗಿರುವ ಆಡಳಿತ ವಿಭಾಗಗಳನ್ನು ಅವಲೋಕಿಸಿದರೆ, ರಾಜ್ಯ, ನಾಡು, ಸೀಮೆ, ಸ್ಥಳ, ಗ್ರಾಮಗಳ ಉಲ್ಲೇಖಗಳು ನಮ್ಮ ಅಧ್ಯಯನಕ್ಕೆ ಪೂರಕ ಮಾಹಿತಿ ಒದಗಿಸುತ್ತವೆ. ಈ ಹೊಯ್ಸಳ ಅರಸರು ಚೋಳ, ಚೇರ ಮತ್ತು ಪಾಂಡ್ಯ ರಾಜ್ಯಗಳ ಅಧಿಕಾರವನ್ನು ಹೊಂದಿದ್ದರು ಎಂಬುದಕ್ಕೆ ಹಲವಾರು ಶಾಸನಗಳು ನಿದರ್ಶನಗಳಾಗಿವೆ. ಇದಕ್ಕೆ ಕ್ರಿ.ಶ.೧೩೧೭ರ ದೊಡ್ಡತುಮಕೂರು ಶಾಸನ ಉತ್ತಮ ನಿದರ್ಶನವಾಗಿದೆ.[೧೯] "ಚೋಳುರಾಜ್ಯ ಸ್ಥಾಪನಾಚಾರಿಯ ಪಾಂಡ್ಯ ರಾಜ್ಯ ಸಮುಧರಣ ಹೊಇಸಣ ಭುಜಬಳನಿಸ್ಸಂಕ ಪ್ರತಾಪ ಚಕ್ರವರ್ತಿ ಶ್ರೀ ವೀರಬಲ್ಲಾಳ" ಎಂಬ ವಿವರವು ಚೋಳ ಮತ್ತು ಪಾಂಡ್ಯ ರಾಜ್ಯಗಳ ಅಧಿಕಾರವನ್ನು ಹೊಂದಿದ್ದರು ಎಂಬುದನ್ನು ದೃಢಪಡಿಸುತ್ತದೆ.

ಹೊಯಿಸಣ ಅಥವಾ ಪೊಯಿಸಣನಾಡು, ಹೊಇಸಣರಾಜ್ಯ ಎಂದು ಕರೆಯಲ್ಪಟ್ಟ ಹೊಯ್ಸಳ ದೇಶದಲ್ಲಿ ಬೆಂಗಳೂರು ಜಿಲ್ಲೆಯ ಚನ್ನಪಟ್ಟಣ, ಮಾಗಡಿ, ರಾಮನಗರ, ದೊಡ್ಡಬಳ್ಳಾಪುರಗಳು ಭಾಗವಾಗಿದ್ದವು. ಅಂದರೆ ವಿಜಯನಗರ ಕಾಲದ ಆಡಳಿತ ವಿಭಾಗಗಳಲ್ಲಿ ಹೊಯ್ಸಳರಾಜ್ಯ ವಿಸ್ತಾರವಾಗಿದ್ದಿತು. ವಿಜಯನಗರದ ಸ್ಥಾಪನೆಗೆ ಮೊದಲು ಹೊಯ್ಸಳರ ಆಳ್ವಿಕೆಯಲ್ಲಿದ್ದ ಕರ್ನಾಟಕದ ಹಾಗೂ ತಮಿಳುನಾಡಿನ ಹಲವು ಭಾಗಗಳು ರಾಜ್ಯ ಅಥವಾ ದೇಶದಲ್ಲಿ ಸಮಾವೇಶಗೊಂಡಿದ್ದವು. ಶಾಸನೋಕ್ತ ರಾಜಘಟ್ಟ ಗ್ರಾಮವನ್ನು ಇಲ್ಲಿ ನಿದರ್ಶನವಾಗಿ ನೀಡಬಹುದು.

ಶಾಸನಗಳಲ್ಲಿ ರಾಜ್ಯದ ನಂತರ ನಾಡು ಎಂಬುದರ ಮೇಲಿನ ಸ್ತರದಲ್ಲಿ 'ಚಾವಡಿ' ಎಂಬ ಪದ ಪ್ರಯೋಗ ವಿಜಯನಗರ ಕಾಲದ ತಮಿಳು ಶಾಸನಗಳಲ್ಲಿ ಇದನ್ನು ಕುಟ್ರಂಗೆ ಅಥವಾ ನಾಡು ಪದದ ಸಮಾನಾರ್ಥದಲ್ಲಿ ಉಶಾವಾಡಿ ಅಥವಾ ಸಾವಡಿ ಅಥವಾ ಚಾವಡಿ ಎಂದು ಬಳಸಿರುವ ಬಗ್ಗೆ ಟಿ.ವಿ.ಮಹಾಲಿಂಗಂ ಅವರು ತಮ್ಮ ಗ್ರಂಥವಾದ South Indian polityಯಲ್ಲಿ ಹೇಳುತ್ತಾರೆ.

ತಾಲ್ಲೂಕಿನ ಯಾವ ಶಾಸನಗಳಲ್ಲೂ ಈ ಬಗೆಯ ಆಡಳಿತ ಕ್ರಮದ ಹಂತ ಕಾಣಲಾರದು. ವಿಜಯನಗರ ಕಾಲದ ಕೆಲವು ಶಾಸನಗಳಲ್ಲಿ ಅಪರೂಪದ ಅಥವಾ ಅಷ್ಟಾಗಿ ಕಾಣದ 'ಪಟ್ಟಡಿ' ಎಂಬ ಆಡಳಿತ ವಿಭಾಗ ಸೂಚಕ ಪದ ಬೆಂಗಳೂರು ಕೋಲಾರ, ಹೊಸಕೋಟೆ, ತಾಲ್ಲೂಕಿನ ಶಾಸನಗಳಲ್ಲಿ ನಾಡು ಅಥವಾ ಸೀಮೆಯ ಕೆಳಸ್ಥರದಲ್ಲಿ ಅಂದರೆ ಸ್ಥಳದ ಸಮಾನಾಂತರದಲ್ಲಿ ಬಳಕೆಯಾಗಿದೆ. ಇನ್ನುಳಿದ ವೇಂಠೆ, ವಳಿತಗಳು, ನಾಡು ಅಥವಾ ಸೀಮೆಗಳೊಳಗೆ ಅಂತರ್ಗತ ವಾಗಿಸುತ್ತವೆ ಎಂದು ಹೇಳಬಹುದು. ನಂತರದ ಸ್ಥಾನದಲ್ಲಿ ಕೆಳಹಂತದ ಆಡಳಿತ ವಿಭಾಗಗಳಲ್ಲಿ ನಾಡು ಅಥವಾ ಸೀಮೆ ಸ್ಥಳ ಮತ್ತು ಗ್ರಾಮಗಳು ಮುಖ್ಯವಾಗುತ್ತವೆ. ತಾಲ್ಲೂಕಿನ ಶಾಸನಗಳಲ್ಲಿ 'ನಾಡು' ಎಂಬ ಪ್ರತ್ಯಯವನ್ನು ಪಡೆದಿರುವುದು ಗೋಚರಿಸುತ್ತದೆ. ಇವೆಲ್ಲ ಗಂಗ, ಚೋಳ, ಹೊಯ್ಸಳ, ವಿಜಯನಗರದ ಕಾಲದಲ್ಲಿ ಹೆಚ್ಚು ಪ್ರಚಲಿತವಿದ್ದ ನಾಡುಗಳಾಗಿರುತ್ತವೆ. ಉದಾಹರಣೆಗಾಗಿ, ಶಾಸನೋಕ್ತ ಹುಲುಕಡಿನಾಡು, ಎಲಹಂಕನಾಡು, ಮೊರಸುನಾಡು ಮುಂತಾದವು. ಈಗಾಗಲೇ ಹಿಂದೆ 'ಹುಲುಕಡಿ' ನಾಡಿನ ಬಗ್ಗೆ ವಿವರವಾಗಿ ಚರ್ಚಿಸಲಾಗಿದೆ. ಮುಂದೆ ಎಲಹಂಕ ನಾಡು, ಮೊರಸುನಾಡುಗಳನ್ನು ಚರ್ಚಿಸಲಾಗುವುದು.

ದೊಡ್ಡಬಳ್ಳಾಪುರ, ಹೊಸಕೋಟೆ, ದೇವನಹಳ್ಳಿ, ನೆಲಮಂಗಲ ತಾಲ್ಲೂಕಿನ ಅನೇಕ ಗ್ರಾಮಗಳು ಎಲಹಂಕ ನಾಡಿನಲ್ಲಿ ಬೆಂಗಳೂರು ಉತ್ತರ ತಾಲ್ಲೂಕು ಸೇರಿದಂತೆ ಬೆಂಗಳೂರಿನ ಬಹುಭಾಗವು ಎಲಹಂಕ ನಾಡಿನಲ್ಲಿ ಸೇರ್ಪಡೆಗೊಂಡಿದ್ದವು. ಎಂಬುದನ್ನು ಶಾಸನಗಳು ದೃಢಪಡಿಸುತ್ತವೆ. ಬೆಂಗಳೂರು ಜಿಲ್ಲೆಯ ಶಾಸನ ಸಂಪುಟದಲ್ಲಿ ಈ ನಾಡಿನ ಉಲ್ಲೇಖಗಳು ಸ್ಪಷ್ಟವಾಗಿ ನಮ್ಮ ಗಮನಕ್ಕೆ ಬರುತ್ತವೆ. ಮಧ್ಯಕಾಲೀನ ಬೆಂಗಳೂರು ಜಿಲ್ಲೆಯ ಇತಿಹಾಸದಲ್ಲಿ ಈ ನಾಡು ಹೆಚ್ಚು ಪ್ರಚಲಿತಕ್ಕೆ ಬಂದಿತ್ತು. ಈ ಎಲಹಂಕ ನಾಡು ಚೋಳರ ಆಳ್ವಿಕೆಯ ಕಾಲದಲ್ಲಿ ರೂಪತಾಳಿರಬಹುದು. ಈ ನಾಡಿನ ಮುಖ್ಯ ಸ್ಥಳ ಬೆಂಗಳೂರು ಉತ್ತರ ತಾಲ್ಲೂಕಿನ ಯಲಹಂಕ ಎಂಬ ಊರು. ಇದು ದೊಡ್ಡಬಳ್ಳಾಪುರ ಕೇಂದ್ರಕ್ಕೆ ಇಪ್ಪತ್ತೈದು ಕಿ.ಮೀ. ದೂರದಲ್ಲಿದೆ. ಬೆಂಗಳೂರಿನಿಂದ ಸುಮಾರು ಹದಿನೈದು ಕಿ.ಮೀ.ದೂರದಲ್ಲಿದೆ. ಈ ನಾಡಿನ ಹೆಸರನ್ನು ಶಾಸನಗಳಲ್ಲಿ ಎಲಹಕ,[೧೩೦] ಎಲೆಹಕ್ಕ,[೧೩೧] ಎಲಹಂಕ,[೧೩೨] ಎಲಹಕ್ಕನಾಡು,[೧೩೩] ಎಲಹಂಕನಾಡು[೧೩೪] ಎಂಬುವುಗಳು ತಾಲ್ಲೂಕಿನ ಶಾಸನಗಳಲ್ಲಿ ಉಲ್ಲೇಖ ಗೊಂಡಿವೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಬೇರೆ ಬೇರೆ ತಾಲ್ಲೂಕುಗಳಲ್ಲಿನ ಶಾಸನಗಳಲ್ಲೂ ಈ ನಾಡಿನ ಬಗ್ಗೆ ನಿದರ್ಶನಗಳಿವೆ. ಉದಾಹರಣೆಗೆ ಎಲವಕ,[೧೩೫] ಎಲಹಕ್ಕ,[೧೩೬] ಯಲಹಕ್ಕ,[೧೩೭] ಯೆಲವಕ,[೧೩೮] ಯೆಲಹಕ್ಕ,[೧೩೯] ಎಲಹ್ಕ,[೧೪೦] ಯಲಹಂಕ,[೧೪೧] ಯಲವಂಕ[೧೪೨] ಎಂದು ಕನ್ನಡದಲ್ಲಿ ಬಳಕೆಯಾಗಿದೆ. ದೇವನಹಳ್ಳೀ ತಾಲ್ಲೂಕಿನ ಗಂಗವಾರದ ಒಂದು ಶಾಸನದಲ್ಲಿ 'ಇಲೈಪಾಕ್ಕ'[೧೪೩] ಎಂದು ತಮಿಳು ಭಾಷೆಯಲ್ಲಿ ಕರೆದಿರುವುದನ್ನು ನೋಡಬಹುದು. ಇದು ಎಲಹಕ್ಕದ

ತಮಿಳೀಕರಣಗೊಂಡ ಸಾದೃಶರೂಪ ಎಂದು ಊಹಿಸಬಹುದು. ಈ ನಾಡನ್ನು ಅಥವಾ ಊರಿನ ಹೆಸರನ್ನು ಹೆಸರಿಸುತ್ತಾ ಗ್ರಾಮಗಳು ಇಂದಿಗೂ ಅಸ್ತಿತ್ವದಲ್ಲಿದ್ದು ಅವುಗಳನ್ನು ಗುರುತಿಸಬಹುದಾಗಿದೆ.

### ೩.೯.೪. ಎಲಹಂಕ ಪದ ನಿಷ್ಪತ್ತಿ

ಎಲಹಂಕ ಹೆಸರಿನ ಬಗ್ಗೆಯಾಗಲಿ, ಅದರ ಪ್ರಾಚೀನತೆಯ ಬಗ್ಗೆಯಾಗಲಿ, ಐತಿಹ್ಯಗಳಾಗಲಿ, ಸ್ಥಳಪುರಾಣಗಳಾಗಲಿ, ಇಲ್ಲವೆಂದು ಹೇಳಬಹುದು. ಶಾಸನಗಳಲ್ಲಿ ಎಲಹಕ್ಕ, ಎಲವಕ, ಎಲವಕ ಎಲಹಂಕ ಪದಗಳು ಪ್ರಯೋಗವಾಗಿರುವುದರಿಂದ ಈ ಪದಗಳು ಎಲವ+ಹಕ್ಕ ಅಥವಾ ಎಲವ+ಹಕ್ಕೆಯಿಂದ ಕೂಡಿ ಎಲವಹಕ್ಕ, ಅಥವಾ ಎಲವಹಕ್ಕೆ, ಎಂದಾಗಿ ನಂತರ ಎಲವ್ವಕ > ಎಲಹ್ವಕ್ಕ > ಎಲವ್ವಂಕ > ಎಲಹಂಕ > ಯಲಹಂಕ ಎಂದು ನಿಷ್ಪತ್ತಿ ಹೊಂದಿರಬೇಕು. ಪದದ ಅರ್ಥದ ಹಿನ್ನೆಲೆಯಲ್ಲಿ ನೋಡಿದಾಗ ಎಲವ ಎಂದರೆ ಬೂರುಗದ ಮರ ಅಥವಾ ಶಾಲ್ಮಲೀ ವೃಕ್ಷ, ಹಕ್ಕೆ ಎಂದರೆ ವಿಶ್ರಾಂತಿ ಸ್ಥಾನ, ಹಟ್ಟಿ, ಆಶ್ರಯ ಎಂದರ್ಥಗಳು ಬರುತ್ತವೆ.

ಇಲ್ಲಿನ ಹಕ್ಕ ಎಂಬ ಪದವು ಪಕ್ಕ ಎಂಬರ್ಥದಲ್ಲಿ ಪ್ರಯೋಗವಾಗಿರಲೂಬಹುದು. ಪಕ್ಕ-ಪಕ್ಕ ಎಂಬ ಜೋಡುಪದ ಹಕ್ಕ-ಪಕ್ಕವಾಗಿರಲು ಏಕೆ ಸಾಧ್ಯವಿಲ್ಲ. ಈ ಪದ ರೂಢಿಗತವಾಗಿರುವ ಅಕ್ಕ-ಪಕ್ಕವೂ ಆಗಿರುವುದು ಸಾಧ್ಯತೆಯಿದೆ. ಒಟ್ಟಿನಲ್ಲಿ ಹಕ್ಕ ಪದ ಎಲವ+ಹಕ್ಕ ಸೇರಿ ಎಲವ್ವಕ > ಎಲಹಕ > ಎಲವಕ > ಎಲವಂಕ ಎಂಬ ರೂಪ ತಾಳಿರಬಹುದು. ಡಾ.ಪಿ.ವಿ.ಕೃಷ್ಣಮೂರ್ತಿಯವರ ಬೂರುಗದ ಮರದ ಸಾಮೀಪ್ಯದ ಹಿನ್ನೆಲೆಯಲ್ಲಿಯೇ ಈ ಹೆಸರು ಹುಟ್ಟಿರಬೇಕೆಂದು ಹೇಳಿದ್ದಾರೆ.

ತಾಲ್ಲೂಕಿನ ಶಾಸನಗಳಲ್ಲಿ ಅದರಲ್ಲೂ ಹೊಯ್ಸಳರ ಕಾಲದ ಶಾಸನಗಳ್ಲಲಿ ಅನೇಕ ಸಾರಿ ಈ ನಾಡಿನ ಉಲ್ಲೇಖಗಳು ದೊರೆಯುತ್ತವೆ. ಈ ನಾಡು ಚೋಳರ ಕಾಲದಲ್ಲೇ ರೂಪಗೊಂಡಿರಬೇಕೆಂದು ಊಹಿಸಲು ಅಥವಾ ಹೇಳಲು ಸಾಧ್ಯವಿದೆ. ಇದಕ್ಕೆ ಕಾರಣ ಚೋಳರು ರೂಪಿಸಿದ ಆಡಳಿತ ವಿಭಾಗಗಳನ್ನು ಹೊಯ್ಸಳರು ಬದಲಾವಣೆಯಿಲ್ಲದೆ ಬಳಕೆಯಲ್ಲಿಟ್ಟು ಕೊಂಡಿದ್ದರಿಂದಲೇ ಹಾಗೆಯೇ ಮುಂದುವರಿದಿವೆ. ಈ ನಾಡನ್ನು ಹೆಸರಿಸುವ ಬಹುಭಾಗ ಶಾಸನಗಳೆಲ್ಲವೂ ಹೊಯ್ಸಳರ ಕಾಲದಲ್ಲಿ ರಚನೆಯಾದವು. ಕ್ರಿ.ಶ.೧೨೬೭ರ ದೊಡ್ಡ ಬಳ್ಳಾಪುರದ ಕೋಟೆ ಶಾಸನದಲ್ಲಿ[೧೪೪] ಹೊಯ್ಸಳ ಚಕ್ರವರ್ತಿ ವೀರನರಸಿಂಹದೇವನು ರಾಜ್ಯ ಆಳುತ್ತಿದ್ದಾಗ "ಶ್ರೀ ಮನ್ಮಹಾಮಂಡಲೇಶ್ವರಂ ತ್ರಿಭುವನಮಲ್ಲ ನಂದಗಿರಿನಾಥ ಭಂಗಿಕುಲ ಕಮಳವಿಕಸಿತ ದಿವಾಕರಂ ಸಿತಗರಗಂಡ ಸೆಣಸುವರ ಗಂಡ ವೈರಿ ವೃಷಭಶಾರ್ದೂಳ ಅಂಣನಂಕಕಾರ ದೇಚಿದೇವರಸರು ಎಲಹಕ ನೆಲೆವೀಡಿನೊಳು ಸುಖಸಂಕಥಾವಿನೋದದಿಂದ" ರಾಜ್ಯಭಾರ ಮಾಡುತ್ತಿರುವುದು ತಿಳಿಯುತ್ತದೆ. ಇದರಿಂದ ಎಲಹಂಕವು ಒಂದು ನಾಡಿನ ಪ್ರಮುಖ ಕೇಂದ್ರಸ್ಥಳವಾಗಿ ಮತ್ತು ಹೊಯ್ಸಳ ಮಾಂಡಲಿಕರ ನೆಲೆವೀಡು ಆಗಿದ್ದಿತು ಎಂಬುದು ನಮಗೆ ಸ್ಪಷ್ಟವಾಗುತ್ತದೆ.

ಎಲಹಂಕ ನಾಡು ರಾಜೇಂದ್ರ ಚೋಳ ಎಳನಾಡಿನ ಭಾಗ ರಾಜೇಂದ್ರಚೋಳ ಎಳನಾಡು ನಿಗರಿಲಿಚೋಳ ಮಂಡಲದ ಭಾಗವೆಂಬುದನ್ನು ಬೆಂಗಳೂರು ಮತ್ತು ಹೊಸಕೋಟೆ ಶಾಸನಗಳಲ್ಲಿ ತಿಳಿದುಬರುತ್ತದೆ. ಶಾಸನೋಕ್ತ ಮೊರಸುನಾಡು ಅಥವಾ ಮುರುಕನಾಡು, ಹೊಸನಾಡು, ಹುಲುಕಡಿ ನಾಡು, ಕೈವಾರ ನಾಡು ಕುವಳಾಳನಾಡು, ಎಲವೂರ್ ನಾಡುಗಳು ಎಲಹಂಕನಾಡಿನ ಸುತ್ತಮುತ್ತಲಿದ್ದ ನಾಡುಗಳಾಗಿದ್ದವು. ಆದರೆ ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ಹೊಯ್ಸಳ ಶಾಸನಗಳಲ್ಲಿ 'ಎಲಹಂಕ ನಾಡನ್ನು ಪ್ರಸ್ತಾಪಿಸುತ್ತವೆಯೇ ವಿನಃ ಆ ನಾಡನ್ನು ಹೊಂದಿದ ವ್ಯಕ್ತಿಯ ಹೆಸರನ್ನು ಎಲ್ಲೂ ಉಲ್ಲೇಖಿಸಿಲ್ಲ.

ಈ ಎಲಹಂಕನಾಡು ರಾಜಕೀಯವಾಗಿ ಬೇರೆ ಬೇರೆ ರಾಜಮನೆತನಗಳ ಆಡಳಿತದ ವ್ಯಾಪ್ತಿಗೆ ಒಳಪಡುತ್ತಾ ಬಂದಿತು. ಹತ್ತು ಹನ್ನೊಂದನೆಯ ಶತಮಾನದಲ್ಲಿ ಚೋಳರ ರಾಜರಾಜ ಕೇಸರೀ ವರ್ಮನಾದ ರಾಜರಾಜದೇವನ ಆಡಳಿತಕ್ಕೆ ಒಳಪಟ್ಟಿತ್ತೆಂದು ಹೇಳಬಹುದು. ಈ ನಾಡು ಕ್ರಿ.ಶ.೧೨೦೦ರ ವೇಳೆಗೆ ಹೊಯ್ಸಳರ ಕೈಸೇರಿತು. ಹೊಯ್ಸಳ ದೊರೆ ವೀರನರಸಿಂಹದೇವ ಕ್ರಿ.ಶ.೧೨೬೭ರಲ್ಲಿಯೂ, ಹೊಯ್ಸಳ ವೀರರಾಮನಾಥ ಕ್ರಿ.ಶ.೧೨೮೮ರಲ್ಲಿಯೂ, ಹೊಯ್ಸಳ ವೀರಬಲ್ಲಾಳ ಕ್ರಿ.ಶ.೧೩೦೧ರ ಸುಮಾರಿನಲ್ಲಿಯೂ ಆಳ್ವಿಕೆ ನಡೆಸಿರುವುದು ಶಾಸನಗಳಿಂದ ತಿಳಿಯುತ್ತದೆ.[೧೪೫] ಇವರ ಸಾಮ್ರಾಜ್ಯದ ಆಳ್ವಿಕೆ ಕ್ರಿ.ಶ.೧೩೪೨ರವರೆಗೂ ಮುಂದುವರಿದಿರುತ್ತದೆ. ಆಗಾಗಲೇ ವಿಜಯನಗರ ಸಾಮ್ರಾಜ್ಯ ಅಸ್ತಿತ್ವಕ್ಕೆ ಬಂದು ಆರು ವರ್ಷಗಳೇ ಕಳೆದಿದ್ದವು.

ದೇವನಹಳ್ಳಿ ತಾಲ್ಲೂಕಿನ ಕಟಿಗೇನಹಳ್ಳಿ ಶಾಸನವು ಎಲಹಂಕನಾಡು ವಿಜಯನಗರ ದೊರೆಗಳ ಆಡಳಿತಕ್ಕೆ ಒಳಪಟ್ಟಿತ್ತೆಂದು ಹೇಳುತ್ತದೆ.[೧೪೬] ಈ ನಾಡನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡಿದ್ದ ವಿಜಯನಗರ ಅರಸುಗಳೆಂದರೆ ಹರಿಹರ (೧೩೪೮), ಬುಕ್ಕಣ್ಣ(೧೩೬೫-೧೩೬೭) ಮತ್ತು ಕಂಪ ಒಡೆಯ(೧೩೬೪) - ಈತ ಬುಕ್ಕಣ್ಣನ ಒಬ್ಬ ಮಗ, ಕಾಮೆಯನಾಯಕ (೧೩೬೪) ಈತ ಬುಕ್ಕಣ್ಣನ ಇನ್ನೊಬ್ಬ ಮಗ, ಹರಿಯಪ್ಪ ಒಡೆಯ (೧೩೮೬), ದೇವರಾಯ(೧೪೧೦), ಅಚ್ಚುತರಾಯ (೧೫೩೨) ಇವರುಗಳು ನಾಡುಗಳನ್ನು ಹಿಡಿತದಲ್ಲಿಟ್ಟುಕೊಂಡಿದ್ದರು. ಪ್ರಭುಗೌಡುಗಳು ಎಂದು ಪ್ರಸಿದ್ಧಿ ಪಡೆದಿದ್ದ ಗೌಡ ಕುಲದವರು ಹೊಯ್ಸಳರ ಕಾಲದಿಂದಲೂ ನಾಡಿನ ಸ್ಥಳೀಯ ಆಡಳಿತಗಾರರಾಗಿದ್ದರೆಂದು ಶಾಸನ ಗಳಿಂದ ತಿಳಿಯುತ್ತದೆ. ನಾಡಗೌಡಗಳ ಆಳ್ವಿಕೆ ನಾಡಿನ ಮೇಲೆ ಅತ್ಯಂತ ಪ್ರಭಾವಶಾಲಿ ಯಾಗಿದ್ದಿತು. ನಾಡಗೌಡುಗಳ ಅಧಿಕಾರ ಎಲಹಂಕ ನಾಡಿನ ಮೇಲಷ್ಟೇ ಅಲ್ಲ ನೆರೆಹೊರೆಯ ನಾಡುಗಳಾದ ಮೊರಸುನಾಡು, ಹುಲುಕಡಿನಾಡುಗಳ ಮನ್ನೆಯರ ಮೇಲೂ ಇತ್ತು. ಕರ್ಲಮಂಗಲಂ ಶ್ರೀಕಂಠಯ್ಯನವರು ಶಾಸನಗಳು ಮತ್ತು ಸಾಹಿತ್ಯಾಧಾರಗಳನ್ನು ಆಧರಿಸಿ ನಾಡ ಪ್ರಭುಗಳ ವಂಶಾವಳಿಯನ್ನು ನೀಡಿದ್ದಾರೆ. ಬೈರೇದೇವ, ಮಾರಗೌಡ, ಕಂನಗೌಡ(೧೨೬೪-೧೩೪೨) ಜಿಯಪ್ಪಗೌಡ (ಸು.ಕ್ರಿ.ಶ.೧೩೪೨-೧೪೦೦)

ಗಿಡ್ಡಪ್ಪಗೌಡ (ಸು.ಕ್ರಿ.ಶ.೧೪೦೦-೧೪೫೦) ನಾಚಪ್ಪಗೌಡ (ಸು. ಕ್ರಿ.ಶ.೧೪೫೦-೧೫೦೦), ಕೆಂಚನಾಚಪ್ಪಗೌಡ (ಸು.ಕ್ರಿ.ಶ.೧೫೦೦-೧೫೩೧) ಹಿರಿಯ ಕೆಂಪೇಗೌಡ (ಸು.ಕ್ರಿ.ಶ.೧೫೩೧-೧೬೦೮) ಇಮ್ಮಡಿ ಕೆಂಪೇಗೌಡ (ಕ್ರಿ.ಶ.೧೫೬೭-೧೬೫೬) ಮುಮ್ಮಡಿ ಕೆಂಪೇಗೌಡ (ಕ್ರಿ.ಶ.೧೬೫೬-೧೬೮೧) ದೊಡ್ಡವೀರಪ್ಪಗೌಡ (ಕ್ರಿ.ಶ.೧೬೮೧-೧೬೯೭), ಕೆಂಪವೀರಪ್ಪಗೌಡ (ಕ್ರಿ.ಶ.೧೬೯೭-೧೭೧೬) ಇವರುಗಳು ತುಂಬ ಜನಾನುರಾಗಿಗಳಾಗಿ ಆಡಳಿತ ನಡೆಸುತ್ತಾರೆ.[೧೪೬] ಏಕಾಂಬರ ದೀಕ್ಷಿತ ವಿರಚಿತ 'ವೀರಭದ್ರವಿಜಯ', ಗುಂಬಳಾಪುರದ ಗುರುನಂಜೇಶ್ವರನ 'ಕೆಂಪೇಗೌಡನ ಜಯಪ್ರಶಸ್ತಿ' ಕೃತಿಗಳಲ್ಲಿ ಎಲಹಂಕ ನಾಡಿನ ವಂಶಾವಳಿಯಲ್ಲಿ ಹಿರಿಯ ಕೆಂಪೇಗೌಡನ ನಂತರ ಬಂದವರ ಜೀವನ ವೃತ್ತಾಂತಗಳನ್ನು ತಿಳಿಯಬಹುದು. ಇಮ್ಮಡಿ ಕೆಂಪೇಗೌಡನು 'ಚಿಕ್ಕದೊರೆ' ಎಂದು ಪ್ರಸಿದ್ಧಿಯಾಗಿದ್ದು ವಿಜಯನಗರ ಅರಸನಾದ ವೆಂಕಟಪತಿರಾಯನ ಮೆಚ್ಚಿನವನಾಗಿದ್ದನು. ಈ ಎಲಹಂಕ ನಾಡಗೌಡುಗಳು ವಿಜಯನಗರ ಅರಸರ ಆಳ್ವಿಕೆಯ ಕಾಲದಲ್ಲಿ ಹೆಚ್ಚು ಪ್ರಸಿದ್ಧಿಗೆ ಬಂದವರು. ನಾಡಗೌಡ ಪ್ರಭುಗಳು ಸಾಮಂತರು ಮಹಾಸಾಮಂತರು, ಪ್ರಧಾನರು, ಮಹಾಪ್ರಧಾನರು, ವಿಜಯನಗರ ಮತ್ತು ಹೊಯ್ಸಳ ಅರಸರಿಗೆ ಅತ್ಯಂತ ವಿಧೇಯರಾಗಿ ನಡೆದುಕೊಂಡು ಪ್ರಸಿದ್ಧರಾದವರು ಎಂದು ಹೇಳಬಹುದು. ವಿಜಯನಗರ ಅರಸರು ಮಾಡಿದ ಅನೇಕ ಯುದ್ಧಗಳಲ್ಲಿ ತಮ್ಮ ಮೊರಸು ಸೈನ್ಯದೊಂದಿಗೆ ಭಾಗವಹಿಸಿ ತಮ್ಮ ಪರಾಕ್ರಮವನ್ನು ಮೆರೆದಿರುವ ಹಲವಾರು ವಿವರಗಳು ಗೋವಿಂದ ವೈದ್ಯನ ಕಂಠೀರವ ನರಸರಾಜ ವಿಜಯ'ದಲ್ಲಿ ಮತ್ತು ತಿರುಮಲಾರ್ಯನ 'ಚಿಕ್ಕ ದೇವರಾಯ ವಂಶಾವಳಿ' ಎಂಬ ಕಾವ್ಯದಲ್ಲಿ ಉಕ್ತವಾಗಿದೆ.[೧೪೮]

### ೩.೯.೫. ಮೊರಸುನಾಡು

ದೊಡ್ಡಬಳ್ಳಾಪುರದ ಕ್ರಿ.ಶ.೧೫೩೦ರ ಅಚ್ಚುತರಾಯನ ಕಾಲದ ತಾಮ್ರ ಶಾಸನದಲ್ಲಿ[೧೪೯] 'ಮೊರಸೇನಾಡಕೇ ಸಂಸ್ಥ ಹೊಸಕೋಟಾಬ್ಯಸೀಮಗಂ" ಎಂಬ ವಿವರವಿದೆ. ಈ ನಾಡಿನ ಪ್ರಾಚೀನ ಉಲ್ಲೇಖ ಬೆಂಗಳೂರು ದಕ್ಷಿಣ ತಾಲ್ಲೂಕಿನ ವರ್ತೂರು ಗ್ರಾಮದ ಕ್ರಿ.ಶ.೮೨೦ರ ಶಾಸನದಲ್ಲೂ ಉಲ್ಲೇಖಗೊಂಡಿದೆ.[೧೫೦] ಆನೇಕಲ್ಲು ತಾಲ್ಲೂಕಿನ ಹಳೇಹಳ್ಳಿ ಗ್ರಾಮದ ಕ್ರಿ.ಶ.೧೨೪೫ರ ಚೋಳರ ಶಾಸನದಲ್ಲಿ[೧೫೧] ಈ ನಾಡನ್ನು 'ಮುರುಶುನಾಡು' ಎಂದು ಕರೆದಿದೆ. ಇವೆಲ್ಲವೂ ಚೋಳದೊರೆ ರಾಜೇಂದ್ರಚೋಳನ ಭಾಗವೆಂದು ಇದೆ. ಆನೇಕಲ್ಲು ತಾಲ್ಲೂಕಿನ ಇಗ್ಗಲೂರು ಗ್ರಾಮದ ಕ್ರಿ.ಶ.೧೩೩೦ರ ಒಂದು ಶಾಸನ ಬೆಂಗಳೂರು ದಕ್ಷಿಣ ತಾಲ್ಲೂಕಿನ ಕ್ರಿ.ಶ.೧೧೧೦ರ ಬೇಗೂರು ಗ್ರಾಮದ ಶಾಸನಗಳಲ್ಲೂ ಉಲ್ಲೇಖಗೊಂಡಿದೆ. ಇದು ಮುಡಿಗೊಂಡ ಚೋಳ ಮಂಡಲದ ಭಾಗವಾಗಿತ್ತು. ಬೆಂಗಳೂರು ದಕ್ಷಿಣ ತಾಲ್ಲೂಕಿನ ಕೆಲವು ಗ್ರಾಮಗಳು ಹೊಸಕೋಟೆ, ಆನೇಕಲ್ಲು, ಕೋಲಾರ-ದೊಡ್ಡಬಳ್ಳಾಪುರದ ಪ್ರದೇಶದ ಅನೇಕ ಗ್ರಾಮಗಳನ್ನು ಒಳಗೊಂಡಿತ್ತು.

ಕರ್ಲಮಂಗಲ ಶ್ರೀಕಂಠಯ್ಯನವರು ಸಂಪಾದಿಸಿ ಪ್ರಕಟಿಸಿರುವ 'ಕೆಂಪೇಗೌಡ ಜಯಪ್ರಶಸ್ತಿ'[೧೫೨] ಎಂಬ ಗ್ರಂಥದ ಮುನ್ನುಡಿಯಲ್ಲಿ ಮೊರಸುನಾಡಿನ ಬಗ್ಗೆ ಬರೆಯುತ್ತ "...ಕನ್ನಡ ನಾಡಿನಲ್ಲಿ ಮೊರಸುನಾಡೆಂಬ ವಿಭಾಗದಲ್ಲಿ ಹೇರಳವಾಗಿ ವಾಸಿಸುತ್ತಿದ್ದ ಇವರನ್ನು ಮೊರಸು ಒಕ್ಕಲಿಗರೆಂದು ಕರೆದುದೇ ಅಲ್ಲದೆ, ಗಂಗಡಿಕಾರರಿಗೂ ಇವರಿಗೂ ಯಾವ ಅಂತರ್ಬೇದವು ಇರುವುದಿಲ್ಲ. ಇಮ್ಮಡಿ ಕೆಂಪೇಗೌಡ ಆಳಿಕೊಂಡಿದ್ದ ಯಲಹಂಕನಾಡನ್ನು ಮೊದ ಮೊದಲಿನ ದಿನಗಳಲ್ಲಿ ಮೊರಸುನಾಡೆಂದೇ ಕರೆದಿದೆ. ದೊಡ್ಡಬಳ್ಳಾಪುರ, ಚಿಕ್ಕಬಳ್ಳಾಪುರ, ದೇವನಹಳ್ಳಿ, ಬೆಂಗಳೂರು ಹೊಸಕೋಟೆಗಳನ್ನು ಕೂಡಿಕೊಂಡಿದ್ದ ಈ ನಾಡನ್ನು ಕುರಿತು ಗಂಗರಾಜ ಮಾಧವವರ್ಮನ ನಂದಿಯ ಶಾಸನದಲ್ಲಿ ಮೊರಸನಾಡೆಂದೇ ಕರೆದಿದೆ. ಬೆಂಗಳೂರು ತಾಲ್ಲೂಕಿನ ವರ್ತೂರಿನ ಕೆರೆಕಟ್ಟೆ ಮೇಲಿರುವ ಶಾಸನವು ಇದನ್ನೇ ಉಲ್ಲೇಖಿಸುತ್ತದೆ. ಇಲ್ಲಿನ ಮೊರಸುನಾಡಿಗೂ, ಮೊರಸು ಒಕ್ಕಲಿಗರಿಗೂ ಸಂಬಂಧವಿರಬಹುದು. ಆದರೆ ಯಲಹಂಕ ನಾಡಿಗೆ ಮೊರಸು ನಾಡು ಎಂಬ ಹೆಸರಿತ್ತು ಎಂದು ಹೇಳುವುದಕ್ಕೆ ದಾಖಲೆಗಳಿಲ್ಲ.

ಮಾಧವವರ್ಮನ ನಂದಿಯ ಶಾಸನ ಮೊರಸು ನಾಡಿನ ಉಲ್ಲೇಖವನ್ನು ಮತ್ತಷ್ಟು ಪುಷ್ಟಿಕರಿಸುತ್ತದೆ. ಕ್ರಿ.ಶ.೮೩೦ರ ಗಂಗ ಪೆರ್ಮಾನಡಿಯ ಕಾಲದ ಶಾಸನವೂ ಇದೇ ಕಾಲದ್ದು. ಈಗಿನ ಕನ್ನೆಲ್ಲಿಯ ಸುತ್ತಮುತ್ತಲ ಪ್ರದೇಶವನ್ನು ಕುಕ್ಕರಪಾಳಿಕ್ಕಾರಿನಾಡು ಎಂಬ ಹೆಸರಿನಿಂದ ಕರೆಯಲಾಗುತ್ತಿತ್ತು. ಇದು ಗಂಗ ೬೦೦೦ ಎಂಬ ಹೆಸರನ್ನು ಹೊಂದಿದ್ದು ಯಲಹಂಕವೂ ಈ ಗಂಗ ೬೦೦೦ಕ್ಕೆ ಸೇರಿತ್ತು ಎಂಬುದಾಗಿ ತಿಳಿಯುತ್ತದೆ. ಈ ಕಾಲದ ಎಲ್ಲಾ ಶಾಸನಗಳಲ್ಲೂ ಮೊರಸುನಾಡಿನ ಉಲ್ಲೇಖವಿಲ್ಲದಿರುವುದು ಇಲ್ಲಿ ಗಮನಿಸಬೇಕಾದ ಅಂಶ. ದೇವನಹಳ್ಳಿ ತಾಲ್ಲೂಕಿನ ೧೩೮೨ ಈ ಕಾಲದ ಶಾಸನ ಮೊರಸುನಾಡಿನ ಹೆಸರನ್ನು ಉಲ್ಲೇಖಿಸುವಂತಹುದಾಗಿದ್ದು, ನಂದಿ ಮತ್ತು ದೊಡ್ಡ ಬಳ್ಳಾಪುರದ ಕೆಲವು ಶಾಸನಗಳು ಸಂಸ್ಕೃತ ಶಾಸನಗಳು. ೧೪೨೬ನೇ ಇಸವಿಯ ಬೇಗೂರಿನ ಶಾಸನ ಜೈನ ಶಾಸನವಾಗಿದೆ. ಕನ್ನಡ ಶಾಸನಗಳ ಜೊತೆಗೆ ಕೆಲವು ತಮಿಳು ಶಾಸನಗಳೂ ಮೊರಸುನಾಡಿನ ಬಗ್ಗೆ ಮಾಹಿತಿ ನೀಡುತ್ತವೆ. ಮೊರಸು ನಾಡಿನ ಪ್ರಾಚೀನ ಉಲ್ಲೇಖವಿರುವ ಮೊದಲ ತಮಿಳು ಶಾಸನ ಕ್ರಿ.ಶ.೧೧೧೦ರ ಕಾಲಕ್ಕೆ ಸೇರಿದ್ದಾಗಿದೆ. ಇದರಲ್ಲಿಯೂ ಮೊರಸುನಾಡೆಂದು ಕರೆದಿರುವುದು ತಿಳಿಯುತ್ತದೆ. ವೀರಬಲ್ಲಾಳನ ಅನೇಕ ಶಾಸನಗಳಲ್ಲಿ ಮೊರಸುನಾಡಿನ ಬಗ್ಗೆ ಉಲ್ಲೇಖ ಬರುತ್ತವೆ. ಕ್ರಿ.ಶ.೧೩೪೦ರ ಒಂದು ಶಾಸನದಲ್ಲಿ ಮೊರಸುನಾಡಿಗೆ ಪರ್ಯಾಯವಾಗಿ 'ಮುರಸೂರು' ಎಂಬ ಉಲ್ಲೇಖವಿದೆ. ಶಿವಗಂಗೆಯಿಂದ ಮುಳಬಾಗಿಲು ಹಾಗೂ ಚನ್ನಪಟ್ಟಣದಿಂದ ಹಿಂದೂಪುರದ ವರೆಗಿನ ಪ್ರದೇಶಕ್ಕೆ ಮರಸುನಾಡೆಂದು ತಿಳಿಸುವ ಶಾಸನಗಳು ಲಭ್ಯವಿದೆ.

ಕರ್ನಾಟಕದ ಇತಿಹಾಸ ದರ್ಶನದಲ್ಲಿ ಎಂ.ವಿ.ಕೃಷ್ಣರಾಯರು 'ಮೊರಸುನಾಡು' ನಮ್ಮಲ್ಲಿಲ್ಲ. ಬೇರೆ ಕಡೆಯದೆಂಬ ಸಂದೇಹವನ್ನು ವ್ಯಕ್ತಪಡಿಸುತ್ತಾರೆ. ಇವರು ಆವತಿಯ ನಾಡ ಪ್ರಭುಗಳ ಬಗ್ಗೆ

ವಿವರಣೆ ನೀಡುತ್ತಾ "೧೪ನೆಯ ಶತಮಾನದಲ್ಲಿ ಮದ್ರಾಸು ಪ್ರಾಂತ್ಯದ ಸಮೀಪದ ಯಣಮಂಜಿ ಪುತ್ತೂರು ಎಂಬ ಊರಿನಿಂದ ಏಳೂ ಜನ ರೈತರು ಕುಟುಂಬ ಸಮೇತರಾಗಿ ನಂದಿದುರ್ಗದ ರಾಮಸ್ವಾಮಿ ಬೆಟ್ಟದ ಬಳಿ ತಂಗಿದ್ದರು. ಅವರು ಮೂಲತಃ ತೆಲುಗರು. ಅವರಿದ್ದ ಯಣವಂಜಿಗೆ ಮೊರಸುನಾಡೆಂದು ಹೆಸರು. ಮೊರಸುನಾಡಿನಿಂದ ಬಂದವರಾದ ಕಾರಣ ಮೈಸೂರು ಪ್ರಾಂತ್ಯದ ಪೂರ್ವ ಪ್ರಾಂತಕ್ಕೆ ಬಂದ ಈ ನೆಲಸಿಗರಿಗೆ ಮೊರಸು ಒಕ್ಕಲಿಗರೆಂದು ಹೆಸರು ಬಂದಿದೆ ಎನ್ನುತ್ತಾರೆ. ಮೊರಸುನಾಡು ಕಂಚಿಯ ಬಳಿಯಿದ್ದ ಪ್ರದೇಶ ಎಂಬುದು ಇವರ ವಾದ. ಆದರೆ ಯಣಮಂಜಿ ಪುತ್ತೂರಿಗೂ ಕಂಚಿಗೂ ಯಾವುದೇ ಸಂಬಂಧವಿಲ್ಲ. ಯಣಮಂಜಿ ಎಂಬುದು ಇಳವಂಜಿ ಎಂಬ ಹೆಸರಿನ ರೂಪವಾಗಿದೆ. ಶಾಸನೋಕ್ತ ಯಣವಂಜಿನಾಡು ಈಗಿನ ಚಿತ್ತೂರು. ಮುಳಬಾಗಿಲು ಬೌರಿಂಗ್ ಪೇಟೆ ಜಿಲ್ಲೆಯ ಭಾಗಕ್ಕೆ ಸೇರಿದ ಭಾಗ. ಆದರೆ ಯಣಮಂಜಿಯನ್ನು ಮೊರಸುನಾಡೆಂದು ಕರೆದಿರುವ ಬಗ್ಗೆ ಆಧಾರಗಳಿಲ್ಲ. ಈ ಮೊರಸು ನಾಡು ಎಂಬುದು ಆವತಿ ಪ್ರಭುಗಳಿಗಿಂತ ಮುಂಚೆಯೇ ಬೆಂಗಳೂರು ಶಾಸನಗಳಲ್ಲಿ ಉಲ್ಲೇಖಗೊಂಡಿದೆ. ಆವತಿನಾಡ ಪ್ರಭುಗಳ ಹೆಸರುಗಳನ್ನು ಗಮನಿಸಿದರೆ ಇವರು ಅಥವಾ ಇವರ ಪೂರ್ವಿಕರು ತೆಲುಗರಲ್ಲ ಎಂಬುದು ಸ್ಪಷ್ಟವಾಗುವುದರಲ್ಲಿ ಯಾವ ಸಂದೇಹವೂ ಇಲ್ಲ.

'ಮೊರಸು' ಶಬ್ದಕ್ಕೆ ಮೂಲ ಅರ್ಥ ದೊರೆಯುವುದು ಸಂದೇಹವೇ. ಮೊರಸು ಒಕ್ಕಲಿಗರ ಹೇಳಿಕೆಯ ಪ್ರಕಾರ ಗಂಗಡಿಕಾರರಿಗೂ, ಇವರಿಗೂ ಇರುವ ಭೇದ ಅಲ್ಪ, ಇವರು ಗಂಗಡಿಕಾರರೇ ಆಗಿದ್ದು, ಕೂದಲು ಕೊಡದೆ ತಪ್ಪಿಸಿಕೋಂಡು ಬಂದವರಂತೆ. ಹೀಗೆ ತಪ್ಪಿಸಿಕೊಂಡು ಬಂದವರಿಗೆ ಮೊರಸು ಒಕ್ಕಲಿಗರೆಂದು ಹೆಸರಾಯಿತೆಂದು ಹೇಳುತ್ತಾರೆ. ಸ್ಯಾಂಡರ್ ಸನ್ ರ ಕೆನರೀಸ್ ಅಂಡ್ ಇಂಗ್ಲೀಷ್ ಡಿಕ್ಷನರಿಯಲ್ಲಿ ಮೊರಸು ಎಂಬ ಶಬ್ದಕ್ಕೆ to make roar, clamour, compatin ಇತ್ಯಾದಿ ಅರ್ಥಗಳನ್ನು ಕೊಡುತ್ತಾರೆ. ಕಿಟ್ಟೆಲ್ ಕೋಶದಲ್ಲಿ ಮರಸು ಶಬ್ದಕ್ಕೆ to become Furious, to begin to rage. ಮುರು = turning ಇತ್ಯಾದಿ ಅರ್ಥಗಳನ್ನು ಕೊಡುತ್ತಾರೆ.

ಈ ಎಲ್ಲಾ ಅಂಶಗಳಿಂದ ಮೊರಸು ನಾಡೆಂಬುದು ಸಾರ್ವತ್ರಿಕ ಹೆಸರಲ್ಲ. ಅಪರೂಪಕ್ಕೆ ಹೆಸರಿಸಿದಂತೆ ಕಂಡುಬರುತ್ತದೆ. ಗಂಗರ ಪ್ರಾಂತ್ಯಗಳನ್ನು ನೋಡಿದಾಗ ಮೊರಸುನಾಡೆಂದು ನಾಮಕರಣಗೊಂಡಿದ್ದ ಪ್ರದೇಶ ಗಂಗ-೬೦೦೦, ಉದಾಹರಣೆಗೆ ಮಣ್ಣೆ, ನಂದಿದುರ್ಗ, ಇವೆಲ್ಲವೂ ಇವರ ಆಡಳಿತಕ್ಕೆ ಒಳಪಟ್ಟಿತ್ತು. ಗಂಗ-೬೦೦೦ ಇದು ಗಂಗರ ನೇರ ಆಳ್ವಿಕೆಯಲ್ಲಿತ್ತು ಎಂಬುದು ಸಂಶಯಾಸ್ಪದವೇ ಹೌದು. ಮೊದಲು ಬಂದ ಬಾಣರು, ನಂತರ ನೊಳಂಬರು ಇಲ್ಲದಾಗ ಗಂಗ ಯುವರಾಜರುಗಳು ಆಳ್ವಿಕೆ ನಡೆಸುತ್ತಿದ್ದರೆನ್ನಬಹುದು. ಯುದ್ಧಗಳು ಅನಿವಾರ್ಯವಾದಾಗ ಪದೇ ಪದೇ ಇವರ ವಶತಪ್ಪಿ ಬೇರೆಯವರ ವಶವಾಗುತ್ತಿದ್ದ ಈ ಭಾಗವನ್ನು ಮೊರಸುನಾಡೆಂದು ಕರೆದಿರಬಹುದು. ಮುಂದೆ ಈ ಹೆಸರು ಶಾಸನಗಳಲ್ಲಿ ಅಪರೂಪಕ್ಕೆಂಬಂತೆ ಬಳಸುತ್ತಿದ್ದರು. ಈ

ಪ್ರದೇಶಗಳಲ್ಲಿ ವಾಸಿಸುತ್ತಿದ್ದ ಜನರಿಗೆ ಮೊರಸು ಒಕ್ಕಲಿಗರೆಂದು (ನಮ್ಮಲ್ಲಿ ಇಂದಿಗೂ ಮರ್ಚ ಒಕ್ಕಲಿಗರು) ಹೆಸರು ಬಂದಿರಬಹುದು.

ಗಂಗವಾಡಿ ಒಕ್ಕಲಿಗರಿಗೂ ಮೊರಸು ಒಕ್ಕಲಿಗರಿಗೂ ಅಲ್ಪಸ್ವಲ್ಪ ಭೇದಗಳು ಕಂಡು, ಬೇರೆ ಬೇರೆ ಜಾತಿಯೆನಿಸಿಕೊಂಡಿಬಹುದು. ಮೊರಸುನಾಡಿನ ಮೇರೆಗಳು, ಗಂಗ ೬೦೦೦ ಮೇರೆಗಳು ಒಂದೇ ಆಗಿದ್ದಂತೆ ತೋರುತ್ತದೆ. ಗಂಗರ ನಂತರ ಬಂದ ಹೊಯ್ಸಳರು ಚೋಳರು ಇದನ್ನು ಮೊರಸುನಾಡೆಂದೇ ಕರೆದಿರುವರು. ಬೇಗೂರಿನ ಶಾಸನ, ಹೊಸಕೋಟೆಯ ಶಾಸನಗಳು ಗಂಗ-೬೦೦೦ ಕಾಣೆಯಾಗಿ, ಅದರಲ್ಲಿ ಅನೇಕ ನಾಡುಗಳು ಕಂಡರೂ ಗಂಗ-೬೦೦೦ ಇದ್ದ ಈ ಭಾಗವನ್ನು ಮೊರಸುನಾಡೆಂದು ಕರೆದಿರುವುದು ಸ್ಪಷ್ಟವಾಗುತ್ತದೆ. ಈ ವೇಳೆಗೆ ಮೊರಸುನಾಡು ಮೊರಸು ಒಕ್ಕಲಿಗರಿದ್ದ ಪ್ರದೇಶ ಎಂಬ ಅರ್ಥದಲ್ಲಿಯೇ ಪ್ರಯೋಗವಾಗಿರುವುದು ಗೋಚರಿಸುತ್ತದೆ. ಈ ನಾಡಿನ ಉಲ್ಲೇಖಗಳು ನಮಗೆ ದೊರೆಯುವುದು ಬೆಂಗಳೂರಿನ ದಕ್ಷಿಣ ಭಾಗದ ಕನ್ನಡ ತಮಿಳು ಶಾಸನಗಳಲ್ಲಾದ್ದರಿಂದ ಈ ಭಾಗಕ್ಕೆ ಮಾತ್ರ ಸೀಮಿತವಾದಂತೆ ಕಂಡುಬರುತ್ತದೆ.

ಬೆಂಗಳೂರು ಜಿಲ್ಲೆಯ ದೊಡ್ಡಬಳ್ಳಾಪುರ, ಆನೇಕಲ್ , ಹೊಸಕೋಟೆ, ಬೆಂಗಳೂರು ಜಿಲ್ಲೆಯ ಉತ್ತರ ದಕ್ಷಿಣ ತಾಲ್ಲೂಕುಗಳೂ ಕೋಲಾರ ಜಿಲ್ಲೆಯ ಮಾಲೂರು, ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಹೊಸೂರು, ಡೆಂಕಣಿಕೋಟೆ ತಾಲ್ಲೂಕುಗಳಲ್ಲಿ ಮಾತ್ರ ಇಂದಿಗೂ ಮೊರಸು ಒಕ್ಕಲಿಗರಿರುವುದು. ಆದ್ದರಿಂದ ಈ ಅಂಶವನ್ನೇ ಆಧಾರವಾಗಿಟ್ಟುಕೊಂಡು ಗಂಗ ೬೦೦೦ದ ಎಲ್ಲೆ ಹೆಚ್ಚುಕಡಿಮೆ ಈ ಭಾಗವೇ ಎಂದು ನಿರ್ಧರಿಸಬಹುದು. ಆನೇಕಲ್ ತಾಲ್ಲೂಕಿನ ಮೊರಸೂರು, ಚೋಳರ ಮೊರಸುನಾಡಿನ ರಾಜಧಾನಿ ಆಗಿದ್ದಿರಬಹುದು. ಈ ನಾಮ ಸಾದೃಶ್ಯ ಆಧಾರವೊಂದನ್ನು ಬಿಟ್ಟರೆ, ಬೇರೆ ಆಧಾರಗಳಿಲ್ಲ. ಹಾಗಾಗಿ ಯಲಹಕ್ಕನಾಡಿಗೆ ಯಲಹಂಕ, ಆಯಾ ನಾಡುಗಳಿಗೆ ಆಯಾ ಹೆಸರಿನ ಊರುಗಳಿರುವಾಗ ಮೊರಸುನಾಡಿಗೆ ಮೊರಸೂರು ರಾಜಧಾನಿಯಾಗಿದ್ದಿರಬಹುದು.

ಮೊರಸುನಾಡು ಬಹಳ ವಿಶಾಲವಾಗಿದ್ದರೂ ಜಾತಿವಾಚಕವಾಗಿ ಬೆಂಗಳೂರು ದಕ್ಷಿಣದ ಭಾಗದ ದೊಡ್ಡಬಳ್ಳಾಪುರ ತಾಲ್ಲೂಕಿನ ಹಣಬೆ, ತಿಪ್ಪೂರು, ಜಕ್ಕಸಂದ, ದೊಡ್ಡಬೆಳವಂಗಲ, ಚಿಕ್ಕ ಬೆಳವಂಗಲ, ವಾಣಿಗರಹಳ್ಳಿ, ನೇರಳಘಟ್ಟ, ಕೋಳೂರು, ಕೋಲಿಗೆರೆ, ಮೆಣಸಿ ಕುಂಟನಹಳ್ಳಿ, ಹುಸ್ಕೂರು, ಮಂಡಿಬ್ಯಾಡರಹಳ್ಳಿ, ಹೆಜ್ಜಾಜಿ ಕನಸವಾಡಿ, ಕಾಡನೂರು ಮುಂತಾದ ಗ್ರಾಮಗಳನ್ನೊಳಗೊಂಡ ಭಾಗಕ್ಕೂ ಈ ಹೆಸರು ಅನ್ವಯಿಸಬಹುದು.

### ೩.೯.೬. ಪುನ್ನಾಡ-೭೦

ದೊಡ್ಡಬಳ್ಳಾಪುರ ತಾಲ್ಲೂಕಿನ ಹೊಯ್ಸಳರ ಕಾಲದ ಕ್ರಿ.ಶ.೧೩೨೮ರ ಶಿವಪುರದ ಶಾಸನದಲ್ಲಿ[೧೫೩] 'ಪುಣ್ಣಾಡ ಯಪತ್ತನಾಡು' ಎಂದು ಉಲ್ಲೇಖವಾಗಿದೆ. ಇದಲ್ಲದೆ, ಕ್ರಿ.ಶ.ಸುಮಾರು ೯೦೦ರ ಕಾಲದ

ದೇವನಹಳ್ಳಿ ತಾಲೂಕಿನ ಅರದೇಶಹಳ್ಳಿ ಗ್ರಾಮದ ಶಾಸನಗಳಲ್ಲಿಯೂ[೧೫೪] 'ಪುನ್ನಾಡು' ಎಂಬ ಹೆಸರಿನಿಂದ ಕರೆಯಲ್ಪಟ್ಟಿರುವ ಈ ನಾಡಿನಲ್ಲಿ 'ಪುಲ್ಲಮಂಗಲ' ಎಂಬ ಗ್ರಾಮವಿದ್ದ ಬಗ್ಗೆ ಉಲ್ಲೇಖಗಳೂ ದೊರೆಯುತ್ತವೆ. ದೊಡ್ಡಬಳ್ಳಾಪುರ, ಮತ್ತು ದೇವನಹಳ್ಳಿ ತಾಲ್ಲೂಕಿನ ೭೦(ಎಪ್ಪತ್ತು) ಗ್ರಾಮಗಳನ್ನು ಒಳಗೊಂಡ ಒಂದು ಆಡಳಿತ ವಿಭಾಗವಾಗಿತ್ತು. ಇತಿಹಾಸಕಾರರು ಮೈಸೂರು ಜಿಲ್ಲೆಯ ದಕ್ಷಿಣ ಭಾಗವನ್ನು 'ಪುನ್ನಾಡು' ಎಂದು ಗುರುತಿಸುತ್ತಾರೆ. ಆದರೆ ಅದು ಈ ನಾಡಿಗಿಂತ ಭಿನ್ನ ಮತ್ತು ಹೆಚ್ಚು ವಿಸ್ತಾರವನ್ನು ಒಳಗೊಂಡಿತ್ತೆಂದು ತೋರುತ್ತದೆ.

**೩.೯.೭. ಕಾಡನೂರು-೭೦**

ದೊಡ್ಡಬಳ್ಳಾಪುರ ತಾಲ್ಲೂಕಿನ ಕಾಡನೂರು ಗ್ರಾಮದ ಸುತ್ತಮುತ್ತಲ ಸಾಂಪ್ರದಾಯಿಕವಾಗಿ ೭೦ ಗ್ರಾಮಗಳನ್ನು ಒಳಗೊಂಡ ಒಂದು ಪ್ರಾದೇಶಿಕ ವಿಭಾಗವಾಗಿತ್ತು. ಮತ್ತು ಹೆಜ್ಜಾಜಿ-೧೨ಇದರ ಒಂದು ಉಪವಿಭಾಗವೆಂಬ ಪ್ರಮುಖ ಅಂಶವನ್ನು ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲುಕಿನ ಶಾಸನಗಳು ಉಲ್ಲೇಖಿಸುತ್ತವೆ.[೧೫೫]

ಬೆಂಗಳೂರು ಜಿಲ್ಲೆಯಲ್ಲಿನ ಹೊಯ್ಸಳರ ಅರಸರುಗಳ ಕಾಲದ ಶಾಸನಗಳು ನಾಡು ಎಂಬ ಪ್ರತ್ಯಯವನ್ನು ಬಳಸಿದ್ದು, ಕ್ರಿ.ಶ.೧೪೦೦ರ ನಂತರದ ಶಾಸನಗಳಲ್ಲಿ ಅಂದರೆ ವಿಜಯನಗರ ಕಾಲದಲ್ಲಿ 'ನಾಡು'ಗಳಿಗೆ 'ಸೀಮೆ' ಎಂಬ ಪ್ರತ್ಯಯವನ್ನು ಪಡೆದಿರುವುದು ಶಾಸನಗಳಿಂದ ಕಂಡುಬರುತ್ತದೆ. ಉದಾಹರಣೆಗೆ ಹಣಬೆ ಸೀಮೆ, ತಿಪ್ಪೂರು ಸೀಮೆ, ನೆಲಮಂಗಲಸೀಮೆ, ನಂದಿಗುಂದದಲ್ಲಿದೆ. ಹೆಜ್ಜಾಜಿ ಸೀಮೆ, ಹೊಸಕೋಟೆ ಸೀಮೆಗಳು ವಿಜಯನಗರದ ಆಳ್ವಿಕೆಯಲ್ಲಿ ಒಂದು ಆಡಳಿತ ವಿಭಾಗ ಎಂಬ ಸ್ಪಷ್ಟ ಅರ್ಥದಲ್ಲಿ ಸೇರಿಕೊಂಡ ಹೊಸ ಪದ ಎನ್ನಬಹುದು.

'ಸೀಮೆ' ಎಂಬುದು ಸಂಸ್ಕೃತದ 'ಸೀಮಾ' ಪದವಾಗಿದ್ದು ಒಂದು ಆಡಳಿತ ವಿಭಾಗ ಎಂಬರ್ಥದಲ್ಲಿ ವಿಜಯನಗರ ಕಾಲದಲ್ಲಿ ಶಾಸನಗಳಲ್ಲಿ ಪ್ರಯೋಗವಾಗಿದೆ. ಸೀಮೆ ಎಂಬುದು ಎಲ್ಲೆ, ಗಡಿ ಎಂಬರ್ಥದಲ್ಲಿಯೇ ಬಳಸಿದ್ದಾರೆ. ಇದನ್ನು ಹಿಂದಿನ ಅಧ್ಯಯದಲ್ಲೇ ವಿವರವಾಗಿ ಚರ್ಚಿಸಲಾಗಿದೆ.

ನಾಡು ಅಥವಾ ಸೀಮೆಯು ಕೆಳ ಹಂತದಲ್ಲಿ ಸ್ಥಳ ಮತ್ತು ಗ್ರಾಮಗಳು ಬರುತ್ತವೆ. ಇಲ್ಲಿನ ಸ್ಥಳ ಅನೇಕ ಗ್ರಾಮಗಳ ಸಮೂಹವನ್ನು ಸೂಚಿಸುತ್ತವೆ. ವಿಜಯನಗರ ಅರಸರ ಕಾಲದಲ್ಲಿ ವಿಶೇಷವಾಗಿ ಬಳಕೆಯಾಗಿರುವ ಪದ ಇದಾಗಿದೆ. ತಾಲ್ಲೂಕಿನ ಶಾಸನಗಳಲ್ಲಿ ತಿಪೂರುಸ್ಥಳ ಎಂದಿದೆ. ತಿಪ್ಪೂರಿನ ಸುತ್ತಲಿನ ಅನೇಕ ಗ್ರಾಮಗಳಿಂದ ಹಣಬೆ ತಿಪ್ಪೂರು, ಜಕ್ಕಸಂದ್ರ, ವಾಣಿಗರಹಳ್ಳಿ, ಹೆಜ್ಜಾಜಿ, ವರದೋಹಳ್ಳಿ, ಬಯಿರಾಪುರ ಮುಂತಾದ ಗ್ರಾಮಗಳು ತಿಪ್ಪೂರ ಸ್ಥಳಕ್ಕೆ ಸೇರ್ಪಡೆಗೊಂಡಿದ್ದವು.

ದೊಡ್ಡಬಳ್ಳಾಪುರದ ಕ್ರಿ.ಶ.೧೫೪೪ರ ಶಾಸನವು[೧೫೬] "ಸಿವನಸಮುದ್ರದ ಸೀಮೆಯೊಳಗಣ ಬೇಡನಾಡಸ್ಥಳಕ್ಕೆ ಸಲುವ ದಾಸಗೊಂಡನಹಳ್ಳಿಯ ಗ್ರಾಮವನು" ಎಂದು ಉಲ್ಲೇಖಗೊಂಡಿದೆ. ಶಾಸನೋಕ್ತ ದಾಸಗೊಂಡನಹಳ್ಳಿ ನಂದಿಗಿರಿಗೆ ಹತ್ತಿರವಾದ ಗ್ರಾಮ. ಈ ಗ್ರಾಮದ ಸುತ್ತಲಿನ ಗ್ರಾಮಗಳನ್ನು ಸೇರಿಸಿ ಬೇಡನಾಡ ಸ್ಥಳ ಎಂದು ಕರೆದಂತಿದೆ.

ವಿಜಯನಗರ ಸಾಮ್ರಾಜ್ಯದ ಅರಸರು ಆಡಳಿತ ವಿಭಾಗಗಳಲ್ಲಿ ಏಕರೂಪತೆಯನ್ನು ತರಲು ಪ್ರಯತ್ನಿಸಿದಂತೆ ತೋರುತ್ತದೆ. ಅಲ್ಲದೆ ಕೆಳಗಿನ ಸ್ತರದ ಆಡಳಿತ ವಿಭಾಗಗಳ ವಿಷಯದಲ್ಲಿ ಇವರು ಯಶಸ್ಸನ್ನು ಕಂಡಂತೆ ತಿಳಿಯುತ್ತದೆ. ಕರ್ನಾಟಕ ಮತ್ತು ಆಂಧ್ರಪ್ರದೇಶಗಳ ಆಡಳಿತ ಭಾಗಗಳಲ್ಲಿ ಇದ್ದ ನಾಡು ಎಂಬುದಕ್ಕೆ ಪೂರಕವಾಗಿ ಸೀಮೆ ಎಂಬ ಪದವನ್ನು ಅಧಿಕವಾಗಿ ಹುಲುಕಡಿನಾಡು, ಎಲಹಂಕನಾಡಿನ ಶಾಸನಗಳಲ್ಲಿ ಕಾಣುತ್ತದೆ. ಕೊನೆಯಲ್ಲಿ ಸ್ಥಳ ಎಂಬ ಆಡಳಿತ ವಿಭಾಗವನ್ನು ನಿರ್ದಿಷ್ಟವಾಗಿ ಮತ್ತು ವ್ಯಾಪಕವಾಗಿ ಬಳಸಿದ್ದರೆನ್ನಲಾಗುವುದು. ಈ ಅಂಶಗಳು ತಾಲ್ಲೂಕಿನ ಶಾಸನಗಳಲ್ಲಿ ವಿಮರ್ಶಾತ್ಮಕವಾಗಿ ಅವಲೋಕನ ಮಾಡಿದಾಗ ಕಂಡುಬರುತ್ತವೆ.

## ೩.೧೦. ಸ್ಮಾರಕ ಶಾಸನಗಳು

### ೩.೧೦.೧. ವೀರಗಲ್ಲುಗಳು, ಮಾಸ್ತಿಕಲ್ಲುಗಳು

ಧರ್ಮ, ಶಾಸನಗಳಿಗೆ ಪ್ರಧಾನವಾದ ಶಕ್ತಿಯಾದರೆ ಅದರ ಜೊತೆ ಜೊತೆಗೆ ಅಷ್ಟೇ ಪ್ರಧಾನವಾಗಿ ಪರಿಣಮಿಸಿದ ಮತ್ತೊಂದು ಪ್ರಮುಖ ಅಂಶವೆಂದರೆ ವೀರರ ಜೀವನ. ಘಟನೆಗಳಿಗೆ ಮಣಿದೋ ಅಥವಾ ವೀರನಾಗಿ ಬಾಳುವುದೇ ಶ್ರೇಯಸ್ಸು ಎಂದು ನಂಬಿದ ಜನ ಶತ್ರುಗಳನ್ನು ಎದುರಿಸಿ ಧರ್ಮಕ್ಕಾಗಿ ಆದರ್ಶಕ್ಕಾಗಿ ಹೋರಾಡುತ್ತಾ, ತಮ್ಮ ಜೀವನವನ್ನು ಅರ್ಪಿಸಿದ ಶೂರರ ಧೈರ್ಯವಂತರ ಸಾಹಸಕಾರ್ಯ. ಕರ್ನಾಟಕದ ಸಾವಿರಾರು ಶಾಸನಗಳಿಗೆ ವಸ್ತುವಾಗಿ ಪರಿಣಮಿಸಿದೆ. ಇವುಗಳಲ್ಲಿ ವೀರಗಲ್ಲುಗಳು ಪ್ರಧಾನವಾದವುಗಳು. ಅಂತೆಯೇ ಮಹಾಸತಿಕಲ್ಲುಗಳು, ಯುದ್ಧ ವರ್ಣನಾ ಶಾಸನ ಶಿಲ್ಪಗಳು ಮಹತ್ವವನ್ನು ಪಡೆದಿವೆ. ಇತಿಹಾಸಕ್ಕೆ ಕೈಗನ್ನಡಿಯಂತಿರುವ ಸ್ಮಾರಕ ಶಾಸನಗಳು ರಾಜಕೀಯ ಆಡಳಿತಕ್ಕಷ್ಟೇ ಪ್ರತಿಬಿಂಬಿತವಾದವುಗಳಲ್ಲ. ಅವುಗಳು ಕನ್ನಡ ನಾಡಿನ ಜನರು ಸಾಮಾನ್ಯವಾಗಿ ಮೊದಲಿನಿಂದಲೂ ಶೂರರಾಗಿದ್ದರೆಂಬುದಕ್ಕೆ ಸ್ಮಾರಕ ಶಾಸನಗಳು, ನಾಡಿನ ಇತಿಹಾಸಕ್ಕೆ ಸ್ಪಷ್ಟವಾದ ಪ್ರತ್ಯಕ್ಷ ಸಾಕ್ಷಿಗಳು. ಪ್ರಾಚೀನ ಕರ್ನಾಟಕದ ಸಾಮಾಜಿಕ ಮೌಲ್ಯಗಳಲ್ಲಿ ದಾನ-ಧರ್ಮ, ತ್ಯಾಗದಷ್ಟೇ ಮುಖ್ಯವಾದುದು ವೀರತನ. ಈ ವೀರ ಪದವು ಸಂಸ್ಕೃತದ 'ಬೀರ' ಪದದಿಂದ ಉಗಮಗೊಂಡಿದೆ. ತಾನು ಸಂಪಾದಿಸಿದ ಹಣವನ್ನು ಉದಾರವಾಗಿ ದಾನ ಮಾಡಬೇಕು. ಯುದ್ಧದಲ್ಲಿ ಧೈರ್ಯದಿಂದ ಹೋರಾಟ ಮಾಡುವುದು. ಇವೆರಡು ಅಂದಿನ ಕಾಲದ ಆದರ್ಶಗಳಾಗಿದ್ದವು. ಹಾಗಾಗಿ ಕರ್ನಾಟಕವು

ಮೊದಲಿನಿಂದಲೂ ಸಹ ಶೌರ್ಯ ಮತ್ತು ಧೈರ್ಯಗಳಿಗೆ ಪ್ರಸಿದ್ಧಿಯಾದುದು. ಉದಾಹರಣೆಗಾಗಿ ಪಲ್ಲವರಿಂದ ಅವಮಾನಿತನಾದಾಗ ಮಯೂರಶರ್ಮನು ತನ್ನ ಬ್ರಾಹ್ಮಣ ಜಾತಿಯನ್ನು ಬಿಟ್ಟು ಮಯೂರವರ್ಮನಾಗಿ ಕದಂಬ ವಂಶವನ್ನು ಸ್ಥಾಪಿಸಿದನೆಂದು ತಾಳಗುಂದದ ಶಾಸನ ಹೇಳುತ್ತದೆ. ಬಾದಾಮಿ ಶಾಸನದಲ್ಲಿ ಬರುವ ಕಪ್ಪೆ ಅರಭಟ್ಟನ ಶೌರ್ಯ, ಧೈರ್ಯ, ಸ್ವಾಭಿಮಾನಗಳು ವ್ಯಕ್ತವಾಗಿವೆ. ಬಾದಾಮಿ ಅರಸನಾದ ಇಮ್ಮಡಿ ಪುಲಿಕೇಶಿಯ ಆಸ್ಥಾನಕ್ಕೆ ಚೀನಾ ದೇಶದ ಯಾತ್ರಿಕ ಭೇಟಿ ನೀಡಿದ ಹ್ಯೂಯೆನ್ ತ್ಸಾಂಗನು ಕನ್ನಡ ನಾಡಿನ ಜನರನ್ನು ಸೊಗಸಾಗಿ ಹೊಗಳಿದ್ದಾನೆ. ಅವರಿಗೆ ಅಪಮಾನವಾದರೆ ಪ್ರಾಣ ಹೋದರೂ ಸರಿಯೇ ಸೇಡನ್ನು ತೀರಿಸಿಕೊಳ್ಳದೆ ಬಿಡರೆಂದೂ, ಶತ್ರುವಿಗೆ ಎಚ್ಚರಕೊಟ್ಟು ಇರಿಯುವರೆಂದೂ, ಸೋತುಬಂದ ದಳಪತಿಗೆ ಸ್ತ್ರೀಯರು ವೇಷಭೂಷಣಗಳನ್ನು ಕೊಟ್ಟು ಅವನು ಅಪಮಾನದಿಂದ ಸಾಯುವಂತೆ ಮಾಡುವರೆಂದೂ ಹೇಳುತ್ತಾನೆ. ಬಂಗಾಳದ ದೊರೆಗಳು ಕರ್ನಾಟಕದಿಂದ ಸೈನಿಕರನ್ನು ಕರೆಸಿಕೊಳ್ಳುತ್ತಿದ್ದರು. ಎಂದು ಕನ್ನಡಿಗರ ಜನರಲ್ಲಿ ಗುಣಗಳನ್ನು ಎತ್ತಿ ಹಿಡಿದಿದ್ದಾನೆ. ಹತ್ತನೇ ಶತಮಾನದ ಅದಿಕವಿ ಪಂಪನು

> ಒತ್ತಿ ತುರುಬಿನಿಂದ ರಿಪುಭೂಜ ಸಮಾಜದ ಭೇರ್ಗಳಂನಭ
> ಕ್ಕೆತ್ತದೆ, ತನ್ನ ಬಂದು ಮರೆವೊಕ್ಕೊಡೆ ಕಾಯದೆ, ಚಾಗದೊಳ್ಪನ
> ಚ್ಚೊತ್ತದೆ ಮಾಣ್ದು ಬಾಳ್ವ ಪುರುವಾನಸವೆಂಬ ನಜಾಂಡಮೆಂಬು
> ದತ್ತಿಯಪಣ್ಣೊಳಿರ್ಪ ಪುಳುವಲ್ಲದೆ ಮಾನಸನೇ ಮುರಾಂತಕಾ॥೧೫೭

ಪಂಪನ ಈ ಪದ್ಯದಲ್ಲಿ ಒತ್ತಿ ತುರುಂಬಿನಿಂದ ರಿಪುಭೂಜ ಸಮಾಜನ ಬೇರ್ಗಳಂ ನಭಕ್ಕೆತ್ತದೆ ತನ್ನ ಬಂದು ಮರವೊಕ್ಕೊಡೆ ಕಾಯದೆ, ಚಾಗದೊಳ್ಪನಚ್ಚೊತ್ತದೆ" ಎಂಬ ಈ ಮಾತುಗಳಲ್ಲಿ ಪರಾಕ್ರಮವನ್ನು, ಶರಣಾಗತ ರಕ್ಷಣೆಯನ್ನು, ತ್ಯಾಗಗಳನ್ನು ಎತ್ತಿ ಹಿಡಿಯುತ್ತಾನೆ. ಕನ್ನಡಿಗರು ತ್ಯಾಗಿಗಳು, ವೀರರಾಗಿ ಜೀವನ ನಡೆಸುವಂತಹ ಹಂಬಲವುಳ್ಳವರು ಆದರೆ ಹೇಡಿಯೆನಿಸಿಕೊಳ್ಳುವುದು, ಲೋಭಿಯಾಗಿ ಬದುಕಿದವರಲ್ಲ "ಜೀವ ಮುಳ್ಳಿನಂ ಇರಿವುದು, ಅರ್ಥಮುಳ್ಳಿನಂ ಈವುದು" ಎಂಬ ಆದರ್ಶವನ್ನು ಹೊಂದಿ ಬದುಕಿದವರು. ಅಂದಿನ ಸಮಾಜ (ಜನರು)ಸಮಾಜದ ಘನತೆ-ಗೌರವಗಳು ಹೆಚ್ಚುವುದು ವೀರರಿಂದ ಎಂದು ತಿಳಿದಿದ್ದರು.

ನಮ್ಮ ವೀರ ಪರಂಪರೆಯ ನಿರ್ಮಾಣಕ್ಕೆ ಕಾರಣವಾದ ಹಲವಾರು ಅಂಶಗಳು ನಮ್ಮ ಗಮನಕ್ಕೆ ಬರುತ್ತವೆ. ಸಮಾಜದಲ್ಲಿ ಹುಟ್ಟಿದ ನಾವು ನಾಡಿನ ಋಣವನ್ನು ತೀರಿಸಲು ಯಾವುದೇ ತ್ಯಾಗಕ್ಕೂ ಸಿದ್ಧನಿರಬೇಕಾಗುತ್ತದೆ. ಈ ದೇಹ ಎಂಬುದು ಎಂದೂ ಶಾಶ್ವತವಲ್ಲ. ಪರೋಪಕಾರಕ್ಕಾಗಿ ದೇಹವನ್ನು ಮುಡಿಪಾಗಿಡಬೇಕು. ಮತ್ತು ಅಪಾರವಾದ ಕೀರ್ತಿಯನ್ನು ಗಳಿಸಬೇಕೆಂಬ ಮನೋಧರ್ಮವಿತ್ತು. ಈ ದೇಹ ಮತ್ತು ಗಳಿಸಿದ ಸಂಪತ್ತುಗಳು ನಾಶವಾಗಿ ಹೋಗುತ್ತವೆ. ಆದರೆ

ಗಳಿಸಿದ ಕೀರ್ತಿ ಮಾತ್ರ ಶಾಶ್ವತವಾದುದು. ಈ ನಶ್ವರವಾದ ಪದಾರ್ಥಗಳನ್ನು ಮಾಱುಗೊಟ್ಟು ಅಕ್ಷಯ ಕೀರ್ತಿಸಂಪತ್ತನ್ನು ಗಳಿಸಬೇಕೆಂಬುದನ್ನು ಮಹಾಕವಿ ರನ್ನನು

ಒಡಲೊಡಮೆಯೆಂಬಿವೆರಡುಂ
ಕೆಡಲಿರ್ಪುವು, ಕೆಡದ ಕಸವರಂ ಜಸಮದಱುಂ ||
ಕೆಡುವೊಡಲೊಡಮೆಯನೆಂದುಂ
ಕೆಡದೊಡಮೆಗೆ ಮಾಱುಗುಡುವುದಿಜೆವಬೆಡಂಗಾ||[೧೫೮]

ಎಂದು ದ್ರೌಪದಿಯ ಮೂಲಕವಾಗಿ ಹೇಳಿಸಿರುವುದು ತಿಳಿಯುತ್ತದೆ. ಈ ದೇಹವೆನ್ನುವುದು ಅಶಾಶ್ವತವಾದುದು. ಆದರೆ ಕೀರ್ತಿಯು ಚಿರಸ್ಥಾಯಿಯಾದುದು. ಈ ಅಶಾಶ್ವತವಾದ ದೇಹವು ಹೋದರೂ, ಶಾಶ್ವತವಾದ, ಚಿರಂತನವಾದ ಕೀರ್ತಿಯನ್ನು ಸಂಪಾದಿಸಿಬೇಕೆಂಬುದು ಜನರ ಬಯಕೆ ಆಗಿತ್ತು. ಯುದ್ಧದಲ್ಲಿ ಪ್ರಾಣತ್ಯಾಗವನ್ನು ಮಾಡಿದ ವೀರ ಈ ಲೋಕದಲ್ಲಿ ಅಷ್ಟೇ ಅಲ್ಲ ಪರಲೋಕದಲ್ಲೂ ಕೀರ್ತಿಗೆ ಪಾತ್ರನಾಗುತ್ತಾನೆ. ಅಲ್ಲದೆ ಸಮಾಜದಲ್ಲಿನ ಜನರ ಪ್ರಶಂಸೆಗೂ ಅರ್ಹನಾಗುತ್ತಾನೆ. ಬಹುಶಃ ಈ ಭಾವನೆಗಳೇ ಯುದ್ಧೋತ್ಸಾಹಕ್ಕೆ ಮೂಲ ಪ್ರಚೋದನೆ ಇರಬೇಕು.

ಈ ಪರಲೋಕ ಕಲ್ಪನೆಗಳು ವೀರರ ಉತ್ಸಾಹವನ್ನು ಮತ್ತಷ್ಟು ಉದ್ದೀಪನಗೊಳಿಸುವಂತಹುದು. ಯುದ್ಧದಲ್ಲಿ ಸತ್ತರೆ ದೇವಲೋಕಕ್ಕೆ ಹೋಗುತ್ತಾನೆ ಎಂಬ ಭಾವನೆ. ಪ್ರಾಚೀನ ಕಾಲದಲ್ಲಿ ಪ್ರಚಲಿತವಿತ್ತು. ವಿವೇಕ ಚಿಂತಾಮಣಿಯಲ್ಲಿ ವೀರರು ಹೋಗುವ ವೀರಸ್ವರ್ಗದ ಕಲ್ಪನೆಯು "ವೈದುತಮೆಂಬ ನಾಲ್ಕನೆಯ ಪವನಾಧಾರದ ಮೇಘಾಶ್ರಯದ ಪಟ್ಟಣದಲ್ಲಿ ಸುರಪನಾಣತಿಯ ಅಪ್ಸರರೆನಿಸುವ ವೀರದೇವತೆಗಳಿಹರಲ್ಲಿಗೀ ನರಲೋಕದ ಕಮರಿ, ಅಗ್ನಿ, ಜಲ, ಸಂಗ್ರಾಮ, ಗೋಗ್ರಹಾದಿಗಳಲ್ಲಿ ಪರಾಕ್ರಮದಿಂದಳಿದವರನಲ್ಲಿಯ ದೇವಕನ್ನಿಕೆಯರನಂತ ಸಂಭ್ರಮದಿಂ ಮಣಿಖಚಿತ ವಿಮಾನದಿಂದೊಯ್ವರದೇ ವೀರಸ್ವರ್ಗಕ್ಕುಂ" ಎಂಬುದಾಗಿ ಉಲ್ಲೇಖಿಸುತ್ತದೆ.

ವೀರಗಲ್ಲುಗಳಲ್ಲಿ ವೀರತನವನ್ನು ಈ ವೀರಶಿಲ್ಪಗಳಲ್ಲಿ ಕಾಣಬಹುದು. ಈ ಲೋಕದಲ್ಲಿ ಸೂರ್ಯ ಮಂಡಲವನ್ನು ಭೇದಿಸಿಕೊಂಡು ಹೋಗುವ ಶಕ್ತಿ ಇಬ್ಬರಿಗೆ ಮಾತ್ರ ಎಂದು ಹೇಳಬಹುದು. ಸಾಧನೆ ಮಾಡಿ ಸಿದ್ಧಿ ಪಡೆದವನು ಒಬ್ಬನಾದರೆ ಮತ್ತೊಬ್ಬ ಯುದ್ಧರಂಗದಲ್ಲಿ ಅಸಾಧಾರಣವಾದ ಪರಾಕ್ರಮ ಮೆರೆದು ಮಡಿದವನು. ಇಲ್ಲಿ ವೀರನ ಆತ್ಮಶಕ್ತಿ ಮತ್ತು ಆತನ ಪರಾಕ್ರಮ ಒರೆ ಹಚ್ಚಿದಂತಾಗುತ್ತದೆ. ಸಾಮಾನ್ಯವಾಗಿ ವೀರಗಲ್ಲುಗಳು. ಮೂರು ಹಂತಗಳಿಂದ ಕೂಡಿರುತ್ತವೆ. ಕೆಳಗಿನ ಹಂತದಲ್ಲಿ ಆತನ ಹೋರಾಟದ ಚಿತ್ರವಿರುತ್ತದೆ. ಮಧ್ಯದ ಹಂತದಲ್ಲಿ ಅವನನ್ನು ಕೈಲಾಸಕ್ಕೆ ಕೊಂಡೊಯ್ಯುತ್ತಿರುವ ದೇವತಾ ಸ್ತ್ರೀಯರೂ, ಮೇಲಿನ ಹಂತದಲ್ಲಿ ವೀರ ಶಿವನ ಸಾನ್ನಿಧ್ಯದಲ್ಲಿ ಕುಳಿತಿರುವಂತೆ ಚಿತ್ರಿಸಿರುತ್ತಾರೆ. ಆದರೆ ತಾಲ್ಲೂಕಿನಲ್ಲಿ ಮೂರು ಹಂತದ ಶಿಲ್ಪಗಳು ದೊರೆತಿಲ್ಲ,

ಬಿಡಿಶಿಲ್ಪಗಳು, ಎರಡು ಹಂತದ ಶಿಲ್ಪಗಳು ಅಧಿಕವಾಗಿ ಕಂಡುಬರುತ್ತವೆ. ವೀರಗಲ್ಲುಗಳಲ್ಲಿ ದೊರೆಯುವ ಶ್ಲೋಕ.

> ಜೀತೇನ ಲಭ್ಯತೇ ಲಕ್ಷ್ಮೀ ಮೃತೇನಾಪಿ ಸುರಾಂಗನಾ
> ಕ್ಷಣ ವಿಧ್ವಂಸಿನಿ ಕಾಯೇ ಕಾ ಚಿಂತಾ ಮರಣೇ ರಣೇ ||

ಅಂದರೆ ಕ್ಷಣದಲ್ಲಿ ನಾಶವಾಗುವ ಈ ದೇಹದ ಬಗ್ಗೆ ಏಕೆ ಇಲ್ಲದ ಮೋಹ, ಗೆದ್ದರೆ ರಾಜ್ಯಲಕ್ಷ್ಮಿಯು ದೊರೆಯುತ್ತಾಳೆ. ಮಡಿದರೆ ಅಪ್ಸರೆಯು ಒಲಿಯುತ್ತಾಳೆ. ಆದುದರಿಂದ ಈ ಅಶಾಶ್ವತ ದೇಹದ ಮೇಲಿನ ವ್ಯಾಮೋಹವನ್ನು ತೊರೆದು ಯುದ್ಧಪ್ರವೃತ್ತನಾಗು ಎಂಬುದಾಗಿ ಈ ಮೇಲಿನ ಶ್ಲೋಕವು ವೀರರನ್ನು ಯುದ್ಧಕ್ಕೆ ಅಣಿಗೊಳಿಸುವಂತೆ ಸೂಚಿಸುವಂತಿದೆ. ಈ ಶ್ಲೋಕವು ದುರ್ಗಸಿಂಹನ ಪಂಚತಂತ್ರದಲ್ಲೂ ಉಲ್ಲೇಖವಿರುವುದರಿಂದ ಬಹಳಷ್ಟು ಪ್ರಸಿದ್ಧಿ ಪಡೆದ ಶ್ಲೋಕವೇ ಹೌದು.

ಉದಾತ್ತವಾದ ಮಹದುದ್ದೇಶದಿಂದ ಯುದ್ಧದಲ್ಲಿ ಹೋರಾಡಿ ಮಡಿದ ವೀರರ ಸ್ಮಾರಕವಾಗಿ ನಿಲ್ಲಿಸಿರುವ ಕಲ್ಲುಗಳೇ ವೀರಗಲ್ಲುಗಳು. ಇಂತಹ ವೀರಗಲ್ಲುಗಳಲ್ಲಿ ಪ್ರಾರ್ಥನಾ ಶ್ಲೋಕ ಅರಸನ ಪ್ರಸ್ತಾಪ, ತೇದಿಯ ವಿವರಗಳು ಸಂಗ್ರಹವಾಗಿರುತ್ತವೆ. ನಂತರದಲ್ಲಿ ವೀರನು ಭಾಗವಹಿಸಿದ ಹೋರಾಟದ ಸ್ವರೂಪ, ವೀರನ ಹೋರಾಟದ ಹಿನ್ನೆಲೆ, ಹೋರಾಟದಲ್ಲಿ ವೀರನು ವಹಿಸಿದ ಪಾತ್ರ ಮುಂತಾದ ಹಲವು ವಿಷಯಗಳು, ಕೆಲವೊಮ್ಮೆ ವರ್ಣನೆಗಳಾಗಿ ದೊರೆಯುತ್ತವೆ. ಅನಂತರದಲ್ಲಿ ಮಡಿದ ವೀರನ ಸೇವೆಯನ್ನು ಮನ್ನಿಸಿ, ವೀರನ ಮಕ್ಕಳಿಗೋ, ಮನೆಯವರಿಗೋ, ಅರಸನಿಗೋ, ಅಧಿಕಾರಿಗೋ ಗ್ರಾಮದ ಹಿರಿಯರಿಗೋ ನೀಡಿದ ದಾನ ದತ್ತಿಯ ವಿಷಯಗಳು ಪ್ರಸ್ತಾಪವಾಗಿರುತ್ತವೆ. ದಾನಶಾಸನಗಳಲ್ಲಿರುವಂತೆ ಶಾಪಾಶಯದ ಭಾಗಗಳು ಬರುತ್ತವೆ. ನಂತರದಲ್ಲಿ ರಚಿಸಿದ ಶಾಸನಕಾರನ, ಅದನ್ನು ಕೆತ್ತಿದ ಶಿಲ್ಪಿಯ ಹೆಸರುಗಳು ದೊರೆಯುತ್ತವೆ. ಈ ಎಲ್ಲಾ ವಿಷಯಗಳನ್ನು ಒಳಗೊಂಡ ವೀರಶಾಸನ ಶಿಲ್ಪಗಳು ದೊರೆತಿರುವುದೇ ಕಡಿಮೆ, ಈ ವೀರಗಲ್ಲುಗಳ ಪರಿಚಯವನ್ನು, ಹೋರಾಟದ ಸ್ವರೂಪವನ್ನು ಪರಿಗಣಿಸಿ, ವೀರಗಲ್ಲುಗಳ ಹೋರಾಟದ ದೃಷ್ಟಿಯಿಂದ ಈ ರೀತಿಯಾಗಿ ವಿಂಗಡಿಸಬಹುದು.

- ಯುದ್ಧದಲ್ಲಿ ಮಡಿದ ವೀರರ ವೀರಗಲ್ಲುಗಳು
- ತುರುಗಾಳಗ, ಅಂದರೆ ಗೋಗ್ರಹಣದಲ್ಲಿ ಮಡಿದ ವೀರರ ವೀರಗಲ್ಲುಗಳು
- ಬೇಟೆಯಲ್ಲಿ ಮಡಿದ ವೀರರ ಸ್ಮಾರಕಗಳು
- ಪೆಣ್ಬುಯ್ಯಲ್ (ಹೆಂಗಸರ ಮಾನಭಂಗ) ವೀರರ ಸ್ಮಾರಕಗಳು
- ಊರಳವಿನಲ್ಲಿ ಮಡಿದ ವೀರರ ವೀರಗಲ್ಲುಗಳು
- ಕಳ್ಳರು ಮತ್ತು ದಾರಿಗಳ್ಳರೊಡನೆ ಹೋರಾಡಿ ಮಡಿದ ವೀರರಸ್ವಾರಕಗಳು
- ಸೀಮಾ ಸಂಬಂಧ, ಊರು ಜಗಳಗಳಲ್ಲಿ ಮಡಿದವರ ಸ್ಮಾರಕಗಳು

ಎಂಬುದಾಗಿ ವೀರಗಲ್ಲುಗಳನ್ನು ವಿಂಗಡಿಸಬಹುದು. ಕ್ಷೇತ್ರಾಧ್ಯಯನ ಸಂದರ್ಭದಲ್ಲಿ ಗೋಚರವಾದ ವೀರಗಲ್ಲುಗಳಲ್ಲಿ ಈ ಎಲ್ಲಾ ವಿಂಗಡಣಾ ಕ್ರಮದಲ್ಲಿನ ವೀರಗಲ್ಲುಗಳು ದೊರೆತಿಲ್ಲ. ಅವುಗಳಲ್ಲಿ ಯುದ್ಧ ಹೋರಾಟದ ವೀರಗಲ್ಲುಗಳು, ತುರುಗೋಳ್ ವೀರಗಲ್ಲುಗಳು, ವೀರಮಾಸ್ತಿ ಕಲ್ಲುಗಳು ಹುಲಿಬೇಟೆ ವೀರಗಲ್ಲುಗಳು ದೊರೆತಿವೆ. ಇವುಗಳ ಬಗ್ಗೆಯಷ್ಟೇ ಮುಂದೆ ಚರ್ಚಿಸಲಾಗುವುದು.

ದೊರೆತಿರುವ ಸ್ಮಾರಕಶಿಲೆಗಳಲ್ಲಿ ವೀರಗಲ್ಲುಗಳೇ ಹೆಚ್ಚಿನ ಸಂಖ್ಯೆಯನ್ನು ಹೊಂದಿವೆ. ಪ್ರಾಚೀನವಾದ ಪ್ರಕಟಿತ ವೀರಗಲ್ಲೆಂದರೆ ದೊಡ್ಡ ಬೆಳವಂಗಲದ ವೀರಗಲ್ಲುಗಳು ಗ್ರಾಮದ ಪಶ್ಚಿಮಕ್ಕೆ ಹೊಲದಲ್ಲಿ ಚನ್ನಕೇಶವ ದೇವಾಲಯವಿದ್ದು, ಇದರ ಮುಂಭಾಗದಲ್ಲಿ ಏಳು ವೀರಗಲ್ಲುಗಳಿವೆ. ಇವುಗಳಲ್ಲಿ ಎರಡು ವೀರಗಲ್ಲುಗಳಲ್ಲಿ ಪಾಠವಿದೆ.[೧೫] ಇಲ್ಲಿನ ವೀರಗಲ್ಲುಗಳು ಸಾಮಾನ್ಯವಾಗಿ ಮೂರರಿಂದ ನಾಲ್ಕು ಅಡಿ ಅಗಲವಾಗಿದ್ದು, ನಾಲ್ಕರಿಂದ ಐದು ಅಡಿ ಎತ್ತರವಾಗಿವೆ. ಗಂಗರ ಅರಸ ಮಹೇಂದ್ರನ ಅವಧಿಯಲ್ಲಿ ಮಡಿದ ವೀರನೊಬ್ಬನ ನೆನಪಿಗೆ ಕಟ್ಟಿಸಿದ ಕಲ್ಲಮನೆ ಎಂದು ಶಾಸನದಲ್ಲಿದೆ. ಮತ್ತೊಂದು ಶಾಸನವು ಅದೇ ಅವಧಿಯ ಅಂದರೆ ಕ್ರಿ.ಶ.೮೮೦ರ ಅವಧಿಯದಾಗಿದ್ದು, ವೀರನೊಬ್ಬನ ಮರಣವನ್ನು ತಿಳಿಸುತ್ತದೆ. ಇದೇ ಕಾಲಾವಧಿಯದೆನ್ನಬಹುದಾದ ಏಳು ವೀರರನ್ನು ಚಿತ್ರಿಸಿರುವ ಮತ್ತೊಂದು ವೀರಗಲ್ಲು ಹಿರೇಮುದ್ದೇನಹಳ್ಳಿ ಗ್ರಾಮದ ಹೊರವಲಯದಲ್ಲಿದೆ.

ಇಲ್ಲಿನ ವೀರಗಲ್ಲುಗಳಲ್ಲಿ ಪ್ರಧಾನವಾಗಿ ಕಂಡುಬರುವ ಶಿಲ್ಪಶೈಲಿಯೆಂದರೆ ತ್ರಿಭಂಗಿಯಲ್ಲಿ ನಿಂತ ವೀರರು ಮತ್ತು ದೊಡ್ಡದಾದ ಆಯುಧಗಳು. ಇಲ್ಲಿನ ಎಲ್ಲಾ ವೀರರು ತ್ರಿಭಂಗಿಯಲ್ಲಿ ನಿಂತಿದ್ದು, ಇವರು ತಮ್ಮ ಮುಡಿಗಳನ್ನು ಬಟ್ಟೆಯ ತುದಿಯಿಂದ ಗಂಟು ಹಾಕಿಕೊಂಡಿರುವಂತೆ, ಗಡ್ಡವನ್ನು ಬಿಟ್ಟಂತೆಯೂ ಚಿತ್ರಿತರಾಗಿರುವರು. ಇದಕ್ಕೆ ಸ್ಪಷ್ಟ ನಿದರ್ಶನವೆಂದರೆ ಟಂಕಸಾಲ ಹೊಸಹಳ್ಳಿ ಗ್ರಾಮದಲ್ಲಿನ ಪಾಳೆಯಗಾರರ ಕಾಲದ ವೀರಗಲ್ಲುಗಳು. ಕಾಲ್ಗಡಗ, ಸೊಂಟಕ್ಕೆ ಡಾಬು, ಮಣಿಸರ, ಎದೆಹಾರ, ಕೈಗಡಗಳನ್ನು ಧರಿಸಿರುವಂತೆ ಚಿತ್ರಿಸಲಾಗಿದೆ. ಇಲ್ಲಿ ಚಿತ್ರಿಸಲಾಗಿರುವ ವೀರರು ಗದೆ ಮತ್ತು ದೊಡ್ಡದಾದ ಖಡ್ಗಗಳನ್ನು ಹಿಡಿದಿರುವರು.

ಗಂಗರ ಕಾಲದ ಒಂದು ವೀರಗಲ್ಲು ಮುಪ್ಪಡಿ ಘಟ್ಟದ ಗ್ರಾಮದಲ್ಲಿದೆ. ಇದು ಬಹಳ ವಿಶಿಷ್ಟವಾಗಿದೆ. ಊರ ಉತ್ತರಕ್ಕೆ ಹೊಲದಲ್ಲಿ ನಿಂತಿರುವ ಈ ವೀರಗಲ್ಲುಗಳಲ್ಲಿ ಪಾಠ ಮತ್ತು ಶಿಲ್ಪಗಳು ಪ್ರತ್ಯೇಕವಾದ ಫಲಕಗಳಲ್ಲಿ ಬಿಡಾವಣೆಗೊಂಡಿವೆ. ಈ ಶಿಲ್ಪವುಳ್ಳ ಫಲಕವು ನಾಲ್ಕು ಅಡಿ ಅಗಲ, ಐದು ಅಡಿ ಎತ್ತರವಿದೆ. ಈ ವೀರಗಲ್ಲಿನಲ್ಲಿ ವೀರನೊಬ್ಬನು ಖಡ್ಗವನ್ನು ಎತ್ತಿ ಹಿಡಿದು ಆನೆಯೊಂದಿಗೆ ಹೋರಾಡುತ್ತಿರುವನು. ಇದರಲ್ಲಿ ಕೆಳಗೆ ಬಿದ್ದಿರುವರು. ನಾಯಿಗಳು ಸತ್ತವರ ದೇಹಗಳನ್ನು ಕಚ್ಚಿ ತಿನ್ನುತ್ತಿರುವ ದೃಶ್ಯವೂ ಇದೆ. ಈ ವೀರಗಲ್ಲು ಮೇಲ್ನೋಟಕ್ಕೆ ಬೇಗೂರಿನ ವೀರಗಲ್ಲನ್ನು ಹೋಲುತ್ತದೆ.

ಚಿಕ್ಕಕಾಳೇನಹಳ್ಳಿಯ ಒಂದು ವೀರಗಲ್ಲು ಇದೇ ಕಾಲಾವಧಿಗೆ ಸೇರಿದ್ದು, ವಿಶೇಷವಾಗಿದೆ. ಈ ವೀರಗಲ್ಲು ಸುಮಾರು ನಾಲ್ಕು ಅಡಿ ಅಗಲ, ಆರು ಅಡಿ ಎತ್ತರದವಾಗಿದ್ದು ವೀರನ ಶೌರ್ಯ ಮತ್ತು ಪ್ರತಾಪವನ್ನು ಸಮರ್ಥವಾಗಿ ಈ ಶಿಲ್ಪ ಸೆರೆಹಿಡಿದಿದೆ. ಗಂಡುಗಚ್ಚೆಯನ್ನು ಹಾಕಿ, ಕೈಯಲ್ಲಿ ಉದ್ದದ ಕಠಾರಿಯನ್ನು ಹಿಡಿದು ಮತ್ತೊಂದು ಕೈಯಲ್ಲಿ ಗುರಾಣಿಯನ್ನು ಹಿಡಿದಿರುವ ಈ ಶಿಲ್ಪ ನಿಜಕ್ಕೂ ಸುಂದರವಾದುದು. ಶತ್ರುಗಳ ಚಿತ್ರಣ ಅತಿ ಚಿಕ್ಕದಾಗಿದ್ದು, ಸ್ವರ್ಗದ ಹಂತವನ್ನು ಚಿಕ್ಕ ಆಕೃತಿಯಲ್ಲಿ ನಿರ್ಮಿಸಲಾಗಿದೆ. ಶಿಲ್ಪದಲ್ಲಿ ವೀರನ ಕಿವಿಯ ಆಭರಣ ಎದ್ದು ಕಾಣುತ್ತದೆ. ದೊಡ್ಡ ಬೆಳವಂಗಲದ ವೀರಗಲ್ಲುಗಳಂತೆಯೇ ಇವನೂ ಮುಡಿಯನ್ನು ಕಟ್ಟಿರುವುದು ಕಂಡುಬರುತ್ತದೆ.

ವೀರನೊಬ್ಬನನ್ನು ಪ್ರಮಾಣಬದ್ಧವಾಗಿ ಚಿತ್ರಿಸಿರುವುದು ವಾಣಿಗರಹಳ್ಳಿಯ ವೀರಗಲ್ಲಿನಲ್ಲಿ ಕಂಡುಬರುತ್ತದೆ. ಈ ವೀರಗಲ್ಲು ಸಹ ನಾಲ್ಕು ಅಡಿ ಅಗಲ, ಐದು ಅಡಿ ಎತ್ತರವಾಗಿದೆ. ಇಲ್ಲಿನ ವೀರ ತನ್ನ ಸೊಂಟಕ್ಕೆ ಅಲಂಕೃತಗೊಂಡ ವಸ್ತ್ರವನ್ನು ಧರಿಸಿರುವನು. ಕೈಯಲ್ಲಿ ಕತ್ತಿ ಹಿಡಿದು ಎಡಗೈಯಲ್ಲಿ ಎತ್ತರವಾದ ಬಿಲ್ಲನ್ನು ಹಿಡಿದಿರುವನು. ಇದು ಆ ವೀರನು ಖಡ್ಗ ವಿದ್ಯೆಯಲ್ಲಿ ಮತ್ತು ಬಿಲ್ವಿದ್ಯೆಯಲ್ಲೂ ಪ್ರವೀಣನಾಗಿದ್ದನೆಂದೂ ಸಂಕೇತಿಸುತ್ತದೆ. ವೀರಗಲ್ಲಿನ ಮೇಲ್ಭಾಗದಲ್ಲಿ ಚಿಕ್ಕ ಆಕಾರದಲ್ಲಿ ಸ್ವರ್ಗ ಪ್ರಾಪ್ತಿಯನ್ನು ನಿರೂಪಿಸಲಾಗಿದೆ.

ಚಿಕ್ಕವಡಗೆರೆಯ ಹದಿನಾರನೆಯ ಶತಮಾನದ ವೀರಗಲ್ಲೊಂದು ಪ್ರಮಾಣಬದ್ಧವಲ್ಲದ ವೀರನ ಚಿತ್ರಣ ಹೊಂದಿದ್ದು, ವೀರನ ತಲೆಯ ಮೇಲಿನ ಮುಡಿ ಕಿರೀಟದಂತೆ ಕಂಡುಬರುವುದು. ಇವನು ಎಡಭುಜದ ಮೇಲೆ ಶಲ್ಯವನ್ನು ಹಾಕಿಕೊಂಡಿರುವನು. ಅಲ್ಲದೆ ಆತ ಧರಿಸಿರುವ ಆಭರಣಗಳು ಪ್ರಧಾನವಾಗಿ ಕಂಡುಬರುತ್ತವೆ. ಇದೇ ಶತಮಾನದ ವೀರಗಲ್ಲೊಂದು ಮುಪ್ಪಡಿ ಘಟದಲ್ಲಿದೆ. ವೀರನೊಬ್ಬನು ಕುದುರೆಯಾಳಿನ ಮೇಲೆ ಹೋರಾಡುತ್ತಿರುವ ದೃಶ್ಯವಿದೆ. ವೀರನು ಉದ್ದವಾದ ಈಟಿ ಹಿಡಿದು ಎದುರಾಳಿಯ ಕುದುರೆಯನ್ನು ಇರಿಯುತ್ತಿರುವ ದೃಶ್ಯ ಸೋಜಿಗದಂತೆ ಕಂಡುಬರುತ್ತದೆ.

'ಭೂಚನಹಳ್ಳಿಯ ಹದಿನೇಳನೆಯ ಶತಮಾನದ ವೀರಗಲ್ಲೊಂದು ಅರ್ಧಭಾಗ ನೆಲದಲ್ಲಿ ಹೂತಿದ್ದು, ಉಳಿದ ಅರ್ಧ ಭಾಗದಲ್ಲಿ ವೀರನ ಚಿತ್ರಣವಿದೆ. ಸೊಂಟ, ತೋಳು, ಕುತ್ತಿಗೆ ಕಿವಿಗಳಿಗೆ ವೀರನು ಆಭರಣಗಳನ್ನು ಧರಿಸಿರುವನು.

ಕಿವಿಯ ಓಲೆ ನಾಲ್ಕು ಹರಳುಗಳಿಂದ ಕೂಡಿದೆ. ಪುರುಷನಹಳ್ಳಿಯ ವೀರಗಲ್ಲೊಂದು ಕೈಯಲ್ಲಿ ಖಡ್ಗ ಮತ್ತು ಗುರಾಣಿಗಳನ್ನು ಹಿಡಿದ ಹೋರಾಟದ ಭಂಗಿಯ ಶಿಲ್ಪವನ್ನು ಹೊಂದಿದ್ದು ಇದರ ಕಾಲ ಹದಿನೇಳನೆಯ ಶತಮಾನವಿರಬಹುದೆಂದು ಊಹಿಸಬಹುದಾಗಿದೆ.

ಮಾಡೇಶ್ವರ ಗ್ರಾಮದ ಹೊರವಲಯದಲ್ಲಿ ಎರಡು ಹಂತದ ವೀರಗಲ್ಲು ಕಂಡುಬರುತ್ತದೆ. ಕೆಳ ಹಂತದಲ್ಲಿ ಕತ್ತಿ ಗುರಾಣಿಗಳನ್ನು ಹಿಡಿದ ವೀರನನ್ನ ಮೇಲಿನ ಹಂತದಲ್ಲಿ ಶಿವಲಿಂಗ, ನಂದಿ

ಮತ್ತು ಯತಿಯನ್ನು ಚಿತ್ರಿಸಲಾಗಿದೆ. ಇದರ ಕಾಲ ಹದಿನೈದನೇ ಶತಮಾನವಿರಬಹುದೆಂದು ಹೇಳಬಹುದು. ಈ ವೀರಗಲ್ಲುಗಳು ಪ್ರಾಚೀನ ಕನ್ನಡ ನಾಡಿನ ಜನರು ತಮ್ಮ ಇಡೀ ಬದುಕಿನ ಪಥದಲ್ಲಿ ಅಳವಡಿಸಿಕೊಂಡ ಆದರ್ಶಗಳು. ತಾವು ನಂಬಿದ ಮೌಲ್ಯ, ತೋರಿದ ಶೌರ್ಯ, ತ್ಯಾಗ ಬಲಿದಾನಗಳ ಕಥೆಯನ್ನು ನಿರೂಪಿಸುವ, ತಿಳಿಹೇಳುವ ಕಥಾ ಕೋಶಗಳಾಗಿವೆ ಎಂದರೆ ತಪ್ಪಾಗಲಾರದು. ಹೀಗೆ ವೀರರ ಬದುಕಿನ ಸಾರ್ಥಕತೆಯ ಸಾಲುದೀಪಗಳಾಗಿ ಈ ವೀರಗಲ್ಲುಗಳು ನಿಂತಿವೆ.

### ೩.೧೦.೨. ಮಾಸ್ತಿಕಲ್ಲುಗಳು

ಪ್ರಾಚೀನ ಭಾರತೀಯ ಜನರಲ್ಲಿ ನಂಬಿಕೆ ಅಗಾಧ ಪ್ರಮಾಣದಲ್ಲಿ ಬೇರೂರಿತ್ತು. ಈ ಲೋಕದ ರೀತಿಯಲ್ಲೇ ಮತ್ತೊಂದು ಲೋಕವಿದೆಯೆಂದು ನಂಬಿದ್ದವರು. ಒಬ್ಬ ವ್ಯಕ್ತಿ ಮಡಿದಾಗ ಆತ ಪರಲೋಕಕ್ಕೆ ಹೋಗುವನೆಂದು ಅದರ ಜೊತೆಗೆ ಆತ ಬಳಸುತ್ತಿದ್ದ ವಸ್ತುಗಳನ್ನು ಕಳುಹಿಸಬೇಕೆಂದು ಭಾವಿಸಿದ್ದರು. ಪ್ರಾಚೀನವಾದ ಈಜಿಪ್ಟ್ ದೇಶದಲ್ಲಿ ದೊರೆ ಸತ್ತಾಗ ಅವನಿಗೆ ಮುಂದಿನ ಜನ್ಮದಲ್ಲೂ ಅವನಿಗೆ ಉಪಯೋಗಕ್ಕೆ ಬರಲೆಂದು ಬೇಕಾದ ಆಭರಣಗಳು, ಆಯುಧಗಳು, ಆಹಾರ ಸಾಮಗ್ರಿಗಳು, ವಸ್ತುಗಳು ಇತ್ಯಾದಿಗಳನ್ನು ಅವನೊಡನೆ ಹೂಳುತ್ತಿದ್ದರು. ನಮ್ಮ ದೇಶದಲ್ಲಿಯೂ ಪ್ರಾಚೀನ ಸಮಾಧಿಗಳನ್ನು ತೆರೆದಾಗ ಅಲ್ಲಿ ಹೂಳಿದ್ದ ವ್ಯಕ್ತಿಯ ಅಸ್ಥಿಪಂಜರದ ಜೊತೆಯಲ್ಲಿ ಅನೇಕ ಕುಡಿಕೆಗಳೂ, ಆಭರಣಗಳೂ ದೊರಕಿರುವುದನ್ನು ಇಲ್ಲಿ ನೆನೆಯಬಹುದು. ಸಿಥಿಯನ್ನರಲ್ಲಿ ರಾಜನು ಸತ್ತಾಗ ಅವನೊಡನೆ ಅವನ ಅಡಿಗೆಯವರನ್ನೂ, ಆಳುಗಳನ್ನೂ, ಕುದುರೆಗಳನ್ನೂ ಹೂಳುತ್ತಿದ್ದ ಪದ್ಧತಿಯನ್ನು ಅರ್ಥೈಸಬಹುದಾಗಿದೆ.[೧೮೦] ಇಂದಿಗೂ ಗ್ರಾಮೀಣ ಪ್ರದೇಶಗಳಲ್ಲಿ ವ್ಯಕ್ತಿ ಸತ್ತಾಗ ಅವನಿಗಿಷ್ಟವಾಗಿದ್ದ ವಸ್ತುಗಳನ್ನು ಸಮಾಧಿಯ ಮುಂದಿಟ್ಟು ಪೂಜಿಸುವುದನ್ನು ಕಾಣುತ್ತೇವೆ. ಇಲ್ಲಿ ಪರಲೋಕದ ಕಲ್ಪನೆಯಲ್ಲಿ ನಂಬಿಕೆಯನ್ನಿಟ್ಟ ಜನತೆ ಒಂದು ಸಂಪ್ರದಾಯವನ್ನು ರೂಢಿಸಿಕೊಂಡರು. ಈ ಒಂದು ಭಾವನೆಯೇ ಮಾಸ್ತಿ ಪರಂಪರೆಗೆ ದಾರಿ ಮಾಡಿಕೊಟ್ಟಿತೆನ್ನಬಹುದು. ಹಾಗಾಗಿ ಭಾರತೀಯ ಮಟ್ಟದಲ್ಲಿ ಬಹುವ್ಯಾಪಕವಾಗಿ ಹರಡಿದ್ದ ಈ ಮೌಲ್ಯ ಮುಂದೆ ಪ್ರಪಂಪಚದ ಅನೇಕ ಭಾಗಗಳಲ್ಲಿ ಹರಡಿತ್ತು. ಪುರುಷನ ಅತ್ಯಂತ ಪ್ರಿಯವಾದ ವಸ್ತುಗಳಲ್ಲಿ ಆತನ ಪತ್ನಿಯೂ ಒಬ್ಬಳು. ತಾನು ಮರಣಹೊಂದಿದ ನಂತರ ತನ್ನ ಪತ್ನಿ ತನ್ನಿಂದ ಅಗಲಿರಬಾರದೆಂಬ ಭ್ರಮೆಯಿಂದಲೋ, ಅಥವಾ ಅವಳು ಮತ್ತೊಬ್ಬನ ವಶವರ್ತಿಯಾಗಿರಬಾರದೆಂಬ ಕಲ್ಪನೆಯಿಂದಲೋ, ತಾನೂ ಹೋದಾಗ ತನ್ನೊಡನೆ ಅವಳನ್ನು ಕರೆದೊಯ್ಯುವಂತೆ ಮಾಡಿದ ವ್ಯವಸ್ಥೆ ಎಂದು ಹೇಳಬಹುದು.

ಸತಿಯಾಗಬಯಸುವವಳು ಬೇರೊಂದು ಲೋಕದಲ್ಲಿರುವ ಅಂದರೆ ಪರಲೋಕದಲ್ಲಿರುವ ತನ್ನ ಪತಿಯ ಸಂಗವನ್ನು, ಸಾನ್ನಿಧ್ಯವನ್ನು ಬಯಸಿ, ಸಹಗಮನ ಕೈಗೊಳ್ಳುತ್ತಿದ್ದಳು. ಧರ್ಮ,

ಅರ್ಥ, ಕಾಮ, ಮೋಕ್ಷಗಳಲ್ಲಿ ಪತಿಯೊಡನೆ ಸಪ್ತಪದಿ ತುಳಿದ ಅವಳು ಸಹಗಮನದ ಮೂಲಕ ಅಗಲಿದ ಪತಿಯನ್ನು ಪಡೆಯುವಳೆಂಬ ಕಲ್ಪನೆಯಿತ್ತು. ಇದು ಮೊದಲು ಬ್ರಾಹ್ಮಣರಲ್ಲಿ ಬಂದ ಪರಂಪರೆಯಾದರೂ ಕಾಲಕ್ರಮೇಣ ಈ ಪದ್ಧತಿಯನ್ನು ನಿಷೇಧಿಸಿದರು. ಇದು ಮುಂದೆ ಕ್ಷತ್ರಿಯರಲ್ಲಿ ಒಂದು ಬಲವಾದ ಪರಂಪರೆಯಾಗಿ ಬೆಳೆದು ಬಂದಿತು.

ಪತಿಯು ಮರಣಿಸಿದ ನಂತರ ಬದುಕಿದ ವಿಧವೆಗೆ ಸಮಾಜದಲ್ಲಿ ಅತ್ಯಂತ ನಿಕೃಷ್ಟಸ್ಥಾನವಿತ್ತು. ವಿಧವೆಯಾದವಳು ಯಾವುದೇ ಆಸ್ತಿ, ಹಕ್ಕು ಬಾಧ್ಯತೆಗಳಿಗೆ ಪೂರ್ಣ ಹಕ್ಕುದಾರಳಾಗುತ್ತಿರಲಿಲ್ಲ. ಸಮಾಜದಲ್ಲಿ ಜರುಗುವ ಯಾವುದೇ ಮದುವೆ ಶುಭಕಾರ್ಯಗಳಿಗೆ ಹೋಗಲು ಅವಕಾಶವಿರಲಿಲ್ಲ. ಸಮಾಜದಲ್ಲಿ ನಿಂದನೆಗೊಳಗಾದ ವಿಧವೆ, ಸಾಮಾಜಿಕವಾಗಿ, ಆರ್ಥಿಕವಾಗಿ, ಶೋಚನೀಯ, ದಯನೀಯ ಸ್ಥಿತಿಯಲ್ಲಿ ಬದುಕಲು ಇಚ್ಚಿಸದೇ ಪತಿಯೊಡನೆ ಮುತ್ತೈದೆಯಾಗಿ ಹೋಗುವುದೇ ಪರಮ ಪುರುಷಾರ್ಥವೆಂದು ಕಂಡುಕೊಂಡಿದ್ದಂತೆ ಭಾವಿಸಿದ್ದಿರಬಹುದು. ಸಹಗಮನಕ್ಕೆ ಹಿನ್ನೆಲೆಯಾದ ಒಂದು ಸುಂದರವಾದ ಚಿತ್ರವನ್ನು ಪಂಪಭಾರತ ಕಟ್ಟಿಕೊಡುತ್ತದೆ. ಯುದ್ಧಕ್ಕೆ ಸನ್ನದ್ದನಾಗಿರುವ ಒಬ್ಬ ವ್ಯಕ್ತಿ ನಾಳೆಯ ದಿನ ಮರಳಿ ಬಾರದೇ ದೇವಲೋಕದ ಕನ್ನಿಕೆಯರೋಲಗದ ಮಧ್ಯದಲ್ಲಿ ಇರುವೆನೆಂದು ಹೇಳಿದಾಗ ಆತನ ಪತ್ನಿ ಪತಿಯನ್ನು ಆಗಲಿ ಬದುಕಲು ಇಚ್ಚಿಸದೆ.

ತಾಂಗಡ ನಾಳೆ ಪೋಗಿ ದಿವಿಜಾಂಗನೆಯಾಳ್ತುಡರ್ದಿರ್ಪ್ಪನಿಲ್ಲಿಮಾ
ಣ್ದಾಂ ಗಡಮಿರ್ಪ್ಪೆನಂತನಿತು ಬೇಳೆನೆ ಮುನ್ನಮೆ ಪೋಗಿ ನಲ್ಮೆಗೆ
ಲ್ಲಂಗೊಳೆ ದೇವಲೋಕದೊಳಧೀಶನ ನಾನಿದಿರ್ಗೊಳ್ವೆನೇವೊಸ
ಗ್ಗ್ರಂಗಳೊಳಿರ್ಪ್ಪ ದೇವಡಿತಿ ತೊಳ್ತುರೊಳಳ್ತುಯ ನಾಗಲೀವೆನೋ"[೧೮]

ಎಂದು ಆಕೆ ನುಡಿಯುತ್ತಾಳೆ. ತನ್ನ ಪತಿಗಿಂತ ಮೊದಲು ಸ್ವರ್ಗಕ್ಕೆ ಹೋಗಿ ದೇವಸ್ತ್ರೀಯರಿಗಿಂತ ಮೊದಲು ಆತನನ್ನು ಮೊದಲು ತಾನೇ ವಶವರ್ತಿ ಮಾಡಿಕೊಳ್ಳುವೆನೆಂಬ ಮಾತಿನ ಮನದಲ್ಲಿ ಸಹಗಮನದ ಧ್ವನಿ ಅಡಗಿದೆ. ಈ ರೀತಿಯ ಸಹಗಮನದ ಆಚರಣೆಯಲ್ಲಿ ಎರಡು ವಿಧವಾಗಿದ್ದಿತು. ಒಂದು ಸಹಗಮನ, ಮತ್ತೊಂದು ಅನುಗಮನ. ಸಹಗಮನವೆಂದರೆ ಪತಿಯ ಶವದ ಜೊತೆಯಲ್ಲಿಯೇ ಚಿತೆಯೇರುವುದು. ಬಹುಶಃ ಇದು ಸಾಮಾನ್ಯವಾಗಿ ಎಲ್ಲ ಕಾಲಕ್ಕೂ ಎಲ್ಲ ಸಂದರ್ಭಗಳಲ್ಲಿಯೂ ಅನುಸರಿಸುತ್ತಿದ್ದರು. ಮತ್ತೊಂದು ಪತಿ ಎಲ್ಲೋ ದೂರದ ಪ್ರದೇಶದಲ್ಲಿ ಮಡಿದಿದ್ದನ್ನು ಕೇಳಿ ಅವನ ಸ್ಮಾರಕವಾಗಿ ಆತನಿಗೆ ಸೇರಿದ ಯಾವುದಾದರೂ ವಸ್ತುವನ್ನು ಹಿಡಿದುಕೊಂಡು ಪ್ರಾಣವನ್ನು ಬಿಡುವುದು ಅನುಮರಣ ಅಥವಾ ಅನುಗಮನ ಆದರೆ ಈ ರೀತಿಯ ಪದ್ಧತಿಗಳು ಅತ್ಯಂತ ವಿರಳವಾದರೂ ಹೆಗ್ಗಡದೇವನಕೋಟೆ ತಾಲ್ಲೂಕಿನ ಬೆಳತೂರು ಶಾಸನ ಇದಕ್ಕೆ ಉತ್ತಮ ನಿದರ್ಶನ.

'ಮಾಸ್ತಿ' ಎಂಬುದು ಸಂಸ್ಕೃತ ಭಾಷೆಯ 'ಮಹಾಸತಿ' ಎಂಬ ಪದದ ಸಂಕ್ಷಿಪ್ತರೂಪ, ಗಂಡ ಮಡಿದ ಮೇಲೆ ಆತನ ಜೊತೆ ಪ್ರಾಣ ತ್ಯಾಗ ಮಾಡುವ ಸ್ತ್ರೀಯನ್ನು ಮಹಾಸತಿ ಅಥವಾ ಮಾಸ್ತಿ

ಎಂಬುದಾಗಿ ಕರೆಯುತ್ತಿದ್ದರು. ಸಹಗಮನವನ್ನು ಮಾಡಿ 'ಮಹಾಸತಿ'ಯರಾದವರ ಸ್ಮಾರಕವಾಗಿ ನಿಲ್ಲಿಸಿದ ಕಲ್ಲುಗಳೇ 'ಮಾಸ್ತಿಗಲ್ಲು'ಗಳು, ಈ ಮಾಸ್ತಿಕಲ್ಲುಗಳನ್ನು ವೀರಗಲ್ಲುಗಳಂತೆ ಸುಲಭವಾಗಿ ಗುರುತಿಸಬಹುದು. ವೇಷಭೂಷಣವನ್ನು ತೊಟ್ಟು ಶಸ್ತ್ರಗಳನ್ನು ಹಿಡಿದ ಪುರುಷ ಮತ್ತು ಅವನ ಜೊತೆಯಲ್ಲಿ ಮತ್ತೊಬ್ಬ ಸ್ತ್ರೀ ಚಿತ್ರವಿದ್ದರೆ, ಆತ ಹೋರಾಡಿ ಮಡಿದ ವೀರನೆಂದೂ, ಆಕೆ ಆತನ ಜೊತೆ ಸಹಗಮನ ಮಾಡಿದ ಅವನ ಹೆಂಡತಿಯೆಂದು ತಿಳಿಯಬೇಕಾಗುತ್ತದೆ. ಕೆಲವೊಂದು ಬಾರಿ ಮೂರು, ನಾಲ್ಕು ಸ್ತ್ರೀಯರ ಚಿತ್ರಗಳಿದ್ದು ಅವರುಗಳೆಲ್ಲ ತಮ್ಮ ಗಂಡನ ಸಮೇತ ಸಹಗಮನ ಮಾಡಿರುವ ಚಿತ್ರಗಳು ಕರ್ನಾಟಕದಲ್ಲಿ ದೊರೆತಿವೆ. ಇನ್ನೂ ಕೆಲವು ಮಾಸ್ತಿಕಲ್ಲುಗಳ ಮೇಲೆ ಸ್ತ್ರೀ ವಿಗ್ರಹಗಳು ಮಾತ್ರ ಇರುತ್ತವೆ. ಇವುಗಳ ಜೊತೆಗೆ ಪುರುಷನ ಚಿತ್ರವಿದ್ದು ಒಂದು ಮೂಲೆಯಲ್ಲಿ ಚಿಕ್ಕದಾಗಿ ತೋರಿಸಿರುತ್ತಾರೆ. ಕೆಲವು ಮಾಸ್ತಿಕಲ್ಲುಗಳ ಮೇಲೆ ಒಂದು ಕಂಬ ಮತ್ತು ಅದರ ಬಲಭಾಗದಿಂದ ಮುಂದೆ ಚಾಚಿದಂತೆ ಒಂದು ಕೈ ಇರುತ್ತದೆ. ಆ ಕೈಯ ತುಂಬೆಲ್ಲಾ ಬಳೆಗಳಿರುತ್ತವೆ. ಇವುಗಳನ್ನೇ ಒಂಟಿಕೈ ಮಾಸ್ತಿಕಲ್ಲು, ಒಕ್ಕೈ ಮಾಸ್ತಿಕಲ್ಲು, ಎಂಬುದಾಗಿಯೂ ಗ್ರಾಮೀಣ ಪ್ರದೇಶಗಳಲ್ಲಿ 'ವ್ಯಾಸನ ತೋಳು' ಎಂದು ಕರೆಯುವುದುಂಟು. ಇನ್ನು ಕೆಲವು ಕಡೆ ಕಂಬದಿಂದ ಎರಡು ಕೈಗಳನ್ನು ಚಿತ್ರಿಸಿರುತ್ತಾರೆ. ಇದನ್ನು 'ಇಕ್ಕೈ ಮಾಸ್ತಿಕಲ್ಲು' ಎಂದು ಕರೆಯುತ್ತಾರೆ. ಆದರೆ ಇಂತಹ ಮಾಸ್ತಿಕಲ್ಲುಗಳು ದೊರೆಯುವುದು ಬಹಳ ವಿರಳ. ಕೆಲವು ಕಡೆ ಗಂಡ-ಹೆಂಡತಿಯನ್ನು ಬಿಡಿಸಿರುವ ಶಿಲ್ಪಗಳು ಕರ್ನಾಟಕದಲ್ಲಿ ಕಾಣಬಹುದು.

ಕನ್ನಡ ನಾಡಿನಲ್ಲಿ ಗೋಚರಿಸುವ ಮಹಾಸತಿಯರ ಕಲ್ಲುಗಳು ಸ್ವಸಂತೋಷದಿಂದಲೇ ತನ್ನ ಪತಿಯನ್ನು ಹಿಂಬಾಲಿಸಿದ ಮಹಾಸಾಧ್ವಿಯರ ಸ್ಮರಣೆಗಾಗಿ ನೆಟ್ಟಂತ ಕಲ್ಲುಗಳು. ಸಾಮಾನ್ಯವಾಗಿ ಮಾಸ್ತಿಕಲ್ಲುಗಳ ಮೇಲೆ ಬರಹ ಕಂಡುಬರುವುದಿಲ್ಲ. ಆದರೆ ಬಹಳಷ್ಟು ಅರ್ಥವತ್ತಾದ ಶಿಲ್ಪದಿಂದ ಕೂಡಿದ ಒಂದು ಶಿಲಾಫಲಕ. ಆ ಶಿಲಾಫಲಕಗಳಲ್ಲಿ ಮೇಲೆ ವಿವರಿಸಿದಂತೆ ಒಂದು ಸ್ತಂಭದ ಆಕೃತಿ ಆ ಸ್ತಂಭದ ಮಧ್ಯಭಾಗದಿಂದ ಹೊರಚಾಚಿ ಮೇಲಕ್ಕೆ ಎತ್ತಿದಂತೆ ಇರುವ ಒಂದು ದೊಡ್ಡ ತೋಳಿನ ಚಿತ್ರವಿರುತ್ತದೆ. ಅದರ ಕೈಯಲ್ಲಿ ಹೆಬ್ಬೆರಳು. ಮತ್ತು ತೋರುಬೆರಳುಗಳ ಮಧ್ಯದಲ್ಲಿ ಒಂದು ನಿಂಬೆಯ ಹಣ್ಣು, ಪುರುಷ ಸ್ತ್ರೀ ವಿಗ್ರಹಗಳ ಶಿಲ್ಪ. ಅವರ ಪಕ್ಕದಲ್ಲೋ ಅಥವಾ ಮೇಲ್ಭಾಗದಲ್ಲಿ ಒಂದು ಶಿವಲಿಂಗವನ್ನು ಸಾಮಾನ್ಯವಾಗಿ ಮಾಸ್ತಿಕಲ್ಲುಗಳ ಮೇಲೆ ಬಿಡಿಸಿರುವ ಶಿಲ್ಪಗಳಾಗಿರುತ್ತವೆ. ಅಂದರೆ ಮಹಾಘಟನೆಯೊಂದರ ಸ್ಮಾರಕಕ್ಕಾಗಿ ನಿಲ್ಲಿಸಿರುವ ಕಲ್ಲುಗಳೇ ಈ ಮಹಾಸತಿಕಲ್ಲುಗಳು.

ಕಾಲದ ದೃಷ್ಟಿಯಿಂದ ಪ್ರಾಚೀನವಾದ ವೀರಮಾಸ್ತಿಕಲ್ಲು ಬೂಚನಹಳ್ಳಿಯಲ್ಲಿದೆ. ಈ ಮಹಾಸತಿಕಲ್ಲು ನಾಲ್ಕು ಅಡಿ ಅಗಲ ಮೂರು ಅಡಿ ಎತ್ತರವಾಗಿದೆ. ವೀರನು ಕತ್ತಿಯ ಗುರಾಣಿಯೊಂದಿಗೆ ತ್ರಿಭಂಗಿಯಲ್ಲಿ ನಿಂತಿದ್ದು, ಅವನ ಅಳತೆಯಲ್ಲೇ ಸತಿಯಾದವಳು ಎರಡೂ ಕೈಗಳನ್ನು ಮೇಲೆತ್ತಿ

ನಿಂತಿರುವಳು. ಹುಲುಕುಂಟೆ, ಹಾಲೇನಹಳ್ಳಿಯ ಕೆಲವು ವೀರಮಾಸ್ತಿಕಲ್ಲುಗಳು ಹದಿನೆಂಟನೆಯ ಶತಮಾನಕ್ಕೆ ಸೇರಿದವುಗಳಾಗಿವೆ. ಇವುಗಳನ್ನು ಇಂದಿಗೂ ಗ್ರಾಮಸ್ಥರು ಪೂಜಿಸುತ್ತಿರುವರು. ತಿಪ್ಪೂರಿನಲ್ಲಿ ದೊರೆತ ವೀರಮಾಸ್ತಿಕಲ್ಲು ವಿಶೇಷವಾಗಿದೆ. ಕೆಳಹಂತದಲ್ಲಿ ಇಬ್ಬರು ವೀರರು ಹೋರಾಡುತ್ತಿದ್ದು ಇಬ್ಬರ ಪಕ್ಕದಲ್ಲೂ ಮಹಾಸತಿಯರು ತಮ್ಮ ಬಲಗೈಯನ್ನು ಮೇಲಕ್ಕೆ ಎತ್ತಿ ನಿಂತಿರುವರು. ಶಿಲಾಫಲಕದ ಎರಡನೇ ಹಂತದಲ್ಲಿ ಇಬ್ಬರು ಸತಿಯರ ಚಿತ್ರಣವು, ಪಕ್ಕದಲ್ಲಿ ತೋಳುಗೈ ಕಂಬದ ಚಿತ್ರವೂ ಇದೆ.

ದೊಡ್ಡ ಹೆಜ್ಜಾಜಿ ಗ್ರಾಮದಲ್ಲಿ ಊರ ಉತ್ತರಕ್ಕೆ ಎರಡು ತೋಳುಗೈ ಕಂಬದ ಸ್ಮಾರಕಗಳಿದ್ದು, ಕ್ರಿ.ಶ.ಹದಿನೈದನೇ ಶತಮಾನಕ್ಕೆ ಸೇರಿದವಗಳಾಗಿವೆ. ಈ ಶಿಲಾಫಲಕ ಅದು ಅಡಿ ಎತ್ತರ, ಎರಡೂವರೆ ಅಡಿ ಅಗಲದ ಉದ್ದನೆಯ ಸ್ತಂಭ ಮತ್ತು ಸ್ತಂಭದಿಂದ ಹೊರಟ ಪತಿಯ ತೋಳನ್ನು ಚಿತ್ರಿಸಲಾಗಿದೆ. ಮಹಾಸತಿಯ ಬಲಗೈ ಶುಭದ, ಸೌಭಾಗ್ಯದ ಧನ್ಯಜೀವನದ ಸಂಕೇತದಂತೆ ತೋರುತ್ತದೆ. ಸತಿಯ ತೋರು ಬೆರಳುಗಳ ಮಧ್ಯೆ ಹೂವನ್ನು ಹಿಡಿದಿದೆ. ಸ್ತಂಭದ ಮೇಲ್ಭಾಗ, ದೇವಾಲಯದ ಗೋಪುರದ ಭಾಗದಂತಿದ್ದು, ಅದರ ಪಕ್ಕದಲ್ಲಿ ಚಿಕ್ಕದಾಗಿ ಶಿವಲಿಂಗವನ್ನು ಬಿಡಿಸಲಾಗಿದೆ. ಇಲ್ಲಿ ಸಹಗಮನ ಮಾಡಿದ ಸ್ತ್ರೀ ಯಾರು? ಎಂಬುದಾಗಲಿ, ಆಕೆಯ ಪತಿಯ ಹೆಸರಾಗಲಿ ಇಲ್ಲಿ ತಿಳಿದು ಬರುವುದಿಲ್ಲ. ಒಟ್ಟಾರೆ ದಂಪತಿಗಳ ಅಮರ ಪ್ರೇಮದ ನಾಮ ಘೋಷಣೆ ಅನಗತ್ಯವೆಂಬ ಭಾವನೆಯೇ ಈ ಮೌನಕ್ಕೆ ಕಾರಣವೋ ಏನೋ![೧೮]

### ೩.೧೦.೩. ಆತ್ಮಬಲಿ ಕಲ್ಲುಗಳು

ಶಾಸನಗಳನ್ನು ಅಧ್ಯಯನ ಮಾಡುವ ಸಂದರ್ಭದಲ್ಲಿ ಪ್ರಾಚೀನ ಗ್ರಂಥಗಳು ನಮಗೆ ಸಹಕರಿಸುತ್ತವೆ. ಶಾಸನಗಳ ಸ್ವರೂಪ ಮತ್ತು ಶಾಸನಗಳ ಪ್ರಕಾರಗಳನ್ನು ಕುರಿತಾದ ಮಾಹಿತಿಗಳು. ಕೌಟಿಲ್ಯನ ಅರ್ಥಶಾಸ್ತ್ರ, ಶುಕ್ರಾಚಾರ್ಯನ ಶುಕ್ರನೀತಿಸಾರ ಮತ್ತು ಯಾಜ್ಞಾವಲ್ಕ್ಯ ಸಂಹಿತೆಗಳಲ್ಲಿ ದೊರೆಯುತ್ತವೆ. ಈ ರೀತಿಯ ಮಹತ್ವವನ್ನು ಒಳಗೊಂಡ ಶಾಸನಗಳನ್ನು ದಾನಶಾಸನಗಳು, ವೀರಮರಣದ ಶಾಸನಗಳು, ಇತರ ಶಾಸನಗಳು ಇದರ ಜೊತೆಗೆ ಅತ್ಮಬಲಿದಾನದ ಶಿಲ್ಪಗಳು(ಶಾಸನಗಳು) ಎಂಬುದನ್ನು ಸೇರಿಸಬಹುದು. ತನ್ನನ್ನು ಪೋಷಿಸಿದ ಒಡೆಯನ ಪ್ರೀತಿ ಮತ್ತು ವಿಶ್ವಾಸಕ್ಕಾಗಿ ಅವನು ಮಡಿದ ನಂತರ ಅವನಿಗೆ ಸ್ವರ್ಗವನ್ನು ಹಾರೈಸಿಕೊಳ್ಳುವ ಆತ್ಮಬಲಿದಾನದ ಸ್ಮಾರಕಗಳಾಗಿವೆ. ಇದರ ಪ್ರಮುಖ ಉದ್ದೇಶ ಸ್ವರ್ಗಸಂಪಾದನೆ ಈ ಆತ್ಮಬಲಿದಾನದ ಸ್ಮಾರಕಗಳನ್ನು 'ಧಾರ್ಮಿಕ, ಆತ್ಮಬಲಿದಾನ' ಮತ್ತು 'ಲೌಕಿಕ ಆತ್ಮಬಲಿದಾನ' ಎಂದು ಎರಡು ಬಗೆಯಾಗಿ ವಿಂಗಡಿಸಬಹುದು. ಮುಕ್ತಿಯನ್ನು ಪಡೆಯುವುದಕ್ಕಾಗಿ ದೇವರ ಹೆಸರಿನಲ್ಲಿ ಅಗ್ನಿ ಪ್ರವೇಶ, ಜಲಪ್ರವೇಶಗಳ ಮೂಲಕ ಪ್ರಾಣೋತ್ಕೃಣ ಮಾಡಿಕೊಳ್ಳುವುದೇ ಧಾರ್ಮಿಕ ಆತ್ಮಬಲಿದಾನ ಎಂದು ಕರೆಯುವರು. ದೇವರ ಹೆಸರಿನಲ್ಲಿ ಪ್ರಾಣತ್ಯಾಗ ಮಾಡುವ ಈ ಸಂಪ್ರದಾಯ ಮುಂದೆ ದೇವ ಸಮಾನರಾದ ವ್ಯಕ್ತಿಗಳ

ಮರಣದ ಸಂದರ್ಭದಲ್ಲಿ ಪ್ರಾಣತ್ಯಾಗ ಮಾಡಿಕೊಳ್ಳಲು ದಾರಿಮಾಡಿಕೊಟ್ಟಿತು. ಇದೇ ಲೌಕಿಕ ಆತ್ಮ ಬಲಿದಾನ ತನ್ನ ಒಡೆಯನಿಗಾಗಿ ಆಳು ಬಲಿದಾನಗೈದರೆ ಕೀಳ್ಗುಂಟೆ, ವೇಳೆವಾಳಿ, ಗರುಡರು, ಲೆಂಕರು ಎಂಬ ಹೆಸರುಗಳಿಂದ ಕರೆಯುವರು. ಪತಿ ಮರಣ ಹೊಂದಿದಲ್ಲಿ ಪತಿಯು ಕೈಗೊಳ್ಳುವ ಆತ್ಮಬಲಿದಾನ ಸಹಗಮನ ಎಂಬುದಾಗಿ ಹೆಸರಿಸಲಾಗಿದೆ. ಈ ಪ್ರಕಾರದ ಆತ್ಮಬಲಿಯ ಪ್ರಸಂಗಗಳು ನಡೆದಿರುವುದನ್ನು ಸೂಚಿಸುವ ಸಾಕ್ಷಿಗಳು ಕಡಿಮೆಯೇ. ಹುಲ್ಲುಕುಂಟೆ ರಸ್ತೆ ಬದಿಯಲ್ಲಿ ಪಾಳೇಯಗಾರರ ಕಾಲದ ನಾಲ್ಕು ಸ್ಮಾರಕ ಶಿಲ್ಪಗಳಿದ್ದು, ಇವುಗಳು ಆತ್ಮಬಲಿಗೆ ಸಂಬಂಧಿಸಿದವುಗಳಾಗಿವೆ. ಇಲ್ಲಿನ ವೀರರು ಕೈಯಲ್ಲಿ ಚೂರಿಯನ್ನು ಹಿಡಿದು ತಮ್ಮನ್ನು ತಾವೇ ಇರಿದು ಕೊಳ್ಳುತ್ತಿರುವುದು ಧಾರ್ಮಿಕ ಹರಕೆಯ ಸಂಕೇತದಂತೆ ಕಂಡುಬರುತ್ತದೆ.

ಕ್ರಿ.ಶ.ಹನ್ನೆರಡನೆಯ ಶತಮಾನಕ್ಕೆ ಸೇರಿದ ವೀರಗಲ್ಲೊಂದು ರಾಜಘಟ್ಟ ಗ್ರಾಮದ ಪೂರ್ವಭಾಗಕ್ಕೆ ಇದೆ.[೧೬೩] ಈ ವೀರಗಲ್ಲಿನ ವೈಶಿಷ್ಟ್ಯವೆಂದರೆ ಶಿಲ್ಪ ಮತ್ತು ಲಿಪಿಯಿಂದ ಕೂಡಿದ್ದು, ಬಹಳ ಸುಂದರವಾಗಿ ಚಿತ್ರಿತವಾಗಿದೆ. ಸಿರಿಸೆಟ್ಟಿಯೆಂಬುವನು ತನ್ನನ್ನು ತಾನೇ ಇರಿದುಕೊಂಡು ಮಡಿದಿರುವುದನ್ನು ಉಲ್ಲೇಖಿಸುತ್ತದೆ. ಶಾಸನೋಕ್ತ ಸಿರಿಸೆಟ್ಟಿ ಸತ್ತಿರುವುದು ಒಡೆಯನಿಗಾಗಿಯೋ, ಮಡದಿಗಾಗಿಯೋ ಎಂಬುದು ತಿಳಿದುಬರುವುದಿಲ್ಲ. ಇದೊಂದು ಆತ್ಮಬಲಿದಾನದ ಪ್ರಕಾರ ಎಂಬುದು ಸ್ಪಷ್ಟವಾಗಿ ತಿಳಿಯುತ್ತದೆ. ಇಲ್ಲಿ ಅವರ ಉತ್ಕಟವಾದ ಮೋಕ್ಷಾಪೇಕ್ಷೆ ಅಸೀಮವಾದ ಧೈರ್ಯ ಮತ್ತು ನಿಷ್ಠೆ, ಸ್ವಾಮಿಭಕ್ತಿಗಳನ್ನು ಕಾಣಬಹುದು.

ಇಂದಿನ ಆಧುನಿಕ ಯುಗದ ದಿನಗಳಲ್ಲಿ ಸಹಗಮನ ಪದ್ಧತಿ ಮತ್ತು (ಆತ್ಮಹತ್ಯೆ)ಆತ್ಮಬಲಿದಾನ ಬಹುತೇಕವಾಗಿ ಮರೆಯಾಗಿವೆ. ಎರಡರ ಮೂಲ ಉದ್ದೇಶ ಒಂದೇ ಬಗೆಯಾದ ಭಾವನೆಯಿದೆ. ತನ್ನನ್ನು ಸಾಕಿದ ಒಡೆಯ ಅಥವಾ ಗಂಡನ ಮೇಲಿನ ಭಕ್ತಿ ಮತ್ತು ಕೃತಜ್ಞತೆಗಳ ಸಂಕೇತ ಪ್ರಸ್ತುತ ಸಮಯದಲ್ಲಿ ಆಧುನಿಕ ಸಮಾಜಕ್ಕೆ ಹಲವಾರು ಪ್ರಶ್ನೆಗಳು ಎದುರಾಗುತ್ತವೆ. ಯಾರೋ ಸತ್ತರೆಂದು ತಿಳಿದು ಉಳಿದವರು ಅವರಿಗಾಗಿ ಆತ್ಮಹತ್ಯೆ ಮಾಡಿಕೊಳ್ಳುವುದು. ಗಂಡ ಸತ್ತ ನಂತರ, ಜೀವನ ಸಾಗಿಸಲು ನೂರಾರು ಮಾರ್ಗಗಳಿದ್ದರೂ ನೂರಾರು ಜನ ಮುಗ್ಧೆಯರು ಅರ್ಥವಿಲ್ಲದ ನಂಬಿಕೆಗಾಗಿ ಸಮಾಜದ ಒತ್ತಾಯಕ್ಕೆ ಸಾಯುವುದು ಅನಾಗರಿಕ ಸಮಾಜದ ಲಕ್ಷಣವಲ್ಲದೆ ಮತ್ತೇನು? ಈ ಪದ್ಧತಿಗಳು ತಮಗೆ ವಿಚಿತ್ರವಾಗಿ ಕಂಡರೂ, ಮನುಷ್ಯರಿಗೆ ಪ್ರಾಣದ ಮೇಲಿನ ಮೋಹ ಮಹತ್ತರವಾಗಿದೆಯೆಂಬುದನ್ನು, ಅವರು ಬದುಕುವ ಆಸೆಯನ್ನು ತೊರೆದು ತಾವು ಆದರ್ಶವೆಂದು ಭಾವಿಸಿದ ಒಂದು ಭಾವನೆಗಾಗಿ ತಮ್ಮನ್ನು ತಾವು ಕೊಂದುಕೊಂಡದ್ದನ್ನು ನೆನಪಿಗೆ ತಂದುಕೊಂಡರೆ ಅವರ ವಿಷಯದಲ್ಲಿ ಆಗಾಧವಾದ ಗೌರವವೂ, ಭಕ್ತಿಯೂ, ಹೆಮ್ಮೆಯೂ ಮೂಡುತ್ತವೆ.[೧೬೪] ವೀರಗಲ್ಲು ಮತ್ತು ಮಾಸ್ತಿಕಲ್ಲುಗಳು ಪರಂಪರೆಯ ಒಂದು ಭಾಗ, ಇವುಗಳು ನಮ್ಮ ದೇಶದ ವೀರ ಜೀವನ

ಶ್ರದ್ಧೆ-ಪಾತಿವ್ರತ್ಯಗಳ ಕುರುಹುಗಳಾಗಿವೆ. ಇವುಗಳನ್ನು ಹಾಳು ಮಾಡದೆ ಸಂರಕ್ಷಿಸುವುದು ನಮ್ಮ ಕರ್ತವ್ಯ ಈ ವೀರಗಲ್ಲುಗಳ ಶಿಲ್ಪಗಳ ಬಗ್ಗೆ ಹೆಚ್ಚಿನ ವಿವರಣೆಯನ್ನು 'ಶಾಸನಶಿಲ್ಪ' ಎಂಬ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

### ೩.೧೧. ಶಾಸನಗಳಲ್ಲಿ ಕಾಲದ ನಿರೂಪಣೆ

ಶಾಸನಗಳಲ್ಲಿ ಒಂದು ದೇಶದ ರಾಜಕೀಯ ಇತಿಹಾಸವನ್ನು ರೂಪಿಸಲು ಪ್ರಮುಖ ಸಾಮಗ್ರಿಯನ್ನು ಒದಗಿಸುವ ಭಾಗವಾದ ರಾಜನ ವಂಶಾವಳಿಯ ಕುರಿತ ಮಾತುಗಳ ನಂತರ ದಾನವನ್ನು ಕೊಟ್ಟ ಕಾಲವನ್ನು ನಿರ್ದೇಶನ ಮಾಡಿರುತ್ತದೆ. ಈ ಭಾಗವೇ ಇತಿಹಾಸದ ನಿರ್ಮಾಣ ಕಾರ್ಯದಲ್ಲಿ ಇತಿಹಾಸಕಾರನಿಗೆ ಸಂಪೂರ್ಣ ನೆರವನ್ನು ನೀಡುವುದು. ಭಾರತದಲ್ಲಿ ಎರಡು 'ಶಕ'ಗಳು ಅತ್ಯಂತ ಪ್ರಸಿದ್ಧಿ ಪಡೆದಿವೆ. ಉತ್ತರ ಭಾರತದಲ್ಲಿ ವಿಕ್ರಮಶಕ, ದಕ್ಷಿಣ ಭಾರತದಲ್ಲಿ ಶಾಲಿವಾಹನಶಕ, ಕರ್ನಾಟಕದ ಬಹುಪಾಲು ಶಾಸನಗಳಲ್ಲಿ ಸಾಮಾನ್ಯವಾಗಿ ಶಾಲಿವಾಹನ ಶಕ ವರ್ಷವನ್ನು ಕಾಣಬಹುದು. ಇವುಗಳ ಜೊತೆಗೆ ರಾಜನ ಆಳ್ವಿಕೆಯ ವರ್ಷಗಳನ್ನು ನೀಡಿರುವುದುಂಟು. 'ವಿಕ್ರಮ ಶಕೆ' ಕ್ರಿ.ಶ.೧೦೭೬ರಲ್ಲಿ ಪ್ರಾರಂಭವಾಯಿತೆಂದು ಇದರ ಮೂಲ ಪುರುಷ ವಿಕ್ರಮಾದಿತ್ಯನೆಂದೂ ಹೇಳುತ್ತಾರೆ. ಈ ಕಾಲವು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಪ್ರಾರಂಭವಾಗಿ ಸುಮಾರು ಒಂದುನೂರ ಇಪ್ಪತ್ತು ವರ್ಷಗಳ ಕಾಲ ಬಳಕೆಯಲ್ಲಿತ್ತು . ಶಾಸನಗಳಲ್ಲಿ ಚಾಲುಕ್ಯ ವಿಕ್ರಮವರ್ಷ ೫೫ನೇ ವರ್ಷ ಎಂದು ಉಲ್ಲೇಖವಾಗಿದ್ದರೆ ಅದಕ್ಕೆ ೧೦೭೬ರನ್ನು ಕೂಡಿದರೆ ನಮಗೆ ಕ್ರಿ.ಶ.ದ ತೇದಿಯ ವಿವರಗಳು ದೊರೆಯುತ್ತವೆ. ಅಂದ ಹಾಗೆ ಇದು ಕ್ರಿ.ಶ.೧೧೪೧ ಆಗುತ್ತದೆ. ಹೀಗೆ ಚಾಲುಕ್ಯ ವಿಕ್ರಮಶಕೆಯ ಸಂಖ್ಯೆ ಯಾವುದೇ ಇರಲಿ ಅದಕ್ಕೆ ೧೦೭೬ನ್ನು ಕೂಡಿದರೆ ಅಥವಾ ಕೂಡುವುದರಿಂದ ನಮಗೆ ಕ್ರಿಸ್ತಶಕದ ವಿವರಗಳು ದೊರೆಯುತ್ತವೆ. ಭರತಖಂಡದಲ್ಲಿ ಪ್ರಸಿದ್ಧವಾಗಿರುವ ವಿಕ್ರಮಶಕವು ಉತ್ತರ ಭಾರತದಲ್ಲಿ ಕಾಣುತ್ತೇವೆ, ದಕ್ಷಿಣ ಭಾರತದಲ್ಲಿ 'ಶಾಲಿವಾಹನ ಶಕ' ಅದರಲ್ಲೂ ಕರ್ನಾಟಕದ ಶಾಸನಗಳಲ್ಲಿ ಸಾಮಾನ್ಯವಾಗಿ 'ಶಕ'ವರ್ಷವನ್ನು ಕೊಟ್ಟಿರುತ್ತದೆ. ರಾಜನ ಆಳ್ವಿಕೆ ಯಾವಾಗ ಪ್ರಾರಂಭವಾಯಿತೆಂದು ತಿಳಿದಿದ್ದರೆ ಶಾಸನ ಹುಟ್ಟಿದ ವರ್ಷವನ್ನು ಮೇಲಿನಂತೆ ಕಂಡುಕೊಳ್ಳಬಹುದು.

ದೊಡ್ಡಬಳ್ಳಾಪುರ ತಾಲ್ಲೂಕಿನ ಬಹುಪಾಲು ಶಾಸನಗಳಲ್ಲಿ ಉಕ್ತವಾಗಿರುವ ಕಾಲಗಣನೆ ಎಂದರೆ ಶಕವರ್ಷ ಅಥವಾ ಶಾಲಿವಾಹನಶಕ. ಇದು ಕುಶಾನ ಮನೆತನದ ಒಂದನೇ ಕಾನಿಷ್ಕನಿಂದ ಪ್ರಾರಂಭವಾಗಿದೆ. ಈ ಕಾಲವು ಕ್ರಿ.ಶ.೭೮ರಿಂದ ಬಳಕೆಗೆ ಬಂದಿದೆ. ಇದು ಶಾತವಾಹನ ಅಥವಾ ಶಾಲಿವಾಹನ ಎಂಬ ಹೆಸರು ಶಕ ಎಂಬುದು 'ಶಕೆ' ಎಂಬ ಬೇರೆಯ ಅರ್ಥವನ್ನು ಪಡೆದು ತನ್ನೊಂದಿಗೆ ಸೇರಿಸಿಕೊಂಡಿತು. ಬಹುಶಃ ಕಾಲಗಣನೆಯ ಪರಿಭಾಷಿಕ ಪದವಾಗಿ ಈ 'ಶಕ' ಎಂಬುದು ರೂಪಗೊಂಡಿತು. ಆರಂಭ ಕಾಲದ ಶಾಸನಗಳಿಂದ ಪ್ರಾರಂಭವಾಗಿ ವಿಜಯನಗರದ

ಕಾಲದವರೆಗಿನ ಶಾಸನಗಳಲ್ಲಿ ಶಕ ಸಂವತ್ಸರ ಎಂದೂ, ನಂತರ 'ಶಾಲಿವಾಹನ ಶಕ' ಎಂದು ಉಲ್ಲೇಖವಾಗಿರುವುದನ್ನು ಗಮನಿಸಬಹುದು. ಹೆಸರಿನಲ್ಲಿ ವ್ಯತ್ಯಾಸವಿದೆಯೇ ವಿನಃ ಕಾಲಗಣನೆಯಲ್ಲಿ ಯಾವೊಂದು ವ್ಯತ್ಯಾಸವೂ ಇಲ್ಲ. ಈ ಶಕ ಸಂವತ್ಸರವು ಕ್ರಿ.ಶ.೭೮ರಲ್ಲಿ ಪ್ರಾರಂಭವಾದುದರಿಂದ ಈ ೭೮ನ್ನು ಶಕಕ್ಕೆ ಕೂಡಿದರೆ ಕ್ರಿ.ಶ.ದೊರೆಯುತ್ತದೆ. ಮತ್ತು ಕ್ರಿ.ಶ.ದಲ್ಲಿ ೭೮ನ್ನು ಕಳೆದರೆ ಶಕ ಸಂವತ್ಸರದ ವಿಷಯಗಳು ದೊರೆಯುತ್ತವೆ. ಉದಾಹರಣೆಗಾಗಿ ಹಾಡೋನಹಳ್ಳಿ ಶಾಸನವು ಸ್ವಸ್ತಿ ಶ್ರೀಮತುಸಕ ವರುಷಂಗಳ ೧೨೫೦ನೆಯ ವಿಭವಸಂವತ್ಸರದ ಸ್ರಾವಣ ಎಂದು ನೀಡಿದ್ದು, ಈ ಶಾಸನದಲ್ಲಿ ಶಾಲಿವಾಹನ ಶಕೆ ೧೨೫೦ ಎಂದು ನೀಡಿದೆ. ಇದಕ್ಕೆ ೭೮ನ್ನು ಕೂಡಿದರೆ ನಮಗೆ ಕ್ರಿ.ಶ.ದ ತೇದಿಯ ವಿವರಗಳು ದೊರೆಯುತ್ತದೆ. ಈ ಶಾಸನದ ಕಾಲವು ೧೩೨೮ ಎಂಬುದಾಗಿ ತಿಳಿಯಬಹುದು. ಈ ಶಕ ವರ್ಷಗಳನ್ನು ಶಾಸನಗಳಲ್ಲಿ ಅಂಕಿಗಳಲ್ಲಿಯೂ, ಸಂಕೇತಗಳಲ್ಲಿಯೂ ಮತ್ತು ಕೆಲವೊಂದು ವೇಳೆ ಅಕ್ಷರಗಳಲ್ಲಿಯೂ ಬರೆದಿರುವುದುಂಟು. ಈ ಬಗೆಯ ಬರವಣಿಗೆಗಳು ಇಲ್ಲಿ ಅಪರೂಪವೆಂದೇ ಹೇಳಬಹುದು. ನಮ್ಮ ಅಧ್ಯಯನ ವ್ಯಾಪ್ತಿಯಲ್ಲಿ ಬರುವ ಕೆಲವು ಶಕ ವರ್ಷದ ಉಲ್ಲೇಖಗಳು ಈ ಕೆಳಗಿನಂತಿವೆ.

೧. ಸಾಲಿವಾಹನ ಶಕವರುಷಂಗಳು ೧೫೦೮[೧೬೫]

೨. ಶ್ರೀಮತುಶಾಲಿವಾಹನಶಕವರುಷಂಗಳ್ ೧೫೦೮ನೆಯ ವಾಯಿಸಂವತ್ಸರ[೧೬೬]

೩. ಶಾಲಿ ||ಶ|| ವರುಷ ೧೨೫೦ನೆಯ ವಿಭವಸಂವತ್ಸರ[೧೬೭]

೪. ಸಕವರಷಂಗಳ ೧೨೫೧ನೆಯ ವಿಭಬ ಸಂವತ್ಸರದ[೧೬೮]

೫. ಶ್ರೀಮತುಶಕವರುಷ ೧೩೩೮ನೆಯ ದುರ್ಮುಖಿ ಸಂವತ್ಸರ[೧೬೯]

೬. ಶ್ರೀಮತುಶಕವರುಷ ೧೨೫೧ನೆಯ[೧೭೦]

೭. ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಖವರುಷ ೧೪೪೧[೧೭೧]

೮. ಶಾಲಿವಾಹನಶಕ ೧೪೭೭ಕ್ಕೆ ಸಲ್ಲುಹ[೧೭೨]

೯. ಶಾಲಿವಾಹನಶಕ ೧೪೭೯ಕ್ಕೆ ಸಲ್ಲುಹ[೧೭೩]

೧೦. ಶ್ರೀವೀರಬುಕ್ಕಂಣವಡಿಯರು ಪೃಥ್ವೀರಾಜ್ಯಂಗೈಯುವ ಶಕವರುಷ ೧೨೮೯ನೆಯ[೧೭೪]

೧೧. ಶ್ರೀಶಾಲಿವಾಹನ ಶಕವರುಷ ೧೪೬೪ನೆಯ ಪ್ಲವಸವಂತ್ಸರದ[೧೭೫]

೧೨. ಶ್ರೀ ವಿಜಯಾಭ್ಯುದಯ ಶಾಲಿವಾಹನಶಕವರುಷದ ೧೪೮೪ನೆಯ ಶುಕ್ಲಸಂವತ್ಸರದ[೧೭೬]

೧೩. ಶ್ರೀವಿಜಯೂಭ್ಯುದಯ ಶಾಲಿವಾಹನಶಕ ವರುಷಂಗಳು ೧೪೧೫ನೆಯ[೧೭೭]

೧೪. ಶ್ರೀ ವಿಜಯೂಭ್ಯುದಯ ಶಾಲಿವಾಹನ ಶಕವರುಷಂಗಳು ೧೫೩೨ನೆಯ[೧೭೮]

೧೫. ಶ್ರೀ ವಿಜಯೂಭ್ಯುದಯ ಶಾಲಿವಾಹನಶಕ ವರುಷಂಗಳು ೧೪೫೩ನೆಯ[೧೭೯]

೧೬. ಶ್ರೀಶಕವರುಷ ೧೩೪೦ನೆಯ ವರುಸವಿಳಂಬಿಸಂವತ್ಸರದ[೧೮೦]

೧೭. ಶ್ರೀಶಕವರುಷ ೧೩೪೧ನೆಯ ವರುಷವಿಳಂಬಿಸಂವತ್ಸರದ[೧೮೧]

೧೮. ಶಾಲಿವಾಹನಶಕವರುಷಸಂವತ್ಸರದವಾದ ೧೫೭೬ನೆಯ[೧೮೨]

೧೯. ಶಕವರುಷ ೧೨೯ನೆಯ ಪರಾಭವಸಂವತ್ಸರ[೧೮೩]

೨೦. ಶ್ರೀವಿಜಯಾಭ್ಯುದಯ ಶಾಲಿವಾಹನ ಶಕವರುಷಂಗಳು ೧೬೩೭ನೆಯ[೧೮೪]

೨೧. ಶ್ರೀವಿಜಯಾಭ್ಯುದಯ ಶಾಲಿವಾಹನಶಕವರುಷಂಗಳೂ ೧೬೦೧ನೆಯ[೧೮೫]

೨೨. ಶ್ರೀ ಶಕವರುಷಂಗಳು ೧೩೬೮ನೆಯ[೧೮೬]

ಶಕವರ್ಷದ ನಂತರದ ಸ್ಥಾನವವನ್ನು ಅಲಂಕರಿಸಿರುವುದೇ ಪ್ರಭಾವಾದಿಸಂವತ್ಸರ ಪ್ರತಿ ಸಂವತ್ಸರವೂ ಚೈತ್ರ ಮಾಸದಿಂದ ಆರಂಭಗೊಂಡು ಹನ್ನೆರಡು ಮಾಸಗಳಲ್ಲಿ ನಡೆಯುತ್ತಿರುತ್ತದೆ. ಜೊತೆಗೆ ಆಯಾ ಸಂವತ್ಸರದ ಆಯಾ ತಿಂಗಳು ಅಥವಾ ಮಾಸವನ್ನು ತಿಳಿಸಿರುತ್ತಾರೆ. ಹಾಡೋನಹಳ್ಳಿ ಗ್ರಾಮದಲ್ಲಿ ದೊರೆತಿರುವ ಕ್ರಿ.ಶ.೧೩೨೮ ಶಾಸನದಲ್ಲಿ ಸರ್ವಜಿತ್ ಸಂವತ್ಸರ, ಕ್ರಿ.ಶ.೧೨೨೮ರ ಕಾಲದ ವಾಣಿಗರಹಳ್ಳಿಯಲ್ಲಿ ದೊರೆತಿರುವ ಶಿಲಾಶಾಸನದಲ್ಲಿ ವಿಭವಸಂವತ್ಸರ ಹಾಗೆಯೇ ಪಾರ್ತಿವ ಸಂವತ್ಸರ, ಕ್ರುತು ಸಂವತ್ಸರ, ತಾರಣ ಸಂವತ್ಸರ, ಖರ ಸಂವತ್ಸರ, ಪರಾಭವ ಸಂವತ್ಸರ, ಪ್ರಮೋದ ಸಂವತ್ಸರಗಳು ಉಲ್ಲೇಖಗೊಂಡಿವೆ. ಈ ಕಾಲಗಣನೆಯ ಪ್ರಕಾರ ಪ್ರತಿಯೊಂದು ಮಾಸವೂ ಎರಡು ಪಕ್ಷಗಳನ್ನು ಒಳಗೊಂಡಿರುವುದು ಈ ಪಕ್ಷಗಳು ಹದಿನೈದು ತಿಥಿಗಳಾಗಿ ವಿಭಾಗಿಸಲ್ಪಟ್ಟಿರುತ್ತದೆ. ಚಂದ್ರನು ಬೆಳೆಯುತ್ತ, ಹುಣ್ಣಿಮೆಯ ದಿನ ಉಜ್ವಲವಾಗಿ ಪ್ರಕಾಶಿಸುತ್ತಾನೆ. ಈ ಅವಧಿಯ ಸಮಯವನ್ನೇ ಶುಕ್ಲ ಪಕ್ಷವೆಂದೂ, ಹುಣ್ಣಿಮೆಯ ಅನಂತರ ಚಂದ್ರನು ಕ್ರಮೇಣ ಕ್ಷೀಣಿಸುತ್ತಾ ಬಂದು ಅಮಾವಾಸ್ಯೆಯ ದಿನ ಸಂಪೂರ್ಣ ಕಾಣದಾಗುವನು. ಈ ಹದಿನೈದು ದಿನಗಳನ್ನು ಕೃಷ್ಣಪಕ್ಷವನ್ನು ಶುದ್ಧವೆಂದೂ ಹೆಸರಿಸಿರುವುದನ್ನು ಗಮನಿಸಬಹುದು. ಸ್ವಸ್ತಿಶ್ರೀ ಮನ್ಮಾಹಮಂಡಲೇಶ್ವರಂ ಅರಿರಾಯವಿಬಾಡಬಾಸಿಗೆ ತಪ್ಪುವರಾಯರಶಿಗ್ಗಂಡ ಶ್ರೀವೀರಬುಕ್ಕಂಣ ವಡಿಯರು ಪೃಥ್ವೀರಾಜ್ಯಂಗೈಯುವಶಕವರುಷ ೧೨೮೯ನೆಯ ಪ್ಲವಂಗಸಂ ಕಾರ್ತಿಕ ಶು.೧ ಸೋ, ಶ್ರೀಮನ್ಮಾಹ" ಎಂದೂ ಕ್ರಿ.ಶ.೧೫೩೪ರ ಕಲ್ಲದೇವನಹಳ್ಳಿಯ ಶಾಸನದಲ್ಲಿ 'ಶುಭಮಸ್ತು ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನಶಕವರುಷಂಗಳು ೧೪೫೭ನೆಯ ಜಯಸಂವತ್ಸರದ ಆಶ್ವೀಜ ೧೨ಲು..." ಈ ಶಾಸನಗಳಲ್ಲಿ ಕೃಷ್ಣಪಕ್ಷವನ್ನು ಬಹುಳ ಎಂಬುದಾಗಿ ಕರೆದಿರುವುದನ್ನು ತಿಳಿಯಬಹುದು. ಶಾಸನಗಳಲ್ಲಿ ಮೇಲೆ ಹೇಳಿದ ತೇದಿಯ ವಿವರಗಳು ಎಲ್ಲಾ

ಕಡೆಯಲ್ಲೂ ವಿವರವಾಗಿ ಮತ್ತು ದೀರ್ಘವಾಗಿ ಬರೆದಿರುವುದಿಲ್ಲದಿರುವುದು ಗೋಚರಿಸುತ್ತದೆ. ಕೆಲವೊಂದು ಬಾರಿ ಪದದ ಮೊದಲ ಅಕ್ಷರವನ್ನು ಮಾತ್ರ ನಮೂದಿಸಿರುವರು. ವಸಂತ, ಶಿಶಿರ, ಗ್ರೀಷ್ಮ, ಹೇಮಂತ ಮುಂತಾದ ಋತುಗಳನ್ನು ಹೆಸರಿಸುವಾಗ ಕ್ರಮವಾಗಿ 'ವ', 'ಶಿ', 'ಗ್ರೀ', 'ಹೇ' ಎಂಬುದಾಗಿಯೂ ಪಕ್ಷವನ್ನು ತಿಳಿಸಲು 'ಶು', 'ಬ' ಎಂದು ಬರೆದಿರುತ್ತಾರೆ. ಕ್ರಮವಾಗಿ ಇವುಗಳನ್ನು ಶುದ್ಧ, ಬಹುಳ ಎಂದು ಅರ್ಥೈಸಬಹುದು. ಇಲ್ಲಿ ತಿಥಿಗಳನ್ನು ಸಂಖ್ಯೆಯ ಮೂಲಕ ಉಲ್ಲೇಖಿಸಲಾಗಿದೆ. ಬ.೧೦ ಎಂದರೆ ಬಹುಳ ಪಕ್ಷದ ದಶಮಿ ಎಂದೂ, ಶು ೮ ಎಂದರೆ ಶುದ್ಧ ಪಕ್ಷದ ಅಷ್ಟಮಿ ಎಂದು ತಿಳಿಯಬೇಕಾಗುತ್ತದೆ. ಇಲ್ಲಿನ ಶಾಸನಗಳಲ್ಲಿ ಮಾಸದ ಮತ್ತು ವಾರಗಳ ಹೆಸರುಗಳನ್ನು ಸಾಮಾನ್ಯವಾಗಿ ಬಹಳ ವಿಸ್ತೃತ ರೂಪದಲ್ಲಿಯೂ ಉಲ್ಲೇಖಿಸಿರುವುದು ಕಂಡುಬರುತ್ತದೆ. ಶಾಸನಗಳಲ್ಲಿ ಲಭ್ಯವಾಗಿರುವ ಮಾಸ, ಪಕ್ಷ, ತಿಥಿ, ವಾರ ಇವುಗಳಿಗೆ ಸಮರ್ಪಕವಾಗಿ ಇಂಗ್ಲೀಷ್ ಕ್ಯಾಲೆಂಡರಿನ ವಿವರಗಳು ಸ್ವಾಮಿನಾಥ ಕಣ್ಣುಪಿಳ್ಳೆ ಎಂಬ ವಿದ್ವಾಂಸರು ರಚಿಸಿರುವ 'ಇಂಡಿಯನ್ ಎಫಿಮರೀಸ್' ಎಂಬ ಪಂಚಾಂಗದಲ್ಲಿ ತಿಳಿಯಬಹುದಾಗಿದೆ. ಹಲವಾರು ಶಾಸನಗಳಲ್ಲಿ ಕಾಲ ಉಕ್ತವಾಗಿರುವುದಿಲ್ಲ. ಉಕ್ತವಾಗಿದ್ದರೂ ತಪ್ಪಾಗಿಸಿ ಉಲ್ಲೇಖವಾಗಿರುತ್ತದೆ. ಅಂತಹ ಸಂದರ್ಭದಲ್ಲಿ ಆ ಶಾಸನದಲ್ಲಿ ಬರುವ ರಾಜನ ಹೆಸರನ್ನೋ, ಲಿಪಿಯನ್ನೋ, ಭಾಷೆಯನ್ನೋ, ಅವಲಂಬಿಸಿ, ಶಾಸನ ಹುಟ್ಟಿದ ಕಾಲವನ್ನು ನಿರ್ಧರಿಸಬೇಕಾಗುತ್ತದೆ.

### ೩.೧೨. ಸಾಹಿತ್ಯ–ಛಂದಸ್ಸು

ದೊಡ್ಡಬಳ್ಳಾಪುರ ತಾಲ್ಲೂಕಿನ ಶಾಸನಗಳು ಸಂಖ್ಯೆಯ ದೃಷ್ಟಿಯಿಂದ ಕಡಿಮೆ ಎನಿಸಿದರೂ– ಸಾಹಿತ್ಯದ ದೃಷ್ಟಿಯಿಂದ ಗಮನ ಸೆಳೆಯುತ್ತವೆ. ಇಲ್ಲಿನ ಅನೇಕ ಶಾಸನಗಳ ಗದ್ಯರೂಪವು ಉತ್ತಮವಾದ ರಚನೆಯಿಂದ ಕೂಡಿದ್ದು ನಮ್ಮ ಮನ ಸೆಳೆಯುತ್ತವೆ.

### ಗದ್ಯರೂಪ

ಕ್ರಿ.ಶ.೮ನೇ ಶತಮಾನದ ಗಂಗರ ಅವಧಿಯ ಅನೇಕ ವೀರಗಲ್ಲುಗಳು ಉತ್ತಮ ಗದ್ಯರೂಪಕ್ಕೆ ಉದಾಹರಣೆಗಳಾಗಿವೆ. ಕ್ರಿ.ಶ.೮೮೦ರ ದೊಡ್ಡಬೆಳವಂಗಲದ ವೀರಗಲ್ಲಿನಲ್ಲಿ[೧೮೭] ಕಾಳಗದೊಳು, ಲಕಮ್ಮ ಮುಡುಪಿ ತಾನು ಇಂದ್ರಲೋಕ ಪ್ರಾಪ್ತನಾದ ಕಲಮನಿ ಇಲ್ಲಿ ವೀರಗಲ್ಲಿನ ಗುಡಿಯನ್ನು ಕಲಮನೆ ಎಂದು ಗುರುತಿಸಲಾಗಿದೆ. ಅದೇ ಸ್ಥಳದ ಮತ್ತೊಂದು ವೀರಗಲ್ಲಿನಲ್ಲಿ......ಪರೆಯೆವದಿ ಸತ್ತು ಸ್ವರ್ಗ ಪ್ರಾಪ್ತನಾದ ಎಂಬ ಸರಳ ರೂಪವಿದೆ. ತಿಪ್ಪೂರಿನ ಕ್ರಿ.ಶ.೧೫೮೬ರ ಒಂದು ಶಾಸನದಲ್ಲಿ[೧೮೮] ಶ್ರೀಮನ್ಮಾಹಾವತಿನಾಡ ಪ್ರಭು ಹಾವಳಿ ಬಯಪಗವುಡರು ತಿಪ್ಪೂರಲಿ ನಮಃ ಶಿವಾಯ ಕೆಂಪಿಶೆಟ್ಟಿ ಕಟ್ಟಿಸಿದ ಕಲ್ಲು ಮಠಕ್ಕೆ ಬಿಟ್ಟುಕೊಟ್ಟ ಮೂಲೆಗಾಸಿನ ಕ್ರಮವೆಂತೆಂದೆಡೆ ಹಣಬೆ ತಿಪ್ಪೂರ ಸೀಮೆಯೊಳಗಾಗಿ

ತೆಂಕ ಬಡಗಲು ಮೂಡಪಡುವಲು ನಡವಂತ ಊರುಗಳಲ್ಲಿ ಮೂಲೆಕಾಸು...ಸೀಮೆ ಮೇಲೆ ಬಂದ ಪಾರುಪಾತ್ಯಗಾರನಾಗಲಿ, ಸರ್ಕಾರದಗೌಡ ಸೇನಬೋವರಾಗಲಿ ಸುಂಕದ ಮಣೆಗಾರನಾಗಲಿ ಆರು ಇದಕೆವಿಗಡವ ಆಚರಿಸಿದರೂ ಅವರು ತಂದೆ–ತಾಯಿಗಳ ವಾರಣಾಸಿಯಲಿ ಕೊಂದ ಪಾಪಕೆ ಹೋಹರು. ಈ ರೀತಿಯಾಗಿ ಸರಳವಾದ ಗದ್ಯರೂಪ ಈ ತಾಲ್ಲೂಕಿನ ಬಹುತೇಕ ಶಾಸನಗಳಲ್ಲಿ ಕಂಡುಬರುತ್ತದೆ. ವಿಜಯನಗರ ಅರಸರ ಅನೇಕ ಶಾಸನಗಳು ಗದ್ಯರೂಪದಲ್ಲಿ ಇವೆ. ಅನೇಕ ತುರುಗೋಳ್ ವೀರಗಲ್ಲುಗಳು ಗದ್ಯದಲ್ಲಿರುವುದು ಈ ಪ್ರದೇಶದ ವೈಶಿಷ್ಟವಾಗಿದೆ. ಗಂಡ್ರಗೊಳ್ಳಿಪುರದ ಎರಡು ಶಾಸನಗಳು ಈ ಭಾಗದ ಶಾಸನಗಳ ಉತ್ತಮ ಗದ್ಯರೂಪಕ್ಕೆ ಸಾಕ್ಷಿಯಾಗಿವೆ. ಆರಂಭದಿಂದ ಶಾಪಾಶಯದವರೆಗೆ ಸುಮಾರು ೩೩ ಸಾಲುಗಳು ಉತ್ತಮ ಗದ್ಯರೂಪದಿಂದ ಕೂಡಿವೆ. ಕೆಲವು ಸಾಲು ಈ ಕೆಳಗಿನಂತಿವೆ. ಗಂಡ್ರಗೊಳ್ಳಿ ಸಣ್ಣಪ್ಪನಾಯಕರ ಮಕ್ಕಳು ಬೈರಪ್ಪನಾಯಕರು ಈ ಗಂಡ್ರಗೊಳ್ಳಿಪುರವನ್ನು ಈ ವೀರಸಿಂಹ ಮಹಾದೇವರಾಯರಿಗೆ ಧರ್ಮವಾಗಿ ಶ್ರೀಮತುಗಂಡ್ರರಗೊಳ್ಳಿ ದಳವಾಯಿ ಮಕ್ಕಳು ಬೈರಪ್ಪನಾಯಕರು ಶಿವಗಂಗೆಯ ಮೇಲಣಗವಿ ಸಿಂಹಾಸನದ ಮಲೆಕಾಂತದೇವರಿಗೆ ಶಿಷ್ಯಪಾರಂಪರ್ಯೆಯಾಗಿ ಅಚಂದ್ರಾರ್ಕ ಸಾಕ್ಷಿಯಾಗಿ ಶಿವಪೂಜೆಯಂ ಮಾಡಿಕೊಂಡು ಸುಖದಿಂದ ಅನುಭವಿಸುವುದು ಎಂದು ಕೊಟ್ಟ ಪುರಧರ್ಮಶಾಸನ. ಮತ್ತೊಂದು ಶಾಸನದಲ್ಲಿ ಗ್ರಾಮಗಳ ಮೇರೆಯನ್ನು ಈ ರೀತಿ ಕೊಡುವುದು ಆ ಗಂಡರಗೊಳ್ಳಿಪುರದ ಚತುಸ್ಸೀಮೆಯ ವಿವರ ಆ ಗಂಡರಗೊಳ್ಳಿಪುರದ ಮೂಡಲು ಈಚತೂರು ಮೇರೆ, ತೆಂಕಲು ಹೊನ್ನವೀರ ಸಿಂಪಾಡಿಪುರದ ಮೇರೆ ಆ ಗಂಡರಗೊಳ್ಳಿಪುರದ ಪಡುವಲು ಸಿಂಪಾಡಿಪುರದ ಕೆರೆಯ ಕಾವಿಲ ಗಂಡರಗೊಳ್ಳಿಪುರಕ್ಕೆ ಬಡಗಲು ಹೆಜ್ಜಾಜಿ ಸಕಲದೇವನಪುರದ ಮೇರೆ..." ಹೀಗೆ ಸರಳವಾದ ಶೈಲಿಯಲ್ಲಿ ಶಾಸನ ರಚನೆಗೊಂಡಿದೆ.

### ಪದ್ಯರೂಪ

ಈ ಭಾಗದಲ್ಲಿ ದೊರೆತಿರುವ ಶಾಸನಗಳಲ್ಲಿ ಪದ್ಯರೂಪಗಳು ಬಹಳ ಕಡಿಮೆ. ಬಹುತೇಕ ತಾಮ್ರಶಾಸನಗಳು ಶ್ಲೋಕದ ರೂಪದಲ್ಲಿವೆ. ಅದರಲ್ಲೂ ಹೆಚ್ಚಾಗಿ ಅನುಷ್ಟುಪ್ ಶ್ಲೋಕದಲ್ಲಿದೆ. ಕೆಲವು ಸಂಸ್ಕೃತದ ವೃತ್ತಗಳು ಕಂಡುಬರುತ್ತವೆ. ಉದಾಹರಣೆಗೆ

> ಕಾರ್ತ್ತಯುಗೀನರಾಜಚರಿತವಂ
> ಬ್ಬಿನಅನೇಕ ಸಮರ ವಿಯೋಪಾರ್ಜ್ಜಿತವಿಪುಲಯಶಕ್ಷೀರೋದ್ಯೈಕಾರ್ಣ್ಣವಿಕ್ರತುಭು
> ವನತ್ರಯ ಸ್ಯನಿರವಗ್ರಹ ಪ್ರದಾನಶೌರ್ಯ್ಯಸ್ಯ ಅವಿಷಹ್ಯ ಪರಾಕ್ರಮಾ
> ಕ್ರಾನ್ತ ಪ್ರತಿರಾಜಮಸ್ತಕಾಪ್ಪಿತಾಪ್ರತಿಹತಶಾಸನಸ್ಯ ಅನೇಕ ಮುಖಾಭಿವರ್ಧಮಾನ
> ವಿಭವೋದಯ ಪರಾಜಿತದ್ರವಿಣಪತೇ[೧೯]

ಒಟ್ಟಾರೆಯಾಗಿ ಹೇಳುವುದಾಧರೆ ಸಾಹಿತ್ಯದ ಬೇರೆ ಬೇರೆ ರೂಪಗಳಾದ ಕಂದ, ವೃತ್ತ, ಷಟ್ಪದಿ ಮುಂತಾದವು ಈ ಭಾಗದ ಶಾಸನಗಳಲ್ಲಿ ಕಂಡುಬರುವುದಿಲ್ಲ. ಜನಸಾಮಾನ್ಯರಿಗೆ ಅರ್ಥವಾಗುವಂತೆ ಸುಲಭವಾಗಿ ಗದ್ಯರೂಪದಲ್ಲಿಯೇ ಬರೆದಿರುವರು.

### ೩.೧೩. ಶಾಪಾಶಯ

ಪ್ರಾಚೀನ ಕನ್ನಡದ ಶಿಲಾಶಾಸನ ಮತ್ತು ತಾಮ್ರ ಶಾಸನಗಳಲ್ಲಿ ಬಹುತೇಕ ಶಾಸನಗಳು ದಾನಶಾಸನಗಳೆಂದೇ ಹೇಳಬಹುದು. ಶಾಸನಗಳಲ್ಲಿನ ದಾನ ವಿವರಣೆಯ ನಂತರ ದಾನವನ್ನು ನೀಡಿದ ವ್ಯಕ್ತಿ ಹೇಗೆ ಶ್ರೇಯಸ್ಸಿಗೆ ಪ್ರಾಪ್ತನಾಗುವನೋ, ದಾನವನ್ನು ಕಾಪಾಡಿದವರಿಗೂ ಅಷ್ಟೇ ಶ್ರೇಯಸ್ಸು ಎಂಬುದು ಸರ್ವವಿಧಿತ ಮಾತು. ದಾನವನ್ನು ಕಾಪಾಡಿದವರಿಗೆ ದೊರಕುವ ಶ್ರೇಯಸ್ಸು, ದಾನವನ್ನು ಅಪಹರಿಸಿದವರಿಗೆ ಒದಗುವ ಪಾಪಗಳನ್ನು ಹೇಳುವ ಶ್ಲೋಕಗಳು, ಸ್ಮೃತಿಗಳು ಮತ್ತು ಪುರಾಣಗಳಿಂದ ಉದ್ಧರಣೆಗೊಂಡ ವಾಕ್ಯಗಳಾಗಿವೆ. ಇಂತಹ ಅನೇಕ ಶ್ಲೋಕಗಳು ಸಾಮಾನ್ಯವಾಗಿ ಶಾಸನದ ಅಂತ್ಯ ಭಾಗದಲ್ಲಿ ಕಂಡುಬರುತ್ತವೆ. ಅಪರೂಪವೆಂಬಂತೆ ಶಾಸನದ ಆದಿಯಲ್ಲಿ ಅಥವಾ ಪ್ರಾರಂಭದಲ್ಲೇ ಅಥವಾ ಶಾಸನದ ಮಧ್ಯಭಾಗದಲ್ಲಿ ಬಂದಿರುವುದುಂಟು. ಆದರೆ ಇದು ಬಹಳ ಅಪರೂಪವೆಂಬಂತೆ ಕಂಡುಬರುತ್ತದೆ. ಇಂತಹ ಪಾಪ, ಪುಣ್ಯದ ಕಲ್ಪನೆ ಏಕೆ ಬಂತೋ? ಬಹುಶಃ ದಾನವಾಗಿ ನೀಡಿದ ಭೂಮಿಯನ್ನು ರಾಜರು ಖಂಡಿತವಾಗಿ ರಕ್ಷಿಸುತ್ತಾರೆ ಎಂಬ ಜನಗಳ ನಂಬಿಕೆಯಲ್ಲಿ ಅಪನಂಬಿಕೆ ಬಂದದ್ದರಿಂದ ಸಮಾಜದಲ್ಲಿ ನಿಷ್ಠೆ, ಪ್ರಾಮಾಣಿಕತೆಗಳು ಕಡಿಮೆಯಾದಂತೆಲ್ಲ ಇಂತಹ ಶ್ಲೋಕಗಳನ್ನು ಶಿಲಾಶಾಸನಗಳಲ್ಲಿ ಉದ್ಧರಿಸುವ ನಿಯಮ ಕ್ರಿ.ಶ.ದ ಪ್ರಾರಂಭದಲ್ಲೇ ಬೆಳೆದಿರಬಹುದು. ಆದರೆ ವಿದ್ವಾಂಸರಾದ ಡಾ.ಎಸ್.ಕೆ.ದೀಕ್ಷಿತ್ ರವರು ಕ್ರಿ.ಶ.೬ನೆಯ ಶತಮಾನದಿಂದ ಬೆಳೆಯಿತು ಎಂದು ಅಭಿಪ್ರಾಯ ಪಡುತ್ತಾರೆ.[೯೦] ಈ ರೀತಿಯ ಶ್ಲೋಕಗಳನ್ನು ಹೇಳುವ ಭಾಗವನ್ನು 'ದಾನಚ್ಛೇದೋಪವರ್ಣನ' ಎಂದು ಕರೆಯುತ್ತಾರೆ. ಈ ಮಾತಿಗೆ ದಾನವನ್ನು ಕೆಡಿಸಿದರೆ ಒದಗುವ ಪಾಪಗಳ ವರ್ಣನೆಯಿರಬೇಕು. ಅಂದರೆ ಫಲಶ್ರುತಿ ಎಂದೂ ಹೇಳಬಹುದು. ಹಿಂದಿನ ರಾಜರುಗಳು ಕೊಟ್ಟದಾನವನ್ನು ಮುಂದಿನವರು ಸಂರಕ್ಷಿಸಿಕೊಂಡು ಹೋಗುವುದು ಕಡಿಮೆಯಾದಾಗ ಇಂತಹ ಫಲಶ್ರುತಿಗಳು ಜನ್ಮತಾಳುತ್ತಿದ್ದವೆಂದು ಹೇಳಬಹುದು. ಬಹುಶಃ ಈ ರೀತಿಯ ಮಾತುಗಳು ವ್ಯಾಸ, ಮನು ಹೇಳಿರುವುದೆಂದು ಕೆಲವೊಂದು ಬಾರಿ ಹೇಳಿರುತ್ತದೆ.

ತಾನು ಕೊಟ್ಟ ದಾನವು ಮುಂದಿನ ತಲೆಮಾರಿನವರು ಸೂರ್ಯ ಚಂದ್ರರು ಇರುವವರೆಗೂ ಕಾಪಾಡಿಕೊಂಡು ಹೋಗಬೇಕೆಂಬ ದಾನಿಯ ವಿನಯಪೂರ್ವಕವಾದ ಮಾತು, ಕೆಲವೊಂದು ಬಾರಿ ಆಗ್ರಹ ಬೇಡಿಕೆಯ ರೂಪದಲ್ಲಿಯೂ ಇರುತ್ತದೆ. ಈ ರೀತಿಯ ದಾನ ದತ್ತಿಗಳನ್ನು ಕಾಪಾಡಿದವರಿಗೆ, ಮತ್ತು ಅದನ್ನು ಅಪಹರಿಸಿದವರಿಗೆ ಪ್ರಾಪ್ತವಾಗುವ ಪಾಪಪುಣ್ಯಗಳ ಉಲ್ಲೇಖವಿರುತ್ತದೆ.

ಈ ವಿಷಯವನ್ನು ತಿಳಿಸುವ ಬಹುತೇಕ ಶ್ಲೋಕಗಳು ಸಂಸ್ಕೃತ ಶ್ಲೋಕಗಳಲ್ಲಿ ಶಾಸನಕಾರ ಉದ್ಧರಿಸುತ್ತಾನೆ. ಕೆಲವೊಂದು ಸಮಯದಲ್ಲಿ ಶ್ಲೋಕಗಳ ಅರ್ಥವನ್ನು ಬರೆದಿರುತ್ತಾರೆ ಮತ್ತು ಕೆಲವೊಂದು ಬಾರಿ ದೇಶೀಯ ಬೈಗಳುಗಳನ್ನೇ ಪ್ರಯೋಗಿಸಿರುವುದುಂಟು. ಈ ಭಾಗವನ್ನೇ ನಾವು ಶಾಪಾಶಯ ಎಂದು ಕರೆಯುತ್ತೇವೆ.

ಕೆಲವು ತಾಮ್ರ ಪಟಗಳ ಕೊನೆಯಲ್ಲಿ "ಅಪಿಚಾತ್ರಮನುಗೀತಾಃ ಶ್ಲೋಕಾಃ' 'ವ್ಯಾಸ ವಾಕ್ಯಂ' ಎನ್ನುವ ಅನೇಕ ಶ್ಲೋಕಗಳಿರುತ್ತವೆ. ಆದರೆ ಇಂತಹ ಶ್ಲೋಕಗಳು ಪ್ರಾಚೀನ ಶಾಸನಗಳಲ್ಲಿ ಕಂಡುಬರುವುದಿಲ್ಲ. ಕನ್ನಡದ ಮೊಟ್ಟಮೊದಲ ಶಾಸನವಾದ ಹಲ್ಮಿಡಿ ಶಾಸನದಲ್ಲಿ 'ಕಳ್ದೋನ್ ಮಹಾಪಾತಕನ್ ' ಎಂದಿಷ್ಟೇ ಇದೆ. ಆದರೆ ಮುಂದೆ ಹುಟ್ಟಿ ಬಂದ ಶಾಸನಗಳಲ್ಲಿ "ಅಳಿವೋನ್ ಪಂಚ ಮಹಾಪಾತಕವನಕ್ಕುಂ ಏಳನೆಯಾ ನರಕದಾ ಪುಳು ಅಕುಂ" ಕೆಲವೊಂದು ವಾಕ್ಯಗಳನ್ನು ತಾಮ್ರ ಪಟಗಳಲ್ಲಿ ಧರ್ಮಶಾಸ್ತ್ರ, ಪುರಾಣಗಳಿಂದ ತೆಗೆದು ಉದಾಹರಿಸುವ ಪದ್ಧತಿಯು ಬೆಳೆಯಿತು.

ಸ್ವದತ್ತಾಂ ಪರದತ್ತಾಂ ವಾಯೋ ಹರೇತ ವಸುಂಧರಾಂ
ಷಷ್ಟಿರ್ವರ್ಷಸಹಸ್ರಾಣಿ ಘೋರೇ ತಮಸಿಪಚ್ಯತೇ||[೧೯೧]

ಇದರ ಮುಂದಿನ ಭಾಗ

ಷಷ್ಟಿರ್ವರ್ಷ ಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿಃ"[೧೯೨]

ಕನ್ನಡ ಶಾಸನಗಳಲ್ಲಿಯೂ ಸಾಮಾನ್ಯವಾಗಿ ಈ ರೀತಿಯ ಸಂಸ್ಕೃತ ಶ್ಲೋಕಗಳು ಬರುತ್ತವೆ. ಅಂದರೆ ತಾನು ಕೊಟ್ಟ ಅಥವಾ ಬೇರೆಯವರು ಕೊಟ್ಟ ದತ್ತಿ, ದಾನಗಳನ್ನು ಯಾವ ವ್ಯಕ್ತಿ ಅಪಹರಣ ಮಾಡುತ್ತಾನೆಯೋ ಅವನು ಅರವತ್ತು ವರ್ಷಗಳ ಕಾಲ ಕ್ರಿಮಿಯಾಗಿ ಜೀವಿಸುತ್ತಾನೆ. ಇದೇ ರೀತಿಯ ಶಾಪಾಶಯವನ್ನು ಹೇಳುವ ಮತ್ತೆರಡು ಶಾಸನಗಳು ಗಂಡ್ರಗೊಳ್ಳೀ ಪುರದಲ್ಲಿದೆ.[೧೯೩] ತಾಮ್ರಪಟಗಳಲ್ಲಿರುವಂತೆ ಶಿಲಾಶಾಸನಗಳೂ ಶಾಪಾಶಯ ಶ್ಲೋಕಗಳಿಂದ ಹೊರತಾಗಿಲ್ಲ. ಕೆಲವು ಶಾಸನಗಳಲ್ಲಿ ಶ್ಲೋಕಗಳಿದ್ದರೆ ಕೆಲವೊಂದು ಶಾಸನಗಳಲ್ಲಿ ಬಿಡಿಯಾದ ಒಂದು ವಾಕ್ಯಗಳಿಂದ ಕೂಡಿದ್ದು ಶಾಸನದ ಮಧ್ಯಭಾಗದಲ್ಲೂ (ಉಲ್ಲೇಖಗೊಂಡಿದೆ)ಹೇಳಿರುವುದುಂಟು. ಕ್ರಿ.ಶ.೧೪೬೪ರ ಕನಸವಾಡಿ ಶಾಸನದಲ್ಲಿ[೧೯೪] "ಗಂಗೆಯ ತಡಿಯಲ್ಲಿ ಸ್ತ್ರೀಯ್ಯಳ ಕೊಂದ ಪಾಪಕ್ಕೆ ಹೋಹರು ವಾರಣಾಸಿಯಲ್ಲಿ ಬ್ರಾಹ್ಮಣನ ಕೊಂದ ಪಾಪಕ್ಕೆ ಹೋಹರು" ಎಂದು ಕ್ರಿ.ಶ.೧೬ನೇ ಶತಮಾನಕ್ಕೆ ಸೇರಿದ ಕಸಾಗಟ್ಟದ ಶಿಲಾಶಾಸನದ ಕೊನೆಯಲ್ಲಿ "ಗಂಗೆಯ ತಡಿಯಲಿ ತಂಗೇಳು ಕವಿಲೆಯ ಕೊಂದ ಪಾಪದಲಿ ಹೋಹರುತಂ...." ಎಂದಿದೆ.[೧೯೫] ಗಂಗಾ ನದಿಯ ದಡದಲ್ಲಿ ಸ್ತ್ರೀಯನ್ನು ಕೊಲ್ಲುವುದು. ವಾರಣಾಸಿಯಲ್ಲಿ ಬ್ರಾಹ್ಮಣನನ್ನು ಕೊಲ್ಲುವುದು ಮಹಾಪಾಪ. ಸಮಾಜದಲ್ಲಿ ಸ್ತ್ರೀಯರಿಗೆ ಮತ್ತು ಬ್ರಾಹ್ಮಣರಿಗೆ ಗೌರವ ನೀಡುತ್ತಿದ್ದ ಅಂದಿನ ಕಾಲದ ಶ್ರೇಷ್ಠತೆಯನ್ನು ಎತ್ತಿ ಹಿಡಿಯುತ್ತದೆ.

ಶಾಪಾಶಯ ವಾಕ್ಯಗಳ ಮತ್ತಷ್ಟು ಕಠೋರತೆಯನ್ನು ಕಸಾಗಟ್ಟ ಶಾಸನವು "ಗಂಗೆಯ ದಡದಲ್ಲಿ ತಂಗೇಳು ಕವಿಲೆ ಅಂದರೆ ಗರ್ಭಧರಿಸಿದ ಏಳು ತಿಂಗಳ ಹಸುವನ್ನು ಕೊಂದ ಪಾಪಕ್ಕೆ ಹೋಗುವರು" ಎಂದು ಹೇಳುತ್ತದೆ.

ಕ್ರಿ.ಶ.೧೬೮೭ರ ಕಾಲಘಟ್ಟದ ಮಲ್ಲನಪಾಳ್ಯದ ತಾಮ್ರ ಶಾಸನದ[೧೬] ಮಧ್ಯಭಾಗದಲ್ಲಿ ಕಾಶಿಯೊಳಗೆ ಗೋಹತ್ಯೆ ಮಾಡಿದ ಆಗೆ ಬ್ರಮಹತ್ಯೆ ಶ್ರೀ ಹತ್ಯೆಯಿಂದಕ್ಕೆ ತಪ್ಪಿದರೆಯಿಂತಿಷ್ಟು ದೋಹ..." ಎಂದು ಹೇಳುವಲ್ಲಿ ಛಾಂದೋಗ್ಯ ಉಪನಿಷತ್ತಿನ ಕಾಲದಿಂದಲೂ ಪಂಚಮಹಾ ಪಾತಕಗಳೆಂದು ಪ್ರಸಿದ್ಧಿಯಾಗಿರುವ, ಬ್ರಹ್ಮಹತ್ಯೆ, ಸುರಾಪಾನ, ಸ್ತ್ರೀಯ-ಬಹುಶಃ ಬ್ರಾಹ್ಮಣರ ಆಸ್ತಿ, ಗುರ್ವಂಗನಾಗಮನ, ಎಂಬ ಮಹಾಪಾತಕ ಸಂಸರ್ಗಗಳನ್ನು ಶಾಪಶಯ ವಾಕ್ಯಗಳಲ್ಲಿ ಕಾಣಬಹುದು. ಬಾಲವಧೆ, ಸ್ತ್ರೀವಧೆ, ಗೋವಧೆ, ಬ್ರಾಹ್ಮಣವಧೆ, ಋಷಿವಧೆಗಳು ಪಂಚಮಹಾಪಾತಕಗಳೆಂದು ಜೈನ ಕಥಾವಳಿ ವಡ್ಡಾರಾಧನೆ ತಿಳಿಸುತ್ತದೆ. ನೀಡಿದ ದಾನವನ್ನು ಹಾಳು ಮಾಡಿದವರಿಗೆ ಪುಣ್ಯ ಕ್ಷೇತ್ರಗಳಲ್ಲಿ ಹಸು, ಬ್ರಾಹ್ಮಣ, ಸ್ತ್ರೀಯರನ್ನು ಕೊಂದ ಪಾಪವು ಲಭಿಸುತ್ತದೆ ಎಂಬ ಅರ್ಥಗಳು ಬರುವ ಮಾತುಗಳು ಅನೇಕ ಕಡೆ ದೊರೆಯುತ್ತವೆ. ಸಾಧಾರಣ ಶೈಲಿಯ ವಾಕ್ಯಗಳು ಶಾಸನಗಳಲ್ಲಿ ಹೇಳಿರುವುದುಂಟು. ಹದಿನಾರನೆಯ ಶತಮಾನಕ್ಕೆ ಸೇರಿದ ಕಸಾಗಟ್ಟದ ಮತ್ತೊಂದು ಶಾಸನದಲ್ಲಿ 'ಗೋವನು ಕೊಂದ ಪಾಪಕ್ಕೆ ಹೋಹರು' ಎಂದೂ, ಕ್ರಿ.ಶ.೧೬೪೬ರ ಕಾಲಕ್ಕೆ ಸೇರಿದ ಅಂಚರಹಳ್ಳಿ ಶಾಸನವು "ಯಿಹಪರವಿಲ್ಲ ಮೋಕ್ಷವಿಲ್ಲ" ಎಂಬ ಮಾತುಗಳು ದೊರೆಯುತ್ತವೆ.

ವಿಜಯನಗರ ಕಾಲದ ಮತ್ತು ಅನಂತರದ ಕಾಲದ ಶಾಸನಗಳಲ್ಲಿ ಶಾಪಾಶಯ ಭಾಗವು ಅಶ್ಲೀಲವಾದ ಬೈಗುಳಗಳಿಂದ ಕೂಡಿರುವುದನ್ನು ಗಮನಿಸುತ್ತೇವೆ. ಇವುಗಳಲ್ಲಿನ ನಿದರ್ಶನಗಳು ನನ್ನ ಈ ಅಧ್ಯಯನದ ವ್ಯಾಪ್ತಿಯಲ್ಲಿ ಕಂಡುಬಂದಿಲ್ಲ. ಕರ್ನಾಟಕದಲ್ಲಿನ ಶಾಸನಗಳನ್ನು ಅಧ್ಯಯನ ಮಾಡುವ ಸಂದರ್ಭದಲ್ಲಿ ಅಶ್ಲೀಲವಾದ ಭಾವವನ್ನೇ ಕೆಲವೊಂದು ಬಾರಿ ಗಂಭೀರವಾದ ಮಾತುಗಳಲ್ಲಿ ಹೇಳಿರುವುದುಂಟು. ಉದಾಹರಣೆಗಾಗಿ "ಈ ದತ್ತಿಯನ್ನು ಅಪಹರಿಸಿದವರು ಮಾತೃ ಗಮನ ಮಾಡಿದವರು" ಎಂದೋ ಈ ಕತ್ತೆಯ ಪ್ರಜಾಪತಿಯನ್ನು ಸುರೆಯಲ್ಲಿ ಮಿದ್ದು ತಿಂದವರು ಎಂದೋ, 'ಈ ದತ್ತಿಗೆ ಆಸೆ ಪಡುವವನು ಹೆಣದ ಬಾಯಿಲ್ಲಿನ ಅಕ್ಕಿಕಾಳಿಗೆ ಆಸೆಬಿದ್ದವನು, ನಾಯಿ ಮಾಂಸ ತಿಂದವನು' ಎಂದು ಹೇಳುವಲ್ಲಿ ಈ ಕಠೋರವಾದ ಮಾತುಗಳ ಹಿಂದಿನ ಮನಸ್ಸು ಮಾತ್ರ ಬಹಳ ಉದಾರವಾದುದಾಗಿದೆ. ಈ ಮಾತುಗಳಿಂದ ಅಂದಿನ ಕಾಲದ ದಾನ ಅಪಹರಣ ಸಂಗತಿಗಳನ್ನು ತಿಳಿಯಬಹುದು.

ದಾನವನ್ನು ನೀಡಿದವನು ತಾನು ನೀಡಿದ ದಾನ ಮಹತ್ವದ್ದು, ದೊಡ್ಡದು, ಬೇರೆಯವರು ತಿಳಿಯಲಿ ಅನ್ನುವುದಕ್ಕಿಂತ ತಾನು ನೀಡಿದ್ದು ಉಳಿಯಬೇಕು. ಅದು ಹೆಮ್ಮರವಾಗಿ ಬೆಳೆಯಬೇಕು

ಎಂಬ ವಿಷಯದಲ್ಲಿ ಹೆಚ್ಚು ಆಸಕ್ತಿ ತೋರಿಸುತ್ತಿದ್ದಂತೆ ಧ್ವನಿತವಾಗುತ್ತದೆ. ಇದಕ್ಕಾಗಿ ದಾನವನ್ನು ಪಾಲಿಸಿದರೆ, ಬರುವ ಫಲವನ್ನು ನಾಶಪಡಿಸಿದರೆ ಒದಗಿ ಬರುವ ಪಾಪಗಳನ್ನು ಕುರಿತು ಹೇಳಿದ್ದಾನೆ. ಅವುಗಳನ್ನು ಕಾಪಾಡುವಂತೆ ಭಿನ್ನವಿಸಿರುವುದು ತಿಳಿಯುತ್ತದೆ. ಕೆಟ್ಟ ಮತ್ತು ಕಠೋರ ಮಾತುಗಳನ್ನು ಆಡಿರುವುದು ಗಮನಿಸಿದಾಗ ಸಾಮಾನ್ಯವಾಗಿ ದಾನಗಳು ಉಳಿದುಕೊಂಡು ಬಂದಿದ್ದರೂ ದಾನಗಳನ್ನು ಅಪಹರಿಸಿರಬೇಕು. ಇದನ್ನೇ ಗಮನದಲ್ಲಿಟ್ಟುಕೊಂಡೇ ಕೃತಿಕಾರ ಶಾಪಾಶಯ ಭಾಗಕ್ಕೆ ಹೆಚ್ಚು ಒತ್ತು ನೀಡಿರಬಹುದು. ಆ ಕಾಲದಲ್ಲಿನ ಸಾಮಾಜಿಕ ಜನ ಜೀವನವನ್ನು ಧರ್ಮ, ಅರ್ಥ, ಶಾಸ್ತ್ರಗಳು, ನಿಯಂತ್ರಿಸುತ್ತಿದ್ದವೆಂದು ಹೇಳಬಹುದು. ಇಲ್ಲಿನ ಮುಖ್ಯ ಆಶಯ ಧರ್ಮಕ್ಕೆ ಅನುಗುಣವಾಗಿ ಧರ್ಮಶಾಸ್ತ್ರಗಳಿಗೆ ಸಮ್ಮತವಾದ ಮಾರ್ಗದಲ್ಲಿ ನಡೆಯಬೇಕೆನ್ನುವುದಾಗಿದೆ. ಈ ರೀತಿಯ ಶಾಪಾಶಯ ಶ್ಲೋಕಗಳು ಶೈವ, ವೈಷ್ಣವ, ಜೈನ ಶಾಸನಗಳಲ್ಲಿ ಸಾರ್ವತ್ರಿಕವಾಗಿ ಕಂಡುಬರುತ್ತವೆ. ಈ ಮಾತುಗಳ ಆಂತರ್ಯ ದಾನವನ್ನು ಕೊಟ್ಟವರು ತಾನು ದೊಡ್ಡವನೆಂದು ಭಾವಿಸಿಕೊಳ್ಳುವುದಕ್ಕಿಂತ ತಾನು ಕೊಟ್ಟ, ನೀಡಿದ ದಾನ ಶಾಶ್ವತವಾಗಿರಲಿ ಎಂಬ ದೃಢ ಮನೋಭಾವನ್ನು ವ್ಯಕ್ತಪಡಿಸುತ್ತದೆ.

### ೩.೧೪. ಶಾಸನ ಕವಿಗಳು, ಲಿಪಿಕಾರರು, ಲಿಪಿವೈವಿಧ್ಯ

ದಾನಚ್ಛೇದೋಪಪರ್ವರ್ಣನ ಭಾಗದ ನಂತರ ಶಾಸನಗಳ ತುತ್ತತುದಿಯಲ್ಲಿ ಅಥವಾ ಶಾಸನದ ಕೊನೆಯ ಹಂತದಲ್ಲಿ ಶಾಸನವನ್ನು ಬರೆದ ಕೃತಿಕಾರನ ಶಾಸನ ಕೆತ್ತಿದ ಶಿಲ್ಪಿಯ ಹೆಸರುಗಳು ಕಂಡುಬರುವುದುಂಟು. ಪ್ರಾಚೀನವಾದ ಕನ್ನಡ ಶಿಲಾಶಾಸನಗಳು ಮತ್ತು ತಾಮ್ರಪಟಗಳಲ್ಲಿ ಕೃತಿಕಾರ ಮತ್ತು ಶಿಲ್ಪಿಗಳ ಇಬ್ಬರ ಹೆಸರುಗಳನ್ನು ಹೇಳಿರುವುದು ತುಂಬಾ ಕಡಿಮೆ. ಸಾಧಾರಣವಾಗಿ ಶಾಸನಗಳಲ್ಲಿ ಬರೆದಂ, ಎಂಬ ಪದಗಳು ಕಾವ್ಯವನ್ನು, ನಿರ್ಮಿಸಿದವನು ಅಥವಾ ಕಾವ್ಯವನ್ನು ರಚಿಸಿದವನು ಎಂಬರ್ಥದಲ್ಲಿ ಪ್ರಯೋಗವಾಗಿರುವುದು ಕಂಡುಬರುವುದಿಲ್ಲ. ಈ ಒಂದು ಅರ್ಥವನ್ನೇ ಸೂಚಿಸುವ 'ಪೇಳ್ದರೆ' 'ವಿರಚಿಸಿದಂ' ಎಂಬ ಪದಗಳು ಉಪಯೋಗಿಸಿರುತ್ತಾರೆ. 'ಬರೆದಂ' 'ಬರಹ' ಎಂಬ ಪದಗಳು ಕಲ್ಲಿನ ಮೇಲೆ ಬರೆದ ಅಥವಾ ರಚಿಸಿದ ಎಂಬ ಅರ್ಥದಲ್ಲಿ ಪ್ರಯೋಗವಾಗಿರುತ್ತದೆ. ಆದರೆ ಪ್ರಾಚೀನ ಕನ್ನಡ ಶಾಸನಗಳಲ್ಲಿ ಹೆಸರನ್ನು ಹೇಳುವ ಸಂಪ್ರದಾಯವಿರಲಿಲ್ಲವೇನೋ, ಕ್ರಿ.ಶ.ಮೂರನೆಯ ಶತಮಾನಗಳಲ್ಲಿ ಮಳವಳ್ಳಿಯ ಪ್ರಾಕೃತ ಭಾಷೆಯಲ್ಲಿ ರಚಿತವಾದ ಶಾಸನಗಳಲ್ಲಿ ಶಾಸನ ರಚಿಸಿದ ಕೃತಿಕಾರ ನಾಗದತ್ತ, ಮತ್ತು ಶಿಲ್ಪಿ ವಿಶ್ವಕರ್ಮರ ಹೆಸರುಗಳನ್ನು ನೋಡಬಹುದು.[೧೯೭] ಹಲ್ಮಿಡಿ ಶಾಸನದ ಕೊನೆಯ ಸಾಲುಗಳಲ್ಲಿ ಬಟಾರಿಕುಲದೊನ್ ಅಳಕದಬ್ಬನ್ " ಎಂಬುದು ಬಹುಶಃ ಕತೃವನ್ನು ಸೂಚಿಸುತ್ತದೆ. ಕ್ರಿ.ಶ.೧೫೩೧ರ ಕಾಡನೂರು ಶಾಸನವು ಸಹ ಕೃತಿಕಾರನ ಹೆಸರನ್ನು ಹೇಳುತ್ತದೆ. ಶಾಸನದ ಕೊನೆಯಲ್ಲಿ 'ಸ್ವದತ್ತಂ ಪರದತ್ತಾಂ ವಾಯೋ ಹರೇತಿ ವಸುಂಧರಾ |ಶಸಿಘಾ ಕೋಶ ಸಹಸ್ರಾಣಿತ್ರಿಷ್ಯಾಯಾಂ ಜಾಯತೇ ಕ್ರಿಮೆ|| ನಾಗಪ್ಪನಬರಹಾ|| ಎಂಬುದು ಶಾಸನವನ್ನು

ರಚಿಸಿದ ಕತೃವೇ ಎಂದು ತಿಳಿಯುತ್ತದೆ.[೧೯೮] ಕ್ರಿ.ಶ.೧೬೮೭ರ ತಾಮ್ರಶಾಸನದಲ್ಲಿ "ಸೂರ್ಯಚಂದ್ರಾದಿಗಳು ಸಾಕ್ಷಿಯಿಂದ ಬರೆದಂತ ಗಂಗಪನ ಬರಹ..." ಎಂದು ಉಲ್ಲೇಖಗೊಂಡಿದೆ.[೧೯೯] ಇಲ್ಲಿನ ಬರಹ ಎಂಬ ಮಾತನ್ನು ಕೊರೆಯುವಿಕೆ, ಕಂಡರಣೆ ಎಂದು ಅರ್ಥೈಸಬಹುದು. ಇಲ್ಲಿನ ಗಂಗಪ್ಪ ಎಂಬುದು ಕೃತಿಕಾರನಿಂದ ರಚಿತವಾದುದಾಗಿದೆ ಎಂದು ಹೇಳಬಹುದಾಗಿದೆ.

ಕ್ರಿ.ಶ.೧೫೩೦ ಅಚ್ಚುತರಾಯರ ಕಾಲಕ್ಕೆ ಸೇರಿದ್ದ ಕೊನಘಟ್ಟದ ತಾಮ್ರಶಾಸನ[೨೦೦] ಲಿಪಿಕಾರ ಮಲ್ಲಣಾರ್ಯನನ್ನು ಉಲ್ಲೇಖಿಸುತ್ತದೆ. ಈತನ ಹೆಸರು ವಿಜಯನಗರ ಅರಸರ ಅನೇಕ ಶಾಸನಗಳಲ್ಲಿ ಪ್ರಸ್ತಾಪವಾಗಿದೆ. ಬಹಳಷ್ಟು ಶಾಸನಗಳನ್ನು ರಚಿಸಿದ ಕೀರ್ತಿ ಹೆಗ್ಗಾಳಿಕೆಗೆ ಪಾತ್ರನಾದವನು ಈ ಶಾಸನವನ್ನು ಕೆತ್ತಿದ ರೂವಾರಿಯೂ ಹೌದು. ಈತನ ಹೆಸರನ್ನು ಉಲ್ಲೇಖಿಸುವ ಹಲವಾರು ಶಾಸನಗಳು ಕರ್ನಾಟಕದಲ್ಲಿ ಬಹಳಷ್ಟಿವೆ. ವಿಜಯನಗರದವರ ಆಶ್ರಯದಲ್ಲಿ ಪರಂಪರೆಯಿಂದ ನೆಲಸಿದ ರೂವಾರಿಯ ಕುಟುಂಬವೊಂದನ್ನು ಇಲ್ಲಿ ನೋಡಬಹುದು.

೧. ಕೃಷ್ಣದೇವಮಹಾರಾಯ ಶಾಸನೇನ ಸಭಾಪತಿಃ|
ಅಭಾಣೀಂ ಮೃದುಸಂಭರ್ಾಂತದಿದಂ ತಾಂಮ್ರಶಾಸನಂ|
ತ್ವಷ್ಟಾ ಶ್ರೀಮಲ್ಲಣಾಚಾರ್ಯ ವೀರಣಾಚಾರ್ಯನಂದನಃ|
ಆಕಲ್ಪ ಮಶ್ನುತೇತ್ರೈಕಾವ್ಯತ್ತಿಂ ಶಾಸನಲೇಖನಃ||[೨೦೧]

೨. ಕೃಷ್ಣದೇವಮಹಾರಾಯ ಶಾಸನೇನ ಸಭಾಪತಿಃ|
ಅಗ್ರಣೀವರಸಂದತ್ತಂ ತದಿದಂ ತಾಮ್ರಶಾಸನಂ|
ಅಪ್ಪಣಾಚಾರ್ಯವರ್ಯ ಶ್ರೀ ವೀರಣಾಚಾರ್ಯನಂದನಃ|
ಆಕಲ್ಪಮಶ್ನುತೇ ಕೀರ್ತ್ತಿ ಚಿರಂ ಶಾಸನ ಲೇಖಕಃ||[೨೦೨]

೩. ಕೃಷ್ಣದೇವಮಹಾರಾಯ ಶಾಸನೇನ ಸಭಾಪತಿಃ|
ಅಭಾಣೀನ್ಮೃದುಸಂದರ್ಭಂ ತದಿದಂ ತಾಮ್ರಶಾಸನಂ|
ಕೃಷ್ಣದೇವಮಹಾ[ರಾ]ಯ ಶಾಸನಾನ್ಮಲ್ಲಣಾತ್ಮಜಃ|
ತ್ವಷ್ಟಾ ಶ್ರೀ ವೀರಣಾಚಾರ್ಯ್ಯೋವ್ಯಲಿಖಿತ್ತಾಮ್ರಶಾಸನಂ||[೨೦೩]

೪. ಅಚ್ಯುತೇಂದ್ರ ಮಹಾರಾಯ ಶಾಸನೇನ ಸಭಾಪತಿ|
ಅಭಾಣೀನ್ ಮೃದು(ಸಂದ) ಸಂದರ್ಭಂ ತದಿದಂ ತಾಂಬ್ರಶಾಸನಂ|
ಅಚ್ಚುತೇಂದ್ರ ಶಾಸನೇಮಲ್ಲಣಾತ್ಮ[ಜಃ]
ತ್ವಷ್ಟಾ ವೀರಣಾಚಾರ್ಯ್ಯೋವ್ಯಲಿಖಿತ್ತಾಂಬ್ರ ಶಾಸನ||[೨೦೪]

೫. .....................ಮ[ಹಿ]ಥಾಚ್ಯುತರಾಯ ಶಾಸನೇನ|
ಆಭಣದನುಗುಣಂ ವಚೋಮಹಿಮ್ನಾ ಸರಸತರೇಣ[ಸಭಾ]ಪತಿಃ ಸ್ವಯಂಭೂ|
ತದಚ್ಯುತಮಹಾರಾಯ ಶಾಸನಾದ್ವೀರಣಾತ್ಮಜ|
ತ್ವಷ್ಟಾ ಶ್ರೀವೀರಣಾಚಾರ್ಯ್ಯೋವ್ಯಲಿಖಚ್ಚ ಶಿಲಾತಲೇ||[೨೦೫]

೬. ಮೃದುಪದಮಿತಿ ತಾಂಮ್ರಶಾಸನಾರ್ಥಂ ಮಹಿತ ಸದಾಶಿವರಾಯ ಶಾಸನೇನ|
ಆಭಣದನುಗುಣಂ ವಚೋಮಹಿಮ್ನಸರಸತರೇಣ ಸಭಾಪತಿ ಸ್ವಯಂಭುಃ|
ಸದಾಶಿವ ಮಹಾರಾಯ ಶಾಸನಾದ್ವೀರಣಾತ್ಮಜಃ|
ತ್ವಷ್ಟಾ ಶ್ರೀ ವೀರಣಾಚಾರ್ಯೋವ್ಯಲಿಖತ್ತಾಂಮ್ರ ಶಾಸನಂ||[೨೦೬]

೭. ಅಚ್ಚುತವಿಹಿತಾ ಲೋಕಯಚ್ಯುತರಾಯಸ್ಯಶಾಸನಂ|
ತದಿದಂ ಅಚ್ಚುತೇಂದ್ರ ಮಹಾರಾಯ ಶಾಸನನ್ಮಲ್ಲಣಾತ್ಮನಃ||[೨೦೭]

ಈ ಏಳು ಉದ್ಧರಣೆಗಳ ಸೂಕ್ಷ್ಮ ಅಧ್ಯಯನದಿಂದ ಅಥವಾ ಅಭ್ಯಾಸದಿಂದ ಕೃಷ್ಣದೇವರಾಯ, ಅಚ್ಚುತರಾಯ, ಸದಾಶಿವರಾಯರ ಆಶ್ರೈ ಪಡೆದ ರುವಾರಿ ವೀರಣಾಚಾರ್ಯನ ವಂಶಾವಳಿಯನ್ನು ಹೀಗೆ ಗುರುತಿಸಬಹುದು.

**ವೀರಣಾರ್ಯ**

**ಮಲ್ಲಣಾರ್ಯ** | **ಅಪ್ಪಣಾಚಾರ್ಯ**

|

**ವೀರಣಾಚಾರ್ಯ(=ವೀರಣ)**

|

ವೀರಣಾಚಾರ್ಯ

ವಿಜಯನಗರ ಅರಸರ ಆಶ್ರಯದಲ್ಲಿ ಶಾಸನೋಕ್ತ ಮಲ್ಲಣಾಚಾರ್ಯ ಹಲವಾರು ಶಾಸನಗಳನ್ನು ಬರೆದಿದ್ದಾನೆ. ಈತನಿಗೆ ಸಂಸ್ಕೃತ ಭಾಷೆಯ ಮೇಲೆ ಪ್ರಭುತ್ವವನ್ನು ಸಾಧಿಸಿದಂತೆ ಈತನು ರಚಿಸಿದ ಶಾಸನಗಳಿಂದ ಅರಿಯಬಹುದು.

ತಾಮ್ರಪಟಗಳ ಮೇಲಾಗಲಿ ಅಥವಾ ಶಿಲೆಗಳ ಮೇಲಾಗಲಿ ವಿಷಯವನ್ನು ಪ್ರಸ್ತಾಪಿಸುವ ಮುನ್ನ ಶಾಸನದ ವಿಷಯವನ್ನು ಓಲೆಯ ಮೇಲೆ ಬರೆಯುತ್ತಿದ್ದರು. ಆ ನಂತರ ತಾಮ್ರ ಪಟದ ಮೇಲೆ ಮಸಿಯಲ್ಲಿ ಅಥವಾ ಶಿಲೆಯ ಮೇಲೆ ಬಳಪದಲ್ಲಿ ಬರೆಯುತ್ತಿದ್ದರು. ಅಂದರೆ ಓಲೆಯ ಮೇಲೆ ಬರೆಯಬೇಕಾದ ವಿಷಯವನ್ನು ಒಬ್ಬ ವ್ಯಕ್ತಿ ಸಿದ್ಧಪಡಿಸಿದರೆ ಆತನೇ ಕೃತಿಕಾರ. ಅದನ್ನು ಶಿಲೆಯ ಮೇಲೆ ಬಳಪದಲ್ಲಿ ಮತ್ತೊಬ್ಬ ಬರೆದು ಕೊಡುತ್ತಿದ್ದನು. ಶಿಲ್ಪಿ ಅದನ್ನು ಕೆತ್ತುತ್ತಿದ್ದನು. ಹೀಗೆ

ಒಂದು ಶಾಸನವು ರೂಪಗೊಳ್ಳಬೇಕಾದರೆ, ಈ ಮೂವರ ಪ್ರಯತ್ನಮೂ ಅಗಿರುವಂತೆ ತಿಳಿಯಬಹುದು. ಶಾಸನಗಳನ್ನು ಕೆತ್ತುತ್ತಿದ್ದ ಶಿಲ್ಪಿಗಳನ್ನು ಶಿಲ್ಪಿ, ಲಿಪಿಕಾರ, ರೂವಾರಿಗಳೆಂದೂ ಸರಸ್ವತಿ ಗಣದಾಸಿಗಳೆಂದು ಕರೆಯಲಾಗುವುದು ಇವರುಗಳು ಶಿಲ್ಪಕಲೆಯಲ್ಲಿ ಪಾರಂಗತರಾಗಿದ್ದಂತೆ ತೋರುತ್ತದೆ ಮತ್ತು ಅಕ್ಷರಗಳನ್ನು ಬಹಳ ಅಂದವಾಗಿ ಬರೆಯುತ್ತಿದ್ದರು. ವಿಜಯನಗರದ ಶ್ರೇಷ್ಠ ಅರಸ ಶ್ರೀಕೃಷ್ಣದೇವರಾಯನು ಲಿಂಗಾಪುರದ ಲಕ್ಷ್ಮೀ ದೇವಾಲಯಕ್ಕೆ ದಾನವನ್ನು ನೀಡಿರುವ ಕ್ರಿ.ಶ.೧೫೧೦ರ ಕಾಲದ ಶಾಸನದ ಅಕ್ಷರಗಳು ಬಹು ಸುಂದರವಾಗಿ ಕೆತ್ತಿದೆ ಇಲ್ಲಿ ಲಿಪಿಕಾರನಲ್ಲಿದ್ದ ಆಸಕ್ತಿ, ಶ್ರದ್ಧೆ, ಹಾಗೂ ಅವನಲ್ಲಿದ್ದ ಅಕ್ಷರ ಜ್ಞಾನದ ಬಗ್ಗೆ ನಾವು ಅರಿಯಬಹುದು. ಹನ್ನೆರಡನೆಯ ಶತಮಾನದ ಹೊಯ್ಸಳರ ಶಾಸನವೊಂದರಲ್ಲಿ 'ಶ್ರೀಮಲಪಹೊಳ ಗಂಡ' ಎಂದಿದೆ. ಒಬ್ಬನ ಬಹುಶಃ ಇದು ರುಜುವಿರಬೇಕು ಎಂದು ತಿಳಿದುಬರುತ್ತದೆ. ಈ ಸಂಪ್ರದಾಯ ಶಾಸನ ಪ್ರಪಂಚದಲ್ಲಿ ಹದಿಮೂರನೆಯ ಶತಮಾನದಿಂದ ಮುಂದೆ ರುಜುಗಳನ್ನು ಹಾಕುವುದು ಬೆಳೆದಿದೆ. ವಿಜಯನಗರದ ಅರಸರ ಶಾಸನಗಳ ಕೊನೆಯಲ್ಲಿ 'ಶ್ರೀ ವಿರೂಪಾಕ್ಷ' ಎಂಬ ಒಪ್ಪಗಳನ್ನು ನೋಡುತ್ತೇವೆ. ಹರಿಹರನ ನಂಬಿಯಣ್ಣನ ರಗಳೆಗಳಲ್ಲಿ ಇಂತಹ 'ಒಪ್ಪ'ದ ಉಲ್ಲೇಖಗಳನ್ನು ಕಾಣಬಹುದು.

ಶಾಸನ ಶಿಲ್ಪಿಗಳು ತಮ್ಮನ್ನು ಸರಸ್ವತಿ ಗಣದಾಸಿಗಳೆಂದು ಕರೆದುಕೊಂಡಿದ್ದಾರೆ. ಸರಸ್ವತೀ ಗಣ ಎಂದರೆ ವಿದ್ಯಾವಂತ, ದಾಸಿ ಎಂದರೆ ಅನುಯಾಯಿ ಎಂದು ಅರ್ಥೈಸಬಹುದು. ಇವರುಗಳು, ವಿದ್ಯಾವಂತರಾಗಿರಲಿ, ಅವಿದ್ಯಾವಂತರಾಗಿರಲಿ ಶಿಲ್ಪಶಾಸ್ತ್ರದಲ್ಲಿ ಪ್ರಾವಿಣ್ಯತೆಯನ್ನು ಪಡೆದ ಕುಶಲಿಗಳಾಗಿದ್ದರು. ಇವರ ಆದಿದೈವ ವಿಶ್ವಕರ್ಮ, ಶಿಲ್ಪಕಲೆ ಮತ್ತು ಚಿತ್ರಕಲೆಗಳು ಕರ್ನಾಟಕದಲ್ಲಿ ಅಭಿವೃದ್ಧಿ ಕಾಣಲು ಇವರೇ ಪ್ರಮುಖ ಕಾರಣರು ಎನ್ನಬಹುದು. ಇವರ ದೃಷ್ಟಿಕೋನವು ಶಾಸನಗಳನ್ನು ಕೊರೆಯುವ ಕರ್ಮವು ಕಲಾಕರ್ಮವಾಗಿದ್ದಿತು. ವಿಷ್ಣು ಧರ್ಮೋತ್ತರ ಪುರಾಣದಲ್ಲಿ ಶಿಲ್ಪಿ ಎಂತಹ ಶಿಲೆಯನ್ನು ಆರಿಸಿಕೊಳ್ಳಬೇಕು. ಶಿಲಾಪ್ರಭೇದಗಳು ಅವುಗಳ ಗುಣದೋಷಗಳನ್ನು ಸವಿಸ್ತಾರವಾಗಿ ಹೇಳುತ್ತದೆ. ಶೈವ ಶಾಸನಗಳಲ್ಲಿ ಪ್ರಧಾನವಾಗಿ ಶಿವಲಿಂಗ, ನಂದಿಯನ್ನು ಶಾಸನದ ಮೇಲ್ಭಾಗದಲ್ಲಿ ಬಿಡಿಸಿರುವುದುಂಟು. ಕ್ರಿ.ಶ.೧೫೩೦ರ ತಾಮ್ರಶಾಸನದಲ್ಲಿ, ಕ್ರಿ.ಶ.೧೨೬೭ರ ದೊಡ್ಡಬಳ್ಳಾಪುರದ ಶಾಸನದಲ್ಲಿ, ಕ್ರಿ.ಶ.೧೭೦೫ರ ಮಾವಳೀಪುರದ ಶಾಸನ ಇನ್ನು ಮುಂತಾದ ಶಾಸನಗಳಲ್ಲಿ ಶಿಲ್ಪ ಬಿಡಿಸಿರುವುದನ್ನು ಕಾಣುತ್ತೇವೆ. ವೈಷ್ಣವ ಶಾಸನಗಳ ಮೇಲೆ ಶಂಖ, ಚಕ್ರಗಳ ಚಿಹ್ನೆಗಳಿರುತ್ತವೆ. ಅಲ್ಲದೆ ಸೂರ್ಯ, ಚಂದ್ರ, ಖಡ್ಗ, ನೇಗಿಲುಗಳನ್ನು ಕೆತ್ತಿರುವುದುಂಟು. ಲಿಂಗಾಪುರದ ಲಕ್ಷ್ಮೀ ದೇವಾಲಯದಲ್ಲಿನ ಶಾಸನ, ಕಾಡನೂರು ಶಾಸನ ಕನಸವಾಡಿ ಶಾಸನಗಳ ಮೇಲ್ಭಾಗದಲ್ಲಿ ಚಿಹ್ನೆಗಳನ್ನು ಸೊಗಸಾಗಿ ಬಿಡಿಸಿರುವುದುಂಟು. ಜೈನ ಶಾಸನಗಳಲ್ಲಿ ಪಲ್ಯಂಕಾಸನದಲ್ಲಿರುವ ಅರ್ಹಂತನ ಚಿತ್ರಗಳಿರುತ್ತವೆ. ತಾಲೂಕಿನ ಅತ್ಯಂತ ಪ್ರಾಚೀನ ಶಾಸನಗಳಾದ ಮಲ್ಲೋಹಳ್ಳಿಶಾಸನಗಳನ್ನು ಉದಾಹರಣೆಗಾಗಿ

ನೀಡಬಹುದು. ಅಲ್ಲದೆ ಬಹುತೇಕ ಎಲ್ಲಾ ಜೈನ ಶಾಸನಗಳಲ್ಲೂ ಶಿಲ್ಪಿಯ ಕೈಚಳಕವನ್ನು ಗುರುತಿಸಬಹುದಾಗಿದೆ.

ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ದೊರೆತ ಮಾಸ್ತಿಕಲ್ಲುಗಳ ಮೇಲೆ ಸಾಮಾನ್ಯವಾಗಿ ಸ್ತ್ರೀಯ ಚಿತ್ರ ಮತ್ತು ಬಳೆಗಳಿಂದ ಅಲಂಕೃತಗೊಂಡ ಹಸ್ತಗಳನ್ನು ಬಿಡಿಸಿರುವುದುಂಟು. ವೀರಗಲ್ಲುಗಳ ಮೇಲೆ ಮೂರು ಹಂತಗಳಿರುವುದನ್ನು, ಆ ಕಾಲದ ವೇಷ ಭೂಷಣಗಳನ್ನು ಲಿಪಿಕಾರ ರಸವತ್ತಾಗಿ ಚಿತ್ರಿಸಿರುತ್ತಾನೆ. ಹತ್ತನೆಯ ಶತಮಾನದೆಂದು ಹೇಳಲಾದ ಲಕ್ಷ್ಮೀದೇವಿಪುರ ಮತ್ತು ಗಂಗಸಂದ್ರದ ಕೆರೆಗಳ ತುಂಬಿನ ಮೇಲೆ ಗಜಲಕ್ಷ್ಮಿಯ ಚಿತ್ರಗಳಿವೆ. ವೈಷ್ಣವ ದೇವಾಲಯಗಳ ಬಾಗಿಲುವಾಡಗಳ ಮೇಲೆಯೂ ಆನೆ, ಗಜಲಕ್ಷ್ಮಿಯನ್ನು ಕೊರೆದಿರುವುದನ್ನು ಇಂದಿಗೂ ನಾವು ನೋಡುತ್ತೇವೆ. ಬಹುಶಃ ಗಜಲಕ್ಷ್ಮಿಯನ್ನು ಕೆತ್ತಿದರೆ ಆ ವಸ್ತುವು ಶಾಶ್ವತವಾಗಿರುವುದೆಂದೂ, ಮಾಡಿಸಿದವನಿಗೆ ಒಳ್ಳೆಯದಾಗುವುದೆಂಬ ನಂಬಿಕೆಯಿರಬಹುದು.

ಶಾಸನ ಶಿಲ್ಪಿಗಳಲ್ಲಿ ಶಿಲ್ಪಕಲೆಯ ಪ್ರತಿಭೆ ಬಹುಮುಖವಾದುದಾಗಿದೆ. ಶಿಲಾವಿದ್ಯೆಯಲ್ಲಿ ಮಾತ್ರವಲ್ಲದೆ ಲಿಪಿಗಳನ್ನು ಅಲಂಕಾರಯುತವಾಗಿ ಬಿಡಿಸಿರುವುದನ್ನು ಮತ್ತು ಅವುಗಳನ್ನು ಕೊರೆಯುವ ಕಾರ್ಯದಲ್ಲಿ ಅನೇಕ ರೀತಿಯ ವೈವಿಧ್ಯವನ್ನು ಕಾಣಬಹುದು. ನನ್ನ ಅಧ್ಯಯನದ ವ್ಯಾಪ್ತಿಯಲ್ಲಿ ಅಧಿಕವಾಗಿ ಹೊಯ್ಸಳ ಮತ್ತು ವಿಜಯನಗರ ಅರಸರ ಕಾಲದ ಶಾಸನಗಳೇ ಹೆಚ್ಚು ದೊರೆತಿವೆ.

ಹೊಯ್ಸಳ ಲಿಪಿಯು ಇಂದಿನ ಆಧುನಿಕ ಕಾಲದ ಲಿಪಿಗೆ ಹತ್ತಿರವಾಗಿ ರೂಪುಗೊಳ್ಳುತ್ತ ಸಾಗಿರುವುದು ಕಂಡುಬರುತ್ತದೆ. ಕ್ರಿ.ಶ.೧೨-೧೩ನೆಯ ಶತಮಾನದಲ್ಲಿ ಬಳಕೆಯಲ್ಲಿದ್ದ ಈ ಲಿಪಿಗೆ ಹೊಯ್ಸಳ ಲಿಪಿಯೆಂದೇ ಕರೆಯಲಾಗುತ್ತದೆ. ದೊಡ್ಡಬಳ್ಳಾಪುರದ ಕೋಟೆ ಶಾಸನ. ಇಸ್ತೂರು ಗ್ರಾಮದ ಶಾಸನ ದೊಡ್ಡತಾಯಕೂರಿನ ಶಾಸನಗಳಲ್ಲಿನ ಲಿಪಿಯು ಹೊಯ್ಸಳರ ಲಿಪಿಯಾಗಿದೆ. ಇವರ ಸಮಕಾಲೀನರಾಗಿದ್ದ ಕಳಚೂರಿ ಮತ್ತು ಸೇವುಣರ ಶಾಸನಗಳಲ್ಲಿ ಈ ಲಿಪಿಯನ್ನೇ ಬಳಸಲಾಗಿದೆ. ಹೊಯ್ಸಳರು ಬಳಪದ ಕಲ್ಲಿನ ಫಲಕಗಳ ಮೇಲೆ ಶಾಸನಗಳನ್ನು ಕೆತ್ತುತ್ತಿದ್ದುದರಿಂದ ಇವರ ಲಿಪಿಯು ಅತ್ಯಂತ ಮುದ್ದಾಗಿ, ಗುಂಡಾಗಿರುತ್ತದೆ. ಮತ್ತು ಕಲಾತ್ಮಕವಾಗಿ ಕಂಡುಬರುತ್ತದೆ. ಇವರ ಕಾಲದ ಲಿಪಿಯ ಮತ್ತೊಂದು ವೈಶಿಷ್ಟ್ಯವೆಂದರೆ ಚಂದ್ರಾಕಾರದ ತಲೆಕಟ್ಟು. ಆದರೆ ಕಲ್ಯಾಣ ಚಾಲುಕ್ಯರ ಲಿಪಿಯಲ್ಲಿ ಮೇಲಕ್ಕೆ ಬಾಗುವ ಪ್ರವೃತ್ತಿ ತೋರುತ್ತಿದ್ದ ತಲೆಕಟ್ಟು, ಅದು ಹೊಯ್ಸಳರ ಕಾಲಕ್ಕೆ ಅತ್ಯಂತ ಸ್ಪಷ್ಟವಾಗಿ ಅರ್ಧ ವೃತ್ತಾಕಾರವಾಗಿ ಕಂಡುಬರುತ್ತದೆ. ಏಕೆಂದರೆ ಈ ಎರಡೂ ರಾಜವಂಶಗಳು ಸಮಕಾಲೀನ ರಾಜರಾದ್ದರಿಂದ ಇಂತಹ ವೈವಿಧ್ಯತೆಯನ್ನು ಗಮನಿಸಬಹುದು. ದಾವಣಗೆರೆಯ ಒಂದು ಶಾಸನದಲ್ಲಿ ಹೊಕ್ಕುಳು, ತಲೆಕಟ್ಟು ಮುಂತಾದ ಅಕ್ಷರಗಳ ಅವಯವಗಳನ್ನರಿತು ಕೆತ್ತಬಲ್ಲೆವು ಎಂದು ಲಿಪಿಕಾರರು ಹೇಳಿಕೊಂಡಿದ್ದಾರೆ. ಹೊಯ್ಸಳರ ಕಾಲದ ಮತ್ತೊಂದು ಪ್ರಮುಖ

ಅಂಶವೆಂದರೆ ಮಹಾಪ್ರಾಣಗಳ ಕೆಳಭಾಗದಲ್ಲಿ ಎರಡು ಭಾಗಗಳು ಸೇರುವ ಸ್ಥಳದಲ್ಲಿ ಸ್ವಲ್ಪ ಸ್ಥಳವನ್ನು ಬಿಟ್ಟಿರುವುದು ಶಾಸನಗಳಲ್ಲಿ ಕಂಡುಬರುತ್ತದೆ. ಒಟ್ಟಾರೆ ಈ ಕಾಲಘಟ್ಟದ ಲಿಪಿಯು ಬಹುತೇಕವಾದ ಇಂದಿನ ಲಿಪಿಗೆ ಸನಿಹವಾಗಿ ರೂಪುಗೊಳ್ಳುವತ್ತ ಸಾಗಿರುವುದು ಕಂಡುಬರುತ್ತದೆ.

ಹೊಯ್ಸಳರ ಕಾಲದ ಶಾಸನಗಳನ್ನು ಹೊರುತುಪಡಿಸಿದರೆ ಅಧಿಕ ಸಂಖ್ಯೆಯಲ್ಲಿ ವಿಜಯನಗರ ಕಾಲದ ಮತ್ತು ನಂತರದ ಶಾಸನಗಳೇ ಈ ಅಧ್ಯಯನದ ವ್ಯಾಪ್ತಿಗೆ ಸೇರುತ್ತವೆ. ಕ್ರಿ.ಶ.೧೪ನೆಯ ಶತಮಾನದಿಂದ ಕ್ರಿ.ಶ.೧೬ನೆಯ ಶತಮಾನದವರೆಗೆ ಬಳಕೆಯಲ್ಲಿದ್ದ ಲಿಪಿಯನ್ನು ವಿಜಯನಗರದ ಅರಸರ ಲಿಪಿ ಎಂದು ಗುರುತಿಸಬಹುದು. ಹೊಯ್ಸಳರ ಲಿಪಿಯು ಎಷ್ಟು ಸುಂದರವಾಗಿ ಮತ್ತು ಗುಂಡಾಗಿದೆಯೋ, ವಿಜಯನಗರ ಲಿಪಿಯು ಬಹಳ ಅಪರೂಪಕ್ಕೆಂಬಂತೆ ಕೆಲವನ್ನು ಹೊರತುಪಡಿಸಿದರೆ, ಬಹುತೇಕ ಶಾಸನಗಳು ಒರಟಾಗಿ ಕಾಣುತ್ತವೆ. ಕನ್ನಡದ ಲಿಪಿಯ ಸೌಂದರ್ಯದ ದೃಷ್ಟಿಯಿಂದ ಇದು ಅವನತಿಯ ಕಾಲವೆನ್ನಬಹುದು. ಈ ರೀತಿ ಬೆಳವಣಿಗೆ ಆಗಲು ಪ್ರಮುಖ ಕಾರಣವೆಂದರೆ ವಿಜಯನಗರದ ಅರಸರ ಕಾಲದಲ್ಲಿ ಶಿಲಾಶಾಸನಗಳನ್ನು ಕೊರೆಯಲು ಬಳಸಿಕೊಂಡ ಮಾಧ್ಯಮವೆಂದು ಹೇಳಬಹುದು. ಅವರು ಕಠಿಣವಾದ ಗ್ರಾನೈಟ್ ಶಿಲೆಯ ಮೇಲೆ ಶಾಸನಗಳನ್ನು ಬರೆಯಲು ಆಯ್ದುಕೊಂಡಿದ್ದರಿಂದ ಗಟ್ಟಿಶಿಲೆಯ ಮೇಲೆ ಅಕ್ಷರಗಳನ್ನು ಗುಂಡಾಗಿ ಬರೆಯಲು ತೀರಾ ಪ್ರಯಾಸಗುತ್ತದೆ. ಹಾಗೂ ಇವರು ನಯಮಾಡಿದ ಶಿಲಾಫಲಕವನ್ನು ಸಿದ್ಧಪಡಿಸಿಕೊಂಡು ಶಾಸನ ಬರೆಯುವ ಕಾರ್ಯಕ್ಕೂ ಹೋಗುತ್ತಿರಲಿಲ್ಲ. ತೀರಾ ಸುಲಭವಾಗಿ ದೊರೆಯುವ ಹುಟ್ಟು ಬಂಡೆಯ ಮೇಲೆ ಮತ್ತು ಕಲ್ಲು ಚಪ್ಪಡಿಯ ಮೇಲೆ ಸಾಧಾರಣ ರೂವಾರಿಗಳಿಂದ ಶಾಸನ ಬರೆಯಿಸುತ್ತಿದ್ದರಿಂದ ಇವರ ಕಾಲದ ಲಿಪಿಯು ತೀರಾ ಕೆಟ್ಟಿತೆಂದು ಹೇಳಬಹುದು. ಆದುದರಿಂದಲೇ ವಿಜಯನಗರದ ಲಿಪಿಯು ಪ್ರಾದೇಶಿಕ ವೈವಿಧ್ಯತೆಗಳೊಂದಿಗೆ ರೂಪುಗೊಂಡಿತು. ಉದಾಹರಣೆಗಾಗಿ ನಾಗೇನಹಳ್ಳಿ, ಅಂತರಹಳ್ಳಿ, ಲಿಂಗಾಪುರ, ಪುಟ್ಟಯ್ಯನಗ್ರಹಾರ, ಗಂಡ್ರಗೊಳ್ಳೀಪುರ, ವಾಣಿಗರಹಳ್ಳಿ, ಜಕ್ಕಸಂದ್ರ, ಮಾಡೇಶ್ವರ, ತಿಪ್ಪೂರು, ದೊಡ್ಡಬಳ್ಳಾಪುರದ ಶಾಸನಗಳನ್ನು ಪ್ರಮುಖವಾಗಿ ಹೆಸರಿಸಬಹುದು. ವಿಜಯನಗರದ ಲಿಪಿಯಲ್ಲಿ ನಮ್ಮ ಇಂದಿನ ಲಿಪಿಯ ಬಹುತೇಕ ಲಕ್ಷಣಗಳನ್ನು ಕಾಣಬಹುದು. ಈ ಕಾಲಘಟ್ಟದ ಲಿಪಿಯ ವಿಶೇಷವೆಂದರೆ ಮಹಾಪ್ರಾಣಾಕ್ಷರಗಳು ಕೆಳಭಾಗದಲ್ಲಿ ಹೊಕ್ಕಳು ಸೀಳುವ ಪ್ರಕ್ರಿಯೆಯು ಮೊಟ್ಟ ಮೊದಲ ಬಾರಿಗೆ ಕಂಡುಬರುತ್ತದೆ ಎನ್ನಬಹುದು.

**ಅಡಿಟಿಪ್ಪಣಿಗಳು**

೧. ಎಸ್.ಕೆ.ಕೊಪ್ಪಾ, ತರ್ದವಾಡಿನಾಡು, ಪು.೬

೨. Encyclopiedia Brtiannica, XII, Pp.393

೩. ಶಾಮಶಾಸ್ತ್ರೀ(ಸಂ), ಅರ್ಥಶಾಸ್ತ್ರ, ಪು.೧೦

೪. ಉಪಾಧ್ಯಾಯ ಎ.ಎನ್., India in Kalidasa, ಪು.೧೮೯

೫. ಶಾಮಶಾಸ್ತ್ರೀ(ಸಂ). ಅರ್ಥಶಾಸ್ತ್ರ, ಪು.೯೧

೬. ಯಜ್ಞವಲ್ಕ್ಯ ಸಂಹಿತೆ, ಪು.೩೧೮

೭. ಶೇಷಾಶಾಸ್ತ್ರೀ ಆರ್. ಶಾಸನ ಪರಿಚಯ, ಪು.೪

೮. ತಿಪ್ಪೇರುದ್ರಸ್ವಾಮಿ, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು.೨೫೨

೯. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೩೧, ಕೋಟೆಶಾಸನ, ಕ್ರಿ.ಶ.೧೫೩೧

೧೦. ಎ.ಕ.ಸಂ.೯, ಸಂಖ್ಯೆ.೬೩, ಮಾವಳೀಪುರ, ಕ್ರಿ.ಶ.೧೭೧೫

೧೧. Indian Antiquery, Vol.II, Pp.120

೧೨. ಎ.ಕ.ಸಂ.೯, ಸಂಖ್ಯೆ.೫೦, ಕಾಡನೂರು, ಕ್ರಿ.ಶ.೧೫೩೧

೧೩. ಎ.ಕ.ಸಂ.೯, ಸಂಖ್ಯೆ.೫೨, ಇಸ್ತೂರು, ಕ್ರಿ.ಶ.೧೩೦೬

೧೪. ಎ.ಕ.ಸಂ.೯, ಸಂಖ್ಯೆ.೪೦, ಗಂಡ್ರಗೊಳ್ಳಿಪುರ, ಕ್ರಿ.ಶ.೧೫೪೧

೧೫. ಎ.ಕ.ಸಂ.೯, ಸಂಖ್ಯೆ.೪೧, ಗಂಡ್ರಗೊಳ್ಳಿಪುರ, ಕ್ರಿ.ಶ.೧೫೬೨

೧೬. ಎ.ಕ.ಸಂ.೯, ಸಂಖ್ಯೆ.೬, ತಿಪ್ಪೂರು, ಕ್ರಿ.ಶ.೧೫೮೬

೧೭. ಎ.ಕ.ಸಂ.೯, ಸಂಖ್ಯೆ.೭, ಅಂತ್ರಹಳ್ಳಿ, ಕ್ರಿ.ಶ.೧೬೧೦

೧೮. ಎ.ಕ.ಸಂ.೯, ಸಂಖ್ಯೆ.೭, ಕಸಾಘಟ್ಟ, ಕ್ರಿ.ಶ.೧೬೦೦

೧೯. ನರಸಿಂಹಾಚಾರ್ ಡಿ.ಎಲ್., ಶಬ್ದವಿಹಾರ, ಪು.೫೫

೨೦. ಎ.ಕ.ಸಂ.೯, ಸಂಖ್ಯೆ.೩೮, ಶಿವಪುರ, ಕ್ರಿ.ಶ.೧೩೨೮

೨೧. ಎ.ಕ.ಸಂ.೯, ಸಂಖ್ಯೆ.೫೧, ಕನಸವಾಡಿ, ಕ್ರಿ.ಶ.೧೪೬೪

೨೨. ಎ.ಕ.ಸಂ.೯, ಸಂಖ್ಯೆ ೪೨, ಪುಟ್ಟಯ್ಯನಗ್ರಹಾರ, ಕ್ರಿ.ಶ.೧೪೯೩

೨೩. ಎ.ಕ.ಸಂ.೯, ಸಂಖ್ಯೆ.೪೫, ಪುಟ್ಟಯ್ಯನಗ್ರಹಾರ, ಕ್ರಿ.ಶ.೧೪೯೩

೨೪. ಎ.ಕ.ಸಂ.೯, ಸಂಖ್ಯೆ.೧೯, ಕಂಚಿಗನಾಳ, ಕ್ರಿ.ಶ.೧೫೧೯

೨೫. ಎ.ಕ.ಸಂ.೯, ನೆಲಮಂಗಲ ಸಂಖ್ಯೆ.೩೧, ಹೆಸರಘಟ್ಟ, ಕ್ರಿ.ಶ.೧೫೩೨

೨೬. ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ ೨, ರಾಂಪುರ, ಕ್ರಿ.ಶ.೧೫೩೫

೨೭. ಎ.ಕ.ಸಂ.೯, ಸಂಖ್ಯೆ ೪೯, ನಾಗೇನಹಳ್ಳಿ, ಕ್ರಿ.ಶ.೧೬೧೦

೨೮. ಎ.ಕ.ಸಂ.೯, ಸಂಖ್ಯೆ ೨೮, ಹಂಚರಹಳ್ಳಿ, ಕ್ರಿ.ಶ.೧೬೪೬

೨೯. ಎ.ಕ.ಸಂ.೯, ಸಂಖ್ಯೆ ೨೯, ನಂದಿಗುಂದ, ಕ್ರಿ.ಶ.೧೪೭೧

೩೦. ಎ.ಕ.ಸಂ.೯, ಸಂಖ್ಯೆ ೫೮, ಕಾಮಾಕ್ಷಿಪುರ, ಕ್ರಿ.ಶ.೧೬೫೪

೩೧. ಎ.ಕ.ಸಂ.೯, ಸಂಖ್ಯೆ ೧೪, ಹಾಡೋನಹಳ್ಳಿ, ಕ್ರಿ.ಶ.೧೩೨೮

೩೨. ಎ.ಕ.ಸಂ.೯, ಸಂಖ್ಯೆ ೧೮, ಕುರುವಿಗೆರೆ, ಕ್ರಿ.ಶ.೧೩೨೮

೩೩. ಎ.ಕ.ಸಂ.೯, ಸಂಖ್ಯೆ ೬೪, ಮಲ್ಲನಪಾಳ್ಯ, ಕ್ರಿ.ಶ.೧೬೮೭

೩೪. ಪರಮಶಿವಮೂರ್ತಿ ಡಿ.ವಿ., ಶಾಸನ ಸಂಶೋಧನೆ, ಪು.೧೧

೩೫. ಇಂಡಿಯನ್ ಎಫಿಮರೀಸ್, ಸಂ.೫, ಪು.೨೭೧

೩೬. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೩೯, ಅರಳುಮಲ್ಲಿಗೆ, ಕ್ರಿ.ಶ.೧೩೬೭

೩೭. ಎ.ಕ.ಸಂ.೯, ಸಂಖ್ಯೆ.೪೦, ಕ್ರಿ.ಶ.೧೫೪೧

೩೮. ಎ.ಕ.ಸಂ.೯, ನೆಲಮಂಗಲ, ಸಂಖ್ಯೆ.೫೮, ಕ್ರಿ.ಶ.೧೨, ೧೫೨೭

೩೯. ಎ.ಕ.ಸಂ.೯, ನೆಲಮಂಗಲ, ಸಂಖ್ಯೆ.೫೭, ಕ್ರಿ.ಶ.೯-೮, ೧೩೧೯

೪೦. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ ೬೭, ಮಲ್ಲೋಹಳ್ಳಿ, ಕ್ರಿ.ಶ.೪೫೯

೪೧. ಎ.ಕ.ಸಂ.೯, ಸಂಖ್ಯೆ.೬೮, ಮಲ್ಲೋಹಳ್ಳಿ, ೫೧೭

೪೨. ಎ.ಕ.ಸಂ.೯, ಸಂಖ್ಯೆ.೩೦, ಕೊನಘಟ್ಟ, ಕ್ರಿ.ಶ.೧೫೩೦

೪೩. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೩೫೯

೪೪. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೩೧, ಕೋಟೆಶಾಸನ, ಕ್ರಿ.ಶ.೧೨೬೭

೪೫. ಇ.ಡಿ.೧೧, ಪುಟ.೧೫೦, ಕ್ರಿ.ಶ.೧೦೮೭

೪೬. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೫, ತಿಪ್ಪೂರು, ಕ್ರಿ.ಶ.೧೫೮

೪೭. ಎ.ಕ.ಸಂ.೯, ಸಂಖ್ಯೆ.೪೦, ಗಂಡ್ರಗೊಳ್ಳಿಪುರ, ಕ್ರಿ.ಶ.೧೫೪೧

೪೮. ಎ.ಕ.ಸಂ.೯, ಸಂಖ್ಯೆ.೬೩, ಮಾವಳೀಪುರ, ಕ್ರಿ.ಶ.೧೭೧೫

೪೯. ಎ.ಕ.ಸಂ.೯, ಸಂಖ್ಯೆ.೧೯, ಕಂಚಿಗನಾಳ, ಕ್ರಿ.ಶ.೧೫೧೯

೫೦. ಎ.ಕ.ಸಂ.೯, ಸಂಖ್ಯೆ.೨, ರಾಂಪುರ, ಕ್ರಿ.ಶ.೧೫೩೫

೫೧. ಎ.ಕ.ಸಂ.೯, ಸಂಖ್ಯೆ.೫೫, ಮಧುರೆ, ಕ್ರಿ.ಶ.೧೪೧೮

೫೨. ಎ.ಕ.ಸಂ.೯, ಸಂಖ್ಯೆ.೫, ತಿಪ್ಪೂರು, ಕ್ರಿ.ಶ.೧೫೮೬

೫೩. ಎ.ಕ.ಸಂ.೯, ಸಂಖ್ಯೆ.೧೪, ಹಾಡೋನಹಳ್ಳಿ, ಕ್ರಿ.ಶ.೧೩೨೮

೫೪. ಎ.ಕ.ಸಂ.೯, ದೇವನಹಳ್ಳಿ ಸಂಖ್ಯೆ.೬೦, ಅರದೇಶಹಳ್ಳಿ, ಕ್ರಿ.ಶ.೧೩೨೯

೫೫. ಎ.ಕ.ಸಂ.೯, ಹೊಸಕೋಟೆ ಸಂಖ್ಯೆ.೧೨೪, ಹೊಸಕೋಟೆ, ಕ್ರಿ.ಶ.೧೩೨೯

೫೬. ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ. ೧೪, ಹಾಡೋನಹಳ್ಳಿ, ಕ್ರಿ.ಶ.೧೩೨೮

೫೭. ಎ.ಕ.ಸಂ.೯, ದೇವನಹಳ್ಳಿ ಸಂಖ್ಯೆ.೬೦, ಅರದೇಶಹಳ್ಳಿ, ಕ್ರಿ.ಶ.೧೩೨೯

೫೮. ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ.೧೮, ಕುರುವಿಗೆರೆ, ಕ್ರಿ.ಶ.೧೩೨೮

೫೯. ಎ.ಕ.ಸಂ.೯, ಹೊಸಕೋಟೆ, ಸಂಖ್ಯೆ.೧೨೪, ಹೊಸಕೋಟೆ, ಕ್ರಿ.ಶ.೧೩೩೦

೬೦. ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ.೩೧, ಕೋಟೆಶಾಸನ, ಕ್ರಿ.ಶ.೧೨೬೭

೬೧. ಚಿಂದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೪೨೪

೬೨. ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ.೩೧, ಕೋಟೆಶಾಸನ, ಕ್ರಿ.ಶ.೧೨೬೭

೬೩. ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ.೩೧, ಕೋಟೆಶಾಸನ, ಕ್ರಿ.ಶ.೧೨೬೭

೬೪. ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ.೩೧, ಕೋಟೆಶಾಸನ, ಕ್ರಿ.ಶ.೧೨೬೭

೬೫. ಎಂ.ಎ.ಆರ್.(೧೯೩೨), ಪು.೧೭೧, ಕ್ರಿ.ಶ.೧೧೨೪

೬೬. ಅದೇ,

೬೭. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ ೫೨, ಇಸ್ತೂರು, ಕ್ರಿ.ಶ.೧೩೦೬

೬೮. ಎಂ.ಎ.ಆರ್.(೧೯೩೩), ಪು.೩೬, ಕ್ರಿ.ಶ.೭೯೧

೬೯. ಅದೇ,

೭೦. ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ ೩೧, ದೊಡ್ಡಬಳ್ಳಾಪುರ ಕೋಟೆಶಾಸನ, ಕ್ರಿ.ಶ.೧೨೬೭

೭೧. ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ.೪೫, ಪುಟ್ಟಯ್ಯನಗ್ರಹಾರ, ಕ್ರಿ.ಶ.೧೪೯೩

೭೨. ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ.೪೬, ಚಿಕ್ಕಹೆಜ್ಜಾಜಿ, ಕ್ರಿ.ಶ.೧೩೪೦

೭೩. ಕಲಬುರ್ಗಿ ಎಂ.ಸಂ., ಶಾಸನಗಳಲ್ಲಿ ಶಿವಶರಣರು, ಪು.೨೫೪

೭೪. ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ.೨೮, ಹಂಚರಹಳ್ಳಿ, ಕ್ರಿ.ಶ.೧೬೪೬

೭೫. ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ.೪೦, ಗಂಡ್ರಗೊಳ್ಳಿಪುರ, ಕ್ರಿ.ಶ.೧೫೪೧

೭೬. ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ.೪೧, ಗಂಡ್ರಗೊಳ್ಳಿಪುರ, ಕ್ರಿ.ಶ.೧೫೬೨

೭೭. ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ.೫೦, ಕಾಡನೂರು, ಕ್ರಿ.ಶ.೧೫೩೧

೭೮. ಎ.ಕ.ಸಂ.೯, ಸಂಖ್ಯೆ.೫, ತಿಪ್ಪೂರು, ಕ್ರಿ.ಶ.೧೫೮೬

೭೯. ಎ.ಕ.ಸಂ.೯, ಸಂಖ್ಯೆ.೨, ರಾಮಪುರ, ಕ್ರಿ.ಶ.೧೫೩೫

೮೦. ಎ.ಕ.ಸಂ.೯, ಸಂಖ್ಯೆ.೯, ಜಕ್ಕಸಂದ್ರ, ಕ್ರಿ.ಶ.೯೧೮

೮೧. ಎ.ಕ.ಸಂ.೯, ಸಂಖ್ಯೆ.೨೨, ರಾಜಘಟ್ಟ, ಕ್ರಿ.ಶ.೧೨೦೦

೮೨. ಎ.ಕ.ಸಂ.೯, ಸಂಖ್ಯೆ.೨೮, ಹಂಚರಹಳ್ಳಿ, ಕ್ರಿ.ಶ.೧೬೪೬

೮೩. ಎ.ಕ.ಸಂ.೯, ಸಂಖ್ಯೆ.೩೪, ಶಿವಪುರ, ಕ್ರಿ.ಶ.೧೫೫೫

೮೪. ಎ.ಕ.ಸಂ.೯, ಸಂಖ್ಯೆ.೪೭, ಕಸಾಘಟ್ಟ, ಕ್ರಿ.ಶ.೧೦ನೇ ಶತಮಾನ

೮೫. ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ.೩೧, ಕೋಟೆಶಾಸನ, ಕ್ರಿ.ಶ.೧೭೬೭

೮೬. ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ.೭, ಅಂತ್ರಹಳ್ಳಿ, ಕ್ರಿ.ಶ.೧೬೧೦

೮೭. ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ.೧೪, ಹಾಡೋನಹಳ್ಳಿ, ಕ್ರಿ.ಶ.೧೫೨೭

೮೮. ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ.೧೯, ಕಂಚಿಗನಾಳ, ಕ್ರಿ.ಶ.೧೫೧೯

೮೯. ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ.೪೦, ಗಂಡ್ರಗೊಳ್ಳಿಪುರ, ಕ್ರಿ.ಶ.೧೫೪೧

೯೦. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ ೪೧, ಗಂಡ್ರಗೊಳ್ಳಿಪುರ, ಕ್ರಿ.ಶ.೧೫೬೨

೯೧. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೩೯, ಅರಳುಮಲ್ಲಿಗೆ, ಕ್ರಿ.ಶ.೧೩೬೭

೯೨. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೪೯, ನಾಗೇನಹಳ್ಳಿ, ಕ್ರಿ.ಶ.೧೬೧೦

೯೩. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೬೩, ಮಾವಳಿಪುರ, ಕ್ರಿ.ಶ.೧೭೧೫

೯೪. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೬೪, ಮೈಲಪನಹಳ್ಳಿ, ಕ್ರಿ.ಶ.೧೪೦೬

೯೫. ಎ.ಕ.ಸಂ.೧೨, ಮಧುಗಿರಿ ಸಂಖ್ಯೆ.೧೧೦, ಮಧುಗಿರಿ, ೯ನೇ ಶತಮಾನ

೯೬. ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ.೧೧, ಹುಲುಕಡಿಬೆಟ್ಟ, ಕ್ರಿ.ಶ.೧೧೧೫

೯೭. ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ ೩೯, ಅರಳುಮಲ್ಲಿಗೆ, ಕ್ರಿ.ಶ.೧೩೬೭

೯೮. ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ ೪೨, ಪುಟ್ಟಯ್ಯನಗ್ರಹಾರ, ಕ್ರಿ.ಶ.೧೪೯೩

೯೯. ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ ೪೫, ಪುಟ್ಟಯ್ಯನಗ್ರಹಾರ, ಕ್ರಿ.ಶ.೧೪೯೩

೧೦೦. ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ ೫೦, ಕಾಡನೂರು, ಕ್ರಿ.ಶ.೧೫೩೧

೧೦೧. ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ ೪೧, ಗಂಡ್ರಗೊಳ್ಳಿಪುರ, ಕ್ರಿ.ಶ.೧೫೬೨

೧೦೨. ಶೇಷಾಶಾಸ್ತ್ರಿ ಆರ್., ಕರ್ನಾಟಕದ ವೀರಗಲ್ಲುಗಳು, ಪು.೧೦೨

೧೦೩. ಕೊಪ್ಪಾ ಎಸ್.ಕೆ., ತರ್ದವಾಡಿ ನಾಡು, ಪು.೧೫

೧೦೪. ಕರ್ನಾಟಕ ಗ್ಯಾಸೆಟಿಯರ್, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಪು.೩೧

೧೦೫. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೧೧, ಹುಲುಕಡಿಬೆಟ್ಟ, ಕ್ರಿ.ಶ.೧೧೧೫

೧೦೬. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೩೯, ಅರಳುಮಲ್ಲಿಗೆ, ಕ್ರಿ.ಶ.೧೩೬೭

೧೦೭. ಕಲಬುರ್ಗಿ ಎಂ.ಎಂ., ಪ್ರಾಚೀನ ಕರ್ನಾಟಕದ ಆಡಳಿತ ವಿಭಾಗಗಳು, ಪು.೬

೧೦೮. ಕೃಷ್ಣಮೂರ್ತಿ ಪಿ.ವಿ., ಭಾರತೀಯ ಸಂಸ್ಕೃತಿ ದರ್ಶನ, ಪು.೫೨

೧೦೯. ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ.೩೯, ಅರಳುಮಲ್ಲಿಗೆ, ಕ್ರಿ.ಶ.೧೩೬೭

೧೧೦. ಎ.ಕ.ಸಂ.೧೨, ಮಧುಗಿರಿ, ಸಂಖ್ಯೆ.೧೧೦

೧೧೧. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೧೧, ಹುಲುಕಡಿಬೆಟ್ಟ, ಕ್ರಿ.ಶ.೧೧೧೫

೧೧೨. ಪರಮಶಿವಮೂರ್ತಿ ಡಿ.ವಿ., ಶಾಸನ ಸಂಶೋಧನೆ, ಪು.೯೧

೧೧೩. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೧೧, ಹುಲುಕಡಿಬೆಟ್ಟ, ಕ್ರಿ.ಶ.೧೧೧೫

೧೧೪. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೩೯, ಅರಳುಮಲ್ಲಿಗೆ, ಕ್ರಿ.ಶ.೧೩೬೭

೧೧೫. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೪೫, ಪುಟ್ಟಯ್ಯನಗ್ರಹಾರ, ಕ್ರಿ.ಶ.೧೪೯೩

೧೧೬. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೫೦, ಕಾಡನೂರು, ಕ್ರಿ.ಶ.೧೫೩೧

೧೧೭. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೪೦, ಗಂಡ್ರಗೊಳ್ಳಿಪುರ, ಕ್ರಿ.ಶ.೧೫೬೨

೧೧೮. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೪೧, ಗಂಡ್ರಗೊಳ್ಳಿಪುರ, ಕ್ರಿ.ಶ.೧೫೬೨

೧೧೯. ಪರಮಶಿವಮೂರ್ತಿ, ಶಾಸನ ಸಂಶೋಧನೆ, ಪು.೧೧

೧೨೦. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೫, ತಿಪ್ಪೂರು, ಕ್ರಿ.ಶ.೧೫೮೬

೧೨೧. ಎ.ಕ.ಸಂ.೯, ಅದೇ,

೧೨೨. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೭, ಅಂತ್ರಹಳ್ಳಿ, ಕ್ರಿ.ಶ.೧೬೧೦

೧೨೩. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೬೩, ಮಾವಳಿಪುರ, ಕ್ರಿ.ಶ.೧೭೧೫

೧೨೪. ಎ.ಕ.ಸಂ.೯, ದೊಡಬಳ್ಳಾಪುರ ಸಂಖ್ಯೆ.೧೧, ಹಲುಕಡಿಬೆಟ್ಟ, ಕ್ರಿ.ಶ.೧೧೧೫

೧೨೫. ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ.೩೯, ಅರಳುಮಲ್ಲಿಗೆ, ಕ್ರಿ.ಶ.೧೩೬೭

೧೨೬. ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ.೪೨, ಪುಟ್ಟಯ್ಯನಗ್ರಹಾರ, ಕ್ರಿ.ಶ.೧೪೯೩

೧೨೭. ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ.೫೦, ಕಾಡನೂರು, ಕ್ರಿ.ಶ.೧೪೫೧

೧೨೮. ಎ.ಕ.ಸಂ.೯, ದೊಡಬಳ್ಳಾಪುರ, ಸಂಖ್ಯೆ.೪೦, ಗಂಡ್ರಗೊಳ್ಳಿಪುರ, ಕ್ರಿ.ಶ.೧೫೪೧

೧೨೯. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೬೦, ದೊಡ್ಡತುಮಕೂರು, ಕ್ರಿ.ಶ.೧೩೨೭

೧೩೦. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೩೧, ದೊಡ್ಡಬಳ್ಳಾಪುರ ಕೋಟೆಶಾಸನ, ಕ್ರಿ.ಶ.೧೨೬೭

೧೩೧. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೭೪(ಅನುಬಂಧ) ಜೋಡಿಪೂವನಹಳ್ಳಿ, ಕ್ರಿ.ಶ.೧೩೨೮

೧೩೨. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೧೪, ಹಾಡೋನಹಳ್ಳಿ, ಕ್ರಿ.ಶ.೧೪೧೭

೧೩೩. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೨೯, ನಂದಿಗುಂದ, ಕ್ರಿ.ಶ.೧೪೭೧

೧೩೪. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೧೮, ಕುರುವಿಗೆರೆ, ಕ್ರಿ.ಶ.೧೩೨೮

೧೩೫. ಎ.ಕ.ಸಂ.೯, ಬೆಂಗಳೂರು, ಸಂಖ್ಯೆ.೧೨೬, ಬೆಂಗಳೂರು, ಕ್ರಿ.ಶ.೧೪೬೦

೧೩೬. ಎ.ಕ.ಸಂ.೯, ದೇವನಹಳ್ಳಿ, ಸಂಖ್ಯೆ.೧, ಚಿಕ್ಕಜಾಲ, ಕ್ರಿ.ಶ.೧೩೨೯

೧೩೭. ಎ.ಕ.ಸಂ.೯, ದೇವನಹಳ್ಳಿ, ಸಂಖ್ಯೆ.೧, ಚಿಕ್ಕಜಾಲ, ಕ್ರಿ.ಶ.೧೩೨೯

೧೩೮. ಎ.ಕ.ಸಂ.೯, ಬೆಂಗಳೂರು, ಸಂಖ್ಯೆ.೨೪, ಬೆಂಗಳೂರು, ಕ್ರಿ.ಶ.೧೩೪೩

೧೩೯. ಎ.ಕ.ಸಂ.೯, ಬೆಂಗಳೂರು, ಸಂಖ್ಯೆ.೧೨೯, ಬೆಂಗಳೂರು, ಕ್ರಿ.ಶ.೧೩೪೨

೧೪೦. ಎ.ಕ.ಸಂ.೯, ಬೆಂಗಳೂರು, ಸಂಖ್ಯೆ.೨೧, ಬೆಂಗಳೂರು, ಕ್ರಿ.ಶ.೧೩೪೩

೧೪೧. ಎ.ಕ.ಸಂ.೯, ದೇವನಹಳ್ಳಿ, ಸಂಖ್ಯೆ.೧೨, ಬೆಂಗಳೂರು, ಕ್ರಿ.ಶ.೩೧

೧೪೨. ಎ.ಕ.ಸಂ.೯, ಮಾಗಡಿ, ಸಂಖ್ಯೆ.೨೯, ಮಾಗಡಿ, ಕ್ರಿ.ಶ.೧೬೭೪

೧೪೩. ಎ.ಕ.ಸಂ.೯, ದೇವನಹಳ್ಳಿ, ಸಂಖ್ಯೆ.೭೫, ದೇವನಹಳ್ಳಿ, ಕ್ರಿ.ಶ.೧೦೪೬

೧೪೪. ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ.೩೧, ದೊಡ್ಡಬಳ್ಳಾಪುರ, ಕ್ರಿ.ಶ.೧೨೬೭

೧೪೫. ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ ೩೧,೨೪,೧೮

೧೪೬. ಎ.ಕ.ಸಂ.೯, ದೇವನಹಳ್ಳಿ ಸಂಖ್ಯೆ ೫೦, ಕಟಿಗೇನಹಳ್ಳಿ, ಕ್ರಿ.ಶ.೧೩೪೮

೧೪೭. ಕಲಬುರ್ಗಿ ಎಂ.ಎಂ., ಪ್ರಾಚೀನ ಕರ್ನಾಟಕದ ಆಡಳಿತ ವಿಭಾಗಗಳು, ಪು.೧೪

೧೪೮. ಬೋಯಿ ಮ.ಬಾ.(ಅನು), ತಿರುಮಲಾರ್ಯ ವಿರಚಿತ ಚಿಕ್ಕದೇವರಾಯ ವಂಶಾವಳಿ, ಪು.೧೪

೧೪೯. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೩೦, ಕೊನಘಟ್ಟ, ಕ್ರಿ.ಶ.೧೫೩೦

೧೫೦. ಎ.ಕ.ಸಂ.೯, ಬೆಂಗಳೂರು, ಸಂಖ್ಯೆ.೪೦, ವರ್ತೂರು, ಕ್ರಿ.ಶ.೮೨೦

೧೫೧. ಎ.ಕ.ಸಂ.೯, ಆನೇಕಲ್ಲು, ಸಂಖ್ಯೆ.೬೨, ಹಳೇಹಳ್ಳಿ, ಕ್ರಿ.ಶ.೧೨೪೫

೧೫೨. ಎಂ.ಎ.ಆರ್.ಕೆಂಪೇಗೌಡ ಪ್ರಶಸ್ತಿ, ಕ್ರಿ.ಶ.೧೯೧೪

೧೫೩. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ ೩೮, ಶಿವಪುರ, ಕ್ರಿ.ಶ.೧೩೨೮

೧೫೪. ಎ.ಕ.ಸಂ.೯, ದೇವನಹಳ್ಳಿ, ಸಂಖ್ಯೆ೪೧, ಅರದೇಶಹಳ್ಳಿ, ಕ್ರಿ.ಶ.೯೦೦

೧೫೫. ಎ.ಕ.ಸಂ.೧೧, ಚಳ್ಳಕೆರೆ, ಸಂಖ್ಯೆ.೨೯,೩೦, ಚಳ್ಳಕೆರೆ, ಕ್ರಿ.ಶ.೯೧೦

೧೫೬. ಎ.ಕ.ಸಂ.೯, ದೊಡ್ಡಬಳ್ಳಾಪುರ(ಅನುಬಂಧ), ಸಂಖ್ಯೆ.೭, ದೊಡ್ಡಬಳ್ಳಾಪುರ ಪಾರ್ಶಿಶಾಸನ, ಕ್ರಿ.ಶ.೧೫೪೪

೧೫೭. ಪಂಪಭಾರತ–೫.೭೫

೧೫೮. ಗದಾಯುದ್ಧ–೨.೧೬

೧೫೯. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೩, ದೊಡ್ಡಬೆಳವಂಗಲ, ಕ್ರಿ.ಶ.೮೮೦

೧೬೦. Encyclopaedia of Religion and Ethics, Vol.VI, Pp.847

೧೬೧. ಪಂಪಭಾರತ–೧೦.೪೪

೧೬೨. ತಿಪ್ಪೇರುದ್ರಸ್ವಾಮಿ ಎಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು.೨೫೧

೧೬೩. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೨೨, ರಾಜಘಟ್ಟ, ಕ್ರಿ.ಶ.೧೨ನೇ ಶತಮಾನ

೧೬೪. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೩೩೦

೧೬೫. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೫, ತಿಪ್ಪೂರು, ಕ್ರಿ.ಶ.೧೫೮೬

೧೬೬. ಎ.ಕ.ಸಂ.೯, ಸಂಖ್ಯೆ.೬, ತಿಪ್ಪೂರು, ಕ್ರಿ.ಶ.೧೫೮೬

೧೬೭. ಎ.ಕ.ಸಂ.೯, ಸಂಖ್ಯೆ.೮, ವಾಶಿಗರಹಳ್ಳಿ, ಕ್ರಿ.ಶ.೧೩೨೮

೧೬೮. ಎ.ಕ.ಸಂ.೯, ಸಂಖ್ಯೆ.೧೪, ಹಾಡೋನಹಳ್ಳಿ, ಕ್ರಿ.ಶ.೧೩೨೮

೧೬೯. ಎ.ಕ.ಸಂ.೯, ಸಂಖ್ಯೆ.೧೬, ಹಾಡೋನಹಳ್ಳಿ, ಕ್ರಿ.ಶ.೧೪೧೬

೧೭೦. ಎ.ಕ.ಸಂ.೯, ಸಂಖ್ಯೆ.೧೮, ಕುರುವಿಗೆರೆ, ಕ್ರಿ.ಶ.೧೩೨೮

೧೭೧. ಎ.ಕ.ಸಂ.೯, ಸಂಖ್ಯೆ.೧೯, ಕಂಚಿಗನಾಳ, ಕ್ರಿ.ಶ.೧೫೧೯

೧೭೨. ಎ.ಕ.ಸಂ.೯, ಸಂಖ್ಯೆ.೩೪, ಶಿವಪುರ, ಕ್ರಿ.ಶ.೧೫೫೫

೧೭೩. ಎ.ಕ.ಸಂ.೯, ಸಂಖ್ಯೆ.೩೫, ಶಿವಪುರ, ಕ್ರಿ.ಶ.೧೫೫೫

೧೭೪. ಎ.ಕ.ಸಂ.೯, ಸಂಖ್ಯೆ.೩೯, ಅರಳುಮಲ್ಲಿಗೆ, ಕ್ರಿ.ಶ.೧೩೬೭

೧೭೫. ಎ.ಕ.ಸಂ.೯, ಸಂಖ್ಯೆ.೪೦, ಗಂಡ್ರಗೊಳ್ಳಿಪುರ, ಕ್ರಿ.ಶ.೧೫೪೧

೧೭೬. ಎ.ಕ.ಸಂ.೯, ಸಂಖ್ಯೆ.೪೧, ಗಂಡ್ರಗೊಳ್ಳಿಪುರ, ಕ್ರಿ.ಶ.೧೫೬೨

೧೭೭. ಎ.ಕ.ಸಂ.೯, ಸಂಖ್ಯೆ.೪೨, ಪುಟ್ಟಯ್ಯನಗ್ರಹಾರ, ಕ್ರಿ.ಶ.೧೪೯೩

೧೭೮. ಎ.ಕ.ಸಂ.೯, ಸಂಖ್ಯೆ.೪೯, ನಾಗೇನಹಳ್ಳಿ, ಕ್ರಿ.ಶ.೧೬೧೦

೧೭೯. ಎ.ಕ.ಸಂ.೯, ಸಂಖ್ಯೆ.೫೦, ಕಾಡನೂರು, ಕ್ರಿ.ಶ.೧೫೩೧

೧೮೦. ಎ.ಕ.ಸಂ.೯, ಸಂಖ್ಯೆ.೫೫, ಮಧುರೆ, ಕ್ರಿ.ಶ.೧೪೪೮

೧೮೧. ಎ.ಕ.ಸಂ.೯, ಸಂಖ್ಯೆ.೫೬, ಮಧುರೆ, ಕ್ರಿ.ಶ.೧೪೧೮

೧೮೨. ಎ.ಕ.ಸಂ.೯, ಸಂಖ್ಯೆ.೫೮, ಕಾಮಾಕ್ಷಿಪುರ, ಕ್ರಿ.ಶ.೧೬೫೪

೧೮೩. ಎ.ಕ.ಸಂ.೯, ಸಂಖ್ಯೆ.೬೦, ದೊಡ್ಡತುಮಕೂರು, ಕ್ರಿ.ಶ.೧೩೨೧

೧೮೪. ಎ.ಕ.ಸಂ.೯, ಸಂಖ್ಯೆ.೬೩, ಮಾವಳಿಪುರ, ಕ್ರಿ.ಶ.೧೭೧೫

೧೮೫. ಎ.ಕ.ಸಂ.೯, ಸಂಖ್ಯೆ.೬೪, ಮಲ್ಲನಪಾಳ್ಯ, ಕ್ರಿ.ಶ.೧೬೮೭

೧೮೬. ಎ.ಕ.ಸಂ.೯, ಸಂಖ್ಯೆ.೬೬, ಮೈಲಪನಹಳ್ಳಿ, ಕ್ರಿ.ಶ.೧೪೦೬

೧೮೭ ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ.೩೪, ದೊಡ್ಡಬೆಳವಂಗಲ, ಕ್ರಿ.ಶ.೮೮೦

೧೮೮. ಎ.ಕ.ಸಂ.೯, ದೊಡ್ಡಬಳ್ಳಾಪುರ ಸಂಖ್ಯೆ.೫, ತಿಪ್ಪೂರು, ಕ್ರಿ.ಶ.೧೫೮೬

೧೮೯. ಎ.ಕ.ಸಂ.೯, ಸಂಖ್ಯೆ.೬೮, ಮಲ್ಲೋಹಳ್ಳಿ, ಕ್ರಿ.ಶ.೫೧೭

೧೯೦. An Introducation to Arechaeology, Pp.86

೧೯೧. ಎಂ.ಎ.ಆರ್., ೧೯೪೫, ಮ.೧೨೫, ಕ್ರಿ.ಶ.೯೫೦

೧೯೨. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೫೦, ಕಾಡನೂರು, ಕ್ರಿ.ಶ.೧೫೩೧

೧೯೩. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೪೧, ಗಂಡ್ರಗೊಳ್ಳಿಪುರ, ಕ್ರಿ.ಶ.೧೫೬೨

೧೯೪. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೫೧, ಕನಸವಾಡಿ, ಕ್ರಿ.ಶ.೧೪೬೪

೧೯೫. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೪೭, ಕಸಾಘಟ್ಟ, ಕ್ರಿ.ಶ.೧೬ನೇ ಶತಮಾನ

೧೯೬. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೬೪, ಮಲ್ಲನಪಾಳ್ಯ, ಕ್ರಿ.ಶ.೧೬೮೭

೧೯೭. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೩,೪, ದೊಡ್ಡಬೆಳವಂಗಲ, ಕ್ರಿ.ಶ.೮೮೦

೧೯೮. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೫, ತಿಪ್ಪೂರು, ಕ್ರಿ.ಶ.೧೫೮೬

೧೯೯. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೬೮, ಮಲ್ಲೋಹಳ್ಳಿ, ಕ್ರಿ.ಶ.೫೧೭

೨೦೦. ಎ.ಕ.ಸಂ.೭, ಶಿಕಾರಿಪುರ.೨೬೩

೨೦೧. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೫೦, ಕಾಡನೂರು, ಕ್ರಿ.ಶ.೧೫೩೧

೨೦೨. ಎ.ಕ.ಸಂ.೯, ದೊಡ್ಡಬಳ್ಳಾಪುರ, ಸಂಖ್ಯೆ.೬೪, ಮಲ್ಲನಪಾಳ್ಯ, ಕ್ರಿ.ಶ.೧೬೮೭

೨೦೩. ಎ.ಕ.ಸಂ.೯, ಸಂಖ್ಯೆ.೩೦, ಕೊನಘಟ್ಟ, ಕ್ರಿ.ಶ.೧೫೩೦

೨೦೪. ಎ.ಕ.ಸಂ.೫, ಹಾಸನ ಜಿಲ್ಲೆ, ಸಂಖ್ಯೆ.೬, ಹಾಸನ, ಕ್ರಿ.ಶ.೧೫೧೫

೨೦೫. ಎ.ಕ.ಸಂ.೫, ಹಾಸನ ಜಿಲ್ಲೆ, ಸಂಖ್ಯೆ.೪, ಕುದುರೆಗುಂಡಿ, ಕ್ರಿ.ಶ.೧೫೨೪

೨೦೬. ಎ.ಕ.ಸಂ.೫, ಚನ್ನರಾಯಪಟ್ಟಣ, ಸಂಖ್ಯೆ.೧೬೭, ಚನ್ನರಾಯಪಟ್ಟಣ, ಕ್ರಿ.ಶ.೧೫೧೯

೨೦೭. ಎ.ಕ.ಸಂ.೫, ಅರಸೀಕೆರೆ ತಾಲ್ಲೂಕು, ಸಂಖ್ಯೆ.೧೨೬, ಹಾರನಹಳ್ಳಿ, ಕ್ರಿ.ಶ.೧೫೩೫

# ಅಧ್ಯಾಯ ೪

# ಶಾಸನ ಶಿಲ್ಪ

೪.೧. ದಾನ ಶಾಸನಶಿಲ್ಪ

೪.೨. ಸ್ಮಾರಕ ಶಾಸನಶಿಲ್ಪ

೪.೩. ಇತರೆ ಶಾಸನಶಿಲ್ಪಗಳು

೪

# ಶಾಸನ ಶಿಲ್ಪ

ನಮ್ಮ ಪ್ರಾಚೀನ ಶಿಲ್ಪ ಶಾಸ್ತ್ರಗ್ರಂಥಗಳು ಶಿಲ್ಪಶಾಸ್ತ್ರದ ಸ್ವರೂಪ ಮತ್ತು ಲಕ್ಷಣಗಳನ್ನು ವಿವರವಾಗಿ ವಿವರಿಸಿದ್ದಾರೆ. ಈ ಗ್ರಂಥಗಳಲ್ಲಿ ವಾಸ್ತುಶಾಸ್ತ್ರದ ಹಿನ್ನೆಲೆಯಲ್ಲಿ ಶಿಲ್ಪಶಾಸ್ತ್ರದ ಶೈಲಿಯ ಅನುಕರಣೆ ವಿವರ ಕಂಡುಬರುತ್ತದೆ. ಆದರೆ ಶಾಸನಶಿಲ್ಪದ ಶಾಸ್ತ್ರಬದ್ಧವಾದ, ನಿಯಮಬದ್ಧವಾದ ಚೌಕಟ್ಟು ಈ ಗ್ರಂಥಗಳಲ್ಲಿ ಕಂಡುಬರುವುದಿಲ್ಲವೆಂದೇ ಹೇಳಬೇಕು. ಹಾಗಾಗಿ ಇವುಗಳ ಉದ್ದೇಶ ಬೇರೆ ಬೇರೆ ಎಂದೇ ಹೇಳಬಹುದು.

ಶಾಸನಶಿಲ್ಪವು ಉಬ್ಬುಶಿಲ್ಪದ ಒಂದು ಪ್ರಕಾರವಾಗಿದೆ. ಭಾರತೀಯ ಶಿಲ್ಪಶಾಸ್ತ್ರದಲ್ಲಿ ಇದು ದೊಡ್ಡ ವಿಭಾಗ. ದೇವಾಲಯಗಳ ಹೊರಗೆ ಮತ್ತು ಒಳಗೆ ಅನೇಕ ಉಬ್ಬುಶಿಲ್ಪಗಳನ್ನು ಇಂದಿಗೂ ಕಾಣಬಹುದು. ಹೊಯ್ಸಳ ಶೈಲಿಯ ದೇವಾಲಯಗಳನ್ನು ಉಬ್ಬುಶಿಲ್ಪಗಳಿಲ್ಲದೆ ಕಲ್ಪಿಸುವುದೇ ಅಸಾಧ್ಯ ಶಾಸನಗಳು ಸಂಪೂರ್ಣವಾಗಿ ಉಬ್ಬು ಶಿಲ್ಪದ ಮಾದರಿಗಳೇ ಆಗಿವೆ. ಈ ಹಿನ್ನೆಲೆಯಲ್ಲಿಯೇ ನೋಡಿದಾಗ ಶಾಸನಗಳ ಮೇಲಿರುವ ಉಬ್ಬು ಶಿಲ್ಪಗಳ ಅಭ್ಯಾಸ, ಅಧ್ಯಯನವೇ ಶಾಸನಶಿಲ್ಪದ ಅಧ್ಯಯನವಾಗಿದೆ. ಪ್ರಾಚೀನ ಶಿಲ್ಪಶಾಸ್ತ್ರ ಗ್ರಂಥಗಳಾದ ಮಯಮತ, ಮಾನಸಾರ, ಅಂಶುಮದ್ಭೇದಾಗಮ, ಶಿಲ್ಪ ಸಂಗ್ರಹಗಳಲ್ಲಿ ಉಬ್ಬುಶಿಲ್ಪದ ಬಗ್ಗೆ ಮಾಹಿತಿಯಿಲ್ಲ. ಪ್ರಾಚೀನ ಕಾಲದಲ್ಲಿ ಶಿಲ್ಪಗಳನ್ನು ಮತ್ತು ಉಬ್ಬುಶಿಲ್ಪಗಳನ್ನು ಯಾವುದೇ ವ್ಯತ್ಯಾಸಗಳಿಲ್ಲದೆ ಒಂದೇ ರೀತಿಯಲ್ಲಿ ಚಿತ್ರಿಸಿದ್ದರು. ಶಿಲ್ಪಶೈಲಿಯ ಹೊಸತಂತ್ರ ಮತ್ತು ಆಯಾಮಗಳಿಂದ ವಸ್ತು ಮತ್ತು ಮಾಧ್ಯಮಗಳು ವೈವಿಧ್ಯತೆ ಪಡೆದು 'ಉಬ್ಬುಶಿಲ್ಪ' ಹೆಚ್ಚು ತೀವ್ರಗತಿಯಲ್ಲಿ ಬೆಳೆಯುತ್ತಿದೆ.

ಡಾ.ಕೆ.ಶಿವರಾಮಕಾರಂತರು ಕನ್ನಡದಲ್ಲಿ ಉಬ್ಬುಶಿಲ್ಪದ ಬಗ್ಗೆ ಚರ್ಚೆ ಮಾಡುವ ವಿದ್ವಾಂಸರಲ್ಲಿ ಮೊದಲಿಗರು. ಇವರ ಜೊತೆಯಲ್ಲಿ ಕರ್ನಾಟಕದ ಶಿಲ್ಪಕೃತಿಗಳ ಬಗ್ಗೆ ಲೇಖನಗಳನ್ನು ಇನ್ನೂ ಹಲವಾರು ವಿದ್ವಾಂಸರುಗಳು ರಚಿಸಿದ್ದಾರೆ. ಚಿತ್ರಶಿಲ್ಪ, ವಾಸ್ತುಕಲೆಗಳು ಎಂಬ ಗ್ರಂಥದಲ್ಲಿ ಕಾರಂತರು ಉಬ್ಬುಶಿಲ್ಪದ ಬಗ್ಗೆ ಹೇಳಿದ್ದಾರೆ. ಜ್ಞಾನ ಗಂಗೋತ್ರಿ ಸಂಪುಟದಲ್ಲಿ ಕೆಲವು ಮಾಹಿತಿಗಳು ಲಭ್ಯ. ೧೯೮೫ರಲ್ಲಿ ಪ್ರಕಟಗೊಂಡ 'ಕಲಾಕೋಶ' ಗ್ರಂಥದಲ್ಲಿಯೂ ಈ ಕುರಿತು ವಿಷಯವಿದೆ. ಕಾರಂತರ ಗ್ರಂಥಗಳಾದ ಭಾರತೀಯಶಿಲ್ಪ' ಮತ್ತು 'ಕಲಾಪ್ರಪಂಚ'ಗಳಲ್ಲಿಯೂ ಉಬ್ಬುಶಿಲ್ಪದ ಬಗ್ಗೆ ಪ್ರಸ್ತಾಪ

ಮಾಡಿದ್ದಾರೆ. ಕಾರಂತರು ಉಬ್ಬುಶಿಲ್ಪದ ಬಗ್ಗೆ ತಮ್ಮ ಗ್ರಂಥಗಳಲ್ಲಿ ಚರ್ಚೆ ಮಾಡಿದ್ದರೂ 'ಪೂರ್ಣಶಿಲ್ಪ' ಮತ್ತು 'ದುಂಡುಶಿಲ್ಪದ' ಲಕ್ಷಣಗಳಿಂದ ಉಬ್ಬುಗೆತ್ತನೆಯನ್ನು ಬೇರ್ಪಡಿಸುವುದಕ್ಕೆ ಮಾತ್ರ ಅವರ ಚರ್ಚೆ ಸೀಮಿತಗೊಂಡಿದೆ. ಹೀಗಾಗಿ ಅವರ ಯಾವ ಕೃತಿಗಳಲ್ಲಿಯೂ ಉಬ್ಬುಶಿಲ್ಪ ಅಥವಾ ಉಬ್ಬುಗೆತ್ತನೆಯನ್ನು ಪ್ರಧಾನವಾಗಿ ಚರ್ಚಿಸಲ್ಪಟ್ಟಿಲ್ಲ ಎಂಬ ಡಾ.ಡಿ.ವಿ.ಪರಮಶಿವಮೂರ್ತಿಯವರ ಮಾತನ್ನು ಒಪ್ಪಬೇಕಾಗುತ್ತದೆ. ಚಪ್ಪಟೆಯಾದ ಹಿನ್ನೆಲೆಯಿಂದ ಮುಂದಕ್ಕೆ ಉಬ್ಬಿದಂತೆ ಕಾಣುವ ಶಿಲ್ಪಗಳನ್ನು ಉಬ್ಬು ಶಿಲ್ಪಗಳು ಎಂಬುದಾಗಿ ಇಲ್ಲಿ ಅರ್ಥೈಸಬಹುದಾಗಿದೆ. ವಸ್ತುವಿನಿಂದ ಮುಂದಕ್ಕೆ ಉಬ್ಬಿದಂತೆ ಕಾಣುವ ಎಲ್ಲ ಶಿಲ್ಪಗಳು ಉಬ್ಬುಶಿಲ್ಪಗಳು. ಉಬ್ಬು ಶಿಲ್ಪಗಳನ್ನು ರಚಿಸಿದ ಶಿಲ್ಪಿ ಬಹಳ ಸೊಗಸಾಗಿ ಕೆತ್ತಿದ್ದಾನೆ. ಹೊಯ್ಸಳ, ಚಾಲುಕ್ಯ, ವಿಜಯನಗರ ಅರಸರ ಕಾಲದ ಶಿಲ್ಪಗಳು ನೋಡುಗರಲ್ಲಿ ಆನಂದವನ್ನುಂಟು ಮಾಡುತ್ತವೆ.[೧]

'ಒಂದು ಶಿಲ್ಪಕೃತಿಯನ್ನು ಅದರ ಹಿಂದೆ, ಮುಂದೆ ಮತ್ತು ಮಗ್ಗುಲಲ್ಲಿ ನಿಂತು ನೋಡಬಹುದಾದರೆ ಇದನ್ನು ಮಾತ್ರ ಒಂದು ಚಿತ್ರವನ್ನು ನೋಡುವಂತೆ ಕೇವಲ ಇದಿರಿನಿಂದ ಮಾತ್ರ ನೋಡಬೇಕಾಗುತ್ತದೆ. ಬಣ್ಣದಲ್ಲಿ ತನ್ನ ಭಾವನೆಗಳನ್ನು ಚಿತ್ರಕಲಾಕಾರನು ವ್ಯಕ್ತಪಡಿಸಿದರೆ, ಶಿಲ್ಪಕಲಾಕಾರನು ತನ್ನ ಮಾಧ್ಯಮಗಳಾದ ಶಿಲೆ, ಲೋಹ, ಮರ ಮುಂತಾದವುಗಳ ಮೂಲಕ ಭಾವನೆಗಳನ್ನು ವ್ಯಕ್ತಪಡಿಸುತ್ತಾನೆ. ವಿವರಣೆ, ಸೂಕ್ಷ್ಮ ವಿಷಯಗಳನ್ನು ಹೇಳಲು ಚಿತ್ರರಚನೆಯಲ್ಲಿ ಬಣ್ಣಗಳನ್ನು ಉಪಯೋಗಿಸುವುದನ್ನು ಕಾಣುತ್ತೇವೆ. ಶಿಲ್ಪ ರಚನೆಯ ಸಂದರ್ಭದಲ್ಲಿ ಇದು ಸಾಧ್ಯವಿಲ್ಲ.

ಉಬ್ಬುಶಿಲ್ಪದ ರಚನೆಯಲ್ಲಿ ಪ್ರಧಾನ ಮಾಧ್ಯಮವನ್ನಾಗಿ ಶಿಲೆ ಮತ್ತು ಮರವನ್ನು ಬಳಸಿರುವುದನ್ನು ಕಾಣುತ್ತೇವೆ. ಇಲ್ಲಿ ಶಿಲ್ಪಿಯ ಮನೋಧರ್ಮವೇ ಪ್ರಧಾನ ಭೂಮಿಕೆ ಎಂದು ಹೇಳಬಹುದು. ಶಿಲ್ಪಿಯು ಬೇಡವಾದುದನ್ನು ಕೆತ್ತಿ ತೆಗೆಯುತ್ತಾನೆ. ಯಾವ ಪ್ರಧಾನ ವಿಷಯವನ್ನು ಕೆತ್ತಬೇಕು ಎಂದು ಶಿಲ್ಪಿಯು ನಿರ್ಧರಿಸುತ್ತಾನೋ ಅದಕ್ಕೆ ಬೇಕಾಗುವಷ್ಟು ಸ್ಥಳದಲ್ಲಿ ಶಿಲೆಯನ್ನು ಹಾಗೆಯೇ ಇರಿಸಿಕೊಂಡು ಉಳಿದ ಹಿಂಭಾಗದ ಸ್ಥಳವನ್ನು ಸೆಂಟಿಮೀಟರಿನಷ್ಟೋ, ಅಂಗುಲದಷ್ಟೋ ಅಗತ್ಯಕ್ಕೆ ತಕ್ಕಂತೆ ಉಳಿಸಿಕೊಂಡು ಕೆತ್ತುತ್ತಾನೆ. ಆ ಜಾಗದಲ್ಲಿ ವಿಷಯವನ್ನು ನಿರೂಪಿಸುತ್ತಾನೆ. ಈ ಕೆಲಸದಲ್ಲಿ ಹಾಗೆ ಕೆತ್ತಿ ತೆಗೆಯುವ ಕೆಲಸ ಶ್ರಮದ್ದು ಮಾತ್ರವಲ್ಲ. ಕೆತ್ತಿ ಹೋದ ಭಾಗವನ್ನು ತಿರುಗಿ ಸೇರಿಸುವಂತಿಲ್ಲ. ಹೀಗಾಗಿ ಆತನ ಈ ಕೆಲಸಕ್ಕೆ ಎಷ್ಟು ದಿವಸಗಳು ಹಿಡಿದರೂ ಸರಿ ಮುಂದೆ ಕಾಣಿಸಿಕೊಳ್ಳಬೇಕಾದ ಆಕೃತಿಯ ಆಶಯ, ಅಳತೆ, ರೂಪಗಳು ಹೇಗೆ ಇರಬೇಕು ಎಂಬ ವಿಚಾರದಲ್ಲಿ ಆತ ದೀರ್ಘ ಕಾಲ ನೆನಪನ್ನು ಉಳಿಸಿಕೊಂಡಿರಬೇಕು.[೧] ಲೋಹ ಮಾಧ್ಯಮವಾಗಲಿ ಅಥವಾ ಮರದ ಮಾಧ್ಯಮವಾಗಲಿ, ಶಿಲ್ಪವನ್ನು ನಿರ್ಮಿಸಲು ಕಲ್ಪನೆ, ಕಲ್ಪನೆಗನುಗುಣವಾದ ಚಿತ್ರಗಾರಿಕೆ ಅವಶ್ಯ. ಹಾಗಾಗಿ ಶಿಲ್ಪಿಗೆ ತಾನು ಕೊರೆಯುತ್ತಿರುವ ಅಥವಾ ಮೂಡಿಸುತ್ತಿರುವ ಶಿಲ್ಪದ ಕಲ್ಪನೆಯಿರಬೇಕು. ಇದಕ್ಕಾಗಿ ಬಹು ಸುಲಭವಾಗಿ ಖಚಿತ ಆಕಾರ ನೀಡಬಹುದಾದ ಮೃದುವಾದ ಗುಣವುಳ್ಳ ತಾಮ್ರವನ್ನು

ಹೆಚ್ಚು ಬಳಸಿರುವರು. ಇದರ ಜೊತೆಗೆ ಹಿತ್ತಾಳೆಯನ್ನು ಬಳಸಿರುವುದು ಕಂಡುಬರುತ್ತದೆ. ಬೆಳ್ಳಿ ಮತ್ತು ಬಂಗಾರದ ಬಳಕೆ ಬಹಳ ಅಪರೂಪವೆಂದೇ ಹೇಳಬಹುದು. ಇಲ್ಲಿ ಶಿಲ್ಪಿಯು ಒಂದು ಆಕೃತಿಯನ್ನು ಮೂಡಿಸಲು ಗಾತ್ರಕ್ಕನುಸಾರವಾಗಿ ಕಲ್ಪನೆ ಮಾಡುತ್ತಾನೆ. ಆ ಕಲ್ಪನೆಯ ಭಾವ ಕಾಗದದ ಮೇಲೆ ಗುರುತಿಸಿಕೊಳ್ಳಬೇಕಾಗುತ್ತದೆ. ನಂತರ ಅದಕ್ಕೆ ಸ್ಪಷ್ಟವಾದ ಅಂತಿಮವಾದ ರೂಪವನ್ನು ಕೊಟ್ಟು ಅದರ ನಕಲುಗಳನ್ನು ತಯಾರಿಸಿಟ್ಟುಕೊಳ್ಳಬೇಕು. ಬಹುಶಃ ಇದಕ್ಕೆ ಅನುಕೂಲತೆಗೆ ತಕ್ಕಂತೆ ಶುದ್ಧ ತ್ರಾಮವನ್ನೋ ಅಥವಾ ಹಿತ್ತಾಳೆಯನ್ನೊ ಶಿಲ್ಪಗಳಿಗಾಗಿ ಬಳಸುವರು ಎಲ್ಲಕ್ಕಿಂತ ಮುಖ್ಯವಾಗಿ ತಾಲ್ಲೂಕಿನಲ್ಲಿ ದೊರೆತಿರುವ ಶಿಲ್ಪಗಳನ್ನು ಗಮನಿಸಿದಾಗ ಶಿಲ್ಪ ನಿರ್ಮಾಣದಲ್ಲಿ ಶಿಲೆಯನ್ನು ಪ್ರಧಾನವಾದ ಮಾಧ್ಯಮವನ್ನಾಗಿ ಬಳಸಿರುವುದು ಕಂಡುಬರುತ್ತದೆ.

ಪ್ರಾಚೀನ ಕಾಲದಿಂದಲೂ ಸಹ ಶಿಲ್ಪಕಲೆಗೆ ಪ್ರಧಾನವಾದ ಒಂದು ಮಾಧ್ಯಮವಾಗಿ ಶಿಲೆ ಬಳಕೆಗೊಂಡಿದೆ. ಈ ಶಿಲೆಯಲ್ಲಿ ಮರಳುಶಿಲೆ, ಅಮೃತಶಿಲೆ, ಸಾಮಾನ್ಯಶಿಲೆ, ಬಳಪಶಿಲೆ, ಮತ್ತು ಕಪ್ಪುಶಿಲೆ ಎಂಬ ವಿಂಗಡಣೆಗಳನ್ನು ಮಾಡಬಹುದು. 'ಮರಳುಗಲ್ಲ'ನ್ನು ಬಾದಾಮಿ ಚಾಲುಕ್ಯರು ದೇವಾಲಯಗಳ ನಿರ್ಮಾಣಕ್ಕೆ ಬಳಸಿದ್ದಾರೆ. ಹಾಗೆಯೇ 'ಬಳಪದ ಕಲ್ಲ'ನ್ನು ಹೊಯ್ಸಳರು ಬಳಸಿದ್ದಾರೆ. 'ಬಳಪದ ಕಲ್ಲು' ಬಹಳ ಮೃದುವಾದುದು. ಜೊತೆಗೆ ಕೆತ್ತಲು ಸುಲಭವಾದುದರಿಂದ ಈ ಶಿಲೆಯನ್ನೇ ಹೆಚ್ಚಾಗಿ ಬಳಸಿರುವುದು ಕಂಡುಬರುತ್ತದೆ. ವಿಜಯನಗರ ಅರಸರ ಕಾಲದಲ್ಲಿ ದೇವಾಲಯಗಳ ನಿರ್ಮಾಣಕ್ಕೆ, ಶಿಲ್ಪಗಳ ರಚನೆಗೆ ಬಳಸಿದ ಕಲ್ಲು ಬಹಳ ಕಠಿಣವಾದುದು. ಆದುದರಿಂದ ಇದನ್ನು 'ಕಠಿಣಶಿಲೆ' ಎಂದು ಕರೆಯುತ್ತಾರೆ. ಈ ರೀತಿಯ ಶಿಲೆಗಳಲ್ಲಿನ ವಿಂಗಡಣೆ ಅಥವಾ ಪ್ರಕಾರ ನಮ್ಮ ನಾಡಿನ ಕಲಾ ಸಮೃದ್ಧಿಯನ್ನು ಕಲಾ ಶ್ರೀಮಂತಿಕೆಯನ್ನು ನಿರ್ಧರಿಸುತ್ತದೆ.

ಶಿಲೆಗಿಂತ ಮೃದುವಾದ ಮತ್ತೊಂದು ಮಾಧ್ಯಮ ಮರ. ಶಿಲೆಯ ನಂತರದ ಸ್ಥಾನವನ್ನು ಇದಕ್ಕೆ ನೀಡಲಾಗಿದೆ. ಶಿಲೆಗಿಂತ ಬಾಳಿಕೆ ಕಡಿಮೆಯಾದುದು. ಇದು ಅಪಘಾತಗಳಿಗೆ ಬೇಗ ಈಡಾಗುತ್ತದೆ. ಆದುದರಿಂದ ನಮ್ಮಲ್ಲಿ ದೊರಕುವ ಮರದ ಶಿಲ್ಪಗಳು ಇತ್ತೀಚಿನವು. ಆದರೆ ಇವು ತಾಲ್ಲೂಕಿನಲ್ಲಿ ಬಹಳ ಅಪರೂಪಕ್ಕೆಂಬಂತೆ ಕಾಣಸಿಗುವವು. ಉದಾಹರಣೆಗೆ ಕುರುವಿಗೆರೆ ಗ್ರಾಮದ ಮದ್ದೂರಮ್ಮನ ಶಿಲ್ಪ ಮರದ ಶಿಲ್ಪವಾಗಿದೆ.

ಲೋಹದಲ್ಲಿ ಮಾಡಿದ ಶಿಲ್ಪಗಳು ನಮ್ಮ ತಾಲ್ಲೂಕಿನಲ್ಲಿ ಬಹಳ ಕಡಿಮೆ ಪ್ರಮಾಣದಲ್ಲಿ ಕಂಡುಬರುತ್ತವೆ. ಹಿತ್ತಾಳೆ ಮತ್ತು ತಾಮ್ರ ಹೆಚ್ಚಾಗಿ ಬಳಸಿರುವುದು ಕಂಡುಬರುತ್ತದೆ. ಲೋಹದ ಉಬ್ಬುಗೆತ್ತನೆಗಳು ಧಾರ್ಮಿಕ ಕೇಂದ್ರಗಳಲ್ಲಿ ಮಾತ್ರ ಕಾಣುತ್ತೇವೆ. ದೇವಾನುದೇವತೆಗಳ ಹಿಂಭಾಗದಲ್ಲಿ ನಿಲ್ಲಿಸಲು, ಬಾಗಿಲುಗಳಿಗೆ ಹಾಗೂ ಹೊಸಿಲುಗಳಿಗೆ ಹೊದಿಸಲು ಲೋಹದ ತಗಡನ್ನು ಬಳಸಲಾಗಿದೆ. ದೇವರ ಪ್ರಭಾವಳಿ, ಮತ್ತು ಬಾಗಿಲುವಾಡಗಳು ಇದಕ್ಕೆ ಉದಾಹರಣೆಗಳಾಗಿವೆ. ಇವುಗಳ ಮೇಲೆ

ಯಾಳಿಯ ಮುಖ ಹಂಸಗಳ ಸಾಲು, ಹೂವು ಬಳ್ಳಿಗಳ ಸಾಲು, ಬಾಗಿಲುವಾಡಗಳಲ್ಲಿ ಗಜಲಕ್ಷ್ಮಿ ಅಥವಾ ಪೂರ್ಣತಾವರೆಯ ಚಿತ್ರಗಳನ್ನು ಕಾಣಬಹುದು.

ಕಮ್ಮಸಂದ್ರದ ಚನ್ನಕೇಶವ ದೇವಾಲಯದ ಬಾಗಿಲುವಾಡದಲ್ಲಿ ಹಿತ್ತಾಳೆಯಿಂದ ನಿರ್ಮಿಸಿರುವ ಶಿಲ್ಪಗಳನ್ನು ಕಾಣಬಹುದು. ಹುಲುಕಡಿ ಬೆಟ್ಟದ ವೀರಭದ್ರ ದೇವಾಲಯದ ಗರ್ಭಗುಡಿಯ ಬಾಗಿಲುವಾಡದಲ್ಲಿ ಕಲಾತ್ಮಕವಾದ ಕುಸುರಿ ಕೆಲಸ ಮೂಡಿದೆ. ಹಣಬೆ ವೀರಭದ್ರ ದೇವಾಲಯದ ಮಾರುತಿ ವಿಗ್ರಹವು ಉಬ್ಬುಶಿಲ್ಪಕ್ಕೆ ಅತ್ಯುತ್ತಮ ಉದಾಹರಣೆಯಾಗಿ ಇಲ್ಲಿ ನೀಡಬಹುದು.

ಕರ್ನಾಟಕದಲ್ಲಿ ಹೆಚ್ಚಾಗಿ ಬಳಕೆಗೊಂಡಿರುವ ಗಾರೆ ಮತ್ತು ಮಣ್ಣನ್ನು ಮಾಧ್ಯಮವಾಗಿ ದೇವಾಲಯಗಳ ಗೋಪುರಗಳಲ್ಲಿ ಮುಖ್ಯವಾಗಿ ನೋಡಬಹುದು. ೧೩೫೦ರ ನಂತರ ಅಂದರೆ ವಿಜಯನಗರದ ಅರಸರ ಕಾಲದ ದೇವಾಲಯಗಳಲ್ಲಿ ಗಾರೆಯ ಉಬ್ಬುಶಿಲ್ಪಗಳನ್ನು ನೋಡಬಹುದು. ಲಿಂಗನಹಳ್ಳಿ ಗ್ರಾಮದ ಹನುಮದೇವಾಲಯದ ಗೋಪುರದಲ್ಲಿನ ಶಿಲ್ಪಗಳು, ಹಾದ್ರಿಪುರದ ವೀರಭದ್ರ ದೇವಾಲಯದ ಗೋಪುರವು ಗಾರೆಯಿಂದ ಮಾಡಿದ ವಿಜಯನಗರ ಶೈಲಿಯ ಶಿಲ್ಪಗಳಿಗೆ ಅತ್ಯುತ್ತಮ ಉದಾಹರಣೆಯಾಗಿವೆ.

ಶಿಲ್ಪವನ್ನು ತಯಾರಿಸುವಲ್ಲಿ ಲೋಹವನ್ನು ಬಳಸುತ್ತಾರಾದರೂ, ಶಾಸನ ಶಿಲ್ಪದಲ್ಲಿ ಲೋಹದ ಬದಲಾಗಿ ಶಿಲೆಯನ್ನು ಪ್ರಧಾನ ಮಾಧ್ಯಮವಾಗಿ ಉಪಯೋಗಿಸಿದ್ದಾರೆ. ತಾಮ್ರಶಾಸನಗಳಲ್ಲಿ ರೇಖಾ ಚಿತ್ರಗಳನ್ನು ಹಾಗು ಪತ್ರಗಳನ್ನು ಕೂಡಿಸಲು ರಾಜಮುದ್ರೆಯ ಬಳೆಗಳನ್ನು ಉಪಯೋಗಿಸಿರುವುದನ್ನು ಕಾಣಬಹುದು.

ಶಿಲ್ಪ ಮತ್ತು ಶಾಸನ ಶಿಲ್ಪಗಳನ್ನು ನಿರ್ಮಿಸುವ ತಂತ್ರಗಳು ಒಂದೇ ರೀತಿಯಾಗಿಲ್ಲ. ಅವು ಬೇರೆ ಬೇರೆಯಾಗಿವೆ. ಶಿಲ್ಪವನ್ನು ಅಥವಾ ಮೂರ್ತಿಯನ್ನು ನಾಲ್ಕು ಕಡೆಗಳಲ್ಲಿ ಕೆತ್ತಬೇಕು. ಆದರೆ ಶಾಸನಶಿಲ್ಪವನ್ನು ಅದರ ಮುಂದೆ ನಿಂತು ನೋಡಿದಾಗ ಕಾಣುವಂತೆ ನಿರ್ಮಿಸಬೇಕು. ಶಿಲ್ಪ ಮೂಲತಃ ಒಂದು ಆಕೃತಿ. ಆದರೆ ಶಾಸನಶಿಲ್ಪ ಒಂದು ಮೂಲಾರ್ಥವನ್ನು ಒಳಗೊಂಡ ಘಟನೆಗೆ ಸಂಬಂಧಿಸಿದ ಎಲ್ಲಾ ವ್ಯಕ್ತಿಗಳನ್ನೂ ವಿಷಯವನ್ನು ಒಳಗೊಂಡಿರುತ್ತದೆ. ಶಿಲ್ಪಿಯು ಘಟನೆಯ ಭಾವನೆಗಳನ್ನು ನಿರೂಪಿಸಲು ಪ್ರಯತ್ನಿಸುತ್ತಾನೆ. "ಶಿಲ್ಪಗಳಲ್ಲಿ ಒಂದು ಘಟನೆಯನ್ನು ಒಂದು ಭಂಗಿಯನ್ನು ಕೆತ್ತಿದರೆ, ಶಾಸನಶಿಲ್ಪದಲ್ಲಿ ಏಕ ಕಾಲದಲ್ಲಿ ಹಲವು ಘಟನೆಗಳನ್ನು ಚಿತ್ರಿಸಬಹುದು. ವೀರಗಲ್ಲು ಮತ್ತು ಮಾಸ್ತಿಗಲ್ಲಿನ ಶಿಲ್ಪಗಳಲ್ಲಿ ಈ ತಂತ್ರವನ್ನೇ ನಾವು ಪ್ರಧಾನವಾಗಿ ಕಾಣಬಹುದು."[೨]

ಶಿಲ್ಪದ ಬೆಳವಣಿಗೆಗೆ ಧಾರ್ಮಿಕ ಪ್ರೇರಣೆ ಮತ್ತು ಪ್ರಭಾವಗಳು ಕಾರಣವಾಗಿ ಮಡಿ-ಮೈಲಿಗೆಗಳಿಂದ ಕೂಡಿದ್ದಾಗಿತ್ತು. ಆದರೆ ಶಾಸನ ಶಿಲ್ಪಗಳು ಸಾಮಾನ್ಯ ಜನರ ಸ್ವತ್ತಾಗಿ ಜನರ ಬದುಕಿನಲ್ಲಿ ಹಾಸು ಹೊಕ್ಕಾಗಿ ಉಳಿದುಕೊಂಡಿವೆ. ಆದರೆ ಇವು ಒಂದು ಜನಾಂಗದಿಂದ ಮತ್ತೊಂದು

ಜನಾಂಗಕ್ಕೆ ನೋಡುವ ವಿಧಾನ ಮಾತ್ರ ಬೇರೆ ಬೇರೆಯಾಗಿರುತ್ತದೆ. ಹಾಗಾಗಿ ಶಾಸನ ಶಿಲ್ಪಗಳು ರಸ್ತೆಯ ಇಕ್ಕೆಲಗಳಲ್ಲಿ, ಮರದ ಕೆಳಗೆ ಎಲ್ಲೆಂದರಲ್ಲಿ ಕಾಣಬಹುದು. ಅನೇಕ ಕಡೆ ಭಕ್ತಿಯಿಂದ ಪೂಜೆ ಮಾಡಿಸಿಕೊಳ್ಳುತ್ತಿರುವ ಶಾಸನಶಿಲ್ಪಗಳು ಇಲ್ಲದಿಲ್ಲ. ಉದಾಹರಣೆಗಾಗಿ, ಕಾರೇಪುರ, ಹಾಲಹಳ್ಳಿ ಕೋಡಿಹಳ್ಳಿ ಗ್ರಾಮಗಳಲ್ಲಿನ ಶಾಸನಶಿಲ್ಪಗಳು.

ಕಲೆಯ ಮನಸ್ಸಿನಿಂದ ಹುಟ್ಟಿದ, ಧಾರ್ಮಿಕ ಚೌಕಟ್ಟಿನಲ್ಲಿ ಬೆಳೆದು ಭಕ್ತಿಯನ್ನು ಉದ್ದೀಪನಗೊಳಿಸುವ ಕಲೆಗಾರಿಕೆ ಶಿಲ್ಪದ್ದಾಗಿದೆ. ಶಾಸನಶಿಲ್ಪವು ಸಾಮಾಜಿಕ ಜೀವನ ರಂಗದ ಕಳಕಳಿಯಿಂದ ಹುಟ್ಟಿದಂತಹುದು. ಆದುದರಿಂದ ಇದು ಮೊದಲು ಸಾಂಸ್ಕೃತಿಕ ಆಕರವಾಗಿದ್ದು ನಂತರ ಕಲಾ ಮಾಧ್ಯಮವಾಗಿದೆ.

ಶಿಲಾಫಲಕದಲ್ಲಿ ದೊರೆಯುವ ಸ್ಥಳದ ಅವಕಾಶಗಳು ಶಾಸನಶಿಲ್ಪದ ರಚನೆಯಲ್ಲಿ ಶಿಲ್ಪಕಲಾ ಕಾರನಿಗೆ ನೆರವಾಗುವ ಪ್ರಮುಖ ಅಂಶವಾಗಿದೆ. ವಿಷಯವನ್ನು ಪ್ರಸ್ತಾಪಿಸಲು ಬೇಕಾಗುವಷ್ಟು ಉದ್ದ, ಅಗಲ ಮತ್ತು ಗಾತ್ರದ ಶಿಲೆಯನ್ನು ಮೊದಲು ಸಿದ್ಧತೆ ಮಾಡಿಕೊಳ್ಳಬೇಕು. ಇದು ಒಂದು ಹಂತದಿಂದ ಏಳು ಹಂತದವರೆಗಿನ ಶಾಸನ ಶಿಲ್ಪಗಳನ್ನು ರಚಿಸಲು ಕಾರಣವಾಗಿದೆ. ಎಲ್ಲವನ್ನು ಪ್ರಾರಂಭದಿಂದ ಕೊನೆಯವರೆಗೂ ಹಂತ ಹಂತವಾಗಿ ನಿರೂಪಿಸಲ್ಪಟ್ಟಿರುತ್ತದೆ.

ಶಾಸನ ಶಿಲ್ಪಗಳು ಜನ್ಮ ತಾಳಿದುದು ಯಾವುದಾದರೂ ಒಂದು ಘಟನೆಯನ್ನು ವಿವರವಾಗಿ ತಿಳಿಸಲು. ಇವು ಜನರ ರೀತಿನೀತಿ ತಿಳಿಸಲು ನೆರವಾಗುತ್ತವೆ. ಇವು ನಮ್ಮ ನಾಡಿನ ಅನೇಕ ಕಡೆ ಪೂಜಾ ಮೂರ್ತಿಗಳಾಗಿಯೂ ಕಂಡುಬರುತ್ತವೆ. ಅಲ್ಲಿನ ಜನಪದೀಯ ನಂಬಿಕೆಗಳು, ಆಚರಣೆಗಳು, ಸಂಕೇತಗಳಂತೆ ತೋರಿ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡಿವೆ. ಮಹಾಸತಿಕಲ್ಲುಗಳಲ್ಲಿನ ಶಿಲ್ಪಗಳಲ್ಲಿ ಸತಿಯು ತನ್ನ ಬಲಗೈಯನ್ನು ಮೇಲಕ್ಕೆ ಎತ್ತಿ ಹರಸುತ್ತಿರುವುದು, ವೀರಗಲ್ಲುಗಳಲ್ಲಿ ವೀರ ಆಯುಧಗಳನ್ನು ಹಿಡಿದು ವೀರಾವೇಶದಿಂದ ಹೋರಾಡುತ್ತಿರುವುದು, ನಿಸಿಧಿ ಕಲ್ಲುಗಳಲ್ಲಿ ಸಾಧಕರು ಪುಸ್ತಕದ ಮುಂದೆ ಕುಳಿತಿರುವುದು ಸಂಕೇತಗಳಾಗಿವೆ.

## ೪.೧. ದಾನಶಾಸನಗಳು

ದಾನ ಶಾಸನಗಳಲ್ಲಿ ಸೂರ್ಯ, ಚಂದ್ರರನ್ನು, ಶಿವಲಿಂಗ ಇನ್ನೂ ಮುಂತಾದ ಸಂಕೇತಗಳನ್ನು ಬಿಡಿಸಿರುವುದು ಕಂಡುಬರುತ್ತದೆ. ಈ ಸಂಕೇತಗಳು ಬಹಳ ಅರ್ಥವತ್ತಾಗಿದ್ದು, ಒಂದು ಜನಾಂಗದ ನಂಬಿಕೆಯ ಹಿನ್ನೆಲೆಯಲ್ಲಿ ಮೂಡಿ ಬಂದಿರುತ್ತದೆ. ಶಾಸನಶಿಲ್ಪ ಮತ್ತು ಶಿಲ್ಪಗಳಿಗೆ ಮಾಧ್ಯಮ ಒಂದೇ ಆದರೂ ಅದರ ಹಿಂದಿನ ಉದ್ದೇಶ ಮತ್ತು ಪ್ರೇರಣೆ ವಿಭಿನ್ನವಾದವು. ಶಿಲ್ಪಗಳಿಗೆ ಮಹಾಕಾವ್ಯಗಳು, ಪುರಾಣಗಳು ವಸ್ತು ವಿಷಯವಾದರೆ, ಶಾಸನಶಿಲ್ಪಗಳಿಗೆ ಸಮಾಜದಲ್ಲಿನ ಜನರ

ಸಾಮಾನ್ಯ ಬದುಕು ಮೂಲ ಪ್ರೇರಣೆ ಆಗಿದ್ದು, ಮೂಲ ವಸ್ತು ವಿಷಯವಾಗಿ ರೂಪಗೊಂಡಿದೆ ಎನ್ನಬಹುದು. ಸೌಂದರ್ಯೋಪಾಸನೆ ಮತ್ತು ಕಲೆಗಾರಿಕೆ ಶಿಲ್ಪಕೃತಿಗಳಲ್ಲಿ ಗೋಚರಿಸಿದರೆ, ಪ್ರಕೃತಿ ಅಂಗವಾದ ಸಾಮಾಜಿಕ ಪರಿಸರದಲ್ಲಿನ ಕಳಕಳಿಯೇ ಶಾಸನ ಶಿಲ್ಪಗಳಲ್ಲಿ ಪ್ರಧಾನವಾಗಿ ಕಂಡುಬರುತ್ತದೆ. ಅಲ್ಲಿನ ಉದಾತ್ತ ಮೌಲ್ಯಗಳು, ಆದರ್ಶಗಳು, ಜನರ ನಂಬಿಕೆಗಳು, ಜನರ ಆಚರಣೆಗಳು, ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ಆದರ್ಶ ಪ್ರಾಯವಾಗಿರಲಿ ಎಂಬ ಆಶಯೋಕ್ತಿಗಳು ಶಾಸನಶಿಲ್ಪಗಳಲ್ಲಿ ಪ್ರತಿಬಿಂಬಿತವಾಗಿವೆ ಎಂದು ಹೇಳಿದರೆ ತಪ್ಪಾಗಲಾರದು. ಒಂದು ನಿಯಂತ್ರಿತವಾದ ಕಲೆಗಾರಿಕೆ ಶಿಲ್ಪಶಾಸ್ತ್ರದಲ್ಲಿದೆ. ಆದರೆ, ಯಾವುದೇ ಶಾಸ್ತ್ರೀಯವಾದ ನಿಯಂತ್ರಣವನ್ನು ಹೊಂದಿರದೆ ಇರುವುದು ಶಾಸನಶಿಲ್ಪದಲ್ಲಿ ಮಾತ್ರ, ದೊರೆತಿರುವ ಒಂದೊಂದು ಶಾಸನಶಿಲ್ಪವೂ ತನ್ನದೇ ಆದ ವೈಶಿಷ್ಟ್ಯತೆ ಮತ್ತು ಸ್ವಂತಿಕೆಯನ್ನು ಹೊಂದಿದ್ದು, ಶಾಸನಶಿಲ್ಪಗಳು ಶಾಸನ ಪ್ರಪಂಚದಲ್ಲಿ ತನ್ನದೇ ಆದ ಸ್ಥಾನವನ್ನು ಹೊಂದಿದೆ.

ನಮ್ಮ ನಾಡಿನ ಜನಜೀವನವನ್ನರಿಯಬೇಕಾದರೆ ಶಾಸನಗಳಿಗಿಂತ ಉತ್ತಮ ಸಾಧನಗಳಿಲ್ಲ ಎಂಬುದು ಡಾ.ಎಂ.ಚಿದಾನಂದಮೂರ್ತಿಯವರ ಅಭಿಪ್ರಾಯವಾಗಿದೆ. ಆದರೆ ಶಾಸನಗಳಿಗೆ ದೊರೆತಿರುವ ಮನ್ನಣೆ ಶಾಸನಶಿಲ್ಪಗಳಿಗೆ ದೊರೆತಿಲ್ಲ. ಆದರೂ ಆಯಾ ಕಾಲಘಟ್ಟದ ಆಚರಣೆಗಳು, ವೇಷಭೂಷಣಗಳನ್ನು ತಿಳಿಯಲು ತಕ್ಕಮಟ್ಟಿಗೆ ನೆರವಾಗುತ್ತವೆ ಎನ್ನಬಹುದು. ಒಟ್ಟಾರೆ ಶಾಸನಶಿಲ್ಪಗಳು ಲಿಪಿಯನ್ನು 'ಓದಲಾಗದವರಿಗೂ ಶಾಸನ ಲಿಖಿಸದ ಅಂತರ್ಯಗಳ ಸಹಿತ ಸೂಕ್ಷ್ಮಗ್ರಹಿಕೆಗೆ ತಮ್ಮ ಕಾಲದ ಸಾಂಸ್ಕೃತಿಕ ಬದುಕಿನ ಚಹರೆಗಳನ್ನು ಸಾಧ್ಯವಿದ್ದಷ್ಟು ಅಧಿಕೃತವಾಗಿ ಹೇಳುವ, ಧ್ವನಿಸುವ, ಮನನ ಮಾಡಿಸುವ ದಾಖಲೆಗಳಾಗಿವೆ.[೩] ಶಾಸನಶಿಲ್ಪ ಪ್ರಕಾರ ಪ್ರದೇಶದ ಭಿನ್ನತೆಗೆ ಒಳಪಟ್ಟು, ಬೇರೆ ಬೇರೆ ರೀತಿಯಾಗಿ ಬೆಳೆದು ಬಂದ ಒಂದು ಕಲೆ ಇದು. ಮಡಿ ಮೈಲಿಗೆಯನ್ನು ದೂರವಿಟ್ಟು, ಎಲ್ಲಾ ವರ್ಗದ ಜನರನ್ನೂ ಈ ಕಲೆಗಾರಿಕೆ ಬಳಸಿಕೊಂಡು ಬೆಳೆದುಬಂದಿದೆ. ಗ್ರಾಮಗಳನ್ನು, ಅಬಲೆಯರನ್ನು, ದನಕರುಗಳನ್ನು ರಕ್ಷಿಸಲು ತಮ್ಮ ಪ್ರಾಣ ಬಿಟ್ಟವರನ್ನು, ಸಾಮಾನ್ಯ ಕಾರ್ಯಗಳನ್ನು ಮಾಡಿದವರನ್ನೂ ಸಹ ಶಾಸನಶಿಲ್ಪದಲ್ಲಿ ಕಾಣಬಹುದಾಗಿದೆ. ಒಬ್ಬ ವ್ಯಕ್ತಿಯ ಮೇಲಿದ್ದ ಪ್ರೀತಿ ಮತ್ತು ಅಭಿಮಾನಗಳನ್ನು ಜನಸಮುದಾಯ ಶಾಸನ ಶಿಲ್ಪಗಳಲ್ಲಿ ಮೂಡಿಸಿರುವುದನ್ನು ನೋಡಬಹುದು. ಅಂದಿನ ಜನಸಮುದಾಯ ಮೌಲ್ಯಗಳನ್ನೇ ನಂಬಿದ್ದು, ಅದಕ್ಕಾಗಿಯೇ ಪ್ರಾಣತೆತ್ತವರನ್ನು ಶಾಸನಶಿಲ್ಪಗಳು ಚಿತ್ರಿಸುತ್ತವೆ. ಹಾಗಾಗಿ "ಸ್ಮಾರಕ ಶಿಲೆಗಳು ಮೂಲತಃ ದಾಖಲೆ, ವ್ಯಕ್ತಿಯ ಗುಣಗಾನಗಳಾಗಿದ್ದರೂ, ಪ್ರಾಚೀನ ಮೌಲ್ಯಗಳನ್ನು ಪ್ರಚುರಗೊಳಿಸುವ ಫಲಕಗಳೂ ಆಗಿವೆ" ಎಂಬುದಾಗಿ ಹೇಳಬಹುದು.[೪] ಇಷ್ಟೆಲ್ಲಾ ವಸ್ತು ವಿಷಯ, ವೈವಿಧ್ಯಗಳನ್ನು ಒಳಗೊಂಡಿರುವ ಶಾಸನಶಿಲ್ಪಗಳ ಉದ್ದೇಶಗಳಾದರೂ ಏನು? ಎಂಬುದಕ್ಕೆ ಕಾರಣಗಳು ಹಲವಾರು.

ಶಾಸನವನ್ನು ನೆಡುವ ಪದ್ಧತಿ ಹಿಂದಿನ ಕಾಲದಿಂದಲೂ ನಡೆದುಕೊಂಡು ಬಂದಿದೆ. ಇದರ ಹಿಂದಿರುವ ಮುಖ್ಯ ಉದ್ದೇಶವೆಂದರೆ ನೀಡಿದ ದಾನಗಳು ಶಾಶ್ವವಾಗಿರಲಿ ಮತ್ತು ನೀಡಿದ ದಾನ-ಧರ್ಮಗಳನ್ನು ಎಲ್ಲಾ ವರ್ಗದವರಿಗೂ ತಿಳಿಯಲಿ ಎಂಬುದಾಗಿದೆ. ಇದರಿಂದ ಜನರು ತಮ್ಮನ್ನು ಗೌರವಭಾವನೆಯಿಂದ ಕಾಣುತ್ತಾರೆ ಎಂಬುದಾಗಿರಬೇಕು. ಮತ್ತು ದಾನವನ್ನು ಪಡೆದವರು ದಾನದ ಫಲವನ್ನು ನಿರಂತರವಾಗಿ ಅನುಭವಿಸಬೇಕೆಂಬುದಾಗಿದೆ. ಬಲಗೈ ನೀಡುವ ದಾನ ಎಡಗೈಗೆ ತಿಳಿಯಬಾರದು ಎಂಬ ಮನೋಧರ್ಮ ಬೇರೂರಿದ್ದ ಸಮಯದಲ್ಲಿ ಶಾಸನ ಹಾಕಿಸುವ ಪದ್ಧತಿ ಬೆಳೆದುಬಂದಿತು. ಶಾಸನ ಎಂಬ ಶಬ್ದ ಸಂಸ್ಕೃತದ 'ಶಾಸ್ ' ಎಂಬ ಧಾತುವಿನಿಂದ ಬಂದಿದೆ. ಅಂದರೆ 'ಅಪ್ಪಣೆ ಮಾಡು', ಘೋಷಣೆಯನ್ನು ಹೊರಡಿಸು ಎಂಬ ಅರ್ಥವನ್ನು ಅದು ಕೊಡುತ್ತದೆ. ರಾಜನ ಅಪ್ಪಣೆಯಂತೆ ಅವನು ನೀಡಿದ ದಾನಧರ್ಮಗಳನ್ನು ಘೋಷಿಸುವುದಕ್ಕಾಗಿ ರಚಿತವಾದವು ಎಂಬ ಅರ್ಥ ಧ್ವನಿತವಾಗುತ್ತದೆ. ಈ ಅಪ್ಪಣೆ, ಆಜ್ಞೆಗಳು ಎಲ್ಲರಿಗೂ ತಿಳಿಯಲಿ ಹಾಗು ಮುಂದಿನ ತಲೆಮಾರಿಗೂ ಅದು ತಿಳಿಯಲಿ ಎಂದು ಶಿಲೆಗಳ ಮೇಲೆ, ಶಿಲಾಫಲಕಗಳ ಮೇಲೆ ಕೆತ್ತುತ್ತಿದ್ದರು. ಇದು ಸಮಾಜದಲ್ಲಿನ ಜನರ ಮೇಲೆ ಪರಿಣಾಮ ಬೀರಿ ಇದನ್ನು ಯಾರೂ ಮೀರುತ್ತಿರಲಿಲ್ಲ. ಇದು ಮುಂದೆ ದಾನ ನೀಡಿದುದು ಶಾಶ್ವತವಾಗಿರಲಿ ಎಂದು ಶಾಸನ ಹಾಕಿಸಲು ಬಯಸಿರಬಹುದು. (ವೇದ ಯುಗದ ಯಜ್ಞಯಾಗಾಧಿಗಳ ಕಾಲದಲ್ಲಿ ಧರ್ಮಶಾಸನಗಳನ್ನು ಬರೆದಿಡುವ ಪದ್ಧತಿಯು ಪ್ರಚಲಿತವಾಗಿದ್ದಂತೆ ತಿಳಿದುಬರುತ್ತದೆ.)

ಇದು ಕಾಲಕ್ರಮೇಣ ಸಾರ್ವತ್ರಿಕ ಮನ್ನಣೆಯನ್ನು ಪಡೆದು ದಾನದ ವಿಷಯ ಸಂಗತಿಗಳನ್ನು ಮಾತ್ರವಲ್ಲದೆ ಆಯಾ ಕಾಲದ ಪ್ರಮುಖ ಘಟನೆಗಳನ್ನು ಶಾಸನ ರೂಪದಲ್ಲಿ ನಿರೂಪಿಸುವ ಮಾರ್ಗೋಪಾಯ ಬೆಳೆಯಿತು. ಇದರಿಂದಾಗಿ ಸಮಾಜದಲ್ಲಿನ ವಿವಿಧ ಪರಿಧಿಗಳ ಸಾಂಸ್ಕೃತಿಕ ಚಟುವಟಿಕೆಯ ಅಂಶಗಳ ಶಿಲಾಫಲಕಗಳಲ್ಲಿ ಸ್ಥಾನ ಪಡೆಯಿತು. ಇಲ್ಲಿ ವಿಷಯದ ಜೊತೆಗೆ ಶಾಸನಗಳಲ್ಲಿ ಆಂತರ್ಯದಲ್ಲಿನ ಸಾಂಸ್ಕೃತಿಕ ಬೇರುಗಳನ್ನು ಅನ್ವೇಷಿಸುವುದು ಇಂದಿನ ಶಾಸನಾಸಕ್ತರಿಗೆ ದಾರಿದೀಪವಾಯಿತು. ವೇದ ಯುಗದ ಯಜ್ಞಯಾಗಾದಿಗಳ ಕಾಲದಲ್ಲಿ ಶಾಸನಗಳನ್ನು ಹಾಕಿಸುವ ಪದ್ಧತಿ ಪ್ರಚಲಿತವಾಗಿದ್ದಂತೆ ತಿಳಿದುಬರುತ್ತದೆ. ಈ ಶಾಸನಗಳ ಹುಟ್ಟಿಗೆ ಧರ್ಮವೇ ಮೂಲಭೂತವಾದ ಪ್ರೇರಕಶಕ್ತಿಯಾಗಿರಬಹುದು. ಅಂದರೆ ಶಾಸನಗಳ ಉಗಮ ದಾನಧರ್ಮಗಳಲ್ಲಿ ಎಂಬ ಮಾತನ್ನು ಇದು ಸಮರ್ಥಿಸುತ್ತದೆ. ಶಾಸನ ಹಾಕಿಸುವ ಪದ್ಧತಿ ರೂಢಿಗೆ ಬಂದಂತೆಲ್ಲಾ ಶಾಸನಗಳ ಮೂಲ ಸ್ವರೂಪದಲ್ಲಿ ಬದಲಾವಣೆ ಕಂಡುಬಂದಿತೆಂದು ಹೇಳಬಹುದು. ಆಯಾ ಧರ್ಮಕ್ಕನುಗುಣವಾಗಿ ಶಾಸನಗಳ ಪ್ರಾರಂಭದಲ್ಲಿ ರೇಖಾ ಚಿತ್ರಗಳು, ಶಿಲ್ಪಗಳು ಕಾಣುತ್ತದೆ. ಸೂರ್ಯ, ಚಂದ್ರ, ನಂದಿ, ಆಕಳು, ಕರು, ಚಿತ್ರ ಸಾಮಾನ್ಯ ನಂತರದ ದಿನಗಳಲ್ಲಿ ಈ ಚಿತ್ರಗಳು ಪ್ರಧಾನ ಸ್ಥಾನವನ್ನು ಪಡೆಯುವುದನ್ನು ಕಾಣುತ್ತೇವೆ. ಈ ರೀತಿ ಬರವಣಿಯೊಂದಿಗೆ ಇರುವ ಶಿಲ್ಪಗಳನ್ನು 'ಶಾಸನಶಿಲ್ಪ' ಎಂದು ಕರೆಯುವರು. ಮುಂದೆ ಬರವಣಿಗೆಯಿಲ್ಲದೆ ಬರೀ ಶಿಲ್ಪಗಳನ್ನು ಕೆತ್ತಿ ನಿಲ್ಲಿಸುತ್ತಿದ್ದ ಪದ್ಧತಿ

ಬೆಳೆಯಿತೆನ್ನಬಹುದು. ಇವೂ ಕೂಡಾ ಶಾಸನಗಳ ಉದ್ದೇಶವನ್ನೇ ಹೊಂದಿರುವುದರಿಂದ ಇವನ್ನೂ ಶಾಸನಶಿಲ್ಪ ಎಂದೇ ವಿಶಾಲ ಅರ್ಥದಲ್ಲಿ ಇಲ್ಲಿ ಬಳಸಿಕೊಳ್ಳಲಾಗಿದೆ. ಶಾಸನರಹಿತ ಶಿಲ್ಪವಾಗಲಿ, ಅಥವಾ ಶಾಸನಸಹಿತ ಶಿಲ್ಪವಾಗಲಿ ಎಲ್ಲವನ್ನೂ 'ಶಾಸನಶಿಲ್ಪ' ಎಂದೇ ಕರೆಯುವುದು ಸಮಂಜಸವಾಗಿದೆ.[೫] ಇನ್ನೂ ಒಂದು ಹೆಜ್ಜೆ ಮುಂದೆ ಹೋದರೆ 'ಸ್ಮಾರಕ ಶಾಸನಗಳು' ಎಂಬರ್ಥದಲ್ಲಿಯೂ ಕರೆಯಬಹುದು. ಭಾರತೀಯ ಶಿಲ್ಪಶಾಸ್ತ್ರದ ಬೆಳವಣಿಗೆಯಲ್ಲಿ ಶಾಸನಶಿಲ್ಪವು ಪ್ರಮುಖ ಪಾತ್ರವನ್ನು ವಹಿಸಿದೆ. "ಭಾರತದ ಇತರ ಪ್ರದೇಶಗಳಲ್ಲಿ ದೊರೆಯುವ ಸ್ಮಾರಕ ಶಿಲೆಗಳಿಗಿಂತ ಪ್ರಬುದ್ಧ ನಿರೂಪಣಾ ಶೈಲಿಯನ್ನು, ಜೀವಂತ ಭಾವಾಭಿವ್ಯಕ್ತಿಯನ್ನು ನಾವು ಕರ್ನಾಟಕದ ಸ್ಮಾರಕಶಿಲೆಗಳ ಶಿಲ್ಪದಲ್ಲಿ ಶಿಲ್ಪ ವಿನ್ಯಾಸದ ಕ್ರಮದಲ್ಲಿ ಗುರುತಿಸುವುದು ಸಾಧ್ಯ.[೬] ಕರ್ನಾಟಕದಾದ್ಯಂತ ಹಲವು ವೈವಿಧ್ಯತೆಯಿಂದ ಕೂಡಿದ ಬಹಳಷ್ಟು ಸಂಖ್ಯೆಯ ಶಾಸನಶಿಲ್ಪಗಳು ದೊರೆಯುತ್ತವೆ. ಇದಕ್ಕೆ ದೊಡ್ಡಬಳ್ಳಾಪುರ ತಾಲ್ಲೂಕು ಹೊರತಾಗಿಲ್ಲ. ಶಾಸನಶಿಲ್ಪ ಒಂದು ಪ್ರಮುಖ ಸ್ಥಾನವನ್ನು ಪಡೆದುದರ ಹಿನ್ನೆಲೆಯ ಉದ್ದೇಶವೇನು? ಯಾವ ಯಾವ ಕಾರಣಗಳಿಂದ ಆ ಪ್ರಮುಖ ಸ್ಥಾನವನ್ನು ಪಡೆಯಿತು? ಎಂಬ ಪ್ರಶ್ನೆಗಳಿಗೆ ಉತ್ತರ ಹುಡುಕುವುದು ಕಷ್ಟವೇ ಸರಿ? ಶಾಸನಗಳನ್ನು ಹಾಕಿಸಿದುದರ ಉದ್ದೇಶವೇ ಶಾಸನ ಶಿಲ್ಪದ ಉದ್ದೇಶ ಎಂದು ಮೇಲುನೋಟಕ್ಕೆ ಕಂಡುಬಂದರೂ ಅದರ ಆಳ ಭಿನ್ನವೆಂದು ಹೇಳಬಹುದು. ಶಾಸನಗಳ ಉದ್ದೇಶಕ್ಕಿಂತ ವಿಭಿನ್ನವಾದ ಉದ್ದೇಶವನ್ನು ಈ ಶಾಸನಶಿಲ್ಪ ಪಡೆದಿದೆ ಎಂದು ಹೇಳಬಹುದು. ಒಟ್ಟಾರೆ ಶಾಸನಗಳಲ್ಲಿ ಶಾಸನಶಿಲ್ಪದ ಉದ್ದೇಶಗಳು ಒಂದು ಅಂಗವಾಗಿ ಬೆಳೆದುಬಂದಿವೆ.

## ೪.೨. ಸ್ಮಾರಕ ಶಾಸನಶಿಲ್ಪ

ಪ್ರಾಚೀನ ಕಾಲದಲ್ಲಿ ಎಲ್ಲರೂ ಅಕ್ಷರ ಕಲಿಗಳಾಗಿರಲಿಲ್ಲ. ಏಕೆಂದರೆ ಇಂದಿನ ಸ್ಥಿತಿ ಅನುಕೂಲತೆಗಳು ಆಗ ಇರಲಿಲ್ಲ. ಹಾಗಾಗಿ ಶಾಸನ ಶಿಲೆಗಳಲ್ಲಿ 'ಶಾಸನ ಶಿಲ್ಪ' ಒಂದು ರೂಪ ಪಡೆಯಲು ಪ್ರಮುಖ ಕಾರಣವಾಗಿರಬಹುದು. ಸಾಮಾನ್ಯ ಜನತೆ ಕೂಡಾ ಶಾಸನ ಶಿಲ್ಪದ ಪ್ರಮುಖ ಉದ್ದೇಶವನ್ನು ತಿಳಿಯಲಿ ಎಂಬ ಕಾರಣದಿಂದ ಶಾಸನ ಹಾಕಿಸಿರುವವರು ಅಥವಾ ಶಿಲ್ಪಿಗಳು ವಿಷಯದ ಜೊತೆಯಲ್ಲಿ ಶಿಲ್ಪವನ್ನು ನಿರ್ಮಿಸುವ ಅಭ್ಯಾಸ ಬೆಳೆಸಿದರು. ಅನಕ್ಷರಸ್ಥರಿಗೂ ಇದು ತಿಳಿಯಲಿ ಎಂಬುದು ಇಲ್ಲಿ ನಮಗೆ ಅರ್ಥವಾಗುತ್ತದೆ. ಇವುಗಳಲ್ಲಿ ಶಿಲ್ಪಗಳು ನಿರಕ್ಷರರಿಗೆ, ಶಾಸನಗಳು ಸಾಕ್ಷರರಿಗೆ ಆಯಾ ಜನಾಂಗಗಳ ಮೌಲ್ಯವನ್ನು ಬೋಧಿಸುವ ಪ್ರಸಾರ ಫಲಕಗಳಾಗಿ ಅಲ್ಲಲ್ಲಿ ನಿಂತಿವೆ.[೭]

ಈ ಸ್ಮಾರಕ ಶಿಲೆಗಳು ಶಿಲ್ಪಿಗಳಿಗೆ ಒಂದು ದೊಡ್ಡ ಸವಾಲಾಗಿ ಗೋಚರಿಸುತ್ತದೆ. ವೀರಗಲ್ಲಿನ ತ್ಯಾಗಗುಣ, ಬಲಿದಾನ, ಮಹಾಸತಿ ಆದವರ ಆದರ್ಶಪ್ರಾಯ ಗುಣ, ಸನ್ಯಾಸಿಗಳ ಪಾರಮಾರ್ಥಿಕ ಗುಣಗಳನ್ನು ಪ್ರತಿಯೊಬ್ಬರಿಗೂ ತಿಳಿಯುವಂತೆ ಹೇಳಬೇಕಾಗುತ್ತಿತ್ತು. ಇಲ್ಲಿ ಅನಕ್ಷರಸ್ತರಿಗೂ ಸುಲಭವಾಗಿ

ಅರ್ಥವಾಗುತ್ತಿದ್ದುದು ಸ್ಮಾರಕಶಿಲೆಗಳು. ಈ ಸ್ಮಾರಕ ಶಿಲೆಗಳಲ್ಲಿ ಶಿಲ್ಪದ ಬೆಳವಣಿಗೆ, ವಿಕಸನ ಕಂಡುಬಂದಂತೆ, ದಾನಶಾಸನಗಳಲ್ಲಿ ಕಂಡುಬರುವುದಿಲ್ಲ. ಹಲವಾರು ಕಾರಣಗಳಿಂದಾಗಿ ದಾನಶಾಸನಗಳಲ್ಲಿ 'ಶಿಲ್ಪ'ದ ವಿಕಸನ ಆಗಲಿಲ್ಲ/ ದಾನ ಶಾಸನಗಳಲ್ಲಿ ದಾನ ನೀಡಿದವರು, ದಾನ ಪಡೆದವರು ದಾನವನ್ನು ಹಾಳು ಮಾಡಿದವರು. ವಿವರಗಳನ್ನು ಚಿತ್ರಗಳಲ್ಲಿ ಮೂಡಿಸುವುದು ಬಹಳ ಅಸಾಧ್ಯ. ಭೂಮಿ, ಧನ, ಕನಕಗಳನ್ನು ದಾನ ಶಾಸನಗಳಲ್ಲಿ ಕಾಣುತ್ತೇವೆ. ಇವುಗಳನ್ನು ಶಿಲ್ಪಿ, ಶಿಲೆಯ ಮೇಲೆ ಕಂಡರಿಸುವುದು ಕಷ್ಟಸಾಧ್ಯ. ಇಲ್ಲಿ ಚಿಹ್ನೆ ಮತ್ತು ಸಂಕೇತಗಳನ್ನು ಮಾತ್ರವೇ ಕಂಡರಿಸಲು ಸಾಧ್ಯವಾಯಿತು. ನೀಡಿದ ದಾನವು ಸೂರ್ಯ ಮತ್ತು ಚಂದ್ರರು ಇರುವ ತನಕ ಶಾಶ್ವತವಾಗಿರಲಿ ಎಂಬ ಉದ್ದೇಶದಿಂದಲೇ ಸೂರ್ಯ ಚಂದ್ರ, ನಂದಿ ಮುಂತಾದ ಚಿಹ್ನೆಗಳನ್ನು ಜನಸಾಮಾನ್ಯರಿಗೂ ಅರ್ಥವಾಗುವ ರೀತಿಯಲ್ಲಿ ಹೇಳುವಂತೆ ಪ್ರಯತ್ನಿಸಿದರು. ಆದರೆ ಇದರಿಂದ ಯಾವ ರೀತಿಯಲ್ಲಿ ಜನಸಾಮಾನ್ಯ ವರ್ಗದವರಿಗೆ ಪ್ರಯೋಜನವಾಗುತ್ತಿತ್ತು ಎಂದು ಹೇಳುವುದಕ್ಕೆ ಸ್ವಲ್ಪ ಕಷ್ಟವೇ ಸರಿ. ಇಂದಿಗೂ ಹಲವಾರು ಗ್ರಾಮಗಳಲ್ಲಿ ದೊರೆತಿರುವ ಸ್ಮಾರಕಶಿಲೆಗಳ ಮೇಲಿನ ಚಿತ್ರಗಳಿಂದ ಗುರುತಿಸುತ್ತಾರೆಯೇ ವಿನಃ ಲಿಪಿ ಇರುವ ಸ್ಮಾರಕಶಿಲೆಗಳನ್ನು ಮಾಸ್ತಿಕಲ್ಲು, ವೀರಗಲ್ಲು ಎಂದು ಹೇಳದೆ ಅವುಗಳನ್ನು ಅಕ್ಷರದ ಕಲ್ಲುಗಳು ಎಂದು ಈಗಲೂ ಗುರುತಿಸುತ್ತಾರೆ. ಈ ಒಂದು ಪ್ರಧಾನ ಅಂಶವೇ ಶಿಲ್ಪಿಗಳು ಲಿಪಿಯ ಅಥವಾ ಬರಹದ ಜೊತೆಯಲ್ಲಿ ಶಿಲಕ್ಕೂ ಪ್ರಾಮುಖ್ಯತೆ ನೀಡಿರುವುದನ್ನು ತಿಳಿಯಬಹುದು. ಅಕ್ಷರ ಬಾರದವರು ಕೂಡ ಶಿಲ್ಪವನ್ನು ನೋಡಿ, ತ್ಯಾಗ, ದಾನ, ಬಲಿದಾನವನ್ನು ಮಾಡಿದವರ ಮನಸ್ಸಿನ ಹಿಂದೆ ಇರುವ ಉದಾತ್ತ ಮನೋಭಾವವನ್ನು ಅರ್ಥ ಮಾಡಿಕೊಳ್ಳಲಿ ಮತ್ತು ಅಲ್ಲಿ ಅಭಿವ್ಯಕ್ತವಾಗಿರುವ ಮೌಲ್ಯವನ್ನು ಅರಿಯಲಿ ಎಂಬ ಉದ್ದೇಶಗಳಿಂದ ಶಾಸನಶಿಲ್ಪಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡಿದರು. ಈ ಹಿನ್ನೆಲೆಯಲ್ಲಿಯೇ ಅಕ್ಷರ ಕಲಿತವರೂ ಕೂಡ ಇದರ ಬಗ್ಗೆ ಒಲವು ತೋರಿಸಿದ್ದರಿಂದ ಕಾಲಾನಂತರ ಬರವಣಿಗೆಗೆ ಪ್ರಾಧಾನ್ಯ ಕಡಿಮೆಯಾಗಿ ಶಿಲ್ಪಗಳೇ ಬೆಳೆದು ಬಂದವೆಂದು ಹೇಳಬಹುದು. ಈ ಎಲ್ಲಾ ಕಾರಣಗಳಿಂದಾಗಿ ನೂರಾರು, ಸಾವಿರಾರು ಲಿಪಿಯಿಲ್ಲದ ಅಥವಾ ಬರಹವಿಲ್ಲದ ಶಾಸನಶಿಲ್ಪಗಳು ನಮಗೆ ಅಧಿಕವಾಗಿ ದೊರಕುತ್ತವೆ. ಸರಳವಾಗಿ, ಅತಿಸುಲಭವಾಗಿ ಯಾರ ಸಹಾಯವೂ ಇಲ್ಲದೆ, ಸಂಪೂರ್ಣವಾಗಿ ಯಲ್ಲದಿದ್ದರೂ ಶಾಸನಗಳ ಮೂಲ ಉದ್ದೇಶವನ್ನು ಅರ್ಥಮಾಡಿಕೊಳ್ಳುವ ಮಾರ್ಗವನ್ನು ಈ ಶಿಲ್ಪಗಳು ತೋರಿಸಿದವು.

ಒಂದು ಕಲಾಕೃತಿಯನ್ನು ರಚಿಸುವಾಗ ಯಾವುದೇ ಒಬ್ಬ ಕಲಾಕಾರ ಹಲವು ತಂತ್ರಗಳನ್ನು ಬಳಸುವುದನ್ನು ಕಾಣುತ್ತೇವೆ. ಆ ತಂತ್ರಗಳಿಂದಲೇ ಕಲಾಕೃತಿಗಳಿಗೆ ಉತ್ತಮ ಆಯಾಮ ಬರಲಿಕ್ಕೆ ಸಾಧ್ಯ. ಬರವಣಿಗೆಯಲ್ಲಿ ಹೇಳುವುದನ್ನು ಚಿತ್ರಗಳ ಮುಖಾಂತರ ಹೇಳಿದರೆ ಅದು ಹೆಚ್ಚು

ಪರಿಣಾಮಕಾರಿಯಾಗಿ ಮನಸ್ಸಿಗೆ ತಟ್ಟುತ್ತದೆ ಎಂಬ ಭಾವನೆಯೂ ಮೂಲೋದ್ದೇಶವಾಗಿರಬೇಕು. ಇತ್ತೀಚಿನ ಪ್ರಾಥಮಿಕ ಹಂತದ ಶಾಲೆಗಳ ಪಠ್ಯ ಪುಸ್ತಕಗಳನ್ನು ಗಮನಿಸಿದಾಗ ಚಿತ್ರಗಳಿಗೆ ಹೆಚ್ಚು ಒತ್ತು ನೀಡಿದ್ದಾರೆ. ಏಕೆಂದರೆ ಅಲ್ಲಿನ ಚಿತ್ರಗಳು ಮಕ್ಕಳ ಮನಸ್ಸಿಗೆ ಬೇಗ ತಲುಪುತ್ತದೆ ಎಂಬ ಉದ್ದೇಶದಿಂದ ಪ್ರಾಥಮಿಕ ಹಂತದಲ್ಲಿ ಚಿತ್ರಗಳಿಗೆ ಪ್ರಾಶಸ್ತ್ಯ ನೀಡಿರುವುದು ತಿಳಿಯುತ್ತದೆ. ಜನರನ್ನು ಆಕರ್ಷಿಸುವ ತಂತ್ರ ಇಲ್ಲಿ ಬಳಕೆಯಾಗಿದೆ. ಕುತೂಹಲದಿಂದ ಹೆಚ್ಚು ಗಮನಿಸುವುದರಿಂದ ಮನಃಪಟಲದ ಮೇಲೆ ಒಂದು ಚಿತ್ರ ಉಂಟು ಮಾಡುವಷ್ಟು ಪ್ರಭಾವವನ್ನು ಅಲ್ಲಿನ ಬರವಣಿಗೆ ಉಂಟು ಮಾಡುವುದಿಲ್ಲ. ಕಾವ್ಯ ಅಥವಾ ಕಾದಂಬರಿಯನ್ನು ಓದಿ ಅರ್ಥ ಮಾಡಿಕೊಳ್ಳುವುದಕ್ಕಿಂತ ಅದನ್ನೇ ಸಿನಿಮಾ ಅಥವಾ ನಾಟಕ ರೂಪದಲ್ಲಿ ನೋಡಿದಾಗ ಹೆಚ್ಚು ಪರಿಣಾಮ ಬೀರುತ್ತದೆ. ಹಾಗು ಮನಸ್ಸಿನಲ್ಲಿ ಹೆಚ್ಚು ಕಾಲ ಉಳಿಯುತ್ತದೆ. ಇದೇ ರೀತಿಯ ತಂತ್ರವನ್ನೇ ಶಾಸನಗಳಲ್ಲಿ ಬಳಸಿರುವುದು ತಿಳಿಯುತ್ತದೆ. "ವೀರರು ಮತ್ತು ತ್ಯಾಗಿಗಳ ಕೀರ್ತಿಯನ್ನು ಚಿರಸ್ಥಾಯಿಯಾಗಿ ನಿಲ್ಲುವಂತೆ ಮಾಡಲು ಅವರು ಅನುಸರಿಸಿದ ಜೀವನ ಮೌಲ್ಯಗಳನ್ನು ಪ್ರಸಾರ ಮಾಡಲು, ಅವರ ಆದರ್ಶವನ್ನು ಪ್ರಪಂಚಕ್ಕೆ ಸಾರಿ ಹೇಳಲು ಶಿಲ್ಪ ತಂತ್ರವನ್ನು ಯಶಸ್ವಿಯಾಗಿ ಬಳಸಿಕೊಂಡರು" ಎಂಬುದು ಶಾಸನ ತಜ್ಞರಾದ ಪರಮಶಿವಮೂರ್ತಿಯವರ ಮಾತು ಇಲ್ಲಿ ಸೂಕ್ತವಾಗಿ ಅನ್ವಯಿಸುತ್ತದೆ. ಆದರೆ ದೊರೆಯುವ ಎಲ್ಲಾ ಶಿಲ್ಪಗಳಲ್ಲೂ ತಂತ್ರವನ್ನು ಅಳವಡಿಸಿಕೊಳ್ಳಲು ಸಾಧ್ಯವಾಗಿಲ್ಲ. ನಂತರದಲ್ಲಿ ಎರಡು, ಮೂರು ಹಂತದಿಂದ ಆರು, ಏಳು, ಹಂತಗಳವರೆಗೂ ಬೆಳೆಯಿತು. ಆದರೆ ತಾಲ್ಲೂಕಿನಲ್ಲಿ ಮೂರು ಹಂತಗಳನ್ನು ಹೊರತುಪಡಿಸಿದರೆ, ಆರು, ಏಳು ಹಂತಗಳ ಶಿಲ್ಪಗಳು ದೊರೆತಿರುವುದಿಲ್ಲ. ಬಹಳಷ್ಟು ಅಗಲವಾದ ಶಿಲೆಗಳಲ್ಲಿ ಶಿಲ್ಪಗಳು ಒಡಮೂಡಿರುವುದು ಕಂಡುಬರುತ್ತವೆ. ಶಾಸನದಲ್ಲಿ ನಿರೂಪಿತವಾದ ಪೂರ್ಣ ವಿಷಯವನ್ನು ಶಾಸನಶಿಲ್ಪಗಳಲ್ಲಿ ನಿರೂಪಿಸಿರುವುದು ಸತ್ಯ.

ಮೊದಲು ರೂಪುಗೊಂಡ ಶಾಸನಗಳು ರಾಜರ ಆಜ್ಞೆಗಳಾದರೂ ಕಾಲಾನಂತರದಲ್ಲಿ ಉಬ್ಬು ಶಿಲ್ಪಗಳ ಕಲಾಕೃತಿಗಳಾದವು. ಇದಕ್ಕೆ ಮೂಲ ಮಾನವನಲ್ಲಿಯ ಸೌಂದರ್ಯಪ್ರಜ್ಞೆ, ಈ ಸೌಂದರ್ಯ ಪ್ರಿಯತೆಯೇ ಮಾನವನಲ್ಲಿ ಮೂಲಭೂತ ಗುಣ. ಕವಿವಾಣಿಯಂತೆ ಎಲ್ಲೆಲ್ಲೂ ಚೆಲುವಿಹುದು ಬಲ್ಲವನ ಗೋಚರಕೆ ಎಂಬಂತೆ ಜಗತ್ತಿನ ಪ್ರತಿಯೊಂದು ವಸ್ತುವಿನಲ್ಲಿಯೂ ಸೌಂದರ್ಯವನ್ನು ಕಾಣುವುದು ಮಾನವ ಸ್ವಭಾವಗಳಲ್ಲೊಂದು. ಸೌಂದರ್ಯ ಎಂಬುದು ವಸ್ತುವಿನಲ್ಲಿಲ್ಲ ಅದು ನೋಡುವ ಕಣ್ಣುಗಳಲ್ಲಿದೆ. ಹಾಗಾಗಿ ಶಿಲ್ಪಕಲಾಕಾರನಲ್ಲಿ ಸೌಂದರ್ಯದ ಜೊತೆಗೆ ಸೌಂದರ್ಯವನ್ನು ನೋಡುವ ಕಣ್ಣುಗಳೂ ಅವನಲ್ಲಿತ್ತು. ಶಾಸನಗಳಲ್ಲಿ ಧರ್ಮ ಚಿಹ್ನೆಗಳ ಜೊತೆಗೆ ಪ್ರಭಾವಳಿಯಂತೆ ಬಿಡಿಸಿರುವ ಆಕಾರ ಬಳ್ಳಿಯಿಂದ ಕೂಡಿದ ಕಮಾನಾಕೃತಿಗಳನ್ನು ಬಿಡಿಸಿರುವುದನ್ನು ಕಾಣುತ್ತೇವೆ. ಸ್ಮಾರಕ ಶಿಲೆಗಳಲ್ಲಾದರೆ, ವ್ಯಕ್ತಿಗಳನ್ನಷ್ಟೇ ಚಿತ್ರಿಸಿರುವುದಿಲ್ಲ. ವ್ಯಕ್ತಿಶಿಲ್ಪದ ಜೊತೆಗೆ ಅವರು ಧರಿಸಿರುವ ಉಡುಪು, ಸ್ತ್ರೀ ಶಿಲ್ಪಗಳಲ್ಲಿ ಸ್ತ್ರೀಯರು ಧರಿಸಿರುವ ಆಭರಣಗಳು, ಅವರ ಕೇಶಶೃಂಗಾರ, ವೀರರ

ಆಯುಧಗಳು ಮೊದಲಾದವುಗಳನ್ನು ಸೂಕ್ಷ್ಮವಾದ ಕುಸುರಿ, ಕಲೆಗಾರಿಕೆಯನ್ನು ಪ್ರಕಟಪಡಿಸಲು ಶಿಲ್ಪಕಾರರು ಪ್ರಯತ್ನಿಸಿದ್ದಾರೆ. ಇವುಗಳನ್ನು ಎಷ್ಟೇ ಅಲಂಕಾರಿಕವಾಗಿ ಬಿಡಿಸಿದ್ದರೂ, ವಾಸ್ತವ ಎಲ್ಲೆಯನ್ನು ಬಿಟ್ಟು ಹೋಗಿಲ್ಲ.

ಶಾಸನ ಶಿಲ್ಪಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಅವುಗಳು ಒಂದಕ್ಕಿಂತ ಮತ್ತೊಂದು ಭಿನ್ನವಾಗಿ ಕಾಣುತ್ತವೆ. ಒಂದಕ್ಕಿಂತ ಮತ್ತೊಂದು ಶಾಸನ ಉತ್ತಮವಾಗಿರಬೇಕು ಎಂಬ ಮನೋಭಾವದ ದೃಷ್ಟಿಕೋನ ಶಾಸನಶಿಲ್ಪದ ಬೆಳವಣಿಗೆಗೆ ಮೂಲ ಕಾರಣ. ಆದುದರಿಂದ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ, ಒಂದು ಜನಾಂಗದಿಂದ ಮತ್ತೊಂದು ಜನಾಂಗಕ್ಕೆ ವ್ಯತ್ಯಾಸಗಳನ್ನು ಪಡೆದಿರುವುದನ್ನು ಕಾಣುತ್ತೇವೆ. ಇದಕ್ಕೆ ಮತ್ತೊಂದು ಕಾರಣ ಇಲ್ಲಿ ತನ್ನ ಕಲ್ಪನೆಗೆ ಅನುಗುಣವಾಗಿ ಹೊಸದಾದ ತಂತ್ರಗಳ ಪ್ರಯೋಗಗಳನ್ನು ಶಾಸನ ಶಿಲ್ಪದಲ್ಲಿ ಅಳವಡಿಸಿಕೊಳ್ಳತೊಡಗಿರಬೇಕು. ಹೊಸ ಪ್ರಯೋಗಗಳನ್ನು ಅಳವಡಿಸಿಕೊಂಡರೂ ಹೊಸತನವನ್ನು ಹೇಳಲು ಶಿಲ್ಪಿಗಳಿಗೆ ಸಾಧ್ಯವಾಗಲಿಲ್ಲ. ಹಾಗಾಗಿ ವಿಜಯನಗರ ಕಾಲದ ಮತ್ತು ನಂತರದ ಶಾಸನಗಳಲ್ಲಿ ಯಾವುದೇ ವಿಶೇಷತೆಯಿಲ್ಲದೆ ಸಾಮಾನ್ಯ ಶೈಲಿಯಲ್ಲಿ ನಿರ್ಮಾಣಗೊಂಡಿವೆ.

ಶಿಲ್ಪಿ ಅಥವಾ ಒಬ್ಬ ಉತ್ತಮ ಕಲಾಕಾರನಾದವನಿಗೆ ಯಾವ ವಸ್ತುವನ್ನು ಬೇಕಾದರೂ ಆಯ್ಕೆ ಮಾಡಿಕೊಳ್ಳಬಹುದು. ಆದರೆ ಅದು ವಸ್ತುವಿಗೆ ತಕ್ಕ ಮಾಧ್ಯಮವಾಗಿರಬೇಕಷ್ಟೇ. ಆತನಿಗೆ ಗಟ್ಟಿಯಾದ ಶಿಲೆ ಬಾಳಿಕೆ ಬರುವಂತಹುದು. ಈ ಶಿಲೆಯು ಭಾರತೀಯ ವಾಸ್ತುಶಿಲ್ಪ ಮತ್ತು ಶಿಲ್ಪದ ಬೆಳವಣಿಗೆಯ ಇತಿಹಾಸದಲ್ಲಿ ಪ್ರಧಾನ ಪಾತ್ರವಹಿಸುತ್ತದೆ. "ಮಾನವ ಸಂಸ್ಕೃತಿಯ ವಿಕಾಸವನ್ನು ವಿದ್ವಾಂಸರು, ಶಿಲಾಯುಗ, ಲೋಹಯುಗ ಮುಂತಾಗಿ ಅಭ್ಯಸಿಸುವುದನ್ನು ಗಮನಿಸಿದರೆ, ಮನುಷ್ಯನ ಜೀವನದಲ್ಲಿ ಶಿಲೆವಹಿಸಿದ್ದ, ವಹಿಸುತ್ತಲಿರುವ ಪಾತ್ರ ಸ್ಪಷ್ಟವಾಗುತ್ತದೆ." ಶಿಲೆಯು ಸುಲಭವಾಗಿ ದೊರೆಯುವ ನೈಸರ್ಗಿಕ ವಸ್ತು ದೀರ್ಘಕಾಲ ಬಾಳಿಕೆ ಬರುವಂತಹ ಮತ್ತು ಕೆಡುವಂತಹ ವಸ್ತುವಲ್ಲವಾದ್ದರಿಂದ ಶಿಲೆಯು ಶಾಸನಶಿಲ್ಪಕ್ಕೆ ಉತ್ತಮ ಮಾಧ್ಯಮವಾಗಿದೆ.

ಸಾಮಾಜಿಕ ಸಂಘಸಂಸ್ಥೆಗಳಿಂದ ದೇವಾಲಯಗಳ ನಿರ್ಮಾಣ ಮಾಡುವುದು ಎಷ್ಟು ಶ್ರೇಷ್ಠವೋ, ಶಾಸನಗಳನ್ನು ನಿರ್ಮಾಣ ಮಾಡುವುದೂ ಕೂಡ ಅಂದಿನ ಧಾರ್ಮಿಕ ಚಟುವಟಿಕೆಯ ಭಾಗವಾಯಿತು. ಶಾಸನವನ್ನು ನೆಡುವುದು ಅದನ್ನು ರಕ್ಷಣೆ ಮಾಡುವುದು. ಒಂದು ಪುಣ್ಯದ ಕಾರ್ಯ ಮತ್ತು ಸಾಮಾಜಿಕ ಜವಾಬ್ದಾರಿ ಎಂಬ ಮನೋಭಾವನೆಯು ಬೆಳೆದಾಗ ಶಿಲ್ಪಿಗಳಿಗೆ ಕಾರ್ಯ, ಮಹತ್ವ ಅಧಿಕವಾಯಿತು. ಇದರಿಂದ ಅವರಿಗೆ ಸಂಪತ್ತು, ಗೌರವ, ಕೀರ್ತಿಯೂ ಒದಗಿತು. ಶಿಲ್ಪಿಗಳ ಹೆಸರು ಶಿಲೆಯ ಮೇಲೆ ಪ್ರಕಟಪಡಿಸಲು ಅವಕಾಶವಿತ್ತು. ತಮ್ಮ ಪ್ರತಿಭೆಯನ್ನು ಸಮರ್ಥವಾಗಿ ವ್ಯಕ್ತಪಡಿಸಲು ಶಿಲ್ಪಿಗಳಿಗೆ ಇಲ್ಲಿ ಸಾಧ್ಯವಾಯಿತು. ಶಾಸನಗಳ ಸಾರ್ಥಕತೆ ಶಿಲ್ಪಿಗಳ ಸಾಮರ್ಥ್ಯವನ್ನು

ಅವಲಂಬಿಸಿರುತ್ತದೆ ಎಂದು ಹೇಳಿದರೆ ತಪ್ಪಾಗಲಾರದು. ಶಾಸನಗಳಲ್ಲಿ ಮತ್ತು ಶಾಸನ ಶಿಲ್ಪಗಳಲ್ಲಿ ಒಂದೇ ಪ್ರದೇಶದಲ್ಲಿನ ಶಾಸನಗಳಲ್ಲಿ ಮತ್ತು ಶಿಲ್ಪಗಳಲ್ಲಿ ಅನೇಕ ವ್ಯತ್ಯಾಸಗಳನ್ನು ಗುರುತಿಸಬಹುದು.

ಶಾಸನ ನಿರ್ಮಾಣವನ್ನು ಒಂದು ಸವಾಲನ್ನಾಗಿ ಯಾವ ಶಿಲ್ಪಿ ಸ್ವೀಕರಿಸುತ್ತಿದ್ದನೋ ಅಂತಹ ಶಿಲ್ಪಿಯಿಂದ ರಚನೆಯಾದ ಶಾಸನಶಿಲ್ಪಗಳು ಸೊಗಸಾಗಿ ಮೂಡಿಬರುತ್ತಿದ್ದವು. ಆ ಶಿಲ್ಪ ಉತ್ತಮ ಸಾರ್ಥಕತೆಯನ್ನು ಪಡೆಯುತ್ತಿತ್ತು. ಅಂದಿನ ಸಂದರ್ಭದಲ್ಲಿ ಇದು ಒಂದು ಸಂಪ್ರದಾಯವಾಗಿ ಬೆಳೆದುಬಂದಿರಬೇಕು. 'ಹೀಗೆ ಮೊದಮೊದಲು ಬಿಸಿಲು, ಮಳೆಯ ರಕ್ಷಣೆಗಾಗಿ ಬರಬರುತ್ತ ಬದುಕಿನ ಮೌಲ್ಯ ಪ್ರಸಾರಕ್ಕಾಗಿ ಬಳಕೆಗೊಂಡ ವಸ್ತು ಈ ಶಿಲೆ" ಆಗಿದೆ.[೧೦] ಈ ರೀತಿಯಲ್ಲಿ ಕೆಲವು ಮಹತ್ತರ ಉದ್ದೇಶಗಳನ್ನು ತನ್ನಲ್ಲಿ ಹುದುಗಿಸಿಕೊಂಡು ಸಮೃದ್ಧವಾಗಿ ಬೆಳೆದುಬಂದ ಶಾಸನ ಶಿಲ್ಪ ಸಂಪ್ರದಾಯ ಸಮರ್ಥವಾದ ಕಲಾಮಾಧ್ಯಮವಾಗಿ ರೂಪುಗೊಂಡಿದೆ[೧೧] ಎಂದು ಹೇಳಬಹುದು.

ಕರ್ನಾಟಕದಾದ್ಯಂತ ಶಿಲಾಶಾಸನಗಳಿಗಿಂತ ಅತ್ಯಧಿಕವಾಗಿ ದೊರೆಯುವ ಸ್ಮಾರಕ ಶಾಸನಗಳೆಂದರೆ ವೀರಗಲ್ಲುಗಳೇ. ಇವುಗಳನ್ನು ಶಾಸನಸಹಿತ ಶಿಲ್ಪ ಮತ್ತು ಶಾಸನರಹಿತ ಶಿಲ್ಪ ಎಂದು ಎರಡು ಭಾಗಗಳಾಗಿ ಮಾಡಬಹುದಾಗಿದೆ. ಲಿಪಿ ಇರಲಿ, ಇಲ್ಲದಿರಲಿ ವೀರಗಲ್ಲುಗಳ ಮೂಲ ಉದ್ದೇಶ ಒಂದೇ ಆಗಿರುತ್ತದೆ. ವೀರಗಲ್ಲುಗಳ ಮೇಲೆ ಚಿತ್ರಿತವಾಗಿರುವ ಶಿಲ್ಪಗಳು ಮತ್ತು ವಸ್ತು ವಿಷಯದ ಆಧಾರದ ಮೇಲೆಯೇ ಇವುಗಳನ್ನು ವ್ಯಕ್ತಿ-ವ್ಯಕ್ತಿಗಳ ಹೋರಾಟ ಶಿಲ್ಪ, ವ್ಯಕ್ತಿ ಮತ್ತು ಪ್ರಾಣಿಗಳ ನಡುವೆ ನಡೆದಿರುವ ಹೋರಾಟ ಶಿಲ್ಪಗಳು, ವೀರಸ್ತಂಭಗಳ ಶಿಲ್ಪಗಳು, ವೀರಮಾಸ್ತಿಕಲ್ಲುಗಳು, ಪ್ರಾಣಿ-ಪ್ರಾಣಿ ಹೋರಾಟಶಿಲ್ಪ ಎಂದು ವಿಂಗಡಿಸಿ ಇಲ್ಲಿ ವಿಶ್ಲೇಷಣೆ ಮಾಡಲಾಗಿದೆ.

### ವೀರಗಲ್ಲುಗಳು

ದೊಡ್ಡಬಳ್ಳಾಪುರ ತಾಲ್ಲೂಕಿನ ಹಲವಾರು ಗ್ರಾಮಗಳಲ್ಲಿ ವೀರಶಾಸನಶಿಲ್ಪಗಳನ್ನು ಕಾಣಬಹುದು. ಗಂಗಸಂದ್ರಗ್ರಾಮದ ಊರ ದಕ್ಷಿಣ ದಿಕ್ಕಿಗೆ ಸುಮಾರು ಆರು ವೀರಶಾಸನ ಶಿಲ್ಪಗಳು ಕಣ್ಣಿಗೆ ಕಾಣುತ್ತವೆ. ಈ ಶಾಸನ ಶಿಲ್ಪಗಳು ನಾಲ್ಕು ಅಡಿ ಅಗಲ ಆರು ಅಡಿ ಉದ್ದವನ್ನು ಹೊಂದಿವೆ. ಶಿಲ್ಪದ ಮೇಲ್ಭಾಗದ ಬಲಭಾಗದಲ್ಲಿ ಸೂರ್ಯ, ಮಧ್ಯಭಾಗದಲ್ಲಿ ನಂದಿ ಮತ್ತು ಶಿವಲಿಂಗವನ್ನು ಹೊಂದಿದ್ದು ಇದು ಶೈವಧರ್ಮದ ಸಂಕೇತವಾಗಿವೆ. ಈ ಶಿಲ್ಪದಲ್ಲಿ ಮೂವರು ಸ್ತ್ರೀಯರಿದ್ದು ಒಬ್ಬ ವೀರನ ಹಿಂದೆ ಹೊರಟಂತೆ ಚಿತ್ರಿಸಲಾಗಿದೆ. ವೀರ ಬಿಲ್ಲಿನ ಆಯುಧವನ್ನು ಹಿಡಿದು ಸ್ತ್ರೀಯರ ರಕ್ಷಣಾಕಾರನಂತೆ ಶಿಲ್ಪವನ್ನು ಬಿಡಿಸಲಾಗಿದೆ. ಇದೇ ಗ್ರಾಮದ ಮತ್ತೊಂದು ವೀರಗಲ್ಲಿನಲ್ಲಿ ಇಬ್ಬರು ವೀರರು ಬಲಗೈಯಲ್ಲಿ ಕತ್ತಿಯನ್ನು ಹಿಡಿದು ಯುದ್ಧಕ್ಕೆ ಹೊರಟಿರುವಂತೆ ಚಿತ್ರಿಸಿದ್ದಾರೆ. ಮತ್ತೊಂದು ವೀರಗಲ್ಲಿನಲ್ಲಿ ವೀರನೊಬ್ಬ ಕೈಯಲ್ಲಿ ಕತ್ತಿಯನ್ನು ಹಿಡಿದು ಭುಜ ಮಟ್ಟಕ್ಕಿಂತ ಮೇಲ್ಭಾಗಕ್ಕೆ ಕತ್ತಿಯನ್ನು ಹಿಡಿದಿರುವುದು ವೀರನು ಹೋರಾಟಕ್ಕೆ ಸಜ್ಜಾಗುತ್ತಿರುವಂತೆ ಸುಂದರವಾಗಿ ಕೆತ್ತಲಾಗಿದೆ. ಇದೇ

ಗ್ರಾಮದ ಮತ್ತೊಂದು ವೀರಗಲ್ಲೊಂದರಲ್ಲಿ ಬಲಕೈಯಲ್ಲಿ ಕತ್ತಿಯನ್ನು, ಎಡಕೈಯಲ್ಲಿ ಬಿಲ್ಲನ್ನು ಹಿಡಿದಿದ್ದಾನೆ. ಈ ವೀರ ಬಿಲ್ವಿದ್ದೆ ಮತ್ತು ಕತ್ತಿವರಸೆಯಲ್ಲಿಯೂ ಪ್ರವೀಣ ಎಂಬುದನ್ನು ಸಾಬೀತುಪಡಿಸುವಂತಿದೆ. ನೆಲ್ಲುಗುದಿಗೆ ಮತ್ತು ಗೆದ್ದಲಪಾಳ್ಯ ಗ್ರಾಮದ ಮಧ್ಯಭಾಗದ ರಸ್ತೆಯ ಪಕ್ಕದಲ್ಲಿ ವೀರ ಮತ್ತು ವೀರನಪತ್ನಿ ಇಬ್ಬರೂ ಯುದ್ಧಕ್ಕೆ ಸನ್ನದ್ಧರಾಗಿರುವಂತೆ ಶಿಲ್ಪದಲ್ಲಿ ಕೆತ್ತಲಾಗಿದೆ. ವೀರ ಕೈಯಗಳಲ್ಲಿ ಕತ್ತಿ ಮತ್ತು ಬಿಲ್ಲನ್ನು ಹಿಡಿದಿರುವನು. ಆತನ ಹಿಂಬಾಲಕಳಾಗಿ ಸ್ತ್ರೀಯನ್ನು ಬಿಡಿಸಲಾಗಿದೆ. ವೀರನ ಮುಖದಲ್ಲಿ ವೀರಾವೇಶವಿದ್ದು, ಅದನ್ನು ಸ್ತ್ರೀಯೊಬ್ಬಳು ದಿಟ್ಟತನದಿಂದ ನೋಡುತ್ತಿರುವುದು ಕಂಡುಬರುತ್ತದೆ. ಇದೇ ರೀತಿಯ ಮತ್ತೊಂದು ವೀರಗಲ್ಲು ನಾಗೇನಹಳ್ಳಿ ಗ್ರಾಮದಲ್ಲಿ ಕಂಡುಬರುತ್ತದೆ. ಈ ಶಿಲ್ಪದಲ್ಲಿ ವೀರನನ್ನು ದೊಡ್ಡದಾಗಿ ಬಿಡಿಸಿರುವುದನ್ನು ಗಮನಿಸಿದರೆ ಇದು ವಿಜಯನಗರ ಕಾಲಕ್ಕೆ ಸೇರಿದ್ದಾಗಿದೆಯೆಂದು ಹೇಳಬಹುದು. ಇವರ ಕಾಲದಲ್ಲಿ ಶಿಲ್ಪಗಳನ್ನು ಸೂಕ್ಷ್ಮವಾಗಿ ಚಿತ್ರಿಸುವ ಗೋಜಿಗೆ ಹೋಗದೆ ಸ್ಥೂಲವಾಗಿ ಚಿತ್ರಿಸುವ ವಿಧಾನ ಬೆಳೆಯಿತು. ಕಲೆಗಾರಿಕೆ ಗೌಣವಾಗಿ ವಿಷಯವನ್ನು ತಿಳಿಸುವುದೇ ಮುಖ್ಯ ಕೆಲಸವಾಯಿತೆಂದು ಭಾವಿಸಬಹುದು.[೧೨]

ತಿಮ್ಮಸಂದ್ರ ಗ್ರಾಮದ ರಸ್ತೆಯ ಬದಿಯಲ್ಲಿ ವೀರಗಲ್ಲಿನ ಶಿಲ್ಪವಿದೆ. ಈ ಶಿಲ್ಪದ ಮೇಲ್ಭಾಗದಲ್ಲಿ ಶಿವಲಿಂಗದ ಮುದ್ರೆಯಿದ್ದು ಸೂರ್ಯ ಮತ್ತು ಚಂದ್ರರನ್ನು ಒಳಗೊಂಡ ರೇಖಾಚಿತ್ರಗಳಿವೆ. ಈ ರೇಖಾಚಿತ್ರಗಳ ಕೆಳಗೆ ವೀರ ಮತ್ತು ವೀರನ ಪತ್ನಿಯ ಚಿತ್ರಶಿಲ್ಪಗಳು ಸೊಗಸಾಗಿ ಮೂಡಿಬಂದಿವೆ. ವೀರ ಕತ್ತಿಯನ್ನು ಹಿಡಿದು ಆತ್ಮರಕ್ಷಣೆಗೋಸ್ಕರ ನಿಂತಿರುವಂತೆ ಸ್ತ್ರೀ ಶಿಲ್ಪದ ಜೊತೆಗೆ ಬಿಡಿಸಲಾಗಿದೆ. ಇದೇ ಕಾಲಾವಧಿಯದೆನ್ನೆಲ್ಲಾದ ಗಂಗರ ಕಾಲದ ವೀರಶಿಲ್ಪ ಜಾಲಿಗೆರೆ ಗ್ರಾಮದ ಹೊರವಲಯದಲ್ಲಿದೆ. ಆದರೆ ಈ ಶಿಲ್ಪದಲ್ಲಿ ವೀರ ಬಿಲ್ಲನ್ನು ಹಿಡಿದು ಠೇಂಕರಿಸುವ ಹಾಗೆ ಶಿಲ್ಪವನ್ನು ಬಿಡಿಸಲಾಗಿದೆ. ವೀರನ ಹಿಂಬಂದಿಯಲ್ಲಿ ಸ್ತ್ರೀಯೊಬ್ಬಳು ದಿಗ್ಭ್ರಾಂತಳಾಗಿ ನೋಡುತ್ತಿರುವಂತೆ ಬಿಡಿಸಿರುವ ವೀರಗಲ್ಲಿನಲ್ಲಿ ವೀರನನ್ನು ಮನೋಜ್ಞವಾಗಿ ಕೆತ್ತಲಾಗಿದೆ. ಕ್ರಿ.ಶ.೮ನೇ ಶತಮಾನದ ಗಂಗರ ಕಾಲದ ವೀರಗಲ್ಲುಗಳು ದೊಡ್ಡಬೆಳವಂಗಲ ಗ್ರಾಮದ ಚನ್ನಕೇಶವ ದೇವಾಲಯದ ಮುಂಭಾಗದಲ್ಲಿ ಕಂಡುಬರುತ್ತವೆ. ಈ ವೀರಗಲ್ಲುಗಳು ಲಿಪಿ ಸಹಿತವಾಗಿವೆ. ಶ್ರೀ ಮಹೇಂದ್ರ ಅರಸುಗೆಯ ಶ್ರೀಗಂಗರಸಕಾದು ಅರದಜಿ ಒಡೆಯ..." ಲೋಕಪ್ರಾಪ್ತನಾದ ಎಂದು ಉಲ್ಲೇಖಿಲಸಲ್ಪಟ್ಟಿದೆ.[೧೩] ಗಂಗರ ಅರಸು ಮಹೇಂದ್ರ ಎಂಬುವನು ಶತ್ರುಗಳೊಡನೆ ಹೋರಾಡುತ್ತಾ ಸಾವನ್ನಪ್ಪಿದ ಘಟನೆಯನ್ನು ಈ ವೀರಗಲ್ಲು ವಿವರಿಸುತ್ತದೆ. ಅದೇ ಸ್ಥಳದಲ್ಲಿ ಇನ್ನೂ ನಾಲ್ಕು ವೀರಗಲ್ಲುಗಳಿದ್ದು ಲಿಪಿರಹಿತವಾದ ಶಿಲ್ಪಗಳಾಗಿವೆ. ಈ ಶಿಲ್ಪಗಳು ವಿವಿಧ ಭಂಗಿಯಲ್ಲಿ ನಿಂತು ತಮ್ಮ ಪರಾಕ್ರಮವನ್ನು ವ್ಯಕ್ತಪಡಿಸುತ್ತಿರುವಂತೆ ಬಿಡಿಸಲಾಗಿದೆ. ಈ ಶಿಲ್ಪಗಳಲ್ಲಿ ಎಲ್ಲಾ ವೀರರು ಒಂದೇ ಬಗೆಯ ಆಯುಧಗಳನ್ನು ಹಿಡಿದು ನಿಂತಿರುವುದನ್ನು ಗಮನಿಸಿದರೆ ಯುದ್ಧಕ್ಕೆ ಹೊರಡುವ ಸಿದ್ಧತೆಯಲ್ಲಿದ್ದಂತೆ ಕಂಡುಬರುತ್ತದೆ. ಬೂಚನಹಳ್ಳಿ ಗ್ರಾಮದ ಹೊರವಲಯದಲ್ಲಿ ವೀರ ಕತ್ತಿಯನ್ನು ಹಿಡಿದು ಹೋರಾಡುವ ಶಿಲ್ಪ ಸುಂದರವಾಗಿ ಕೆತ್ತಲಾಗಿದೆ. ವೀರನ ಹಿಂಭಾಗದಲ್ಲಿ

ಸ್ತ್ರೀಯೊಬ್ಬಳು ತಾನು ಯುದ್ಧಕ್ಕೆ ಹೊರಡಲನುವಾಗಿರುವಂತೆ ಬಿಡಿಸಿದ್ದಾರೆ. ವೀರನಿಗೆ ಸ್ತ್ರೀಯೊಬ್ಬಳು ಸಹಾಯ ಮಾಡುತ್ತಿರುವಂತೆ, ಆಶ್ಚರ್ಯಚಕಿತಳಾಗಿ ನೋಡುತ್ತಿರುವಂತೆ ಬಿಡಿಸಿರುವುದು ಕಂಡು ಬರುತ್ತದೆ.

ಹುಲ್ಲುಕುಂಟೆ ರಸ್ತೆಬದಿಯಲ್ಲಿನ ಎರಡು ವೀರಗಲ್ಲುಗಳಲ್ಲಿ ವೀರನೊಬ್ಬ ತನ್ನ ಎರಡೂ ಕೈಗಳನ್ನು ಮುಗಿದು ಏನನ್ನೋ ಪ್ರಾರ್ಥಿಸುವಂತಹ ಚಿತ್ರಣವಿದೆ. ಮತ್ತೊಂದು ವೀರಶಿಲ್ಪದಲ್ಲಿ ವೀರನು ಕೊಡಲಿಯನ್ನು ಭುಜದ ಮೇಲಿಟ್ಟುಕೊಂಡು ಶತ್ರುಗಳನ್ನು ನಾಶ ಮಾಡಲು ಹೊರಟಿರುವಂತೆ ಬಿಡಿಸಿರುವ ಶಿಲ್ಪಗಳು ರಾಷ್ಟ್ರಕೂಟರ ಕಾಲಕ್ಕೆ ಸೇರಿದ್ದೆನ್ನಲಾಗಿದೆ. ಇದೇ ಕಾಲಾವಧಿಯ ಮತ್ತೊಂದು ವೀರಗಲ್ಲಿನಲ್ಲಿ ವೀರ ಒಂದು ಕೈಯಲ್ಲಿ ಕೊಡಲಿಯನ್ನು ಹಿಡಿದು, ಮತ್ತೊಂದು ಕೈಯನ್ನು ಸೊಂಟದ ಮೇಲೆ ಇಟ್ಟು ನಿಂತಿದ್ದಾನೆ. ಈ ಎಲ್ಲಾ ಶಿಲ್ಪಗಳ ಮೇಲೂ ಸೂರ್ಯ ಮತ್ತು ಚಂದ್ರರ ರೇಖಾಚಿತ್ರಗಳು ಸಂಕೇತಗಳಂತೆ ಬಿಂಬಿಸಿದ್ದಾರೆ. ಇದೇ ಕಾಲಾವಧಿಯ ಮತ್ತೊಂದು ವೀರಮಾಸ್ತಿ ಶಿಲ್ಪದಲ್ಲಿ ವೀರ ತನ್ನ ಪತಿಯ ಕೈಯನ್ನು ಹಿಡಿದು, ಬಲಗೈಯಲ್ಲಿ ಉದ್ದವಾದ ಕತ್ತಿಯನ್ನು ತನ್ನ ರಕ್ಷಣೆಗಾಗಿ ಎತ್ತಿಹಿಡಿದಿದ್ದಾನೆ. ಈ ವೀರ ಮಾಸ್ತಿಯ ಶಿಲ್ಪದ ಪಕ್ಕದಲ್ಲೇ ಇನ್ನೊಂದು ವೀರಮಾಸ್ತಿಶಿಲ್ಪದಲ್ಲಿ ಯುದ್ಧದಲ್ಲಿ ಗೆದ್ದು ಬಂದ ವೀರನಂತೆ ಕಂಡುಬರುತ್ತದೆ. ವೀರನು ತನ್ನ ಸತಿಯನ್ನು ಸೊಂಟದ ಮೇಲೆ ಕುಳ್ಳಿರಿಸಿಕೊಂಡು ನರ್ತಿಸುವಂತೆ ಇರುವ ಶಿಲ್ಪವು ಅಪರೂಪದ ಶಿಲ್ಪವೆನ್ನಬಹುದು. ಈ ಎಲ್ಲಾ ಶಿಲ್ಪಗಳಲ್ಲಿ ವೀರರನ್ನು ದೊಡ್ಡದಾಗಿ ಚಿತ್ರಿಸಿ, ಸತಿಯರನ್ನು ಸಣ್ಣದಾಗಿ ಚಿತ್ರಿಸಲು ಕಾರಣಗಳೇನು? ಎಂಬುದನ್ನು ಯೋಚಿಸಿದಾಗ ಹಲವಾರು ಕಾರಣಗಳು ದೊರೆಯಬಹುದು. ಇಲ್ಲಿ ವೀರರನ್ನೇ ಹೆಚ್ಚು ಪ್ರತಿಬಿಂಬಿಸಲು, ಇವರೇ ಯುದ್ಧದಲ್ಲಿ ಹೋರಾಡಲು ಶಕ್ತಿಶಾಲಿಗಳು ಎಂಬ ಭಾವನೆಗಳಿರ ಬಹುದು.

ಹಾಲೇನಹಳ್ಳಿ ಗ್ರಾಮದ ವೀರಮಾಸ್ತಿ ಶಿಲ್ಪಗಳು ಜನರ ಪೂಜೆಗೆ ಅರ್ಹವಾಗಿವೆ. ಈ ಗುಡಿಯನ್ನು ಇಲ್ಲಿನ ಜನರು ವೀರಮಾಸ್ತಮ್ಮನ ಗುಡಿ ಎಂದೇ ಕರೆಯುತ್ತಾರೆ. ಜನಮನಗಳಲ್ಲಿ ಶಾಸನ ಶಿಲ್ಪಗಳು ದೇವರಂತೆ ಕಾಣಲಾರಂಬಿಸಿವೆ. ಈ ಗುಡಿಯಲ್ಲಿನ ಒಂದು ಕಲ್ಲಿನಲ್ಲಿ ಒಬ್ಬ ವೀರನನ್ನು, ಇಬ್ಬರು ಸ್ತ್ರೀ ಶಿಲ್ಪಗಳನ್ನು ಮತ್ತೊಂದು ಶಿಲೆಯಲ್ಲಿ ಒಬ್ಬ ವೀರ ಕತ್ತಿಯನ್ನು ಮೇಲಕ್ಕೆ ಎತ್ತಿ ನಿಂತಿರುವಂತಹ ಶಿಲ್ಪ ಮತ್ತು ಸತಿಯು ಗಂಭೀರವಾಗಿ ನಿಂತಿರುವಂತೆ ಚಿತ್ರಿಸಿದ್ದಾರೆ. ಮತ್ತೊಂದು ವೀರಮಾಸ್ತಿ ಶಿಲೆಯಲ್ಲಿ ವೀರ ಬಿಲ್ಲನ್ನು ಹಿಡಿದು ಬಾಣವನ್ನು ಹೂಡಿದ್ದಾನೆ. ವೀರನ ಹಿಂದೆ ಇಬ್ಬರು ಸತಿಯರು ತಲೆಯ ಮೇಲೆ ಭಾರವನ್ನು ಹೊತ್ತು ಕೈಯಲ್ಲಿ ಹಿಡಿದಿರುವುದನ್ನು ಗಮನಿಸಿದರೆ ಏನೋ ಹರಕೆ ಹೊತ್ತಂತೆ ತಿಳಿಯುತ್ತದೆ. ಇದೇ ರೀತಿಯಲ್ಲಿ ಕಾರೇಪುರ ಗ್ರಾಮದ ಉತ್ತರ ದಿಕ್ಕಿಗೆ ವೀರಮಾಸ್ತಮ್ಮನ ಗುಡಿ ಎಂದೇ ಕರೆಯಲ್ಪಡುವ ವೀರರ ಗುಡಿ ಇದೆ. ಈ ಗ್ರಾಮದ ಜನರಲ್ಲಿ ಒಂದು ನಂಬಿಕೆಯಿದೆ. ಹೊಸದಾಗಿ ಮದುವೆಯಾಗಿ ಬಂದ ಗಂಡುಹೆಣ್ಣು ಮೊದಲು ಇಲ್ಲಿಗೆ

ಬಂದು ಪೂಜೆ ಸಲ್ಲಿಸುವ ಸಂಪ್ರದಾಯವಿದೆ. ಆದರೆ ಪೂಜೆ ಮಾಡುವುದು ಗಂಡು ಮಾತ್ರ, ಗ್ರಾಮದ ಯಾವ ಹೆಣ್ಣು ಈ ದೇವರ ಗುಡಿಗೆ ಹೋಗುವುದಿಲ್ಲ. ಈ ಸಂಪ್ರದಾಯ ಇಂದಿಗೂ ಆಚರಣೆಯಲ್ಲಿರುವುದನ್ನು ಕಾಣಬಹುದು. ಶಾಸನಶಿಲ್ಪಗಳನ್ನು ಕುರಿತಾದ ಹಲವಾರು ಜನಪದ ಕತೆಗಳು ಇಂದಿಗೂ ದೊರೆಯುತ್ತವೆ. ಈ ರೀತಿಯಲ್ಲಿ ಬೆಳೆದು ಬಂದ ಜನಪದ ನಂಬಿಕೆಗಳು ಶಾಸನಶಿಲ್ಪದ ಅವಿಭಾಜ್ಯ ಅಂಶಗಳಾಗಿ ಪರಿವರ್ತಿತವಾಗಿರುತ್ತವೆ. ಈ ಕಥೆಗೆ ಪೂರಕ ಅಂಶ ಕೋಡಿಹಳ್ಳಿ ಗ್ರಾಮದ ವೀರಮಾಸ್ತಿಕಲ್ಲಿನ ಮೇಲೆ ಇರುವ ಕಥೆಯನ್ನು ನೋಡಬಹುದು.

ಕೋಡಿಹಳ್ಳಿ ಗ್ರಾಮದ ಗೌಡನು ಧಾಳಿಗಾಗಿ ಕೋಲಾರ ಜಿಲ್ಲೆಯ ಚಿಂತಾಮಣಿ ಪ್ರದೇಶದ ಕಡೆಗೆ ಹೋಗಿ ವಾಪಸ್ಸು ಬರುವಾಗ ದಾರಿಯಲ್ಲಿ ಅಪ್ಸರೆಯಂತಿರುವ ಹೆಣ್ಣನ್ನು ನೋಡುತ್ತಾನೆ. ಅವಳು ಅಗತಾನೆ ಸ್ನಾನ ಮುಗಿಸಿ ಮನೆಯ ಮುಂದೆ ಕೂದಲನ್ನು ಒಣಗಿಸಿಕೊಳ್ಳುತ್ತಿರುತ್ತಾಳೆ. ಆ ಹೆಣ್ಣು ಕೂಡಾ ಆ ಊರಿನ ದೊಡ್ಡ ಮನೆತನಕ್ಕೆ ಸೇರಿದವಳು. ಅವಳ ಸೌಂದರ್ಯಕ್ಕೆ ಮನಸೋತ ಗೌಡನು ಮನಸ್ಸನ್ನು ನಿಗ್ರಹಿಸಲಾರದೆ ಸೋಲುತ್ತಾನೆ. ಕೊನೆಗೆ ತನ್ನ ಆಸೆಯನ್ನು ತಡೆಯಲಾರದೆ ಅವಳಿದ್ದ ಮನೆಯ ಎತ್ತರವಾದ ಗೋಡೆಯನ್ನು ಕುದುರೆಯಿಂದಲೇ ಹಾರಿ ದಾಟಿದ್ದಲ್ಲದೆ, ನಿಂತಿದ್ದ ಅವಳನ್ನು ಬಲಗೈಯಲ್ಲಿ ಬಾಚಿಕೊಂಡು ಅವಳ ಮನೆಯವರಿಗೆ ಸುದ್ದಿ ತಿಳಿಯುವಷ್ಟರಲ್ಲಿ ಅತೀವೇಗದಿಂದ ಊರಿಗೆ ಬಂದು ಬಿಡುತ್ತಾನೆ. ಅವಳು ತನ್ನನ್ನು ಬಿಟ್ಟು ಬಿಡಲು ಕೇಳಿಕೊಂಡರೂ ಸಹ ಆತ ಅವಳನ್ನು ಬಿಡುವುದಿಲ್ಲ. ಆಕೆಯನ್ನು ಮದುವೆಯಾಗುವುದಾಗಿ ಹೇಳುತ್ತಾನೆ. ಅದಕ್ಕೆ ಅವಳು ಒಪ್ಪುವುದೇ ಇಲ್ಲ. ಊರಿಗೆ ಮರಳಿದ ಗೌಡ ಅವಳನ್ನು ಊರ ಹೊರಗೆ ನಿಲ್ಲಿಸುತ್ತಾನೆ. ಅವಳನ್ನು ಸಂಭ್ರಮದಿಂದ ಊರೊಳಗೆ ಕರೆದುಕೊಂಡು ಬರಲು ಆಳು-ಕಾಳುಗಳನ್ನು ವಾದ್ಯಗಳನ್ನು ಕಳುಹಿಸಿಕೊಡುತ್ತಾನೆ. ಆದರೆ ಅಷ್ಟರಲ್ಲಿ ತನ್ನ ಶೀಲರಕ್ಷಣೆಗಾಗಿ ಇವಳು ಕೊಂಡವನ್ನು ಏರ್ಪಡಿಸಿ ಅದರಲ್ಲಿ ಬಿದ್ದು ಸಾವಿಗೀಡಾಗುವಳು. ಸಾಯುವಂತಹ ಸಂದರ್ಭದಲ್ಲಿ ಗೌಡನಿಗೆ ಹಾಗು ಅವನ ವಂಶದವರಿಗೆ ಶಾಪ ಕೊಟ್ಟು ಸಾಯುತ್ತಾಳೆ. ಆಕೆ ನೀಡಿದ ಶಾಪವೆಂದರೆ ಗೌಡನ ಮುಂದಿನ ವಂಶದಲ್ಲಿ ಹೆಣ್ಣು ಮಕ್ಕಳೇ ಹುಟ್ಟದಿರಲಿ ಎಂದು ಶಾಪ ನೀಡುತ್ತಾಳೆ. ಈ ವಿಷಯವನ್ನು ಕೇಳಿದ ಗೌಡನು ಅವಳ ಬಳಿಗೆ ಬರುವಷ್ಟರಲ್ಲಿ ಆಕೆ ಮರಣಹೊಂದುವಳು. ಈ ಘಟನೆಯಿಂದ ಪಶ್ಚಾತ್ತಾಪ ಪಟ್ಟು ಅದೇ ಬೆಂಕಿಗೆ ತಾನೂ ಬಿದ್ದು ಸಾಯುತ್ತಾನೆ. ಈ ರೀತಿಯಾಗಿ ಬಲಿಯಾದವರ ನೆನಪಿಗೆ ನಿಲ್ಲಿಸಿದ ಮಾಸ್ತಿಕಲ್ಲಿದು ಎಂಬುದಾಗಿ ಕಥೆಯನ್ನು ನಿರರ್ಗಳವಾಗಿ ಸ್ಥಳೀಯರು ಹೇಳುತ್ತಾರೆ.[೧೪] ಈ ಕಥೆಯಲ್ಲಿ ಬರುವ ಹೆಣ್ಣು ಮೊರಚು ಜನಾಂಗಕ್ಕೆ ಸೇರಿದವಳು. ಆಕೆಯ ಹೆಸರು ಬೈಚಮ್ಮ. ಇವಳು ನೀಡಿದ ಶಾಪದ ಫಲವಾಗಿ ಗೌಡನ ಮುಂದಿನ ವಂಶದಲ್ಲಿ ಹೆಣ್ಣು ಮಕ್ಕಳೇ ಜನಿಸಲಿಲ್ಲ. ಅಪರೂಪಕ್ಕೆಂಬಂತೆ ಜನಿಸಿದರೂ ಅವರು ಕುರೂಪಿಗಳಾಗಿ ಹುಟ್ಟಿದವಂತೆ. ಇಂದಿಗೂ ಈ ಗ್ರಾಮದಲ್ಲಿರುವ ವೀರಶೈವ ಜನಾಂಗದವರು ಹೊಸ ಮದುಮಗನನ್ನು ಈ ವೀರಮಾಸ್ತಿಗುಡಿಗೆ ಕರೆದೊಯ್ದು ಅವನ

ಕೈಯಲ್ಲಿ ಪೂಜೆ ಮಾಡಿಸುವ ಸಂಪ್ರದಾಯ ಮುಂದುವರಿದುಕೊಂಡು ಬಂದಿದೆ. ಹೆಣ್ಣಿಗೆ ನೀಡುವ ಮಾಂಗಲ್ಯ, ಒಡವೆ, ಸೀರೆ-ಕುಪ್ಪಸಗಳನ್ನು ಬೈಚಮ್ಮನ ಮುಂದೆ ಇಟ್ಟು ಹರಸುವಂತೆ ಬೇಡುವರು. ಹೀಗೆ ಬೇಡದೆ ಮದುವೆಯಾದವರ ಸಂಸಾರ ಊರ್ಜಿತವಾಗುವುದಿಲ್ಲವೆಂಬುದು ಜನರ ಅಭಿಪ್ರಾಯ. ಆ ವೀರಮಾಸ್ತಿ ಗುಡಿಯನ್ನು ಈಗ ಬಹಳ ಸುಂದರವಾಗಿ ನಿರ್ಮಿಸಲಾಗಿದ್ದು, ಗುಡಿಯ ಮುಂಭಾಗದ ಚಾವಣಿಯಲ್ಲಿ ಬೈಚಮ್ಮನು ಕುದುರೆಯ ಮೇಲೆ ನಿಂತಿರುವಂತೆ ಸೀಮೆಂಟ್ ವಿಗ್ರಹವನ್ನು ನಿರ್ಮಿಸಿದ್ದಾರೆ. ಆದರೆ ಸ್ಥಳೀಯರು ಕಥೆ ಹೇಳುವುದಕ್ಕೂ, ಆ ಶಿಲ್ಪಕ್ಕೂ ಯಾವುದೇ ಸ್ಪಷ್ಟ ಹೋಲಿಕೆಯಿಲ್ಲ. ಶಿಲ್ಪ ಮೂರುವರೆ ಅಡಿ ಅಗಲವಾಗಿದ್ದು, ಎರಡು ಅಡಿ ಎತ್ತರವಾಗಿದೆ. ವೀರನೊಬ್ಬ ಕುದುರೆಯ ಮೇಲೆ ಕುಳಿತು ಕತ್ತಿಯನ್ನು ಮೇಲಕ್ಕೆ ಎತ್ತಿ ಹಿಡಿದಿರುವನು. ಕುದುರೆಯ ಹಿಂಭಾಗದಲ್ಲಿ ಮೂರು ಜನ ಸತಿಯರು ತಮ್ಮ ಎರಡೂ ಕೈಗಳನ್ನು ಮೇಲಕ್ಕೆ ಎತ್ತಿ ಹರಸುತ್ತಿದ್ದು ಒಂದು ಕೈಯಲ್ಲಿ ಹೂವನ್ನು ಹಿಡಿದಿದ್ದಾರೆ. ೧೬ನೆಯ ಶತಮಾನಕ್ಕೆ ಸೇರಿದ್ದನ್ನೆಲಾದ ಈ ಶಿಲ್ಪದಲ್ಲಿ ಮೂವರು ಸತಿಯರ ಚಿತ್ರಣವನ್ನು ಹೊರುತುಪಡಿಸಿದರೆ ಶಿಲ್ಪಶೈಲಿಯ ದೃಷ್ಟಿಯಿಂದ ಇದು ವೀರಮಾಸ್ತಿ ಕಲ್ಲು ಎಂದು ಸ್ಥೂಲವಾಗಿ ಹೇಳಬಹುದು. ಆದರೆ ಜನರ ನಂಬಿಕೆ ಅಶ್ವದ ಮೇಲೆ ಕುಳಿತಿರುವವಳು ಬೈಚಮ್ಮ ಎಂದು ಹೇಳುತ್ತಾರೆ. ಇಲ್ಲಿರುವ ಎಲ್ಲಾ ವಿಗ್ರಹಗಳಿಗೂ ಬಣ್ಣಗಳನ್ನು ಬಳಿಯಲಾಗಿದೆ. ಹಾಗೂ ಬಣ್ಣದಲ್ಲಿಯೇ ಮಹಾಸತಿಯರ ಬಲಗೈಯಲ್ಲಿ ಕತ್ತಿಯನ್ನು ಬಿಡಿಸಿದ್ದಾರೆ. ತನಗೆ ಸಂಬಂಧವಿಲ್ಲದ ಕಥೆಯನ್ನು ಈ ಶಾಸನಶಿಲ್ಪವು ಹೇಗೆ ಜನರ ನಂಬುಗೆಯ ಫಲವಾಗಿ ತಳುಕು ಹಾಕಿಕೊಂಡಿದೆ ಎಂದು ಮೇಲಿನ ಕಥೆಯಿಂದ ತಿಳಿದುಬರುತ್ತದೆ ಎಂಬುದನ್ನು ಊಹಿಸಬಹುದು. ಈ ಶಿಲ್ಪವನ್ನೆ ಹೋಲುವ ಮತ್ತೊಂದು ಗ್ರಾಮದ ಮಧ್ಯಭಾಗದಲ್ಲಿದೆ. ಅಲ್ಲದೆ ಇನ್ನು ಕೆಲವು ವೀರಮಾಸ್ತಿಕಲ್ಲುಗಳಿವೆ. ಇವುಗಳೆಲ್ಲವೂ ಶಿಲ್ಪ ಶೈಲಿಯ ದೃಷ್ಟಿಯಿಂದ ಹದಿನಾರನೆಯ ಶತಮಾನಕ್ಕೆ ಸೇರಿದವುಗಳೆಂದು ನಿರ್ಧರಿಸಬಹುದು. ಇದೇ ಶತಮಾನಕ್ಕೆ ಸೇರಿದ ಶಿಲ್ಪಗಳು ಕಮ್ಮಸಂದ್ರ ಗ್ರಾಮದ ಪೂರ್ವದಿಕ್ಕಿನಲ್ಲಿ ಎರಡು ವೀರಮಾಸ್ತಿಕಲ್ಲುಗಳು ಕಂಡುಬರುತ್ತವೆ.

ಹಾಡೋನಹಳ್ಳಿ ಗ್ರಾಮದಲ್ಲಿ ಎರಡು ಶಿಲ್ಪಗಳು ಶಿಲ್ಪ ಸೌಂದರ್ಯದಿಂದ ಮಹತ್ವವನ್ನು ಪಡದಿವೆ. ಒಂದು ಶಿಲ್ಪದಲ್ಲಿ ಸ್ತ್ರೀಯೊಬ್ಬಳು ಮತ್ಸ್ಯದ ಮೇಲೆ ಬಲಗೈಯನ್ನು ಬಲಗಾಲಿನ ಮೊಣಕಾಲಿನ ಮೇಲಿಟ್ಟು ತನ್ನ ಎಡಗೈಯನ್ನು ಹಿಂದೆ ಇಟ್ಟುಕೊಂಡು ಏನೋ ಯೋಚಿಸುತ್ತಿರುವಂತೆ ಶಿಲ್ಪವನ್ನು ಬಿಡಿಸಲಾಗಿದೆ. ಬಹುಶಃ ಶಿಲ್ಪದ ದೃಷ್ಟಿಯಿಂದ ಇದು ಮತ್ಸ್ಯಕನ್ಯೆಯೆಂದು ಹೆಸರಿಸಬಹುದು. ಇದೇ ಸ್ಥಳದಲ್ಲಿ ಮತ್ತೊಂದು ಶಿಲ್ಪದಲ್ಲಿ ಬಲಭಾಗದ ಎರಡು ಕೈಗಳಲ್ಲಿ ಕಮಂಡಲ ಮತ್ತು ತ್ರಿಶೂಲ ಎಡಭಾಗದ ಕೈಯಲ್ಲಿ ಡಮರುಗ ಮತ್ತೊಂದು ಕೈ ಸೊಂಟದ ಮೇಲೆ ಇಟ್ಟು ಕೊಂಡಿರುವಂತೆ ಶಿಲ್ಪಗಳನ್ನು ಬಿಡಿಸಲಾಗಿದೆ. ಶಿಲ್ಪದ ಶೈಲಿ ದೃಷ್ಟಿಯಿಂದ ಇವು ಆಧುನೀಕತೆಯ ಛಾಪು ಈ ಶಿಲ್ಪಗಳ ಮೇಲಿದೆ ಎನ್ನಬಹುದು. ಸ್ಥಳೀಯರು ಈ ಶಿಲ್ಪಗಳಿಗೆ ಬಣ್ಣವನ್ನು ಬಳಿದದ್ದು ಪೂಜಾ ಶಿಲ್ಪಗಳಾಗಿ

ಮಾರ್ಪಡಿಸಿದ್ದಾರೆ. ಹಲವಾರು ಗ್ರಾಮಗಳಲ್ಲಿ ಈ ರೀತಿಯ ಕೆಲವು ಶಿಲ್ಪಗಳು ಗ್ರಾಮ ದೇವತೆಗಳಾಗಿ ಪರಿವರ್ತನೆಗೊಂಡಿವೆ. ಗ್ರಾಮವನ್ನು ದುಷ್ಟಶಕ್ತಿಗಳಿಂದ ಕಾಪಾಡುವ ದೇವತೆಗಳಾಗಿದ್ದಾರೆ ಎಂಬ ನಂಬಿಕೆ ಸ್ಥಳೀಯರಲ್ಲಿದೆ.

ಕೆಸ್ತೂರು ಗ್ರಾಮದ ರಸ್ತೆಯ ಪಕ್ಕದಲ್ಲಿ ವೀರಮಾಸ್ತಿ ಕಲ್ಲೊಂದು ವಿಶೇಷವಾಗಿ ನಮ್ಮ ಗಮನ ಸೆಳೆಯುತ್ತದೆ. ಇಲ್ಲಿ ವೀರನೊಬ್ಬ ದಂಡ ಮತ್ತು ವೃತ್ತಾಕಾರದ ಗುರಾಣಿಗಳನ್ನು ಹಿಡಿದಿರುವುದು ಮಾತ್ರವಲ್ಲ ಆ ವೀರನ ಎಡ ಮತ್ತು ಬಲಭಾಗದ ಸ್ತ್ರೀಯರಿಬ್ಬರೂ ಆಯುಧಗಳನ್ನು ಹಿಡಿದಿರುವುದು ವಿಶೇಷವಾಗಿ ಕಂಡುಬರುತ್ತದೆ. ವೀರನ ಬಲಭಾಗದ ಸ್ತ್ರೀ ತನ್ನ ಬಲಗೈಯಲ್ಲಿ ಗದೆಯನ್ನು ಹಿಡಿದಂತೆಯೂ, ಎಡಭಾಗದ ಸ್ತ್ರೀ ಒಂದು ಕೈಯಲ್ಲಿ ಆಯುಧವನ್ನೂ ಮತ್ತೊಂದು ಕೈಯಲ್ಲಿ ಪಂಚಪಾತ್ರೆಯನ್ನು ಹಿಡಿದಿರುವಂತೆ ಶಿಲ್ಪಗಳನ್ನು ಬಿಡಿಸಲಾಗಿದೆ. ಇದೇ ಗ್ರಾಮದಲ್ಲಿ ಮತ್ತೊಂದು ವೀರಗಲ್ಲಿನಲ್ಲಿ ಇಬ್ಬರು ವೀರರು ಕೈಮುಗಿದುಕೊಂಡು ಅಂತರ್ಭಾವದಿಂದ ಕೂಡಿ ಹಸನ್ಮುಖಿಗಳಾಗಿ ನಿಂತಿದ್ದಾರೆ. ಶಿಲ್ಪದ ಶೈಲಿ ದೃಷ್ಟಿಯಿಂದ ಇದು ಹದಿನಾರನೆಯ ಶತಮಾನಕ್ಕೆ ಸೇರಿದ ಶಿಲ್ಪ ಎಂದು ಹೇಳಬಹುದು.

ತಪಸೀಹಳ್ಳಿ ಗ್ರಾಮದಲ್ಲಿನ ಒಂದು ವೀರಮಾಸ್ತಿಕಲ್ಲಿನಲ್ಲಿ ವೀರನ ಆಕ್ರಮಣ ಎದ್ದು ಕಾಣುತ್ತದೆ. ಈ ಶಿಲ್ಪದಲ್ಲಿ ವೀರನ ಪತ್ನಿ ಹೆದರಿ ಪತಿಯ ಹಿಂದೆ ನಿಂತಿದ್ದಾಳೆ. ವೀರ ಶತ್ರುವನ್ನು ಕೆಡವಿ ತಲೆ ಕುತ್ತಿಗೆಯ ಮೇಲೆ ಕಾಲಿಟ್ಟು ಕೂದಲನ್ನು ಹಿಡಿದು ಎಳೆಯುತ್ತಿರುವುದು ಕಾಣುತ್ತದೆ. ಇಲ್ಲಿ ಸ್ತ್ರೀಯು ಪುರುಷನ ಆಕ್ರಮಣಕ್ಕೆ ಒಳಗಾಗಿರುವುದು ಈ ಶಾಸನಶಿಲ್ಪ ಧ್ವನಿಸುತ್ತದೆ. ಈ ಶಿಲ್ಪವನ್ನು ಗಮನಿಸಿದರೆ ಶಿಲ್ಪಿಯೊಬ್ಬ ಸೃಜನಶೀಲ ಕಲಾಕಾರನಾಗಿದ್ದನೆಂದು ಹೇಳಬಹುದು. ತಾಲೂಕಿನಲ್ಲಿ ದೊರೆತಿರುವ ಶಾಸನ ಶಿಲ್ಪಗಳಲ್ಲಿ ಬಹಳ ಅಪರೂಪದ ಸುಂದರವಾದ ಶಿಲ್ಪವೆನ್ನಬಹುದು. ಇದನ್ನೇ ಸ್ವಲ್ಪಮಟ್ಟಿಗೆ ಹೋಲುವ ಶಿಲ್ಪವನ್ನು ಹಾವೇರಿ ಜಿಲ್ಲೆಯ ಹಿರೇಕೆರೂರು ತಾಲ್ಲೂಕಿನ ಹಿರೇಕೊಣತಿಯಲ್ಲಿ ಕಾಣಬಹುದು. ಅಲ್ಲಿಯ ವೀರನು ವೈರಿಯನ್ನು ಕೆಳಕ್ಕೆ ಕೆಡವಿ ಅವನ ಜುಟ್ಟನ್ನು ಎಡಗೈಲಿ ಹಿಡಿದಿದ್ದಾನೆ. ಬಲಗೈಯಲ್ಲಿ ಕತ್ತಿಯನ್ನು ಹಿಡಿದು ಅವನ ರುಂಡವನ್ನು ಕತ್ತರಿಸಲು ಸಜ್ಜಾಗಿರುವಂತೆ ಶಿಲ್ಪವನ್ನು ಬಿಡಿಸಲಾಗಿದೆ.

ಅರಳುಮಲ್ಲಿಗೆ ಗ್ರಾಮದ ಚನ್ನಕೇಶವಸ್ವಾಮಿ ದೇವಾಲಯದ ಮುಂಭಾಗದಲ್ಲಿರುವ ಮಂಟಪದ ಕೆಳಗಿರುವ ವೀರರ ಶಿಲ್ಪಗಳಲ್ಲಿ ವೀರನೊಬ್ಬ ಬಿಲ್ಲನ್ನು ಹಿಡಿದು ಬಾಣವನ್ನು ಕೈಯಲ್ಲಿ ಎತ್ತಿ ಹಿಡಿದಿದ್ದಾನೆ. ಮತ್ತೊಬ್ಬ ವೀರನ ಪತ್ನಿಯು ಪಕ್ಕದಲ್ಲಿ ನಿಂತು ಆತನನ್ನು ಗಮನಿಸುತ್ತಿರುವುದು ಕಾಣುತ್ತದೆ. ಇಲ್ಲಿನ ವೀರನನ್ನು ಅತ್ಯಂತ ಆಕ್ರಮಣಕಾರಿ ಮನೋಭಾವದಿಂದ ಕೂಡಿದ ವ್ಯಕ್ತಿಯಂತೆ ಬಿಡಿಸಿದ್ದಾರೆ. ಅಲ್ಲದೆ ವೀರನನ್ನು ಅತ್ಯಂತ ಎತ್ತರದ ವ್ಯಕ್ತಿಯಂತೆ ಶಿಲ್ಪವನ್ನು ಬಿಡಿಸಿರುವುದು ಈ ವೀರಕಲ್ಲಿನ

ಒಂದು ವಿಶೇಷ. ನಾಗೇನಹಳ್ಳಿಯ ಒಂದು ವೀರಮಾಸ್ತಿ ಕಲ್ಲೊಂದು ಭೂಮಿಯಲ್ಲಿ ಅರ್ಧಭಾಗ ಹೂತು ಹೋಗಿ ಅಸ್ಪಷ್ಟವಾಗಿ ಕಾಣುವ ವೀರ ಬಲಭಾಗದ ಕೈಯಲ್ಲಿ ಕತ್ತಿಯನ್ನು ಮೇಲಕ್ಕೆತ್ತಿ ಹಿಡಿದಿದ್ದಾನೆ. ವೀರನ ಎಡಭಾಗಕ್ಕೆ ಸ್ತ್ರೀಯು ಅಲಂಕಾರ ಭೂಷಿತಳಾಗಿರದೆ ಒಬ್ಬ ಸಾಮಾನ್ಯ ಹೆಣ್ಣಿನಂತೆ ನಿಂತಿದ್ದಾಳೆ. ಇಲ್ಲಿನ ಶಿಲ್ಪದಲ್ಲಿ ವೀರ ಮತ್ತು ಆತನ ಪತ್ನಿ ಮುಂದೆ ಬರುವ ಶತ್ರುಗಳನ್ನು ಹತ್ತಿಕ್ಕುವಂತೆ ಚಿತ್ರವನ್ನು ರೂಪಿಸಲಾಗಿದೆ.

ಹಿರೇಮುದ್ದೇನಹಳ್ಳಿ ಗ್ರಾಮದ ಹೊರವಲಯದಲ್ಲಿ ಆರು ಅಡಿ ಉದ್ದದ ಮತ್ತು ಸುಮಾರು ಎರಡೂವರೆ ಅಡಿ ಎತ್ತರದ ಶಿಲೆಯಲ್ಲಿ ಏಳು ಜನವಿರುವ ವೀರಮಾಸ್ತಿಕಲ್ಲೊಂದು ಕಂಡುಬರುತ್ತದೆ. ಇವರಲ್ಲಿ ಮೂವರು ಪುರುಷರು ನಾಲ್ಕು ಜನ ಸ್ತ್ರೀಯರನ್ನು ಕಾಣಬಹುದು. ಇಬ್ಬರು ವೀರರನ್ನು ಸಮಾನಾಂತರವಾಗಿ ಬಿಡಿಸಿದ್ದು ಸೊಂಟದ ಮೇಲೆ ಕೈಯನ್ನಿಟ್ಟು ಬಲಗೈಯಲ್ಲಿ ಈಟಿಯನ್ನು ಹಿಡಿದಿದ್ದಾರೆ. ಮತ್ತೊಬ್ಬ ವೀರನನ್ನು ಯಾವುದೇ ಆಯುಧಗಳಿಲ್ಲದೆ, ಅಲಂಕಾರಿಕ ಪುರುಷನನ್ನಾಗಿ ಬಿಡಿಸಿರುವುದು ಕಂಡುಬರುತ್ತದೆ. ಮತ್ತೊಬ್ಬ ವೀರ ಉದ್ದವಾದ ಈಟಿಯನ್ನು ಹಿಡಿದು ಶತ್ರುಗಳ ಸಂಹಾರಕ್ಕೆ ಹೊರಟಂತೆ ಶಿಲ್ಪವನ್ನು ಬಿಡಸಲಾಗಿದೆ. ಮತ್ತೊಬ್ಬ ವೀರನನ್ನು ಸ್ತ್ರೀಯೊಬ್ಬಳು ತನ್ನ ಪತಿಯು ಯುದ್ಧದಲ್ಲಿ ವಿಜಯಿಯಾಗಿ ಹಿಂದಿರುಗಿ ಬರಲಿ ಎಂಬುದಾಗಿ ಕೈಯನ್ನು ಮೇಲಕ್ಕೆತ್ತಿ ಹರಸುವಂತೆ ಬಿಡಿಸಿರುವುದು ಕಲಾತ್ಮಕತೆಯ ದೃಷ್ಟಿಯಿಂದ ಉತ್ತಮ ಶಿಲ್ಪಗಳಾಗಿವೆ.

ಕೆಂಜಗನಾಳ ಗ್ರಾಮದ ಪಶ್ಚಿಮದಿಕ್ಕಿಗೆ ಎರಡು ವೀರಮಾಸ್ತಿಕಲ್ಲುಗಳು ಇವೆ. ಸ್ಥಳೀಯರು ಇವುಗಳನ್ನು 'ವೀರರಕಟ್ಟೆ ಜಾಗ' ಎಂದೇ ಇಂದಿಗೂ ಕರೆಯುತ್ತಿದ್ದಾರೆ. ಇಲ್ಲಿನ ಒಂದು ವೀರಮಾಸ್ತಿಕಲ್ಲು ಒಂದು ಹಂತವನ್ನು ಒಳಗೊಂಡಿದ್ದು, ಶಿಲ್ಪದ ಮೇಲ್ಭಾಗದಲ್ಲಿ ಪ್ರಭಾವಳಿಯನ್ನು ಅಲಂಕಾರಯುತವಾಗಿ ಚಿತ್ರಿಸಲಾಗಿದೆ. ಮತ್ತೊಂದು ವೀರಗಲ್ಲು ಸಾಧಾರಣ ಕಲ್ಲಿನ ಮೇಲೆ ಅಶ್ವಾರೂಢ ವೀರರನ್ನು ಬಿಡಿಸಲಾಗಿದೆ. ಕುದುರೆಯ ಮೇಲೆ ಏರಿ ಕುಳಿತ ವೀರ ವೇಗವಾಗಿ ಬಾಣವನ್ನು ಹೂಡಿದ್ದಾನೆ. ಕುದುರೆಯ ಮುಂಭಾಗದಲ್ಲಿ ಸ್ತ್ರಿಯೊಬ್ಬಳು ಹೆದರಿ ಭಯಪಟ್ಟು ನಿಂತಿರುವುದು ಕಂಡುಬರುತ್ತದೆ. ಕುದುರೆಯ ಹಿಂಭಾಗದಲ್ಲಿ ಮತ್ತೊಬ್ಬ ಸ್ತ್ರೀಯು ವಿವೇಕಚಿತ್ತದಿಂದ ದಿಟ್ಟಿಸಿ ನೋಡುತ್ತಿರುವಂತೆ ಶಿಲ್ಪವನ್ನು ಬಿಡಿಸಲಾಗಿದೆ. ಬಹುಶಃ ಅಸಹಾಯಕ ಸ್ತ್ರೀಯರ ಮೇಲೆ ಆಕ್ರಮಣ ಮಾಡುವಾಗ ಶತ್ರುಗಳನ್ನು ಧೈರ್ಯದಿಂದ ಎದುರಿಸುವಂತಹವಾಗಿದ್ದು, ಹೊಯ್ಸಳ ಶೈಲಿಗೆ ಅತ್ಯುತ್ತಮ ಮಾದರಿಗಳಾಗಿವೆ. ಅದೇ ಸ್ಥಳದ ಮತ್ತೊಂದು ವೀರಗಲ್ಲನ್ನು ಕುದುರೆಯ ಮೇಲೆ ಏರಿ ಕುಳಿತ ವೀರನು ಉದ್ದವಾದ ಈಟಿಯನ್ನು ಬಲಗೈಲಿ ಹಿಡಿದು ಬೀಸುವಂತೆ ಚಿತ್ರಿಸಿದ್ದಾರೆ. ಅಶ್ವಾರೂಢ ವೀರನ ಮುಂಭಾಗದಲ್ಲಿ ಸ್ತ್ರೀಯೊಬ್ಬಳನ್ನು ಚಿತ್ರಿಸಿ, ಭಯಪಟ್ಟು ಎರಡೂ ಕೈಗಳನ್ನು ಭುಜಭಾಗಕ್ಕೆ ಎತ್ತಿ ಅಸಹಾಯಕಳಾಗಿ ನಿಂತಿರುವಂತೆ ಕಾಣುತ್ತದೆ. ಇಲ್ಲಿಯ ವೀರ ಸ್ತ್ರೀಯ ಮೇಲೆ ಆಕ್ರಮಣ

ಮಾಡಲೋ ಅಥವಾ ಶತ್ರುಗಳನ್ನು ಹಿಮ್ಮೆಟ್ಟಿಸಲು ಸಿದ್ಧನಾಗಿರುವನೋ ಎಂಬುದನ್ನು ಊಹಿಸಲು ಗೊಂದಲವಾಗುತ್ತದೆ. ಒಟ್ಟಾರೆ ಶಿಲ್ಪದ ದೃಷ್ಟಿಯಿಂದ ಅಶ್ವವನ್ನು, ವೀರನನ್ನು ಮತ್ತು ಸ್ತ್ರೀಯನ್ನು ಅಲಂಕಾರಿಕವಾಗಿ ಶಿಲೆಯ ಮೇಲೆ ಶಿಲ್ಪಿ ಕಂಡರಿಸಿದ್ದಾನೆ.

ತಿಪ್ಪೂರು ಗ್ರಾಮದಲ್ಲಿ ಎರಡು ಹಂತದ ವೀರಮಾಸ್ತಿ ಶಿಲೆಯೊಂದರಲ್ಲಿ ಕೆಳಹಂತದಲ್ಲಿ ಇಬ್ಬರು ವೀರರನ್ನು ಹಾಗೂ ಇಬ್ಬರು ಸ್ತ್ರೀಯರನ್ನು ಆಯುಧಗಳನ್ನು ಹಿಡಿದು ಶತ್ರುಗಳ ಜೊತೆ ಹೋರಾಡುವಂತೆ ಕಾಣುತ್ತದೆ. ಎರಡನೆಯ ಹಂತದಲ್ಲಿ ವೀರ ಮಧ್ಯಭಾಗದಲ್ಲಿ ನಿಂತಿದ್ದು, ವೀರನ ಬಲಭಾಗಕ್ಕೆ ಸ್ತ್ರೀಯು ಏನನ್ನೋ ಬೇಡುವಂತೆಯೂ ವೀರನ ಎಡಭಾಗಕ್ಕೆ ಒಕ್ಕೈ ಶಿಲ್ಪವನ್ನು ಕಾಣಬಹುದು. ಇದೇ ಸ್ಥಳದ ಮತ್ತೊಂದು ವೀರಗಲ್ಲಿನ ಮೇಲ್ಭಾಗಲ್ಲಿ ಸೂರ್ಯ ಮತ್ತು ಚಂದ್ರರ ರೇಖಾಕೃತಿಯನ್ನು ಬಿಡಿಸಿದ್ದು, ಕೆಳಭಾಗದಲ್ಲಿ ವೀರನನ್ನು ಮತ್ತು ನರ್ತಿಸುವಂತೆ ಕಾಣುವ ಸ್ತ್ರೀಯನ್ನು ಬಿಡಿಸಲಾಗಿದೆ. ವೀರ ಮತ್ತು ಸ್ತ್ರೀಯ ಮಧ್ಯಭಾಗದಲ್ಲಿ ಉದ್ದವಾದ ಆಯುಧವೊಂದನ್ನು ಬಿಡಿಸಲಾಗಿದೆ. ವೀರ ಬಲಗೈಯಲ್ಲಿ ಈಟಿಯನ್ನು ಹಿಡಿದು ಎಡಗೈಯನ್ನು ಸೊಂಟದ ಮೇಲೆ ಇಟ್ಟುಕೊಂಡಿರುವಂತೆ ಶಿಲ್ಪವನ್ನು ಬಹಳ ಸುಂದರವಾಗಿ ಕೆತ್ತಿದ್ದಾನೆ.

ಮಾಡೇಶ್ವರ ಗ್ರಾಮದ ವೀರಗಲ್ಲೊಂದರಲ್ಲಿ ಎರಡು ಹಂತಗಳನ್ನು ಕಾಣಬಹುದು. ಕೆಳಹಂತದಲ್ಲಿ ವೀರನನ್ನು ಬಹಳ ದೊಡ್ಡದಾಗಿ ಚಿತ್ರಿಸಿ, ಶತ್ರುವಿನ ಸಂಹಾರಕ್ಕೆ ಹೊರಟಂತೆ ಕಾಣುತ್ತದೆ. ಮೇಲಿನ ಹಂತದಲ್ಲಿ ಶಿವಲಿಂಗ ಮತ್ತು ನಂದಿಯ ಶಿಲ್ಪಗಳಿದ್ದು, ಯತಿಯೊಬ್ಬ ಶಿವ ಮತ್ತು ನಂದಿಯ ಮುಂಭಾಗದಲ್ಲಿ ನಿಂತು ಪ್ರಾರ್ಥಿಸುತ್ತಿರುವಂತೆ ಇದ್ದು ಶಿಲ್ಪದ ದೃಷ್ಟಿಯಿಂದ ವಿಜಯನಗರ ಕಾಲಕ್ಕೆ ಸೇರಿದ್ದೆಂದು ಹೇಳಬಹುದು.

ಲಿಂಗನಹಳ್ಳಿ ಊರ ಹೊರಗಿನ ಮಂಟಪದ ಕೆಳಗೆ ಸುಮಾರು ಐದು ವೀರಶಾಸನ ಶಿಲ್ಪಗಳನ್ನು ನೋಡಬಹುದು. ಇವುಗಳೆಲ್ಲ ಒಂದೇ ಹಂತದಲ್ಲಿ ಕೆತ್ತಿರುವ ಶಿಲ್ಪಗಳಾಗಿವೆ. ಇವುಗಳು ಬಹು ಆಕರ್ಷಕವಾಗಿದ್ದು, ಬಿಡಿ ಬಿಡಿ ಭಾಗದ ಶಾಸನ ಶಿಲೆಯಲ್ಲಿ ಉದ್ದವಾದ ಮತ್ತು ಅಗಲವಾದ ಆಕಾರದಲ್ಲಿ ಶಿಲ್ಪವನ್ನು ಬಿಡಿಸಲಾಗಿದೆ. ಶಾಸನ ಶಿಲ್ಪದ ಮೇಲ್ಭಾಗದಲ್ಲಿ ಸೂರ್ಯ ಮತ್ತು ಚಂದ್ರರನ್ನು ಇವುಗಳ ಮಧ್ಯೆ ನಂದಿಯನ್ನು ಮತ್ತು ಶಿವಲಿಂಗವನ್ನು ಕೆತ್ತಿದ್ದಾರೆ. ಇವುಗಳ ಕೆಳಭಾಗದಲ್ಲಿ ಮೂವರು ಸ್ತ್ರೀಯರನ್ನು ಮತ್ತು ಒಬ್ಬ ವೀರಪುರುಷರನ್ನು ಕೆತ್ತಲಾಗಿದೆ. ಇಲ್ಲಿನ ವೀರನೊಬ್ಬ ಇತರ ಶಿಲ್ಪಗಳಿಂದ ಬಹುದೊಡ್ಡದಾಗಿ ಬಿಡಿಸಿದ್ದು, ಆಳೆತ್ತರದ ಬಿಲ್ಲನ್ನು ಹಿಡಿದು ಬಾಣವನ್ನು ಕೈಯಲ್ಲಿ ಹಿಡಿದಿದ್ದಾನೆ. ಬಿಲ್ಲಿನ ಬತ್ತಳಿಕೆ, ಬಾಣ ಮತ್ತು ಇವರು ಧರಿಸಿರುವ ಉಡುಪುಗಳು ಕಲಾತ್ಮಕವಾಗಿವೆ. ಶಿಲ್ಪಿಯು ವೀರನ ಆಕಾರಕ್ಕೆ ತಕ್ಕಂತೆ ಆಯುಧಗಳನ್ನು ದೊಡ್ಡದಾಗಿಯೇ ಬಿಡಿಸಿರುವುದು ಆಕರ್ಷಕವಾಗಿ ಕಂಡುಬರುತ್ತದೆ. ಇಲ್ಲಿನ ಮತ್ತೊಂದು ವೀರಮಾಸ್ತಿ ಶಿಲ್ಪದಲ್ಲಿ ವೀರನೊಬ್ಬ ಆಸೀನನಾಗಿ ಆತನ

ಎಡಭಾಗಕ್ಕೆ ಸ್ತ್ರೀಯು ಕುಳಿತಿರುವಳು. ವೀರನ ಕೈಯಲ್ಲಿ ಈಟಿ ಇದ್ದರೆ ಸ್ತ್ರೀ ಬಲಕೈಯಲ್ಲಿ ಹೂವನ್ನು ಹಿಡಿದು ಕುಳಿತಿದ್ದಾಳೆ. ಇವರ ಎರಡು ಕಡೆಗಳಲ್ಲಿ ಇಬ್ಬರು ಅಪ್ಸರೆಯರನ್ನು ಬಿಡಿಸಲಾಗಿದ್ದು ಬಹು ಸುಂದರವಾಗಿ ಶಿಲ್ಪಗಳನ್ನು ಚಿತ್ರಿಸಲಾಗಿದೆ.

ಇಲ್ಲಿಯೇ ಇನ್ನೂ ನಾಲ್ಕು ವೀರರ ಶಾಸನ ಶಿಲ್ಪಗಳನ್ನು ಕಾಣಬಹುದು. ವೀರನು ನಿಂತ ಭಂಗಿಯಲ್ಲಿದ್ದು ಕತ್ತಿಯನ್ನು ಮೇಲಕ್ಕೆ ಎತ್ತಿ ಶತ್ರುಗಳನ್ನು ಹೊಡೆಯಲು ಹೊರಟಿರುವಂತೆ ಬಿಡಿಸಲಾಗಿದೆ. ಮತ್ತೊಂದು ವೀರಗಲ್ಲೊಂದರಲ್ಲಿ ವೀರ ಉದ್ದವಾದ ಬಿಲ್ಲನ್ನು ಹಿಡಿದು ಬಾಣವನ್ನು ಹೂಡಲು ಮೇಲಕ್ಕೆತ್ತಿದ್ದಾನೆ. ಇದೇ ಸ್ಥಳದ ಮತ್ತೊಂದು ಶಿಲ್ಪದಲ್ಲೂ ಕೂಡ ಆಳೆತ್ತರದ ಬಿಲ್ಲು ಮತ್ತು ಬಾಣಗಳನ್ನು ಹಿಡಿದಿರುವಂತೆ ಶಿಲ್ಪಗಳನ್ನು ಬಿಡಿಸಲಾಗಿದ್ದು ಕನ್ನಡ ಜನ ಎಂದೂ ಹೇಡಿಗಳಾಗಿ ಬಾಳಿದವರಲ್ಲ ಎಂಬ ಸಂದೇಶವನ್ನು ಸಾರುವಂತಿವೆ ಈ ಶಿಲ್ಪಗಳು. ಇಲ್ಲಿಯ ಮತ್ತೊಂದು ಶಾಸನ ಶಿಲೆಯಲ್ಲಿ ವೀರ ಕತ್ತಿಯನ್ನು ಹಿಡಿದಿದ್ದು, ಎಡಗೈಯಲ್ಲಿ ಈಟಿಯನ್ನು ಹಿಡಿದಿರುವುದು ಕಂಡುಬರುತ್ತದೆ. ಶಿಲ್ಪದೃಷ್ಟಿಯಿಂದ ಹೊಯ್ಸಳ ಶಾಸನ ಶಿಲ್ಪಗಳೆಂದು ಹೇಳಬಹುದಾಗಿದೆ.

ಬಹು ಆಕರ್ಷಿತವಾದ ವೀರಗಲ್ಲೊಂದು ತಿಮ್ಮಸಂದ್ರ ಗ್ರಾಮದ ರಸ್ತೆಯ ಬದಿಯಲ್ಲಿದೆ. ಶಿಲ್ಪದ ಮೇಲ್ಭಾಗದಲ್ಲಿ ಲಿಂಗ ಮತ್ತು ನಂದಿಯ ಚಿತ್ರಗಳಿದ್ದು ಕೆಳಭಾಗದಲ್ಲಿ ವೀರ ಮತ್ತು ವೀರನ ಪತ್ನಿಯನ್ನು ಬಿಡಿಸಲಾಗಿದೆ. ಈ ಶಿಲ್ಪದಲ್ಲಿ ವೀರ ಈಟಿಯನ್ನು ಹಿಡಿದಿದ್ದು, ಸ್ತ್ರೀಯ ಕೈಯನ್ನು ಮೇಲಕ್ಕೆತ್ತಿ ಹರಸುವಂತೆ ಬಿಡಿಸಲಾಗಿದೆ. ಇಲ್ಲಿಯ ಶಿಲ್ಪಿಯು ವೀರನಷ್ಟೇ ಪ್ರಾಮುಖ್ಯತೆಯನ್ನು ಸ್ತ್ರೀಗೂ ನೀಡಿರುವುದು ಶಿಲ್ಪಿಯ ಕೈಚಳಕವನ್ನು ತೋರಿಸುತ್ತದೆ.

ಟಂಕಸಾಲ ಹೊಸಹಳ್ಳಿ ಗ್ರಾಮದ ಬಸವ ದೇವಾಲಯದ ಮುಂಭಾಗದಲ್ಲಿನ ಶಾಸನಶಿಲ್ಪಗಳು ಬಹು ಆಕರ್ಷಕವಾಗಿದ್ದು ಇಲ್ಲಿ ವೀರರನ್ನು ಪಾಳೇಯಗಾರರ ಕಾಲದ ಗೌಡಪ್ರಭುಗಳಂತೆ ಚಿತ್ರಿಸಿದ್ದಾರೆ. ಇಲ್ಲಿಯ ಶಾಸನ ಶಿಲ್ಪವೊಂದರಲ್ಲಿ ವೀರನೊಬ್ಬ ಕೈಮುಗಿದು ನಿಂತಿದ್ದು, ಎರಡೂ ಬದಿಯಲ್ಲಿ ಸ್ತ್ರೀಯರಿಬ್ಬರು ಕೈಮುಗಿದು ನಿಂತಿದ್ದಾರೆ. ವೀರನು ಬಿಲ್ಲನ್ನು ಭುಜಕ್ಕೆ ನೇತು ಹಾಕಿಕೊಂಡು ಬಾಣಗಳನ್ನು ಬತ್ತಳಿಕೆಯಲ್ಲಿ ತುಂಬಿರುವಂತೆ ಬಹಳ ಸುಂದರವಾಗಿ ಕಾಣುತ್ತದೆ. ಅವರು ಧರಿಸಿರುವ ಉಡುಪು, ಆಭರಣಗಳು ಆಕರ್ಷಕವಾಗಿದ್ದು ಕಲಾತ್ಮಕತೆಯಿಂದ ಕೂಡಿವೆ. ಇಲ್ಲಿನ ಮತ್ತೊಂದು ವೀರಗಲ್ಲೊಂದರಲ್ಲಿ ವೀರ ಕತ್ತಿಯನ್ನು ಮೇಲಕ್ಕೆತ್ತಿ, ಇನ್ನೊಂದು ಕೈಯಲ್ಲಿ ಭರ್ಜಿಯನ್ನು ಹಿಡಿದಿರುವುದು ಕಂಡುಬರುತ್ತದೆ. ವೀರ ತನ್ನ ತಲೆಗೂದಲನ್ನು ಕಟ್ಟಿ ಪೇಟವನ್ನು ಧರಿಸಿದ್ದಾನೆ. ಕಿವಿಯ ಓಲೆಗಳು, ಕಂಠೀಹಾರ, ಕೊರಳಮಾಲೆಗಳನ್ನು ಧರಿಸಿದ್ದು ಕತ್ತಿಯನ್ನು ಸೊಂಟಕ್ಕೆ ಸಿಕ್ಕಿಸಿಕೊಂಡಿದ್ದಾನೆ.

ಇಲ್ಲಿಯ ಮತ್ತೊಂದು ವೀರಗಲ್ಲಿನಲ್ಲಿ ವೀರನನ್ನು ಚಿತ್ರಿಸಿದ್ದು ಕತ್ತಿಯನ್ನು ಹಿಡಿದಿದ್ದಾನೆ. ಮತ್ತೊಂದು ಕೈಯನ್ನು ಸೊಂಟದ ಮೇಲೆ ನಿಲ್ಲಿಸಿದ್ದಾನೆ. ಇಲ್ಲಿಯೂ ಸಹ ಶಿಲ್ಪಿಯು ಅಂದವಾದ

ಎಲೆಯ ಆಕಾರದ ರೇಖೆಗಳನ್ನು ಶಾಸನಶಿಲೆಯ ಮೇಲೆ ಬಿಡಿಸಿದ್ದು, ಅಲಂಕೃತವಾಗಿ ಶಿಲ್ಪವನ್ನು ಬಿಡಿಸಲಾಗಿದೆ. ಇವುಗಳು ಹದಿನೈದನೆಯ ಶತಮಾನಕ್ಕೆ ಸೇರಿದ ಶಿಲ್ಪಗಳೆಂದು ಹೇಳಬಹುದು.

ರಾಷ್ಟ್ರಕೂಟರ ಕಾಲಕ್ಕೆ ಸೇರಿದ ಅಪ್ರಕಟಿತ, ಲಿಪಿ ಸಹಿತ ವೀರಗಲ್ಲೊಂದು ಹಾದ್ರಿಪುರದ ನಾಲ್ಕು ಕಣ್ಣಿನ ಭಾವಿಯ ಮುಂಭಾಗದಲ್ಲಿದೆ. ವೀರನು ಬಿಲ್ಲು ಮತ್ತು ಬಾಣವನ್ನು ಹಿಡಿದಿದ್ದು, ಶತ್ರುವನ್ನು ಅಟ್ಟಿಸಿಕೊಂಡು ಹೋಗುತ್ತಿರುವಂತೆ ಚಿತ್ರವನ್ನು ಬಿಡಿಸಲಾಗಿದೆ. ಇಲ್ಲಿನ ಬಹುತೇಕ ವೀರಗಲ್ಲುಗಳನ್ನು ಗಮನಿಸಿದಾಗ ಶಿವ, ನಂದಿ ಶಿಲ್ಪಗಳು ಹೆಚ್ಚಾಗಿ ಕಾಣಿಸಿಕೊಳ್ಳುತ್ತವೆ. ಶೈವ ಮತ್ತು ವೈಷ್ಣವ ಧರ್ಮಗಳು ಪ್ರಬಲವಾಗಿ, ಅದರ ಪ್ರಭಾವ ಶಾಸನಶಿಲ್ಪಗಳ ಮೇಲೂ ಮೂಡಿದಂತೆ ತೋರುತ್ತದೆ.

ವಾಣಿಗರಹಳ್ಳಿಯಲ್ಲಿನ ವೀರಗಲ್ಲು ಗ್ರಾಮಸ್ಥರ ಪಾಲಿಗೆ ದೈವೀಪುರುಷ ಸ್ಥಾನವನ್ನು ಪಡೆದುಕೊಂಡಿದೆ. ಊರಿನ ಜನರು ಈ ವೀರಗಲ್ಲಿಗೆ ಪೂಜೆಯನ್ನು ಸಲ್ಲಿಸುತ್ತಿದ್ದಾರೆ. ಈ ಶಾಸನಶಿಲ್ಪದಲ್ಲಿ ವೀರನನ್ನು ಬಹಳ ಸ್ಪಷ್ಟವಾಗಿ ಕಾಣುವಂತೆ ಚಿತ್ರಿಸಿದ್ದಾರೆ. ವೀರನ ತಲೆಯ ಮೇಲ್ಭಾಗದಲ್ಲಿ ಲಕ್ಷ್ಮೀಯ ಚಿತ್ರವನ್ನು ಬಿಡಿಸಿರುವುದು ಸೋಜಿಗವೆನಿಸುತ್ತದೆ. ಶಿಲ್ಪಿಯು ಇಲ್ಲಿಯ ವೀರನನ್ನು ಬಿಲ್ಲನ್ನು ಹಿಡಿದು, ಬಾಣವನ್ನು ಹೂಡಲು ಅನುವಾಗುತ್ತಿರುವಂತೆ ಕಂಡರಿಸಿದ್ದಾನೆ. ವೀರ ತಲೆಯ ಮುಡಿಯನ್ನು ಕಟ್ಟಿದಂತೆ ಕಾಣುತ್ತದೆ. ಅಲ್ಲದೆ ವೀರನು ತೊಟ್ಟಿರುವ ಉಡುಪು ಪಚ್ಚೆ ಕಂಚೆಯಂತೆ ಕಾಣುತ್ತದೆ. ಈ ಕಚ್ಚೆ ಪಂಚೆಯು ಇಳಿಬಿದ್ದಿದ್ದು, ನೆರಿಗೆಯಂತೆ ಕಂಗೊಳಿಸುತ್ತದೆ. ಚಿಕ್ಕವಡಗೆರೆ ಗ್ರಾಮದಲ್ಲಿಯ ಒಂದು ವೀರಗಲ್ಲಿನಲ್ಲಿ ವೀರನನ್ನು ಕಲಾತ್ಮಕವಾಗಿ ಚಿತ್ರಿಸಲಾಗಿದೆ. ವೀರನು ಎಡಭಾಗದ ಕೈಯನ್ನು ಸೊಂಟದ ಮೇಲಿಟ್ಟುಕೊಂಡು ನಿಂತಿರುವನು. ಬಲಗೈಯಲ್ಲಿ ಕತ್ತಿಯನ್ನು ಎತ್ತಿ ಹಿಡಿದಿದ್ದಾನೆ. ತೊಟ್ಟಿರುವ ಉಡುಗೆಯು ಅಲಂಕಾರಯುತವಾಗಿ ಕಾಣುತ್ತಿದ್ದು, ಕಾಲಿಗೆ, ಸೊಂಟಕ್ಕೆ, ಕುತ್ತಿಗೆಗೆ ಸರವನ್ನು ತೊಟ್ಟಿರುವುದು ವಿಶೇಷವಾಗಿದೆ. ಇದೇ ರೀತಿಯ ಮತ್ತೊಂದು ವೀರಗಲ್ಲೊಂದು ಶಾಕಲದೇವನಪುರ ಗ್ರಾಮದಲ್ಲಿದೆ.

ಮಧುರೆ ಗ್ರಾಮದ ಪಕ್ಕದಲ್ಲಿ ಹುಲಿತಿಮ್ಮನಕಟ್ಟೆ ಬಳಿ ಎರಡು ವೀರಗಲ್ಲುಗಳನ್ನು ಕಾಣಬಹುದು. ಈ ವೀರಗಲ್ಲುಗಳ ಬಗ್ಗೆ ಸ್ಥಳೀಯರು ಹೇಳುವ ಕಥೆ ಸ್ವಾರಸ್ಯಕರವಾದುದು. ಈ ಗ್ರಾಮದಲ್ಲಿ ತಿಮ್ಮ ಎಂಬ ಹೆಸರಿನ ವ್ಯಕ್ತಿಯಿದ್ದ, ಈತನಿಗೆ ಒಬ್ಬ ತಂಗಿಯೂ ಇದ್ದಳು. ಈ ಹೆಣ್ಣು ಮಗಳು ಒಂದು ದಿನ ದೊಡ್ಡವಳಾದಾಗ (ಋತುಮತಿಯಾದಾಗ) ಮನೆಯಾಕೆ, ಕುಂಟೆಯನ್ನು ತೆಗೆಯಲು ಮಣ್ಣನ್ನು ಕಟ್ಟೆಗೆ ಹಾಕುತ್ತಿದ್ದ ತಿಮ್ಮನಲ್ಲಿಗೆ ಬಂದು ಸುದ್ಧಿಯನ್ನು ಹೇಳುತ್ತಾಳೆ. ಈ ಸುದ್ದಿಯನ್ನು ಕೇಳಿ ತಿಮ್ಮ ಕಟ್ಟೆಯ ಮೇಲಿಂದ ಹುಲಿಯಂತೆ ಹಾರಿ ಪ್ರಾಣವನ್ನು ಬಿಡುತ್ತಾನೆ. ಅಂದಿನಿಂದ ಆ ಕುಂಟೆಗೆ ಹುಲಿ ತಿಮ್ಮನ ಕಟ್ಟೆ ಎಂದೂ, ಕಲ್ಲಿನ ಮೇಲಿರುವ ವ್ಯಕ್ತಿಯನ್ನು ತಿಮ್ಮನೆಂದೂ, ಮಹಿಳೆಯ

ಚಿತ್ರವನ್ನು ಹೆಣ್ಣು ಮಗಳು ಎಂದು ಸ್ಥಳೀಯರು ಹೇಳುತ್ತಾರೆ. ಆದರೆ ವಾಸ್ತವಿಕವಾಗಿ ಶಿಲ್ಪದಲ್ಲಿನ ಸ್ತ್ರೀ ಮತ್ತು ಪುರುಷನಿಗೂ, ಸ್ಥಳೀಯರು ಹೇಳುವ ಈ ಕತೆಗೂ ಯಾವುದೇ ಹೋಲಿಕೆ ಕಂಡುಬರುವುದಿಲ್ಲ. ಇದೊಂದು ವೀರ ಮಾಸ್ತಿಕಲ್ಲು ಎಂಬುದು ಸ್ಪಷ್ಟವಾಗಿ ತಿಳಿಯುತ್ತದೆ. ಇಲ್ಲಿನ ವೀರ ಮತ್ತು ಸ್ತ್ರೀಯನ್ನು ಒಂದೇ ಪ್ರಮಾಣಬದ್ಧವಾಗಿ ಚಿತ್ರಿಸಲಾಗಿದೆ. ವೀರ ಬಿಲ್ಲನ್ನು ಹಿಡಿದು ಬಾಣವನ್ನು ಹೂಡುವ ತವಕದಲ್ಲಿದ್ದಾನೆ. ಸ್ತ್ರೀಯು ಬಲಗೈಯಲ್ಲಿ ಹೂವನ್ನು ಹಿಡಿದು ನಿಂತಿರುವುದನ್ನು ಚಿತ್ರಿಸಲಾಗಿದೆ. ವೀರ ತಲೆಯ ಮೇಲೆ ಪೇಟವನ್ನು ಧರಿಸಿದಂತೆಯೂ ಕಾಲಿಗೆ ಕಡಗಗಳನ್ನು ಹಾಕಿರುವುದನ್ನು ಶಿಲ್ಪಿಯೂ ಬಹಳ ಸುಂದರವಾಗಿ ಕಂಡರಿಸಿದ್ದಾನೆ.

ಬೂಚನಹಳ್ಳಿ ಗ್ರಾಮದ ಹೊರವಲಯದಲ್ಲೂ ಇದೇ ರೀತಿಯ ವೀರಗಲ್ಲು ಕಂಡುಬರುತ್ತದೆ. ಇಲ್ಲಿನ ವೀರಗಲ್ಲಿನ ಮೇಲ್ಭಾಗದಲ್ಲಿ ಸೂರ್ಯ ಮತ್ತು ಚಂದ್ರರನ್ನು ರೇಖೆಯಲ್ಲಿ ಬಿಡಿಸಲಾಗಿದ್ದು, ವೀರನನ್ನು ಅತ್ಯಂತ ಎತ್ತರದ ವ್ಯಕ್ತಿಯಂತೆ ಮತ್ತು ಬಿಲ್ಲನ್ನು ಆಳೆತ್ತರಕ್ಕೆ ಚಿತ್ರಿಸಿದ್ದಾನೆ. ಇಲ್ಲಿ ವೀರನ ಉಡುಪು ಕಚ್ಚೆಯಂತೆ ಬಿಡಿಸಿದ್ದಾನೆ. ನೆರಿಗೆಯಂತೆ ಬಿಡಿಸಿರುವ ಈತನ ಉಡುಪು ಆಧುನಿಕತೆಯ ಸಂಕೇತದಂತೆ ಕಂಡುಬರುತ್ತದೆ. ಎರಡೂ ಕಾಲಿಗೂ ಕಡಗಗಳನ್ನು ಧರಿಸಿದ್ದು, ಕೊರಳಿಗೆ ಹಾರವನ್ನು ಧರಿಸಿದ್ದಾನೆ. ಇಲ್ಲಿಯ ಮತ್ತೊಂದು ವೀರಗಲ್ಲಿನಲ್ಲಿ ವೀರನು ಕತ್ತಿಯನ್ನು ಶತ್ರುಗಳ ವಿರುದ್ಧ ಹೋರಾಡಲು ಸಜ್ಜಾಗಿರುವಂತೆ ಚಿತ್ರಿಸಲಾಗಿದೆ. ಬಲಭಾಗದ ಕೈಯಲ್ಲಿ ನಾಗನನ್ನು ಹಿಡಿದು ನಿಂತಿರುವುದು ಕಂಡುಬರುತ್ತದೆ. ಈ ಶಿಲ್ಪಗಳಲ್ಲಿ ವೀರನಿಗೆ ಹೆಚ್ಚು ಪ್ರಾಮುಖ್ಯತೆಯಿದ್ದು ಸ್ತ್ರೀ ಶಿಲ್ಪಗಳಿಗೆ ಕಡಿಮೆ ಪ್ರಾಧಾನ್ಯತೆಯನ್ನು ನೀಡದೆ ಇಬ್ಬರನ್ನೂ ಸರಿ ಸಮಾನವಾಗಿ ಚಿತ್ರಿಸಲಾಗಿದೆ. ಈ ರೀತಿಯಾದ ಶಿಲ್ಪಗಳು ತಾಲೂಕಿನಲ್ಲಿ ಅಧಿಕವಾಗಿ ದೊರೆಯುತ್ತವೆ. ಇದಕ್ಕೆ ಭಿನ್ನವಾದ ಒಂದು ವೀರ ಮಾಸ್ತಿಗಲ್ಲು ವಡಗೆರೆ ಗ್ರಾಮದ ಹೊರವಲಯದಲ್ಲಿ ದೊರೆತಿದೆ. ಈ ಶಿಲ್ಪದಲ್ಲಿ ವೀರನನ್ನು ದೊಡ್ಡಪ್ರಮಾಣದ ಬಾಣ ಮತ್ತು ಬಿಲ್ಲು ಹಿಡಿದಿರುವಂತೆ ಚಿತ್ರಿಸಿದ್ದು, ಸ್ತ್ರೀಯನ್ನು ಅತ್ಯಂತ ಸಣ್ಣ ಪ್ರಮಾಣದಲ್ಲಿ ಚಿತ್ರಿಸಿರುವುದು ಕಂಡುಬರುತ್ತದೆ. ಪುರುಷನಹಳ್ಳಿ ಗ್ರಾಮದಲ್ಲಿನ ಒಂದು ವೀರಗಲ್ಲು ಪ್ರಮಾಣಬದ್ಧ ರೀತಿಯಲ್ಲಿ ಚಿತ್ರಿಸಿರುವುದನ್ನು ಕಾಣುತ್ತೇವೆ. ಇಲ್ಲಿಯ ವೀರ ಬಲಗೈಯಲ್ಲಿ ಕತ್ತಿಯನ್ನು ಮೇಲೆ ಎತ್ತಿ ಹಿಡಿದು ಎಡಗೈಯಲ್ಲಿ ಆಯುಧವಾದ ಗುರಾಣಿಯನ್ನು ಹಿಡಿದಿರುವಂತೆ ಕೆತ್ತಲಾಗಿದೆ. ವೀರ ಪುರುಷನ ಮುಖದಲ್ಲಿ ವೀರಪೌರುಷವು ವ್ಯಕ್ತವಾಗಿರುವಂತೆ ಬಿಡಿಸಿರುವುದು ಶಿಲ್ಪಿಯ ಕೈಚಳಕವು ಇಲ್ಲಿ ಎದ್ದು ಕಾಣುತ್ತದೆ. ಕಾಲುಗಳಿಗೆ ಕಡಗಗಳನ್ನು ಹಾಕಿ, ವೀರಗಚ್ಚೆಯುಟ್ಟ ವೀರ, ಮಹಾಪರಾಕ್ರಮಿ ಯಂತೆ ಚಿತ್ರಿತನಾಗಿದ್ದಾನೆ.

**ತುರುಗೋಳ್ ವೀರಗಲ್ಲು**

ವೀರಶಾಸನ ಶಿಲ್ಪದ ಒಂದು ಪ್ರಕಾರವಾದ ತುರುಗೋಳ್ ಶಾಸನಶಿಲ್ಪದ ಮಾತು ರನ್ನ ಕವಿಯು ಬರೆದಿರುವ ಗದಾಯುದ್ಧ ಕೃತಿಯಲ್ಲಿ ಈ ರೀತಿಯಾಗಿ ಹೇಳುತ್ತಾನೆ.

ತುಱುಗೋಳೊಳ್ ಪೆಣ್ಬುಯ್ಯಲೊ
ಳೆಱೆವೆಸದೊಳ್ ನಂಟನೆಡಱೊಳೂರಳಿನೊಳಂ
ತಱಿಸಂದು ಗಂಡುತನಮನೆ
ನೆರಪದವಂ ಗಂಡನಲ್ಲನೆಂತುಂ ಷಂಡಂ[೧೫]

ಈ ಪದ್ಯದಲ್ಲಿ ತುರುಗಳನ್ನು ರಕ್ಷಣೆ ಮಾಡುವುದು, ಸ್ತ್ರೀಯರ ಮಾನವನ್ನು ಕಾಪಾಡುವುದು, ಊರುಗಳನ್ನು ರಕ್ಷಣೆ ಮಾಡುವುದು ಪುರುಷರ ಅಥವಾ ಗಂಡಸರ ಪರಮ ಕರ್ತವ್ಯವಾಗಿತ್ತೆಂಬ ಅಂಶ ತಿಳಿದುಬರುತ್ತದೆ. ಯಾವ ಕಾರಣದಿಂದಲಾದರೂ ಶತ್ರು ಪಡೆಯವರು ದನಕರುಗಳನ್ನು ಅಪಹರಿಸಿದಾಗ ಆ ದನಗಳನ್ನು ರಕ್ಷಿಸಿಕೊಳ್ಳಲು ತನ್ನ ಪ್ರಾಣವನ್ನು ಲೆಕ್ಕಿಸದೆ ಹೋರಾಡುತ್ತಿದ್ದರು. ಒಂದು ವೇಳೆ ಆ ಹೋರಾಟದಲ್ಲಿ ಹಲವು ವೀರರು ವಿಜಯಿಯಾಗಿ ಹಿಂತಿರುಗಿ ಬಂದರೆ ಮತ್ತೆ ಕೆಲವರು ಸಾವನಪ್ಪುತ್ತಿದ್ದರು. ಇಂತಹ ವೀರರ ನೆನಪಿಗಾಗಿ ನೆಟ್ಟಂತಹ ವೀರಗಲ್ಲುಗಳನ್ನು ನಾವುಗಳು ನೋಡಬಹುದು. ವೀರಗಲ್ಲುಗಳ ಹೋರಾಟದ ಹಂತದ ಶಿಲ್ಪದಲ್ಲಿ ಯಾವುದಾದರೂ ಒಂದು ಕಡೆಯಲ್ಲಿ ದನಗಳು ನಿಂತಿರುವುದನ್ನು ಚಿತ್ರಿಸಿರುತ್ತಾರೆ. ಪ್ರಾರಂಭದ ವೀರಗಲ್ಲುಗಳಲ್ಲಿ ವೀರನಹತ್ತಿರ ಸಣ್ಣದಾಗಿ ದನಗಳ ಚಿತ್ರಗಳನ್ನು ಬಿಡಿಸುವ ಪರಿಪಾಟವಿತ್ತು. ಆಗ ಒಂದೇ ಹಂತದಲ್ಲಿ ಶಿಲ್ಪವಿರುತ್ತಿತ್ತು. ನಂತರದ ಕಾಲದ ವೀರಗಲ್ಲುಗಳಲ್ಲಿ ಎರಡರಿಂದ ನಾಲ್ಕು ಹಂತದವರಗಿನ ಶಿಲ್ಪಗಳಲ್ಲಿ ಹೋರಾಟದ ಹಂತದಲ್ಲಿ ದನಗಳು ಸಾಲಾಗಿ ನಿಂತುಕೊಂಡಿರುವಂತೆ ಚಿತ್ರಿಸಿರುತ್ತಾರೆ. ತಾಲ್ಲೂಕಿನಲ್ಲಿ ಒಂದೇ ಹಂತದ ತುರುಗೋಳ್ ವೀರಗಲ್ಲೊಂದು ಹುಲುಕುಂಟೆ ರಸ್ತೆಬದಿಯಲ್ಲಿ ಇದೆ.

ಈ ವೀರಗಲ್ಲಿನಲ್ಲಿ ವೀರನನ್ನು ದೊಡ್ಡದಾಗಿ ಚಿತ್ರಿಸಿ ಅವನ ಮುಂಭಾಗದ ಮತ್ತು ಹಿಂಭಾಗದಲ್ಲಿ ದನಗಳನ್ನು ಚಿಕ್ಕದಾಗಿ ಚಿತ್ರಿಸಲಾಗಿದೆ. ವೀರನನ್ನು ಗಟ್ಟಿಮುಟ್ಟಾದ ದೇಹವನ್ನು ಹೊಂದಿರುವಂತೆ ಚಿತ್ರಿಸಿದ್ದು, ಎಡಗೈಯ ಮುಷ್ಟಿ ಹಿಡಿದಂತೆ ಬಲಗೈಯಲ್ಲಿ ಭರ್ಜಿಯನ್ನು ಅಥವಾ ಈಟಿಯನ್ನು ಹಿಡಿದು ಶತ್ರುಗಳ ಮೇಲೆ ಮುನ್ನುಗ್ಗುತ್ತಿರುವಂತೆ ಚಿತ್ರಿಸಲಾಗಿದೆ. ಈ ವೀರಗಲ್ಲಿನ ಒಂದು ವಿಶೇಷವೆಂದರೆ, ವೀರ ತನ್ನುದ್ದ ಜಡೆಯನ್ನು ಬಿಟ್ಟಿರುವುದನ್ನು ಅತ್ಯಾಕರ್ಷಕವಾಗಿ ಬಿಡಿಸಿದ್ದಾರೆ. ವೀರನ ಮುಂಭಾಗದಲ್ಲಿ ಐದು ದನಗಳನ್ನು ವೀರನ ಹಿಂಭಾಗದಲ್ಲಿ ಮೂರು ದೊಡ್ಡ ಗಾತ್ರದ ದನಗಳ ಚಿತ್ರಣವಿದೆ. ಈ ಶಿಲ್ಪಗಳಿಂದ ಶತ್ರುಗಳು ದನಗಳನ್ನು ಅಪಹರಣ ಮಾಡುತ್ತಿದ್ದರೆಂದು ತಿಳಿದುಬರುತ್ತದೆ. ಆದರೆ ಈ ವೀರಗಲ್ಲಿನಲ್ಲಿ ಶತ್ರುಗಳ ಚಿತ್ರಣವಿಲ್ಲ. ಒಂದು ಹಂತದ, ಎರಡು ಹಂತದ, ಮೂರು ಹಂತದ ಶಿಲ್ಪಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹೊಸಕೋಟೆ ತಾಲ್ಲೂಕಿನ ಹೆಡಗೇನಹಳ್ಳಿ, ನೆಲಮಂಗಲ ತಾಲ್ಲೂಕಿನ ಬೇಗೂರು, ಉತ್ತರ ಕನ್ನಡ ಜಿಲ್ಲೆಯ ಶಿರಸಿ ತಾಲ್ಲೂಕಿನ ಬನವಾಸಿ, ಮಾಗಡಿ ತಾಲ್ಲೂಕಿನ ತಾವರೆಕೆರೆ ಇನ್ನು ಮುಂತಾದ ಕಡೆಗಳಲ್ಲಿಯೂ ಕಾಣಬಹುದು. ಕ್ರಿ.ಶ.೯೧೮ರ ಜಕ್ಕಸಂದ್ರ ಗ್ರಾಮದ ಎರಡು ಶಾಸನಗಳಲ್ಲಿ ಗೋಗ್ರಹಣದ ಪ್ರಸ್ತಾಪ

ಬರುತ್ತದೆ.[೧೬] ಬಯ್ಯಪದೇವನ ಮಗನಾದ ಬಸವಸೆಟ್ಟಿ, ಈತನ ಮಗನಾದ ಚಬ್ಬಿಸೆಟ್ಟಿಯರು ಗೋಗ್ರಹಣ ಕಾಲದಲ್ಲಿ ಶತ್ರುಗಳಿಂದ ದನಗಳನ್ನು ರಕ್ಷಿಸಲು ಹೋಗಿ, ಶತ್ರುಗಳ ಪಡೆಗೆ ಸಿಕ್ಕಿ ಸಾಯುವರು. ಇದೇ ಕಾಲದ ಮತ್ತೊಂದು ಶಾಸನವು ಚಬ್ಬಿಸೆಟ್ಟಿಯ ತಮ್ಮ ಮಣಿಯಮಸೆಟ್ಟಿಯರು ಶತ್ರುಗಳಿಂದ ಸಾವನ್ನಪ್ಪಿ ಸ್ವರ್ಗಕ್ಕೆ ಹೋದರು ಎಂಬುದನ್ನು ಪ್ರಸ್ತಾಪಿಸುತ್ತದೆ.

## ವ್ಯಕ್ತಿ ಮತ್ತು ಪ್ರಾಣಿ ಹೋರಾಟ ಶಿಲ್ಪ

ಪೂರ್ವಕಾಲದಿಂದಲೂ ತನ್ನ ಮನರಂಜನೆಗಾಗಿಯೋ, ಆಹಾರಕ್ಕಾಗಿಯೋ, ಮೋಜಿಗಾಗಿಯೋ, ಕಾಲ ಕಳೆಯಲೋ ಅಥವಾ ತಮ್ಮ ಶೌರ್ಯ ಪ್ರದರ್ಶನಕ್ಕಾಗಿಯೋ ಮಾನವನು ಪ್ರಾಣಿಗಳನ್ನು ಬೇಟೆಯಾಡುವುದು ರೂಢಿಯಲ್ಲಿದ್ದಿತು. ಹಲವಾರು ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ರಾಜ-ಮಹಾರಾಜರು ಮತ್ತು ಇತರರು ಬೇಟೆಯಾಡುತ್ತಿದ್ದ ವಿಧಾನಗಳು, ಅದರ ವೈಭವಗಳ ವರ್ಣನೆಯಿದೆ.

ಶಾಸನ ಶಿಲ್ಪದಲ್ಲಿ ಪ್ರಾಣಿಗಳ ಬೇಟೆಯಾಡುವ ಚಿತ್ರಗಳು ನಮಗೆ ಕಂಡುಬರುತ್ತವೆ. ಇದಕ್ಕೆ ಕಾರಣಗಳು ಹಲವು ಇರಬಹುದು. ಕೆಲವು ಪ್ರಾಣಿಗಳು ಊರಿಗೆ ನುಗ್ಗಿ, ಜನಗಳಿಗೆ, ದನಗಳಿಗೆ ತೊಂದರೆ ಕೊಡುವುದಲ್ಲದೆ ಕಷ್ಟದಿಂದ ಬೆಳೆದ ಬೆಳೆಗಳನ್ನು ನಾಶಪಡಿಸುತ್ತವೆ. ಇಂದಿಗೂ ಇದನ್ನು ನಾವು ಕಾಣುತ್ತೇವೆ. ಇಂತಹ ಪ್ರಾಣಿಗಳ ಕಾಟವನ್ನು ತಡೆಯಲಾರದೆ ಅವನ್ನು ಬೇಟೆಯಾಡಿ ಕೊಂದು ಹಾಕಿದ ಘಟನೆಗಳನ್ನು ತಿಳಿಸುವ ಶಾಸನಗಳು ನಮ್ಮಲ್ಲಿ ದೊರೆಯುತ್ತವೆ. ಈ ರೀತಿಯಾಗಿ ಮರಣವನ್ನು ಹೊಂದಿದವರನ್ನು ಕೂಡಾ ಜನರು ವೀರಪುರುಷರು ಎಂದು ನಂಬಿದ್ದರು. ಇವರಿಗೂ ಸಹ ವೀರಗಲ್ಲುಗಳನ್ನು ನೆಡುವ ಪದ್ಧತಿ ಬೆಳೆದು ಬಂದಿತು ಎನ್ನಬಹುದು. ಶಾಸನಶಿಲ್ಪ ಕ್ಷೇತ್ರದಲ್ಲಿ ಹಂದಿಬೇಟೆ, ಹುಲಿಬೇಟೆ, ಆನೆಬೇಟೆ ಹಾಗೂ ಇತರ ಪ್ರಾಣಿಗಳ ಜೊತೆ ಬೇಟೆಯಾಡಿದ ಶಿಲ್ಪಗಳನ್ನು ನೋಡಬಹುದು. ಇವುಗಳಲ್ಲಿ ಶಿಲ್ಪದ ಭಾಗ ಪ್ರಧಾನವಾಗಿ ಪ್ರಾಮುಖ್ಯತೆಯನ್ನು ಹೊಂದಿದ್ದು, ಬರಹರಹಿತವಾಗಿರುತ್ತವೆ. ಬರಹವಿದ್ದರೂ ಬಹಳ ಸಂಕ್ಷಿಪ್ತವಾಗಿದ್ದು, ನಮ್ಮ ಮನಸ್ಸನ್ನು ಸೆಳೆಯುತ್ತವೆ.

ಹಂದಿಬೇಟೆ ಶಾಸನ ಶಿಲ್ಪವೊಂದು ದೊಡ್ಡ ಹೆಜ್ಜಾಜಿ ಗ್ರಾಮದಲ್ಲಿ ಕಾಣಬಹುದು. ಹಂದಿಯು ರೈತನ ಪರಮಶತ್ರು, ರಾತ್ರಿಯ ವೇಳೆ ಹೊಲ ಮತ್ತು ಗದ್ದೆಗಳಿಗೆ ನುಗ್ಗಿ ಬೆಳೆಯನ್ನು ತಿಂದು ಮುಗಿಸುತ್ತವೆ. ಆದರೆ ಅವು ತಿನ್ನುವುದಕ್ಕಿಂತಲೂ ಹಾಳು ಮಾಡುವುದೇ ಹೆಚ್ಚು. ಹಂದಿಯ ಮಾಂಸವನ್ನು ಕೆಲವರು ಆಹಾರಕ್ಕಾಗಿ ಬಳಸುವರು. ಹೀಗೆ ಹಂದಿಬೇಟೆಯಾಡುವ ಹಾಗು ಬೇಟೆಯಾಡಲು ಹೋಗಿ ಪ್ರಾಣವನ್ನು ಕಳೆದುಕೊಂಡ ವಿಷಯವನ್ನು ತಿಳಿಸುವ ಶಾಸನಶಿಲ್ಪಗಳು ನಮ್ಮಲ್ಲಿ ದೊರೆಯುತ್ತವೆ.

ಕ್ರಿ.ಶ.೧೧ನೆಯ ಶತಮಾನದ ಹಂದಿಬೇಟೆ ವೀರಗಲ್ಲೊಂದು ದೊಡ್ಡಹೆಜ್ಜಾಜಿ ಗ್ರಾಮದ ಚನ್ನಕೇಶವ ದೇವಾಲಯದ ಮಾಳಿಗೆಗೆ ತುಂಡರಿಸಿ ಹಾಕಲಾಗಿದೆ. ಇದರ ಸ್ವಲ್ಪಭಾಗ ಮಾತ್ರ ಉಳಿದಿದೆ. ಹಂದಿಯ ನಿತಂಬದ ಭಾಗವನ್ನು ಮತ್ತು ಅದನ್ನು ಕಚ್ಚುತ್ತಿರುವ ನಾಯಿಯೊಂದರ ಶಿಲ್ಪವನ್ನು ಕಾಣಬಹುದಾಗಿದೆ. ನಾಯಿಯು ಈಗಿನ ಮುಧೋಳ ಜಾತಿ ನಾಯಿಯ ಆಕಾರವನ್ನು ಹೋಲುತ್ತಿದೆ.[೧೭] ನಾಯಿ ಮತ್ತು ಹಂದಿಗಳ ಹೋರಾಟದ ಶಿಲ್ಪವನ್ನುಳ್ಳ ಶಾಸನಗಳನ್ನು ಶಾಸನ ಶಿಲ್ಪ ಕ್ಷೇತ್ರವನ್ನು ಒಮ್ಮೆ ಅವಲೋಕಿಸಿ ನೋಡಿದಾಗ ಅವೆರಡು ಆಕಸ್ಮಿಕವಾಗಿ ಒಂದೊನ್ನೊಂದು ನೋಡಿ ಹೋರಾಟಕ್ಕೆ ಇಳಿದಿರಬಹುದು. ಈ ನಾಯಿಯು ಸಾಕಿದ ನಾಯಿಯೋ ಅಥವಾ ಬೀದಿ ನಾಯಿಯೋ ಎಂಬುದು ಮಾತ್ರ ಸ್ಪಷ್ಟವಾಗಿ ತಿಳಿಯುವುದಿಲ್ಲ.

ಹುಲಿಬೇಟೆಯನ್ನು ಬಹಳಷ್ಟು ಧೈರ್ಯಶಾಲಿಯಾದವನು ಮಾತ್ರ ಹುಲಿಯನ್ನು ಬೇಟೆಯಾಡಲು ಸಾಧ್ಯ. ಈತನಿಗೆ ಎಂಟೆದೆ ಭಂಟನಷ್ಟು ಧೈರ್ಯವಿರಬೇಕಾಗುತ್ತದೆ. ಹಂದಿಯನ್ನು ಸುಲಭವಾಗಿ ಕೊಲ್ಲುವಷ್ಟು, ಹುಲಿಯನ್ನು ಕೊಲ್ಲಲು ಸಾಧ್ಯವಿಲ್ಲ ಏಕೆಂದರೆ ಹುಲಿಯು ಮನುಷ್ಯನಿಗಿಂತಲೂ ಬಲಿಷ್ಟವಾದ ಪ್ರಾಣಿ ಇಂತಹ ಪ್ರಾಣಿಯ ಜೊತೆ ಹೋರಾಡುವುದು ಸುಲಭದ ಮಾತೇನಲ್ಲ ಇಂತಹ ಬಲಿಷ್ಟವಾದ ಪ್ರಾಣಿಯ ಜೊತೆ ಹೋರಾಡಿದ ವಿಷಯವನ್ನು ತಿಳಿಸುವ ಬಹಳಷ್ಟು ವೀರಗಲ್ಲುಗಳು ಶಾಸನಶಿಲ್ಪ ಪ್ರಪಂಚದಲ್ಲಿ ದೊರೆಯುತ್ತವೆ. ಇದಕ್ಕೆ ಪೂರಕವಾಗಿ ತಾಲ್ಲೂಕಿನಲ್ಲೂ ಒಂದು ಹಂತದ ವೀರಗಲ್ಲುಗಳು ಸಾಕ್ಷಿಯಾಗಿವೆ. ಕ್ರಿ.ಶ.೧೧ನೆಯ ಶತಮಾನಕ್ಕೆ ಸೇರಿದ ಎರಡು ಹುಲಿಬೇಟೆ ವೀರಗಲ್ಲುಗಳು ತಿಮ್ಮೋಜನಹಳ್ಳಿ ಗ್ರಾಮದ ಪಶ್ಚಿಮ ದಿಕ್ಕಿನಲ್ಲಿ ದೊರೆತಿವೆ.[೧೮] ಈ ಹುಲಿಬೇಟೆ ವೀರಗಲ್ಲಿನಲ್ಲಿ ವೀರ ಹುಲಿಯೊಡನೆ ಹೋರಾಡುತ್ತಿರುವ ಶಿಲ್ಪದ ಜೊತೆಗೆ ಸಂಕ್ಷಿಪ್ತವಾದ ಬರಹರೂಪದ ಲಿಪಿಯೂ ಸಹ ಇದೆ. ಶಿಲ್ಪದಲ್ಲಿನ ವೀರ ಮತ್ತು ಹುಲಿಯನ್ನು ಬಹಳ ಸುಂದರವಾಗಿ ಚಿತ್ರಿಸಿದ್ದು, ವೀರನು ಹುಲಿಯನ್ನು ಆಯುಧದಿಂದ ಇರಿಯುತ್ತಿರುವುದನ್ನು ಎರಡೂ ವೀರಗಲ್ಲುಗಳಲ್ಲಿ ಕಾಣಬಹುದಾಗಿದೆ.

ಹುಲಿಯು ತನ್ನ ಬಲಿಷ್ಟವಾದ ಹಿಂಗಾಲುಗಳ ಮೇಲೆ ನಿಂತಿದ್ದು ವೀರನು ತಿವಿದಿರುವ ಈಟಿಯು ಹುಲಿಯ ಬೆನ್ನಿನಿಂದ ಹೊರಬಂದಿದೆ. ಈ ವೀರಗಲ್ಲು ಶಿಲ್ಪದ ದೃಷ್ಟಿಯಿಂದ ದೊಡ್ಡದಾಗಿದ್ದು ಸುಮಾರು ಏಳು ಅಡಿ ಅಗಲ ಹಾಗೂ ನಾಲ್ಕು ಅಡಿ ಅಗಲವಾಗಿದೆ. ಇದೇ ಕಾಲಕ್ಕೆ ಸೇರಿದ ಮತ್ತೊಂದು ವೀರಗಲ್ಲು ನೆಲ್ಲುಗುದಿಗೆ ಮತ್ತು ಗೆದ್ದಲಪಾಳ್ಯ ಗ್ರಾಮಗಳ ನಡುವಿನ ರಸ್ತೆ ಬದಿಯಲ್ಲಿದೆ. ಈ ವೀರಗಲ್ಲಿನಲ್ಲಿ ಶಿಲ್ಪ ಮಾತ್ರವಿದ್ದು ವೀರ ಬಲವಾಗಿ ಈಟಿಯಿಂದ ಹುಲಿಯನ್ನು ತಿವಿಯುತ್ತಿರುವ ದೃಶ್ಯ ಸೊಗಸಾಗಿದೆ. ಹುಲಿಯು ವೀರನ ಭುಜದವರೆಗೂ ಮುಂಗಾಲುಗಳನ್ನು ಎತ್ತಿ ನಿಂತಿದೆ. ವೀರನನ್ನು ನೋಡುತ್ತ ಘರ್ಜಿಸುತ್ತಿದೆ. ಘರ್ಜನೆಗೆ ಹೆದರದ ವೀರ ಈಟಿಯಿಂದ ತಿವಿದ ರಭಸಕ್ಕೆ

ಹುಲಿಯ ಹೊಟ್ಟೆಯೊಳಗಿಂದ ಈಟಿಯು ಬೆನ್ನ ಹಿಂದೆ ಬಂದಿದೆ. ಬಹುಶಃ ವೀರ ಬೇಟೆಗಾಗಿ ಕಾಡಿಗೆ ಹೋದಾಗ ಹುಲಿ ಆಕ್ರಮಣ ಮಾಡಿರಬಹುದು. ಈ ಹುಲಿಬೇಟೆ ಶಿಲ್ಪಗಳು ವೀರಗಲ್ಲುಗಳಲ್ಲೇ ವಿಶಿಷ್ಟವಾದ ರಚನೆ ಮತ್ತು ಸಂಕೀರ್ಣ ಶಿಲ್ಪಶೈಲಿಯನ್ನು ಹೊಂದಿವೆ. ವೀರನ ಗುಣಗಳನ್ನು ಶಾಸನ ಪಾಠಗಳಲ್ಲಿ ಹೇಳಿದರೆ ಅಥವಾ ಹೊಗಳಿದರೆ ಪರಿಣಾಮಕಾರಿಯಲ್ಲ ಎಂಬ ಭಾವನೆಯಿಂದ ಶಿಲ್ಪಗಳ ಮೂಲಕವಾಗಿ ವೀರನ ತ್ಯಾಗ ಮತ್ತು ಗುಣಗಳನ್ನು ತಿಳಿಯಬಹುದು.

**ಯುದ್ಧವರ್ಣನಾ ವೀರಗಲ್ಲುಗಳು**

ಪ್ರಾಚೀನ ಕಾಲದ ಯುದ್ಧ ವರ್ಣನೆಯನ್ನು ತಿಳಿಸಲು ನಮಗೆ ಸಾಹಿತ್ಯ ಕೃತಿಗಳು ಮತ್ತು ಶಾಸನಗಳು ಪ್ರಮುಖ ಆಕರಗಳಾಗಿವೆ. ಯುದ್ಧಗಳ ವರ್ಣನೆಯನ್ನು ಶಬ್ಧಗಳ ಮೂಲಕವಾಗಿ ಮತ್ತು ಚಿತ್ರಗಳ ಮೂಲಕವಾಗಿ ಗ್ರಹಿಸಲು ಶಾಸನಗಳಿಂದ ಸಾಧ್ಯವಾಗುತ್ತದೆ. ಶಬ್ದಗಳಲ್ಲಿ ಹೇಳಲಾಗದ್ದನ್ನು ಚಿತ್ರಗಳ ಮೂಲಕ ಸಮರ್ಥವಾಗಿ ಹೊರಹಾಕುತ್ತವೆ ಎಂದರೆ ತಪ್ಪಾಗಲಾರದು. ಶ್ರವ್ಯ ಮತ್ತು ದೃಶ್ಯ ಮಾಧ್ಯಮಗಳ ಮೂಲಕ ಯುದ್ಧಗಳ ಬಗೆಗೆ ತಿಳಿಸುವ ಏಕೈಕ ಮಾಧ್ಯಮವೆಂದರೆ ಶಾಸನಗಳು. ಇವುಗಳನ್ನು ಯುದ್ಧ ವರ್ಣನಾ ವೀರಗಲ್ಲುಗಳು ಎಂಬ ಹೆಸರಿನಿಂದ ಕರೆಯುವ ವಾಡಿಕೆಯೂ ಇದೆ. ಇಂತಹ ಹಲವಾರು ಶಾಸನಗಳು ಶಾಸನಶಿಲ್ಪ ಕ್ಷೇತ್ರದಲ್ಲಿ ದೊರೆಯುತ್ತವೆ. ಈ ರೀತಿಯ ವೀರಗಲ್ಲುಗಳು ಲಿಪಿ ಅಥವಾ ಬರಹವಿಲ್ಲದೆ ಕೇವಲ ಚಿತ್ರವಿರುವುದನ್ನೂ ನೋಡುತ್ತೇವೆ. ಈ ವೀರಗಲ್ಲುಗಳು ರಣರಂಗದ ಹಲವಾರು ಮಜಲುಗಳು ಪ್ರಾಚೀನ ಕರ್ನಾಟಕದ ಯುದ್ಧದ ರೀತಿ-ನೀತಿಗಳನ್ನು ಅರಿಯಲು ಪ್ರಮುಖವಾದ ಸಾಕ್ಷಿಗಳಾಗುತ್ತವೆ ಎನ್ನಬಹುದು. ಕುದುರೆ ಕಾಳಗ, ಆನೆಕಾಳಗ, ಕೋಟೆಕಾಳಗ, ಒಂಟೆ ಕಾಳಗಗಳು, ಇತರ ಕಾಳಗಗಳ ಬಗ್ಗೆ ಶಾಸನಗಳು ಉಲ್ಲೇಖಿಸುತ್ತವೆ. ಕ್ರಿ.ಶ.೧೩ನೇ ಶತಮಾನಕ್ಕೆ ಸೇರಿದ ನೊಳಂಬರ ಕಾಲದ ಯುದ್ಧವರ್ಣನಾ ವೀರಗಲ್ಲೊಂದು ಮುಪ್ಪಡಗಟ್ಟದಲ್ಲಿ ದೊರೆತಿದೆ. ಸುಮಾರು ೮ ಅಡಿ ಉದ್ದ ೫ ಅಡಿ ಅಗಲವಿರುವ ಈ ವೀರಗಲ್ಲಿನಲ್ಲಿ ಶಿಲ್ಪ ಮಾತ್ರವಿದೆ. ವೀರನನ್ನು ಬೃಹತ್ ಆಗಿ ಚಿತ್ರಿಸಿದ್ದು, ಸೈನಿಕರು, ಆನೆಗಳು, ಕುದುರೆಗಳನ್ನು ಶಿಲ್ಪಿಯು ಕಂಡರಿಸಿದ್ದಾನೆ. ವೀರನು ಶತ್ರುಗಳನ್ನು ಹೊಡೆದೋಡಿಸಲು ಹೋರಾಡುವ ಚಿತ್ರಣ ಸುಂದರವಾಗಿ ಕೆತ್ತಲಾಗಿದೆ. ಇದೇ ಕಾಲಕ್ಕೆ ಸೇರಿದ ನೊಳಂಬರ ಕಾಲದ ಶಾಸನ ಪಾಠವಿದೆ.[೯೯] ಈ ಶಾಸನವು ಆನೆಯನ್ನು ಹಾಗು ವ್ಯಕ್ತಿಗಳಾದ ಬಿಜ್ಜಯ್ಯ, ಅತ್ತೀಶ್ವರ, ಗಂಗ ಎಂಬ ಹೆಸರುಗಳನ್ನು ಉಲ್ಲೇಖಿಸುತ್ತದೆ. ಈ ಶಾಸನದಲ್ಲಿ ಆರು ಸಾಲುಗಳು ಮಾತ್ರ ಇದ್ದು ಉಳಿದ ಸಾಲುಗಳು ಕಾಣಿಸುವುದಿಲ್ಲ. ನೊಳಂಬರ ಕಾಲದ ಈ ವೀರಗಲ್ಲು ಶಿಲ್ಪದ ದೃಷ್ಟಿಯಿಂದ ಬೃಹತ್ತಾಗಿದೆ.

ಗಂಗರ ಕಾಲಕ್ಕೆ ಸೇರಿದ ಎರಡು ಯುದ್ಧವರ್ಣನಾ ವೀರಗಲ್ಲುಗಳು ಗುಂಡಮಗೆರೆ ಹೊಸಹಳ್ಳಿ ಗ್ರಾಮದ ಹೊರವಲಯದ ಉತ್ತರ ದಿಕ್ಕಿನಲ್ಲಿದ್ದು ಬೃಹತ್ತಾದ ಶಿಲೆಯ ಮೇಲೆ ಚಿತ್ರಿಸಲಾಗಿದೆ.

ವೀರನನ್ನು ದೊಡ್ಡದಾಗಿ ಚಿತ್ರಿಸಿದ್ದು, ವೀರನು ಎರಡೂ ಕೈಗಳಲ್ಲಿ ಆಯುಧಗಳನ್ನು ಹಿಡಿದು ರಣರಂಗದಲ್ಲಿ ಹೋರಾಡುತ್ತಿದ್ದಾನೆ. ಶಾಸನಶಿಲ್ಪದಲ್ಲಿ ಆನೆಗಳನ್ನು ಕುದುರೆಗಳನ್ನು ಹಾಗು ಸೈನಿಕರನ್ನು ಚಿತ್ರಿಸಿದ್ದು ಬಹಳ ಸುಂದರವಾಗಿ ಕೆತ್ತಲಾಗಿದೆ. ಇದೇ ಸ್ಥಳದ ಮತ್ತೊಂದು ವೀರಗಲ್ಲಿನಲ್ಲಿ ಎರಡು ಹಂತಗಳನ್ನು ಕೆತ್ತಲಾಗಿದೆ. ಕೆಳಹಂತದಲ್ಲಿ ವೀರನನ್ನು ಬೃಹತ್ತಾಗಿ ಚಿತ್ರಿಸಿದ್ದು ಸುತ್ತುವರಿದ ಸೈನಿಕರನ್ನು ಸದೆ ಬಡಿದಿದ್ದಾನೆ. ಆ ಸೈನಿಕರು ಹತರಾಗಿ ಕೆಳಗೆ ಸತ್ತು ಬಿದ್ದಿದ್ದಾರೆ. ಆನೆಗಳು ಮತ್ತು ಕುದುರೆಗಳು ಮನಬಂದದಂತೆ ಓಡುತ್ತಿವೆ. ಮೇಲಿನ ಹಂತದಲ್ಲಿ ವೀರನನ್ನು ಸ್ತ್ರೀಯು ಸ್ವಾಗತಿಸುತ್ತಿರುವಂತೆ ಚಿತ್ರಿಸಲಾಗಿದೆ.

ಚಿಕ್ಕಕಾಳೇನಹಳ್ಳಿ ಗ್ರಾಮದ ಪಕ್ಕದಲ್ಲಿನ ವೀರಗಲ್ಲೊಂದರಲ್ಲಿ ವೀರನು ಸೈನಿಕರ ವಿರುದ್ದ ಹೋರಾಡುತ್ತಿರುವ ದೃಶ್ಯವನ್ನು ಕಾಣಬಹುದು. ಈ ಶಿಲೆಯು ಬಹಳ ಒರಟಾಗಿದ್ದು ಶಿಲ್ಪದ ಕೆಲವು ಭಾಗ ಅಸ್ಪಷ್ಟವಾಗಿ ಕಾಣುತ್ತದೆ. ವೀರನು ಬಲಗೈಯಲ್ಲಿ ಈಟಿಯನ್ನು ಎಡಗೈಯಲ್ಲಿ ಗುರಾಣಿಯನ್ನು ಹಿಡಿದು ಸುತ್ತುವರಿದಿರುವ ಶತ್ರುಗಳ ವಿರುದ್ಧ ಹೋರಾಡುವಂತೆ ಶಿಲ್ಪವನ್ನು ಬಿಡಿಸಲಾಗಿದೆ. ಶಿಲ್ಪದ ದೃಷ್ಟಿಯಿಂದ ಈ ವೀರಗಲ್ಲು ಹದಿನಾರನೆಯ ಶತಮಾನಕ್ಕೆ ಸೇರಿದ ಯುದ್ಧ ವರ್ಣನಾ ವೀರಗಲ್ಲಾಗಿದೆ. ಇದೇ ಸ್ಥಳದ ಸ್ವಲ್ಪ ದೂರದಲ್ಲಿ ಕುದುರೆ ಕಾಳಗದ ವೀರಗಲ್ಲೊಂದು ಕಂಡುಬರುತ್ತದೆ. ಈ ವೀರಗಲ್ಲಿನ ವೀರನನ್ನು ದೊಡ್ಡದಾಗಿ ಚಿತ್ರಿಸಿದ್ದು, ಎದುರಾಳಿಯು ಕುದುರೆಯ ಮೇಲೆ ಕುಳಿತು ಆಯುಧವನ್ನು ಬೀಸುತ್ತಿದ್ದಾನೆ.

ವೀರನು ಬಲಗೈಯಲ್ಲಿನ ಆಯುಧದಿಂದ ಶತ್ರುವಿನ ಕುದುರೆಯ ಮುಖಕ್ಕೆ ತಿವಿಯುತ್ತಿದ್ದಾನೆ. ಇದು ತಾಲ್ಲೂಕಿನ ಬಹಳ ಅಪರೂಪದ ಕುದುರೆ ಕಾಳಗದ ವೀರಗಲ್ಲಾಗಿದೆ. ಇದೇ ರೀತಿಯ ಕುದುರೆ ಕಾಳಗದ ವೀರಗಲ್ಲುಗಳು ಹೊಸಕೋಟೆ ತಾಲ್ಲೂಕಿನಲ್ಲಿ ಹಲವಾರು ದೊರೆಯುತ್ತವೆ. ಉದಾಹರಣೆಗಾಗಿ ಇಲ್ಲಿ ಹೆಡಗೇನಹಳ್ಳಿಯ ವೀರಗಲ್ಲುಗಳನ್ನು ಹೆಸರಿಸಬಹುದು.

ಕಮ್ಮಸಂದ್ರ ಗ್ರಾಮದಲ್ಲಿನ ಎರಡು ವೀರಗಲ್ಲುಗಳು ಯುದ್ಧ ವರ್ಣನೆಯ ಬಗ್ಗೆ ಬೆಳಕು ಚೆಲ್ಲುತ್ತದೆ. ಈ ವೀರಗಲ್ಲು ಸುಮಾರು ಏಳು ಅಡಿ ಉದ್ದ ಐದು ಅಡಿ ಅಗಲವನ್ನು ಹೊಂದಿದ್ದು ಕುದುರೆ ಕಾಳಗವನ್ನು ತಿಳಿಸುತ್ತದೆ. ಈ ವೀರಗಲ್ಲಿನಲ್ಲಿ ಮೂವರು ವೀರರು ಕುದುರೆಗಳ ಮೇಲೆ ಏರಿ ಕುಳಿತು ರಣರಂಗದಲ್ಲಿ ರಭಸವಾಗಿ ಮುನ್ನುಗ್ಗುತ್ತಿರುವಂತೆ ಚಿತ್ರಿಸಲಾಗಿದೆ. ಎದುರಾಳಿಗಳು ಕುದುರೆಯ ತುಳಿತಕ್ಕೆ ಸಿಕ್ಕಿ ಒದ್ದಾಡುತ್ತಿರುವ ಶಿಲ್ಪ ರಣರಂಗದ ದೃಶ್ಯವನ್ನು ಮನದಟ್ಟು ಮಾಡಿಕೊಡುತ್ತದೆ. ಇದೇ ಸ್ಥಳದ ಮತ್ತೊಂದು ವೀರಗಲ್ಲೊಂದರಲ್ಲಿ ವೀರ ಕುದುರೆಯನ್ನು ವೇಗವಾಗಿ ಓಡಿಸುವಂತೆ ಚಿತ್ರವನ್ನು ಬಿಡಿಸಲಾಗಿದ್ದು ವೀರನ ಕೈಯಲ್ಲಿ ಕತ್ತಿಯನ್ನು ಹಿಡಿದು ಹೋರಾಡುತ್ತಿರುವ ಶಿಲ್ಪ ಬಹಳ ಸುಂದರವಾಗಿದೆ. ಇದು ಶಿಲ್ಪದ ದೃಷ್ಟಿಯಿಂದ ಹದಿನಾರನೆಯ ಶತಮಾನಕ್ಕೆ ಸೇರಿದ್ದೆಂದು ಹೇಳಬಹುದು.

## ೪.೩. ಇತರೆ ಶಾಸನಶಿಲ್ಪಗಳು

ತಾಲ್ಲೂಕು ಕೇಂದ್ರವಾದ ದೊಡ್ಡಬಳ್ಳಾಪುರದ ನಾಗರಕೆರೆಯ ಬಳಿ ಕೆಲವು ಬಿಡಿ ಶಿಲ್ಪಗಳು ನಮ್ಮ ಗಮನ ಸೆಳೆಯುತ್ತವೆ. ಈ ಒಂದು ಶಿಲೆಯಲ್ಲಿ ಒಬ್ಬ ಸ್ತ್ರೀಯನ್ನು ಪಲ್ಲಕ್ಕಿಯಲ್ಲಿ ಇಬ್ಬರು ಸ್ತ್ರೀಯರು ಹೆಗಲ ಮೇಲೆ ಕೊಂಡೊಯ್ಯುತ್ತಿರುವ ದೃಶ್ಯ ಸುಂದರವಾಗಿದೆ. ಪಲ್ಲಕ್ಕಿಯಲ್ಲಿ ಕುಳಿತ ಸ್ತ್ರೀಯು ಅಲಂಕಾರ ಭೂಷಿತಳಾಗಿದ್ದು ಕುಳಿತಿರುವಳು. ಬಹುಶಃ ರಾಜಗೃಹವಾಸದ ಸೇವಕಿಯರು ರಾಣಿಯನ್ನು ಮೆರವಣಿಗೆಯಲ್ಲಿ ಕೊಂಡೊಯ್ಯುತ್ತಿರಬಹುದು. ಇದರ ಪಕ್ಕದಲ್ಲೇ ಒಬ್ಬ ಯತಿಯು ಅಸೀನನಾಗಿ ಕೈಮುಗಿದು ಕುಳಿತುಕೊಂಡಿರುವ ಶಿಲ್ಪ ಯತಿ ಶಿಲ್ಪವೆಂದು ಊಹಿಸಬಹುದಾಗಿದೆ. ಕ್ರಿ.ಶ.೮ನೆಯ ಶತಮಾನಕ್ಕೆ ಸೇರಿದ ಗಂಗರ ಕಾಲದ ವೀರಗಲ್ಲುಗಳಿರುವ ದೊಡ್ಡಬೆಳವಂಗಲ ಚನ್ನಕೇಶವ ಸ್ವಾಮಿ ದೇವಾಲಯದ ಮುಂಭಾಗದಲ್ಲಿ ಎರಡೂ ಕೈಗಳನ್ನು ಮುಂಭಾಗಕ್ಕೆ ಚಾಚಿ ನಿಂತಿರುವ ಶಿಲ್ಪವೊಂದನ್ನು ಕಾಣಬಹುದು. ಬಹುಭಾಗ ಈ ಶಿಲ್ಪವು ಸೂರ್ಯ ಶಿಲ್ಪದಂತೆ ಕಂಡುಬರುತ್ತದೆ. ಕಾಡನೂರು ಗ್ರಾಮದಲ್ಲಿನ ಶಾಲೆಯ ಆವರಣದಲ್ಲಿನ ಶಿಲ್ಪವು ನಗ್ನವಾಗಿದ್ದು, ಪುರುಷ ಶಿಲ್ಪಾಕೃತಿಯಾಗಿದೆ. ಈ ಶಿಲ್ಪದಲ್ಲಿನ ಪುರುಷನು ಕುಳಿತಿದ್ದು ಎರಡೂ ಕೈಗಳನ್ನು ತೊಡೆಯ ಮೇಲಿಟ್ಟು ಆಸೀನ ಭಂಗಿಯಲ್ಲಿದ್ದಾನೆ. ಕಾಲುಗಳಿಗೆ ಕಡಗಗಳನ್ನು ಧರಿಸಿದ್ದು, ಕಟಿಸೂತ್ರವನ್ನು ಧರಿಸಿದ್ದಾನೆ. ತಲೆಯ ಮೇಲೆ ಪೇಟವನ್ನು ಸುತ್ತಿದಂತೆ ಚಿತ್ರಿಸಲಾಗಿದೆ. ಅಲ್ಲದೆ ಪುರುಷನ ಹಿಂಭಾಗದಲ್ಲಿ ಶಿಲ್ಪಿಯು ತೋರಣದಂತೆ ಬಿಡಿಸಿರುವುದನ್ನು ಕಾಣಬಹುದಾಗಿದ್ದು, ವಿಜಯನಗರದ ಕಾಲದ ಉಬ್ಬು ಶಿಲ್ಪಗಳನ್ನು ಬಹುತೇಕವಾಗಿ ಹೋಲುತ್ತದೆ.

ಅರಳು ಮಲ್ಲಿಗೆ ಗ್ರಾಮದ ಮಂಟಪದ ಕೆಳಗೆ ನಗ್ನಸ್ತ್ರೀಯನ್ನು ಹಾಗೂ ಮತ್ತೊಂದು ಶಿಲ್ಪದಲ್ಲಿ ನಗ್ನತೆಯಿಂದ ಕೂಡಿದ ಸ್ತ್ರೀ ಹಾಗೂ ಪುರುಷನ ಸಂಭೋಗದ ಚಿತ್ರವನ್ನು ನೋಡಬಹುದು. ವಿಜಯನಗರ ಕಾಲದ ಶಿಲ್ಪಗಳಲ್ಲಿ ಬಹುತೇಕವಾಗಿ ಈ ರೀತಿಯ ಶಿಲ್ಪಗಳು ಹೆಚ್ಚಾಗಿ ಕಂಡುಬರುತ್ತವೆ. ಶಿಲ್ಪದ ಮಾಧ್ಯಮದ ದೃಷ್ಟಿಯಿಂದ ವಿಜಯನಗರದ ಸಾಮ್ರಾಜ್ಯದ ಕಾಲಕ್ಕೆ ಸೇರಿದ್ದೆಂದು ಹೇಳಬಹುದಾಗಿದೆ.

ಕನ್ನಮಂಗಲ ಗ್ರಾಮದ ಬಸವನಗುಡಿಯ ಪಕ್ಕದಲ್ಲಿನ ಯಂತ್ರದಕಲ್ಲು ವಡಗೆರೆ ಗ್ರಾಮದಲ್ಲಿನ ವಾಮನ ಮುದ್ರೆಕಲ್ಲು ಪುರುಷನಹಳ್ಳಿ ಹಾಗೂ ಕಸಾಘಟ್ಟ ಗ್ರಾಮಗಳಲ್ಲಿರುವ ಲಿಂಗಮುದ್ರೆ ಕಲ್ಲುಗಳಿಗೆ ಮಕ್ಕಳಿಗೆ ಜ್ವರಬಂದಾಗ, ದನಕರುಗಳಿಗೆ ಕಾಲುಬಾಯಿ ಜ್ವರ ಬಂದಾಗ ಆ ಕಲ್ಲುಗಳಿಗೆ ಪೂಜೆ ಸಲ್ಲಿಸಿದರೆ ಜ್ವರ ಹೋಗುತ್ತದೆ ಎಂಬ ನಂಬಿಕೆಯು ಅನೇಕ ಗ್ರಾಮಗಳಲ್ಲಿನ ಜನರ ಮನದಲ್ಲಿ ನಂಬಿಕೆಯಾಗಿ ಬೇರೂರಿವೆ ಎಂದು ಹೇಳಬಹುದು. ಇದು ಶಾಸನ ಶಿಲ್ಪಗಳ ಮೇಲೆ ಜನರಿಗಿರುವ ನಂಬಿಕೆಯನ್ನು ಎತ್ತಿ ತೋರಿಸುತ್ತದೆ. ಕಸಾಘಟ್ಟದಲ್ಲಿನ ಒಂದು ಶಿಲೆಯ ಮೇಲೆ ಇಬ್ಬರು ಪುರುಷರು

ಕೈಮುಗಿದು ಕುಳಿತು ಕೊಂಡಿರುವುದನ್ನು ಗಮನಿಸಿದರೆ ಜೈನ ಯತಿಗಳಂತೆ ಕಂಡುಬರುತ್ತಾರೆ. ಬಹುಶಃ ರಾಜಘಟ್ಟ ಗ್ರಾಮದಲ್ಲಿನ ಬೌದ್ಧ ಸ್ತೂಪಗಳ ಅವಶೇಷಗಳು ಕಂಡುಬಂದಿರುವುದರಿಂದ ಇದರ ಬೆನ್ನಲ್ಲೇ ಜೈನಧರ್ಮವು ಪ್ರಸಾರವಾಗಿತ್ತೆಂದು ಹೇಳಬಹುದಾಗಿದೆ.

ಶಾಸನಗಳನ್ನು ಹಾಕಿಸುವುದಕ್ಕೆ ಮೂಲ ಪ್ರೇರಣೆ ಮಾನವನಲ್ಲಿಯ ಉದಾತ್ತ ಗುಣಗಳು. ಹಾಗೂ ಮಾನವೀಯತೆಯ ಪ್ರತಿಬಿಂಬಗಳು ಇವೆಲ್ಲವೂ ಮಾನವ ಸಂಸ್ಕೃತಿಯ ಅವಿಭಾಜ್ಯ ಅಂಗಗಳು ಎಂದರೆ ತಪ್ಪಾಗಲಾರದು. ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಮಾನವನ ಆಚಾರ-ವಿಚಾರಗಳು, ವೇಷಭೂಷಣಗಳು ಆತ ಬಳಸುವ ವಸ್ತುಗಳು. ಶಾಸನ ಶಿಲ್ಪಗಳಲ್ಲಿ ಹಾಗೂ ಶಾಸನ ಪಾಠಗಳಲ್ಲಿ ಹಲವಾರು ರೀತಿಯ ಸಾಂಸ್ಕೃತಿಕ ವಿವರಗಳು ನಮಗೆ ದೊರೆಯುತ್ತವೆ. ಇವೆಲ್ಲವೂ ಮಾನವನ ಜೀವನದಲ್ಲಿ ಬೆರೆತು ಬದುಕಿದ ವಿವರಗಳನ್ನು ಶಾಸನ ಶಿಲ್ಪಗಳು ಹೇಳುತ್ತವೆ. ಈ ಹಿನ್ನೆಲೆಯಲ್ಲಿಯೇ ಶಾಸನ ಶಿಲ್ಪಗಳಲ್ಲಿ ವೀರರು ಧರಿಸಿರುವ ಉಡುಪು ಆಭರಣಗಳು, ಆಯುಧಗಳು ಇಲ್ಲಿ ಪ್ರಮುಖವೆನಿಸುತ್ತವೆ.

ಪ್ರಾಚೀನ ಭಾರತದಲ್ಲಿ ಇದ್ದಂತಹ ನಾಗರೀಕತೆಗೆ ಭಿನ್ನವಾದ ನಾಗರೀಕತೆಯನ್ನು ಇವು ಸೂಚಿಸುತ್ತವೆ. ನಾಗರೀಕತೆ ಬೆಳೆದಂತೆ ಆತನ ಜೀವನ ಶೈಲಿಯ ರೀತಿ-ನೀತಿಗಳು ಕಾಲಕ್ಕೆ ತಕ್ಕಂತೆ ಬದಲಾದವು. ಪ್ರಾಚೀನ ಬದುಕಿನ ಸಂಸ್ಕೃತಿಯನ್ನು ದಿಕ್ಕರಿಸಿದರು. ಕಾಡಿನಲ್ಲಿ ವಾಸ ಮಾಡುತ್ತಿದ್ದ ಜೀವನ ಶೈಲಿಯನ್ನು ಮರೆತು, ಆವಿಷ್ಕಾರಗೊಂಡ ವಸ್ತುಗಳ ಬದುಕಿನ ಜೀವನಕ್ಕೆ ಹೊಂದಿಕೊಳ್ಳುತ್ತಾ ಸಾಗಿತು. ಪ್ರಾಚೀನ ಕಾಲದಲ್ಲಿ ಉಪಯೋಗಿಸುತ್ತಿದ್ದ ಮಡಕೆ, ಚರ್ಮ, ಕಾಲಾನಂತರ ತನ್ನ ಸ್ಥಾನವನ್ನು ಕಳೆದುಕೊಂಡು, ಆವಿಷ್ಕಾರದ ಯುಗಕ್ಕೆ ಕಾಲಿರಿಸಿದರು. ತನ್ನ ಮಾನವನ್ನು ಕಾಪಾಡಲಿಕ್ಕೆ ಉಪಯೋಗಿಸುತ್ತಿದ್ದ ಉಡುಪುಗಳು ಕಾಲಾನಂತರ ಸೌಂದರ್ಯ ಪ್ರಜ್ಞೆ ಬೆಳೆದು ಒಂದು ಕಲೆಯಾಗಿ, ಜೀವನದ ಅವಿಭಾಜ್ಯ ಅಂಗವಾಗಿ ಬೆಳೆಯಿತು. ಮಾನವನು ತೊಡುವ ಉಡುಪುಗಳಿಂದ ತನ್ನ ವ್ಯಕ್ತಿತ್ವವನ್ನು ಹೆಚ್ಚಿಸಿಕೊಳ್ಳಬಹುದು ಹಾಗೂ ಸಮಾಜದಲ್ಲಿ ಉನ್ನತ ಸ್ಥಾನ ದೊರೆಯುತ್ತದೆಂಬ ಅಲೋಚನೆ ಮಾಡಿದನು. ಇದರ ಪರಿಣಾಮವೇ ಉಡುಪುಗಳನ್ನು ಧರಿಸುವುದು ರೂಢಿಯಾಯಿತು. ಉಡುಪುಗಳ ಬಣ್ಣ ಆಕರ್ಷಣೆಯ ಕೇಂದ್ರ ಬಿಂದುವಾಯಿತು. ಇದಕ್ಕೆ ಉದಾಹರಣೆಯಾಗಿ ಸೈನಿಕರು ತೊಡುವ ಉಡುಪು ರಾಜ ಮಹಾರಾಜರುಗಳ ಆಸ್ಥಾನದಲ್ಲಿದ್ದ ರಾಜ-ರಾಣಿಯರ ಉಡುಪು ಸಮಾಜದಲ್ಲಿನ ಬದುಕುವ ಜನಸಾಮಾನ್ಯರ ಉಡುಪು, ಸಮಾಜವನ್ನು ತಿದ್ದಲು ಹೊರಟಂತಹ ಮಠ-ಮಾನ್ಯಗಳ ಸನ್ಯಾಸಿಗಳ ಉಡುಪು ಬಣ್ಣ, ರೂಪ, ಆಕಾರ ಪಡೆದುಕೊಂಡವು. ಈ ಮಹತ್ವದ ಬೆಳವಣಿಗೆ ಕಾಲದಿಂದ ಕಾಲಕ್ಕೆ ಜನಾಂಗದಿಂದ ಜನಾಂಗಕ್ಕೆ ತೀವ್ರತರ ಬದಲಾವಣೆ ಪ್ರದೇಶಕ್ಕನುಗುಣವಾಗಿ ಭಿನ್ನ ಸ್ವರೂಪವನ್ನು ಪಡೆದವು. ಹೀಗೆ ಉಡುಪುಗಳ ಬಗೆಗೆ ವ್ಯವಸ್ಥಿತ

ರೀತಿಯ ಕ್ರಮದ ಇತಿಹಾಸವನ್ನು ಅರಿಯಬೇಕಾದಲ್ಲಿ ಸಾಹಿತ್ಯ ಕೃತಿಗಳು, ಶಿಲ್ಪಕೃತಿಗಳಿಂದ ಮಾಹಿತಿ ಲಭ್ಯವಾಗುತ್ತವೆ. ಒಟ್ಟಾರೆಯಾಗಿ ಸಾಹಿತ್ಯ ಕೃತಿಗಳು ಶಬ್ಧಗಳಲ್ಲಿ ಮಾಹಿತಿ ನೀಡಿದರೆ, ಶಿಲ್ಪಾಕೃತಿಗಳು ದೃಶ್ಯಮಾಧ್ಯಮದಲ್ಲಿ ಮಾಹಿತಿ ನೀಡುತ್ತವೆ. ದೃಶ್ಯಮಾಧ್ಯಮವಾದ ಶಾಸನಶಿಲ್ಪದಲ್ಲಿ ಒಡಮೂಡಿ ಬಂದಿರುವ ಸ್ತ್ರೀ ಮತ್ತು ಪುರುಷರ ಚಿತ್ರಗಳಲ್ಲಿ ಆಯಾ ಕಾಲದಲ್ಲಿದ್ದ ವಿವಿಧ ಬಗೆಯ ಉಡುಪುಗಳನ್ನು ಅಭ್ಯಸಿಸಬಹುದು.

ಶಾಸನ ಶಿಲ್ಪಗಳಲ್ಲಿ ಪುರುಷರು ಧರಿಸಿರುವ ಉಡುಪಿನ ಚಿತ್ರಣ ಅಧಿಕವಾಗಿ ನಮಗೆ ದೊರೆಯುತ್ತದೆ. ವೀರರು, ಸೈನಿಕರು, ಯತಿಗಳು ಹೀಗೆ ಹಲವು ರೂಪಗಳಲ್ಲಿ ಪುರುಷರ ಚಿತ್ರಣ ಕಂಡುಬರುತ್ತದೆ. ತಾಲ್ಲೂಕಿನಲ್ಲಿ ದೊರೆತ ಶಾಸನ ಶಿಲ್ಪಗಳಲ್ಲಿ ಬಹುತೇಕವಾಗಿ ವೀರರೇ ಸಿಂಹಪಾಲು, ಶಾಸನಶಿಲ್ಪದ ಕೇಂದ್ರಬಿಂದು ವೀರ. ಈತನ ಹೋರಾಟದ ವೈಭವದ ರೀತಿಯನ್ನು ಶಾಸನ ಶಿಲ್ಪಿಗಳು ತಮ್ಮ ಕೈಚಳಕದಿಂದ ಶಿಲ್ಪವನ್ನು ಜೀವಂತ ವ್ಯಕ್ತಿಯಾಗಿ ನಿರೂಪಿಸಲು ಪ್ರಯತ್ನಿಸಿದ್ದಾರೆ. ವೀರಶಾಸನ ಶಿಲ್ಪಗಳಲ್ಲಿ ವೀರರು ತೊಟ್ಟಿರುವ ಉಡುಪು ವೀರಗಚ್ಚೆ, ತುಂಡುಗಟ್ಟಿ, ಮಲ್ಲಗಚ್ಚೆ ಹಾಕಿಕೊಂಡಿರುವುದರ ಮತ್ತು ಸಾಧಾರಣ ಉಡುಪನ್ನು ತೊಟ್ಟಿರುವ ವಿವರಗಳು ಲಭ್ಯವಾಗುತ್ತವೆ.

**ಪುರುಷರ ಉಡುಪು**

ತಿಮ್ಮಾಜನಹಳ್ಳಿಯ ವೀರಗಲ್ಲಿನಲ್ಲಿ ಈಟಿಯನ್ನು ಹಿಡಿದು ಹುಲಿಗೆ ತಿವಿದಿರುವ ವೀರರು ಧರಿಸಿರುವ ಕಚ್ಚೆ ನಮ್ಮ ಗಮನ ಸೆಳೆಯುತ್ತದೆ. ಇದು ಸೊಂಟದ ಸುತ್ತ ನೆರಿಗೆಯಂತೆ ಕಾಣುತ್ತದೆ. ಸೊಂಟಕ್ಕೆ ಬಿಗಿಯಾದ ಪಟ್ಟಿಯನ್ನು ಕಟ್ಟಿದ್ದಾನೆ. ಬಹುಶಃ ಇದು ಅವರ ಶೌರ್ಯಕ್ಕೆ ಒಪ್ಪುವ ಹಾಗೆ ಉಡುಪು ಚಿತ್ರಿಸಲಾಗಿದೆ. ಈ ರೀತಿಯ ಉಡುಪು ಧರಿಸಿರುವ ವೀರಗಲ್ಲೊಂದು ಹಾವೇರಿ ಜಿಲ್ಲೆಯ ಬ್ಯಾಡಗಿ ತಾಲ್ಲೂಕಿನ ಹಿರೇಣಜಿ ವೀರಗಲ್ಲನ್ನು ಹೋಲುತ್ತದೆ. ಗೆದ್ದಲಪಾಳ್ಯ ಗ್ರಾಮದ ಮತ್ತೊಂದು ಹುಲಿಬೇಟೆ ವೀರಗಲ್ಲಿನಲ್ಲಿ ಕುಚ್ಚಿನಂತೆ ಇಳಿಬಿದ್ದಿರುವ ಕಚ್ಚೆಯನ್ನು ಧರಿಸಿದ್ದಾನೆ. ಶತ್ರುಗಳನ್ನು ಇರಿಯುತ್ತಿರುವ ವೀರಗಲ್ಲನ್ನು ಹುಲ್ಲುಕುಂಟೆ ರಸ್ತೆ ಬದಿಯಲ್ಲಿ ಕಾಣಬಹುದು. ಇಲ್ಲಿಯ ವೀರ ಸೊಂಟಕ್ಕೆ ಅಲಂಕೃತಪಟ್ಟಿಯನ್ನು ಕಟ್ಟಿದ್ದು, ಧರಿಸಿರುವ ಕಚ್ಚೆಯು ವಿಶೇಷವಾಗಿದೆ ಮೊಣಕಾಲು ಭಾಗದವರಗೆ ಇಳಿಬಿದ್ದಿರುವ ಹೂಗುಚ್ಚದಂತೆ ಕಾಣುವ ಈ ಉಡುಪು ಸೊಗಸಾಗಿದೆ. ಈ ವೀರನ ಮತ್ತೊಂದು ವಿಶೇಷತೆಯೆಂದರೆ ಮಲ್ಲಿಗೆ ಮೊಗ್ಗಿನಿಂದ ಪೋಣಿಸಿದಂತೆ ಹೆಣೆದಿರುವ ಜಡೆಯು ಮೊಣಕಾಲಿನವರೆಗೆ ಕಾಣುತ್ತಿದ್ದು ಸುಂದರವಾಗಿ ಶಿಲ್ಪಿಯು ಕೆತ್ತಿದ್ದಾನೆ. ಮುಪ್ಪಡಿಘಟ್ಟದ ವೀರಗಲ್ಲಿನಲ್ಲಿ ವೀರನು ಐದು ನೆರಿಗೆಗಳಿಂದ ಕೂಡಿದ ಕಚ್ಚೆಯು ಕತ್ತಿಯಂತೆ ಚೂಪಾಗಿ ಇಳಿಬಿದ್ದಿರುವ ಹಾಗೆ ಬಿಡಿಸಲಾಗಿದೆ. ಇದೇ ರೀತಿಯ ಉಡುಪನ್ನು ಧರಿಸಿರುವ ಶಿವಮೊಗ್ಗ ಮ್ಯೂಸಿಯಂನಲ್ಲಿರುವ ಯಳಲಗೆರೆ ವೀರಗಲ್ಲನ್ನು ಬಹುತೇಕವಾಗಿ ಹೋಲುತ್ತದೆ. ಅಲ್ಲದೆ ತಾಲ್ಲೂಕಿನ ಗುಂಡುಮಗೆರೆ

ಹೊಸಹಳ್ಳಿ ಗ್ರಾಮದ ೨ ವೀರಗಲ್ಲುಗಳು ಚಿಕ್ಕ ಕಾಳೇನಹಳ್ಳಿಯ ವೀರಶಿಲ್ಪಗಳಲ್ಲಿಯೂ ಈ ರೀತಿಯ ಉಡುಪನ್ನು ಧರಿಸಿರುವುದು ಕಂಡುಬರುತ್ತದೆ.

ತಿಮ್ಮಸಂದ್ರದ ವೀರಗಲ್ಲಿನ ವೀರನ ಉಡುಪು ಮೊಣಕಾಲಿನವರಗೆ ಕಚ್ಚೆಯನ್ನು ಧರಿಸಿದ್ದು, ಅಲಂಕೃತ ನೆರಿಗೆಗಳು ಕಂಗೊಳಿಸುತ್ತವೆ. ಅಲ್ಲದೆ ಸೊಂಟಕ್ಕೆ ಸುತ್ತಿರುವ ಬಟ್ಟೆಯ ಮೇಲ್ಭಾಗದಲ್ಲಿ ನೆರಿಗೆಗಳು ಕಂಡುಬರುತ್ತವೆ. ಕಾಲಿನವರೆಗೂ ಕುಚ್ಚಿನಂತೆ ಇಳಿಬಿದ್ದಿರುವ ದೃಶ್ಯವನ್ನು ಕಾಣಬಹುದು. ತಾಲ್ಲೂಕಿನಲ್ಲೇ ಅತ್ಯಂತ ಸುಂದರವಾದ ಉಡುಪನ್ನು ಧರಿಸಿರುವ ವೀರರನ್ನು ಟಂಕಸಾಲಹೊಸಹಳ್ಳಿ ಗ್ರಾಮದಲ್ಲಿನ ವೀರಗಲ್ಲುಗಳು ತಿಳಿಸುತ್ತವೆ. ಇಲ್ಲಿಯ ವೀರ ಕಚ್ಚೆಯನ್ನು ತೊಟ್ಟಿದ್ದು ನೆರಿಗೆಯ ಕುಚ್ಚು ಇಳಿಬಿದ್ದಿದೆ. ಅಲ್ಲದೆ ವೀರನ ಸೊಂಟದಲ್ಲಿ ನೆರಿಗೆಯಂತಹ ಅಲಂಕೃತಪಟ್ಟಿಯೂ ಇದ್ದು ಕತ್ತಿಯನ್ನು ಸೊಂಟದಲ್ಲಿ ಸಿಕ್ಕಿಸಿದ್ದಾನೆ. ವೀರನ ಎರಡೂ ಕಾಲುಗಳ ಪಕ್ಕದಲ್ಲಿ ಎಲೆಯ ರೆಕ್ಕೆಗಳಂತೆ ಇಳಿಬಿದ್ದಿವೆ. ಅಲ್ಲದೆ ವೀರ ತಲೆಯ ಮೇಲೆ ಟೋಪಿ ಧರಿಸಿದಂತೆ ಚಿತ್ರಿಸಲಾಗಿದೆ. ಇದೇ ಸ್ಥಳದ ಮತ್ತೊಂದು ವೀರಗಲ್ಲಿನಲ್ಲಿ ವೀರನನ್ನು ಮತ್ತಷ್ಟು ಅಲಂಕೃತವಾಗಿ ಚಿತ್ರಿಸಲಾಗಿದೆ. ಧರಿಸಿರುವ ಕಚ್ಚೆಯು ನೆರಿಗೆಗಳಿಂದ ಕೂಡಿದ್ದು, ಆಕರ್ಷಕವಾಗಿ ಕಾಣುತ್ತವೆ. ಪಾದದವರೆಗೂ ಇಳಿಬಿದ್ದಿರುವ ಕುಚ್ಚು ದೊಡ್ಡದಾಗಿಯೇ ಚಿತ್ರಿಸಿದ್ದು, ಸೊಂಟದಲ್ಲಿ ಕತ್ತಿಯನ್ನು ಸಿಕ್ಕಿಸಿಕೊಂಡಿದ್ದಾನೆ. ಸೊಂಟದ ಎರಡು ಕಡೆ ರೆಕ್ಕೆಯ ಆಕಾರದ ಕೆತ್ತನೆಯಿದೆ. ಇದೇ ಸ್ಥಳದ ಮತ್ತೊಂದು ವೀರಗಲ್ಲಿನಲ್ಲಿ ವೀರ ಕಚ್ಚೆಯನ್ನು ಧರಿಸಿ ಪಾದಗಳವರೆಗೆ ಇಳಿಬಿದ್ದಿರುವ ನೆರಿಗೆಯಂತಹ ಕುಚ್ಚು, ದುಂಡಾಕೃತಿಯಲ್ಲಿದೆ. ಅಲ್ಲದೆ ಸೊಂಟಕ್ಕೆ ಅಲಂಕೃತ ಪಟ್ಟಿಯನ್ನು ಕಟ್ಟಿದ್ದಾನೆ. ಎರಡೂ ಭುಜದ ಮೇಲಿಂದ ವಸ್ತ್ರವು ಇಳಿಬಿದ್ದಿದ್ದು ಅಲಂಕೃತವಾಗಿ ಬಿಡಿಸಲಾಗಿದೆ. ನಾಗೇನಹಳ್ಳಿಯ ವೀರಗಲ್ಲಿನಲ್ಲಿ ವೀರನು ಬಿಗಿಯಾದ ಉಡುಪನ್ನು ಧರಿಸಿದ್ದಾನೆ. ಇದೇ ರೀತಿಯ ಚಿತ್ರಣವನ್ನು ಹುಲ್ಲುಕುಂಟೆ ಬಳಿಯ ವೀರಗಲ್ಲುಗಳಲ್ಲಿಯೂ ಕಂಡುಬರುತ್ತದೆ. ಇಲ್ಲಿಯ ಮತ್ತೊಂದು ವೀರಗಲ್ಲಿನಲ್ಲಿ ವೀರನು ಬಿಗಿಯಾದ ಉಡುಪನ್ನು ಧರಿಸಿ ನೆರಿಗೆಯಂತಹ ಕೆತ್ತನೆಯು ಕಂಡುಬರುತ್ತದೆ. ಇಲ್ಲಿಯ ಕೆಲವು ವೀರರು ಧರಿಸಿರುವ ಉಡುಪು ಸಾಮಾನ್ಯ ಜನರು ಧರಿಸುವಂತಹ ಉಡುಪಾಗಿದೆ. ಕ್ರಿ.ಶ.ಎಂಟನೆಯ ಶತಮಾನದ ಗಂಗರ ವೀರಗಲ್ಲುಗಳಲ್ಲಿ ಐದು ಜನ ವೀರರು ಬಿಗಿಯಾದ ಉಡುಪನ್ನು ಧರಿಸಿರುವುದು ಕಂಡುಬರುತ್ತದೆ. ಜೈನ ಮುನಿಗಳು ಧರಿಸುವಂತಹ ಉಡುಪಿನಂತೆ ಕಾಣುತ್ತದೆ. ಬಳ್ಳಿಗಾವೆಯ ದಾನ ಶಾಸನಗಳ ಶಿಲ್ಪಗಳ ಉಡುಪುಗಳಿಗೂ ದೊಡ್ಡಬೆಳವಂಗಲದ ವೀರರು ಧರಿಸಿರುವಂತಹ ಉಡುಪುಗಳಿಗೂ ಹೋಲಿಕೆಯಿದೆ. ಇದೇ ಸ್ಥಳದ ನಾಲ್ಕು ವೀರಗಲ್ಲುಗಳಲ್ಲಿ ಬಿಗಿಯಾದ ಕಚ್ಚೆಯನ್ನು ಧರಿಸಿದ್ದು ಸೊಂಟಕ್ಕೆ ಬಿಗಿದಿದ್ದಾರೆ.

ಜಾಲಿಗೆರೆಯ ವೀರಮಾಸ್ತಿಕಲ್ಲೊಂದರಲ್ಲಿ ಬಿಲ್ಲನ್ನು ಹಿಡಿದು ಬಾಣವನ್ನು ಬತ್ತಳಿಕೆಯಿಂದ ಹೊರತೆಗೆಯುತ್ತಿರುವ ವೀರನು ಧರಿಸಿರುವ ಕಚ್ಚೆಯು ನೆರಿಗೆಗಳಿಂದ ಕೂಡಿದೆ. ಬಿಗಿಯಾದ ಉಡುಪನ್ನು

ಧರಿಸಿದ್ದಾನೆ. ನೆರಿಗೆಯಿಂದ ಕೂಡಿದ ಕುಚ್ಚು ಇಳಿಬಿದ್ದಿದೆ. ಈತ ಸೊಂಟಕ್ಕೆ ಕಟ್ಟಿದ ಬಟ್ಟೆಯು ನೆರಿಗೆಯಿಂದಲೇ ಕೂಡಿದ್ದು, ಕಾಲುಗಳಿಗೆ ಕಡಗಗಳನ್ನು ಕಿವಿಗೆ ಆಭರಣಗಳನ್ನು ಧರಿಸಿರುವುದು ತಿಳಿಯುತ್ತದೆ. ರಾಷ್ಟ್ರಕೂಟರ ಕಾಲದ ಅಪ್ರಕಟಿತ ವೀರಗಲ್ಲೊಂದು ಹಾದ್ರಿಪುರದಲ್ಲಿದೆ. ಬಿಲ್ಲನ್ನು ಹಿಡಿದು ಬಾಣವನ್ನು ಕೈಯಲ್ಲಿ ಹಿಡಿದು ಶತ್ರುವನ್ನು ಹಿಂಬಾಲಿಸುತ್ತಿರುವ ವೀರನು ಬಿಗಿಯಾದ ಚೆಡ್ಡಿಯಂತಹ ಉಡುಪನ್ನು ಧರಿಸಿರುವುದು ಕಂಡುಬರುತ್ತದೆ. ತಪಸೀಹಳ್ಳಿಯ ವೀರಮಾಸ್ತಿಕಲ್ಲೊಂದರಲ್ಲಿ ವೀರನು ಶತ್ರುವಿನ ತಲೆಯ ಮೇಲೆ ಕಾಲಿಟ್ಟು ಅವನ ಜುಟ್ಟನ್ನು ಹಿಡಿದು ಎಳೆಯುತ್ತಿರುವ ದೃಶ್ಯ ಕಲಾತ್ಮಕವಾಗಿ ಚಿತ್ರಿತವಾಗಿದೆ. ವೀರನ ಹಿಂದೆ ವೀರನ ಪತ್ನಿಯು ಹೆದರಿನಿಂತಿದ್ದಾಳೆ. ಇಲ್ಲಿಯ ವೀರನ ಉಡುಪು ಸಾಮಾನ್ಯವಾಗಿದ್ದರೂ ಹಾಕಿರುವ ಕಚ್ಚೆ ನೆರಿಗೆಗಳಿಂದ ಅಲಂಕೃತವಾಗಿ ಕುಚ್ಚಿನಂತೆ ಇಳಿಬಿದ್ದಿದೆ. ಸೊಂಟಕ್ಕೆ ಬಿಗಿಯಾದ ವಸ್ತ್ರವನ್ನು ಕಟ್ಟಿ ವಸ್ತ್ರದ ಕೊನೆಯು ಕುಚ್ಚಿನಂತೆ ಬಿಡಿಸಿದ್ದಾರೆ. ತಿಪ್ಪೂರು ಮತ್ತು ಮಾಡೇಶ್ವರದಲ್ಲಿ ಎರಡು ಹಂತದ ವೀರಗಲ್ಲುಗಳಿದ್ದು ಕೆಳಹಂತದ ವೀರರು ಸುಂದರವಾದ ವಿನ್ಯಾಸದಿಂದ ಕೂಡಿದ ಪಟ್ಟಿಯನ್ನು ಸೊಂಟಕ್ಕೆ ಕಟ್ಟಿದ್ದಾರೆ. ಕಚ್ಚೆಯ ಜೊತೆಗೆ ಕುಚ್ಚನ್ನು ಪಾದದವರೆಗೂ ಇಳಿಬಿದ್ದಿರುವುದು ಈ ವೀರಗಲ್ಲುಗಳ ವಿಶೇಷತೆ.

### ಸ್ತ್ರೀಯರ ಉಡುಪು

ಪ್ರಾಚೀನ ಕಾಲದಿಂದಲೂ ಸ್ತ್ರೀಯರು ಅಲಂಕಾರ ಪ್ರಿಯರು ಎಂಬುದಕ್ಕೆ ಹೆಸರಾದವರು. ಸ್ತ್ರೀಯರು ತೊಡುವ ಉಡುಪುಗಳು, ಅಲಂಕಾರಿಕ ವಸ್ತುಗಳಿಗೆ ಮಹತ್ವ ನೀಡುತ್ತಾರೆ ಎಂಬುದು ತಿಳಿದ ವಿಷಯವೇ. ಶಾಸನ ಶಿಲ್ಪಗಳಲ್ಲಿ ಸ್ತ್ರೀಯರ ಉಡುಪುಗಳು ಹಲವು ಬಗೆಯಾಗಿ ನಮಗೆ ಮಾಹಿತಿಯನ್ನು ಒದಗಿಸುತ್ತವೆ. ತಾಲೂಕಿನಲ್ಲಿ ದೊರೆತಿರುವ ಶಾಸನ ಶಿಲ್ಪಗಳಲ್ಲಿ ಮಹಾಸತಿಯರ ಉಡುಪು ಹೆಚ್ಚು ದೊರೆಯುತ್ತದೆ. ಮಹಾಸತಿಯರ ಉಡುಪಿನ ಬಗೆಗೆ ವಿವರಣೆ ನೀಡುವ ಪ್ರಮುಖ ಆಕರಗಳೆಂದರೆ ಶಾಸನ ಶಿಲ್ಪಗಳು ಜನಪದ ಗೀತೆ ಸಾಹಿತ್ಯಕೃತಿಗಳಲ್ಲಿ ಸ್ವಲ್ಪಮಟ್ಟಿಗಿನ ವಿವರಣೆ ಮಾತ್ರ ದೊರೆಯುತ್ತದೆ. ಒಂದು ಜಾನಪದ ಗೀತೆಯು ಮಹಾಸತಿಯರ ಉಡುಪಿನ ಬಗ್ಗೆ ಹೀಗೆ ಹೇಳುತ್ತದೆ.

"ಕುಣಿವಾಗ ಕುಚ್ಚೀನ ಸೀರೆ - ಮೆರಿವಾಗಂಚಿನ ಸೀರೆ
ಕೊಂಡಕೋಗಲುವಾಗ ಚಂದ್ರಾವಿನ ಸೀರೆ
ಕೊಂದಕೋಗಲುವಾಗ ಚಂದ್ರಾವಿನ ಸೀರೆ ತಂದರು
ನಾಗಮ್ಮನ ತವರೂರೋರು"[೨೦]

ಈ ಅಂಶವನ್ನೇ ಹೇಳುವ ಬೇರೊಂದು ಜಾನಪದ ಗೀತೆಯಲ್ಲಿ

"ಉಡುವಾಗೂವಿನ ಸೀರೆ ನಡೆವಾಗ ಕಾಗಿನ ಸೀರೆ
ಕೊಂಡಕೋಗುವಾಗ ಚಂದರಬಾವಿ ಸೀರೆಯ

ತಂದಾರು ಮಾಸ್ತಮ್ಮನ ತವರೋರು"
ಇದೇ ಜಾನಪದ ಗೀತೆಯಲ್ಲಿ[೨೧]
ಎಂಟಾಳೆಗುಂಡು ಎದೆಬಾರ ಮಾಸ್ತಮ್ಮ
ಸಣ್ಣಂಚಿನ ಸೀರೆ ನೆರಿಬಾರ"

ಎಂಬ ಮಾತುಗಳು ಮಹಾಸತಿಯರ ಉಡುಪಿನ ಬಗ್ಗೆ ಹಾಗು ಉಡುವ ಸೀರೆಯ ಬಗ್ಗೆ, ಆ ಸೀರೆಯಬಣ್ಣದ ಬಗ್ಗೆ ಪ್ರಸ್ತಾಪ ಬರುತ್ತದೆ.

ತಿಪ್ಪೂರಿನ ವೀರಮಾಸ್ತಿ ಶಿಲ್ಪದಲ್ಲಿ ಸತಿಯು ಪಾದವರೆಗೂ ಸೀರೆಯನ್ನು ಉಟ್ಟುಕೊಂಡಿದ್ದಾಳೆ. ಸೀರೆಯ ಸೆರಗು ಹಿಂದಕ್ಕೆ ಹಾಕಿದಂತೆ ಕಾಣುತ್ತದೆ. ಸತಿಯು ಮುಂಭಾಗದ ಸೀರೆಯಲ್ಲಿ ನೆರಿಗೆಗಳಿಂದ ಕೂಡಿದೆ. ಸತಿಯ ಎರಡೂ ಕಾಲುಗಳ ಮಂಡಿಯವರಗೆ ಎಲೆಯ ಆಕಾರದ ಕೆತ್ತನೆಯನ್ನು ಮಾಡಿದ್ದಾರೆ. ತಿಪ್ಪೂರು ಗ್ರಾಮದ ಎರಡು ಹಂತದ ವೀರಮಾಸ್ತಿ ಶಿಲ್ಪದಲ್ಲಿ ಇಬ್ಬರು ಸತಿಯರನ್ನು ಚಿತ್ರಿಸಲಾಗಿದೆ. ಈ ಸತಿಯರು ಸೀರೆಯನ್ನು ಮಂಡಿಯ ಕೆಳಭಾಗದವರೆಗೂ ಉಟ್ಟುಕೊಂಡಿದ್ದಾರೆ. ಸೀರೆಯು ನೆರಿಗೆಗಳಿಂದ ಕೂಡಿ ಆಕರ್ಷಕವಾದ ರೀತಿಯಲ್ಲಿ ಇದ್ದು ಸೊಂಟಕ್ಕೆ ಬೇರೊಂದು ಬಟ್ಟೆಯನ್ನು ಸುತ್ತಿಕೊಂಡಿರುವಂತೆ ಚಿತ್ರಿಸಲಾಗಿದೆ. ಹಾಗು ರವಿಕೆಯನ್ನು ಮೊಳಕೈವರೆಗೆ ತೊಟ್ಟಿರುವುದನ್ನು ಕಾಣಬಹುದಾಗಿದೆ. ಹಿರೇಮುದ್ದೇನಹಳ್ಳಿ ಗ್ರಾಮದಲ್ಲಿನ ವೀರಮಾಸ್ತಿಕಲ್ಲೊಂದರಲ್ಲಿ ನಾಲ್ಕು ಜನ ಸ್ತ್ರೀ ಶಿಲ್ಪಗಳನ್ನು ಬಿಡಿಸಲಾಗಿದೆ. ಈ ಶಿಲ್ಪಗಳಲ್ಲಿಯೂ ಪಾದದಿಂದ ಮೇಲ್ಭಾಗಕ್ಕೆ ಸೀರೆಯನ್ನು ಉಟ್ಟುಕೊಂಡಿದ್ದು ಆಕರ್ಷಕವಾದ ಸೀರೆಯ ನೆರಿಗೆಗಳ ದೃಶ್ಯವನ್ನು ನೋಡಬಹುದು. ಸೊಂಟಕ್ಕೆ ಕಟ್ಟಿರುವ ಪಟ್ಟಿಯು ಕಾಣುತ್ತದೆ. ಇಲ್ಲಿನ ಎಲ್ಲಾ ಸತಿಯರ ಉಡುಪು ಒಂದೇ ರೀತಿಯಲ್ಲಿರುವುದು ವಿಶೇಷವಾಗಿದೆ. ಕೆಂಜಗನಾಳ ಗ್ರಾಮದ ವೀರಗಲ್ಲೊಂದರಲ್ಲಿ ಇಬ್ಬರು ಸತಿಯರ ಶಿಲ್ಪವನ್ನು ಬಿಡಿಸಲಾಗಿದ್ದು ಅಶ್ವಾರೋಹಿ ವೀರನ ಹಿಂಭಾಗದ ಸತಿಯ ಶಿಲ್ಪವು ಪಾದದವರಗೆ ಸೀರೆಯನ್ನು ಉಟ್ಟಿದ್ದಾಳೆ. ಸೊಂಟಕ್ಕೆ ಬೇರೆ ಬಟ್ಟೆಯನ್ನು ಕಟ್ಟಿದ್ದು, ಮೂರು ನೆರಿಗೆಗಳಿಂದ ಕೂಡಿದೆ. ಸೊಂಟದ ವಸ್ತ್ರದಿಂದ ಪಾದದವರೆಗೆ ಕುಚ್ಚಿನಂತೆ ಇಳಿಬಿದ್ದಿರುವ ಸೀರೆಯ ಅಂಚು ಹೂವಿನಂತೆ ಅರಳಿದೆ ಸತಿಯು ಮೊಳಕೈವರೆಗೆ ರವಿಕೆಯನ್ನು ತೊಟ್ಟಿದ್ದು ಕಲಾತ್ಮಕತೆಗೆ ಹಿಡಿದ ಕೈಗನ್ನಡಿಯಂತಿದೆ. ಅಶ್ವಾರೋಹಿ ವೀರನ ಮುಂಭಾಗದಲ್ಲಿನ ಸತಿಯ ಶಿಲ್ಪ ವೀರನ ಹಿಂಭಾಗದ ಸತಿಗಿಂತ ದೊಡ್ಡದಾಗಿ ಕೆತ್ತಲಾಗಿದೆ. ಇದೇ ಗ್ರಾಮದ ಮತ್ತೊಂದು ವೀರಗಲ್ಲಿನಲ್ಲಿ ಕುದುರೆಯ ಮೇಲೆ ಏರಿ ಕುಳಿತ ವೀರನ ಮುಂಭಾಗದಲ್ಲಿ ಸ್ತ್ರೀಯು ಹೆದರಿಕೆಯಿಂದ ನಿಂತಿದ್ದಾಳೆ. ಇಲ್ಲಿಯ ಸತಿಯ ಸೀರೆಯು ಪಾದದ ಮೇಲ್ಭಾಗಕ್ಕೆ ತೊಟ್ಟಿದ್ದು ಸೀರೆಯು ನೆರಿಗೆಗಳಿಂದ ಕೂಡಿದೆ. ಇಲ್ಲಿಯೂ ಸಹ ಮೊಳಕೈವರೆಗೆ ರವಿಕೆಯನ್ನು ಚಿತ್ರಿಸಿರುವುದು ಸಹಜವಾಗಿಯೇ ಮೂಡಿಬಂದಿದೆ. ತಪಸೀಹಳ್ಳಿಯ ವೀರಮಾಸ್ತಿ ಶಿಲ್ಪವೊಂದರಲ್ಲಿ ಸತಿಯನ್ನು ಅಲಂಕಾರ ಭೂಷಿತಳಾಗಿ ವೀರನ ಹಿಂಭಾಗದಲ್ಲಿದ್ದು, ಮುಂದೆ

ಶತ್ರುವಿನ ರುಂಡದ ಮೇಲೆ ಕಾಲಿಟ್ಟು ಜುಟ್ಟನ್ನು ಹಿಡಿದು ಎಳೆಯುತ್ತಿರುವಂತೆ ಚಿತ್ರವನ್ನು ಬಿಡಿಸಲಾಗಿದೆ. ಇಲ್ಲಿಯ ಸತಿಯು ಸೀರೆಯನ್ನು ಪಾದವರೆಗೆ ಉಟ್ಟುಕೊಂಡಿದ್ದಾಳೆ. ಸುಮಾರು ಹತ್ತು ನೆರಿಗೆಗಳಿಂದ ಕೂಡಿದ ಸ್ತ್ರೀ ಶಿಲ್ಪದ ಸತಿಯು ಸೊಂಟಕ್ಕೆ ಬೇರೊಂದು ಬಟ್ಟೆಯಿಂದ ಅಲ್ಲಿ ನೆರಿಗೆಗಳು ಬರುವಂತೆ ಉಡುಪನ್ನು ಧರಿಸಿದ್ದಾಳೆ. ಮೊಳಕೈವರೆಗೆ ರವಿಕೆಯನ್ನು ತೊಟ್ಟಿದ್ದು ಕುತ್ತಿಗೆಗೆ ಸರವನ್ನು ಧರಿಸಿರುವುದು ಸತಿಯ ಸೌಂದರ್ಯವನ್ನು ಹಿಮ್ಮಡಿಗೊಳಿಸಿದೆ.

ಜಾಲಿಗೆರೆ ವೀರಗಲ್ಲೊಂದರಲ್ಲಿ ವೀರನು ಬಿಲ್ಲನ್ನು ಹಿಡಿದು ಬತ್ತಳಿಕೆಯಿಂದ ಬಾಣವನ್ನು ತೆಗೆದು, ಶತ್ರುಗಳ ಸಂಹಾರಕ್ಕೆ ನಿಂತ ವೀರನ ಹಿಂಭಾಗದಲ್ಲಿನ ಸತಿಯು ದಿಗ್ಭ್ರಾಂತಳಾಗಿ ನೋಡುತ್ತಿದ್ದಾಳೆ. ಸತಿಯ ಶಿಲ್ಪವನ್ನು ಅತ್ಯಂತ ಚಿಕ್ಕದಾಗಿ ಕೆತ್ತಲಾಗಿದ್ದು ಸೀರೆಯ ನೆರಿಗೆಗಳಿಂದ ಕೂಡಿದ ಲಂಗದಂತೆ ಕಾಣುತ್ತದೆ. ಕುಪ್ಪಸವನ್ನು ಮೊಳಕೈವರಗೆ ಕೆತ್ತಲಾಗಿದ್ದು ದರ್ಪಣ ಸುಂದರಿಯಂತೆ ಕಂಗೊಳಿಸುತ್ತಾಳೆ. ಇದೇ ರೀತಿಯ ಮತ್ತೊಂದು ಸತಿಯ ಶಿಲ್ಪವು ತಿಮ್ಮಸಂದ್ರದಲ್ಲಿದೆ. ಅಪರೂಪದ ಸತಿ ಶಿಲ್ಪವೊಂದು ಹುಲುಕುಂಟೆ ರಸ್ತೆಯ ಬದಿಯಲ್ಲಿರುವ ವೀರಗಲ್ಲೊಂದರಲ್ಲಿ ಸತಿಯು ವೀರನ ಕೈಹಿಡಿದು ಕೊಂಡಿರುವುದನ್ನು ಚಿತ್ರಿಸಲಾಗಿದೆ. ಇಲ್ಲಿ ವೀರನನ್ನು ಎತ್ತರವಾಗಿಯೂ ಸ್ತ್ರೀ ಶಿಲ್ಪವನ್ನು ಚಿಕ್ಕದಾಗಿ ಕೊರೆಯಲಾಗಿದ್ದು, ಪುಟ್ಟಮಕ್ಕಳಿಗೆ ತೊಡಿಸುವ ಲಂಗದಂತೆ ಉಡುಪನ್ನು ಧರಿಸಿದ್ದಾಳೆ. ಲಂಗದ ಮೇಲೆ ನೆರಿಗೆಗಳು ಕಂಗೊಳಿಸುತ್ತವೆ.

ಟಂಕಸಾಲ ಹೊಸಹಳ್ಳಿ ಗ್ರಾಮದಲ್ಲಿ ಪಾಳೇಯಗಾರರ ಕಾಲದ ವೀರಗಲ್ಲೊಂದರಲ್ಲಿ ವೀರನ ಎರಡೂ ಕಡೆ ಸತಿಯರಿಬ್ಬರನ್ನು ಸಮಪ್ರಮಾಣದಲ್ಲಿ ಚಿತ್ರಿಸಿದ್ದು, ಒಂದೇ ರೀತಿಯ ಉಡುಪನ್ನು ಧರಿಸಿದ್ದಾರೆ. ಸತಿಯರಿಬ್ಬರೂ ಸೀರೆಯನ್ನು ಉಟ್ಟಿದ್ದು ಸೆರಗನ್ನು ಹಿಂದಕ್ಕೆ ಹಾಕಿದ್ದಾರೆ. ಸೊಂಟದಲ್ಲಿ ನೆರಿಗೆಗಳಿದ್ದು, ಪಾದಗಳು ಕಾಣದ ಹಾಗೆ ಸೀರೆಯನ್ನು ಉಡಲಾಗಿದೆ. ಮೊಳಕೈವರೆಗೂ ರವಿಕೆಯನ್ನು ತೊಟ್ಟಿದ್ದು ಕಿವಿ, ಕುತ್ತಿಗೆ, ಎರಡೂ ಕೈಗಳಿಗೆ, ಬೈತಲೆಗೆ ಆಭರಣಗಳನ್ನು ಧರಿಸಿದ್ದಾರೆ. ಸತಿಶಿಲ್ಪಗಳು ತಾಲ್ಲೂಕಿನಲ್ಲೇ ಅತ್ಯಂತ ಸುಂದರವಾದ ಶಿಲ್ಪಗಳಾಗಿವೆ.

ಇಲ್ಲಿನ ಎಲ್ಲಾ ಶಾಸನಶಿಲ್ಪಗಳಲ್ಲಿನ ಪುರುಷರ ಹಾಗೂ ಸ್ತ್ರೀಯರ ಉಡುಪುಗಳು ಸಾಮಾನ್ಯವಾಗಿ ಒಂದೇ ಮಾದರಿಯಲ್ಲಿ ಕಂಡುಬರುತ್ತವೆ. ಅಷ್ಟೊಂದು ಪ್ರಾದೇಶಿಕ ವ್ಯತ್ಯಾಸಗಳು ಕಂಡುಬರುವುದಿಲ್ಲ ವೆಂದೇ ಹೇಳಬಹುದು.

### ಆಭರಣಗಳು

ಮನುಷ್ಯನ ಸೌಂದರ್ಯವನ್ನು ಹೆಚ್ಚಿಸುವ ಸಾಧನಗಳೆಂದರೆ ಆಭರಣಗಳು. ಸಮಾಜದಲ್ಲಿ ಮನುಷ್ಯನಿಗೆ ಉಡುಪು ಎಷ್ಟು ಮುಖ್ಯವೋ ಆಭರಣಗಳು ಸಹ ಅಷ್ಟೇ ಮುಖ್ಯವಾದ ಸಾಧನಗಳಾಗಿವೆ. ನಮ್ಮ ಸಮಾಜದಲ್ಲಿ ಅಭರಣವಿಲ್ಲದ ಸ್ತ್ರೀಯರು ಇಲ್ಲ. ವರ್ಷಕ್ಕೊಮ್ಮೆ ಬರುವ ಹಬ್ಬ ಹರಿದಿನಗಳಲ್ಲಿ

ಮದುವೆ ಸಮಾರಂಭಗಳಲ್ಲಿ ಆಭರಣಗಳ ಅಬ್ಬರವೇ ಹೆಚ್ಚು ಇಲ್ಲಿಯ ಮುಖ್ಯ ಧೋರಣೆ ಎಂದರೆ ಮೈತುಂಬ ಆಭರಣ ಧರಿಸಿದಷ್ಟು ಸಮಾಜದಲ್ಲಿ ಅವರ ಸ್ಥಾನಮಾನ, ಅಂತಸ್ತುಗಳು ಹೆಚ್ಚುತ್ತವೆಂಬ ಭಾವನೆ. ದಟ್ಟವಾಗಿ ಹರಡಿದೆ.

ಆಭರಣಗಳನ್ನು ಧರಿಸುವ ಪದ್ಧತಿ ಪ್ರಾಚೀನ ಕಾಲದಿಂದಲೂ ಬಳಕೆಯಲ್ಲಿದೆ. ಕ್ರಿಪೂ.ಮೂರು ಸಾವಿರ ವರ್ಷಗಳ ಹಿಂದೆ ಆಭರಣಗಳ ಇತಿಹಾಸ ಪ್ರಾರಂಭವಾಗುತ್ತದೆ. ಹರಪ್ಪ ಮತ್ತು ಮೆಹೆಂಜೋದಾರೋವಿನಲ್ಲಿ ದೊರೆತಿರುವ ಅವಶೇಷಗಳೇ ಇದಕ್ಕೆ ಸಾಕ್ಷಿಯಾಗಿವೆ. ಹರಪ್ಪಾ ಉತ್ಖನನದಲ್ಲಿ ಸುಟ್ಟ ಮಣ್ಣಿನ ಮಾತೃದೇವತೆಯ ಗೊಂಬೆ ದೊರಕಿದೆ. ಈ ಮಾತೃದೇವತೆಯ ಕೊರಳಲ್ಲಿ ಪದಕವಿರುವ ಹಾರದ ಚಿತ್ರಣವಿದೆ ಹಾಗೆಯೇ ಮಹೆಂಜೋದಾರೋವಿನಲ್ಲಿ ದೊರೆತಿರುವ ಕಂಚಿನ ಲೋಹದ ನರ್ತಕಿಯ ಗೊಂಬೆಯು ತೋಳಿನಿಂದ ಹಿಡಿದು ಮುಂಗೈಯವರೆಗೂ ಬಳೆಗಳನ್ನು ಧರಿಸಿದ್ದು, ಕೊರಳಲ್ಲಿ ಹಾರವನ್ನು ಸಹ ಧರಿಸಿದೆ. ಈ ಮಾಹಿತಿಗಳನ್ನು ಗಮನಿಸಿದಾಗ ಆಭರಣಗಳನ್ನು ತೊಡುವ ಅಥವಾ ಧರಿಸುವ ಸಂಪ್ರದಾಯ ಕ್ರಿಪೂ.ದ ಕಾಲದಿಂದಲೂ ಬಳಕೆಯಲ್ಲಿದೆ ಎನ್ನಬಹುದು. ಕ್ರಿಶ.ಎಂಟನೇ ಶತಮಾನದಿಂದ ಅಂದರೆ ಮಧ್ಯಕಾಲೀನ ಕಾಲದಿಂದ ಕರ್ನಾಟಕದ ಸಾಹಿತ್ಯಕೃತಿಗಳು, ಚಿತ್ರಗಳು ಮತ್ತು ಶಿಲ್ಪಕಲೆಗಳಿಂದ ಆಭರಣ ಕಲೆಯು ಯಾವ ರೀತಿಯಲ್ಲಿ ಬೆಳೆಯಿತು ಎನ್ನುವುದನ್ನು ತಿಳಿಯಬಹುದು. ಈ ಕಲೆಯು ಸಾಮ್ರಾಜ್ಯಗಳಾದ ಚಾಲುಕ್ಯ-ಹೊಯ್ಸಳ ಮತ್ತು ವಿಜಯನಗರ ಕಾಲದಲ್ಲಿ ಉನ್ನತ ಹಂತವನ್ನು ತಲುಪಿತ್ತು. ಇವರ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳಲ್ಲಿ ಮತ್ತು ಶಿಲ್ಪಗಳಲ್ಲಿ ಆಭರಣಗಳ ಬಗೆಗೆ ಮಾಹಿತಿ ದೊರೆಯುತ್ತದೆ.

**ಬೈತಲೆ ಸರ :** ಟಂಕಸಾಲ ಹೊಸಹಳ್ಳಿಯ ವೀರಗಲ್ಲೊಂದರಲ್ಲಿ ಇಬ್ಬರು ಸತಿಯರು ಒಂದು ಎಳೆಸರದ ಆಭರಣವನ್ನು ನೆತ್ತಿಯಿಂದ ಹಣೆಯ ಮೇಲೆ ಸರವನ್ನು ಇಳಿಬಿಟ್ಟಿದ್ದಾಳೆ. ತಾಲ್ಲೂಕಿನಲ್ಲೇ ಅತ್ಯಂತ ವಿಶಿಷ್ಟವಾದ ವೀರಮಾಸ್ತಿಕಲ್ಲು ಇದಾಗಿದೆ.

**ಓಲೆ :** ಶಾಸನ ಶಿಲ್ಪಗಳಲ್ಲಿ 'ಒಲೆಯ ವಿವಿಧ ರೂಪಗಳು ನಮಗೆ ದೊರೆಯುತ್ತವೆ. ಟಂಕಸಾಲ ಹೊಸಹಳ್ಳಿಯ ವೀರಗಲ್ಲಿನ ಇಬ್ಬರು ಸತಿಯರು ಒಂದೇ ತರಹದ ಓಲೆಗಳನ್ನು ಧರಿಸಿದ್ದಾರೆ. ಈ ಓಲೆಗಳು ಅಗಲವಾಗಿದ್ದು, ಕಿವಿಯಿಂದ ಕೆಳಗೆ ಜೋತು ಬಿದ್ದಂತೆ ಚಿತ್ರಿಸಲಾಗಿದೆ. ಇದೇ ರೀತಿಯ ಓಲೆಯ ಆಭರಣಗಳನ್ನು ಧರಿಸಿರುವ ಶಿಲ್ಪಗಳು ಶಿವಮೊಗ್ಗ ಜಿಲ್ಲೆಯ ಬಸವನಕಲ್ಲು ಇದೇ ಜಿಲ್ಲೆಯ ಚೆನ್ನಗಿರಿ ತಾಲ್ಲೂಕಿನ ಬೊಮ್ಮೇನಹಳ್ಳಿ, ಹಾವೇರಿಜಿಲ್ಲೆ ಬ್ಯಾಡಗೀ ತಾಲ್ಲೂಕಿನ ಹಿರೇ ಅಣಜಿ, ಇದೇ ಜಿಲ್ಲೆಯ ಹಿರೇಕೆರೂರು ತಾಲ್ಲೂಕಿನ ಹಿರೇಕೊಣತಿ ಸ್ಥಳಗಳಲ್ಲಿನ ವೀರಮಾಸ್ತಿಕಲ್ಲುಗಳನ್ನು ಹೋಲುತ್ತವೆ.

ದೊಡ್ಡಬಳ್ಳಾಪುರ ತಾಲ್ಲೂಕಿನ ಎದ್ದಲಹಳ್ಳಿಯ ವೀರಮಾಸ್ತಿಕಲ್ಲಿನ ಶಿಲ್ಪವೊಂದರಲ್ಲಿ ಸತಿಯ ಕಿವಿಗಳಿಗಿಂತ ಕಿವಿಯ ಓಲೆಗಳೇ ದೊಡ್ಡದಾಗಿ ಚಿತ್ರಿಸಿದೆ. ಇದೇ ಮಾಹಿತಿಯನ್ನು ತಿಮ್ಮಸಂದ್ರ

ತಪಸೀಹಳ್ಳಿ, ಕೆಂಜಗನಾಳ ಹಾಗು ಹಿರೇಮುದ್ದೇನಹಳ್ಳಿಯ ವೀರಗಲ್ಲುಗಳು ಹೇಳುತ್ತವೆ. ಟಂಕಸಾಲ ಹೊಸಹಳ್ಳಿಯ ವೀರಗಲ್ಲಿನ ವೀರನು ಒಂದೊಂದು ಕಿವಿಗೂ ನಾಲ್ಕು ಚಿಕ್ಕ ಚೆಂಡಿನ ಆಕಾರದ ಆಭರಣಗಳನ್ನು ಕಿವಿಯಿಂದ ಇಳಿಬಿಟ್ಟಿದ್ದಾನೆ.

**ರಿಂಗು :** ಕಿವಿಗೆ ಧರಿಸುವ ಈ ಆಭರಣ ಬಳೆಯ ಆಕಾರದಲ್ಲಿ ಚಿಕ್ಕದಾಗಿ ಮಾಡಲಾಗಿದೆ. ಬೂಚನಹಳ್ಳಿ ವೀರಗಲ್ಲಿನಲ್ಲಿ ವೀರ ಎರಡೂ ಕಿವಿಗಳಿಗೆ ರಿಂಗಿನ ರೀತಿಯ ಆಭರಣವನ್ನು ಧರಿಸಿದ್ದಾನೆ. ಗೆದ್ದಲಪಾಳ್ಯ ಹುಲಿಬೇಟೆ ವೀರಗಲ್ಲಿನಲ್ಲಿಯೂ ಸಹ ವೀರನು ರಿಂಗಿನ ಆಕಾರದ ಆಭರಣವನ್ನು ಧರಿಸಿರುವುದು ಚಿತ್ರಿತವಾಗಿದೆ. ಹೊಸಹಳ್ಳಿ ಗ್ರಾಮದ ವೀರಗಲ್ಲುಗಳಲ್ಲಿ ಸತಿಯರು ಬಳೆಯ ಅಕಾರದ ರಿಂಗುಗಳನ್ನು ಧರಿಸಿರುವುದು ಸ್ಪಷ್ಟವಾಗಿ ತಿಳಿಯುತ್ತದೆ.

**ಕಂಠೀಹಾರ :** ಹೀರೇಮುದ್ದೇನಹಳ್ಳಿಯ ವೀರಗಲ್ಲಿನಲ್ಲಿ ಏಳುಶಿಲ್ಪಗಳು ಕಂಡುಬರುತ್ತವೆ. ಈ ಏಳೂ ಶಿಲ್ಪಗಳಲ್ಲಿ ಎದೆಯ ಮಟ್ಟದವರೆಗಿನ ಹಾರಗಳು ಎರಡು ಹಂತಗಳಲ್ಲಿ ಹರಡಿದೆ. ಬೂಚನಹಳ್ಳಿ ತಿಮ್ಮಸಂದ್ರದ ವೀರಮಾಸ್ತಿ ಶಿಲ್ಪದ ವೀರರ ಕೊರಳಲ್ಲಿ ಎರಡು ಹಂತದಲ್ಲಿ ಹರಡಿದ್ದು ಸರದ ಮುಂಭಾಗದ ಮಧ್ಯದಲ್ಲಿ ಕುಚ್ಚನ್ನು ಬಿಡಿಸಲಾಗಿದೆ. ಜಾಲಿಗೆರೆಯ ವೀರಮಾಸ್ತಿಕಲ್ಲಿನಲ್ಲಿ ವೀರ ಮತ್ತು ಸತಿಯರಿಬ್ಬರೂ ವೀರನು ಎದೆಯವರೆಗೂ, ಸತಿಯು ಸ್ತನದವರೆಗೂ ಕಂಠಿಹಾರಗಳು ಐದು ಹಂತಗಳಲ್ಲಿ ಹರಡಿದೆ. ಚಿಕ್ಕ ವಡಗೆರೆಯ ಶಿಲ್ಪವೊಂದರಲ್ಲಿ ವೀರನು ಕೊರಳಿಗೆ ಹಾರವನ್ನು ಧರಿಸಿದ್ದು, ಮೂರು ಹಂತಗಳಲ್ಲಿ ಹರಡಿದ್ದು ಸರದ ಮಧ್ಯಭಾಗ ಹೂಗುಚ್ಛದಂತೆ ಹರಡಿದೆ. ಟಂಕಸಾಲ ಹೊಸಹಳ್ಳಿ ಗ್ರಾಮದ ವೀರಗಲ್ಲಿನಲ್ಲಿ ವೀರನು ಎರಡು ಎಳೆಯ ಹಾರವನ್ನು ಧರಿಸಿದ್ದು, ಎದೆಯ ಮಟ್ಟದವರೆಗೆ ಇಳಿಬಿದ್ದಿದೆ. ಸತಿಯರಿಬ್ಬರ ಕೊರಳಲ್ಲೂ ಎರಡು ಹಂತದ ಹಾರವಿದ್ದು, ಮೊದಲನೆಯ ಹಂತದ ಹಾರವು ಮಂಗಳ ಸೂತ್ರದಂತೆ ಕಂಡುಬರುತ್ತದೆ. ಇದೇ ರೀತಿಯ ಕಂಠಿಹಾರವನ್ನು ಧರಿಸಿರುವ ವೀರಗಲ್ಲುಗಳು ಹಾಲೇನಹಳ್ಳಿ ಗ್ರಾಮದಲ್ಲೂ ಇವೆ.

**ಬಳೆ :** ಮುತ್ತೈದೆಯರು ತೊಡುವ ಒಂದು ಆಭರಣ ಹಾಗೂ ಲಕ್ಷಣವೂ ಹೌದು. ಈ ರೀತಿಯ ಬಳೆಗಳು ಸತಿ ಶಿಲ್ಪಗಳಲ್ಲಿ ಮಾತ್ರ ದೊರೆಯುತ್ತವೆ. ಆದರೆ ಇವುಗಳನ್ನು ಅಷ್ಟೊಂದು ಕಲಾತ್ಮಕವಾಗಿ ಹಾಗೂ ಸೂಕ್ಷ್ಮವಾಗಿ ಕೆತ್ತಿರುವುದಿಲ್ಲ. ಟಂಕಸಾಲ ಹೊಸಹಳ್ಳಿಯ ವೀರಶಾಸನಶಿಲ್ಪದಲ್ಲಿ ಸತಿಯರಿಬ್ಬರು ಕೈಗಳಿಗೆ ಮೂರು-ಮೂರು ಬಳೆಗಳನ್ನು ಧರಿಸಿದ್ದಾರೆ. ಎದ್ದಲಹಳ್ಳಿ ಗ್ರಾಮದ ವೀರಗಲ್ಲಿನಲ್ಲಿ ಸತಿಯು ಒಂದೊಂದು ಬಳೆಯನ್ನು ಧರಿಸಿದ್ದಾಳೆ. ಜಾಲಿಗೆರೆ ತಿಪ್ಪೂರು, ಲಿಂಗನಹಳ್ಳಿ, ಕೋಡಿಹಳ್ಳಿ, ಕೊನಘಟ್ಟ, ಹಿರೇಮುದ್ದೇನಹಳ್ಳಿ, ಕುರುವಿಗೆರೆ, ಮೆಳೆಕೋಟೆ ವೀರಮಾಸ್ತಿ ಶಿಲ್ಪಗಳಲ್ಲಿ ಸತಿಯರು ಬಳೆಗಳನ್ನು ಧರಿಸಿರುವುದು ಕಂಡುಬರುತ್ತದೆ. ಭದ್ರಾವತಿ, ಬಸವನಕಲ್ಲು ಸ್ಥಳಗಳಲ್ಲಿನ ವೀರಮಾಸ್ತಿಕಲ್ಲುಗಳಲ್ಲಿಯೂ ಸಹ ಈ ಮಾಹಿತಿಯನ್ನು ಅರಿಯಬಹುದು. ದೊಡ್ಡ ಹೆಜ್ಜಾಜಿಯ ಒಕ್ಕೈಮಾಸ್ತಿಕಲ್ಲಿನಲ್ಲಿ ಮೂರು ಬಳೆಗಳನ್ನು ಸತಿಯ ಕೈಯಲ್ಲಿ ಚಿತ್ರಿಸಿರುವುದು ಸ್ಪಷ್ಟವಾಗಿ ತಿಳಿಯುತ್ತದೆ.

**ಕಡಗ :** ಶಾಕಲದೇವನ ಪುರದ ವೀರಗಲ್ಲಿನಲ್ಲಿ ವೀರನು ಕೈಗಳಿಗೆ ಮತ್ತು ಕಾಲುಗಳಿಗೆ ದುಂಡಾದ ಕಡಗಗಳನ್ನು ಧರಿಸಿದ್ದಾನೆ. ಮಧುರೆಯ ವೀರಗಲ್ಲಿನ ವೀರ ಕಾಲುಗಳಿಗೆ ವಾಣಿಗರಹಳ್ಳೀಯ ಶಿಲ್ಪದ ವೀರನು ಕಾಲು ಮತ್ತುಕೈಗಳಿಗೂ ಕಡಗಳನ್ನು, ಟಂಕಸಾಲಹೊಸಹಳ್ಳಿ ವೀರಗಲ್ಲಿನಲ್ಲಿ ಕೈಗಳಿಗೆ ಚಪ್ಪಟೆಯಾದ, ಕಾಲುಗಳಿಗೆ ದುಂಡಾದ ಕಡಗಗಳು, ಕೆಸ್ತೂರಿನ ವೀರಗಲ್ಲು, ಗಂಗಸಂದ್ರದ ವೀರಗಲ್ಲುಗಳು ದೊಡ್ಡಬೆಳವಂಗಲದ ವೀರಗಲ್ಲುಗಳು ಕೈ ಮತ್ತು ಕಾಲುಗಳೆರಡಕ್ಕೂ ಕಡಗಗಳನ್ನು ಧರಿಸಿರುವುದು ತಿಳಿದುಬರುತ್ತದೆ. ಲಿಂಗನಹಳ್ಳಿ, ಎದ್ದಲಹಳ್ಳಿ, ನಾಗೇನಹಳ್ಳಿಯ ಶಾಸನಶಿಲ್ಪಗಳಲ್ಲಿ ವೀರರು ಕಾಲಿಗೆ ಮಾತ್ರ ಕಡಗಗಳನ್ನು ಧರಿಸಿದ ಚಿತ್ರಣವಿದೆ.

**ಡಾಬು :** ಈ ಕಟಿಸೂತ್ರವನ್ನು ಗ್ರಾಮೀಣ ಭಾಷೆಯಲ್ಲಿ ಇಂದಿಗೂ ಡಾಬು ಎಂದು ಕರೆಯುತ್ತಾರೆ. ಇದನ್ನು ಸೊಂಟಕ್ಕೆ ಸುತ್ತಲೂ ಸುತ್ತಿಕೊಳ್ಳುತ್ತಾರೆ. ಸೊಂಟಕ್ಕೆ ಸೌಂದರ್ಯವನ್ನು ನೀಡುವ ಕಟಿಸೂತ್ರ ಸಾಧಾರಣ ಪದಕದಂತೆ ಇದೆ. ಟಂಕಸಾಲ ಹೊಸಹಳ್ಳಿ ಗ್ರಾಮದ ವೀರಗಲ್ಲುಗಳಲ್ಲಿ ವೀರರು ಪಟ್ಟಿಯಂತೆ ಕಾಣುವ ಪದಕಗಳನ್ನು ಧರಿಸಿದ್ದಾರೆ. ಇದೇ ರೀತಿಯ ಮತ್ತೊಂದು ಆಭರಣ ಗಂಗಸಂದ್ರದ ವೀರಗಲ್ಲಿನಲ್ಲಿ ಕಂಡುಬಂದಿದೆ.

**ಕಾಲ್ಕಡಗ :** ಬಳೆಯ ಆಕಾರದಲ್ಲಿ ಇರುವ ದಪ್ಪನಾದ ಆಭರಣವಿದು. ಇದನ್ನು ಕಾಲಿಗೆ ಧರಿಸುವುದರಿಂದ ಕಾಲ್ಕಡಗ ಎನ್ನುವರು. ಈ ರೀತಿಯ ಆಭರಣಗಳು ಶಾಸನ ಶಿಲ್ಪಗಳಲ್ಲಿ ಕಂಡುಬರುತ್ತವೆ. ಮಧುರೆಯ ವೀರಗಲ್ಲಿನಲ್ಲಿ ದುಂಡಾಗಿರುವ ಕಾಲ್ಗಡವನ್ನು ಧರಿಸಿದ್ದಾರೆ. ಹೊಸಹಳ್ಳಿಯ ವೀರಗಲ್ಲಿನಲ್ಲಿ ದಪ್ಪನಾದ ಕಡಗವನ್ನು ಕಾಲಿಗೆ ಧರಿಸಿದ್ದಾನೆ. ನಾಗೇನಹಳ್ಳಿಯ ವೀರಗಲ್ಲಿನಲ್ಲಿ ವೀರ ಮತ್ತು ಸತಿಯರಿಬ್ಬರೂ ಕಾಲಿಗೆ ಕಡಗಗಳನ್ನು ಧರಿಸಿದ್ದಾರೆ. ಅದೇ ರೀತಿ ನೆಲ್ಲುಗುದಿಗೆ ವೀರಗಲ್ಲಿನ ವೀರನು ಸಹ ದಪ್ಪನಾದ ಕಡಗಗಳನ್ನು ಧರಿಸಿದ್ದಾರೆ. ಅದೇ ರೀತಿ ನೆಲ್ಲುಗುದಿಗೆ ವೀರನು ಸಹ ದಪ್ಪನಾದ ಕಡಗಗಳನ್ನು ಎರಡೂ ಕಾಲುಗಳಿಗೆ ಧರಿಸಿದ್ದಾನೆ. ಗಂಗಸಂದ್ರದ ವೀರಗಲ್ಲಿನಲ್ಲಿ ಮತ್ತು ಹಿರೇಮುದ್ದೇನಹಳ್ಳಿಯ ವೀರಗಲ್ಲಿನಲ್ಲಿ ವೀರನು ಬಲಗಾಲಿಗೆ ಮಾತ್ರ ಕಾಲ್ಗಡಗಳನ್ನು ಧರಿಸಿದ್ದಾನೆ. ತಪಸೀಹಳ್ಳಿಯ ವೀರ ಎರಡೂ ಕಾಲುಗಳಿಗೆ ಎರಡೆರಡು ಕಾಲ್ಗಡಗಗಳು, ಜಾಲಿಗೆರೆ ಬೂಚನಹಳ್ಳಿ, ಗೆದ್ದಲಪಾಳ್ಯ, ಹುಲ್ಲುಕುಂಟೆ, ದೊಡ್ಡವಡಗೆರೆ, ಪುರುಷನಹಳ್ಳಿ, ವೀರಗಲ್ಲುಗಳಲ್ಲಿ ವೀರರು ಎರಡೆರಡು ಕಾಲ್ಗಡಗಳನ್ನು ಧರಿಸಿಕೊಂಡ ಶೌರ್ಯದ ಸಂಕೇತದಂತಿದೆ.

**ಗೆಜ್ಜೆ :** ಕಾಲಿಗೆ ಧರಿಸುವ ಈ ಆಭರಣ ಸ್ತ್ರೀಯರಿಗೆ ಅತ್ಯಂತ ಪ್ರಿಯವಾದುದು. ಆದರೆ ಶಾಸನ ಶಿಲ್ಪಗಳಲ್ಲಿ ಗೆಜ್ಜೆಯ ಬಗ್ಗೆ ಸ್ಪಷ್ಟ ಚಿತ್ರಣ ನಿಖರವಾಗಿ ನಮಗೆ ದೊರೆಯುವುದಿಲ್ಲ. ಏಕೆಂದರೆ ಧರಿಸಿರುವ ಸೀರೆಯು ಸತಿಯರ ಪಾದಗಳನ್ನು ಮುಚ್ಚಿರುವುದರಿಂದ ಹಾಗು ಸತಿಯರ ಶಿಲ್ಪಗಳು ಅರ್ಧ ನೆಲದವರಗೆ ಭೂಮಿಯಲ್ಲಿ ಹೂತು ಹೋಗಿರುವುದರಿಂದ ಸ್ಪಷ್ಟವಾದ ಮಾಹಿತಿಯ ಚಿತ್ರಣ ನಮಗೆ ದೊರೆಯುವುದಿಲ್ಲ.

**ಕಿರೀಟ :** ಕಿರೀಟ ಧರಿಸಿರುವ ಚಿತ್ರಗಳು ಶಾಸನ ಶಿಲ್ಪದಲ್ಲಿ ಬಹಳ ಕಡಿಮೆ ಪ್ರಮಾಣದಲ್ಲಿ ಕಂಡುಬರುತ್ತವೆ. ಅಪರೂಪದ ವೀರಗಲ್ಲೊಂದು ಟಂಕಸಾಲ ಹೊಸಹಳ್ಳಿಯ ವೀರ ಟೊಪ್ಪಗೆಯ ಆಕಾರದಲ್ಲಿರುವ ಕಿರೀಟವನ್ನು ಧರಿಸಿರುವುದು ಕಂಡುಬರುತ್ತದೆ. ಶಾಸನ ಶಿಲ್ಪ ಕ್ಷೇತ್ರದಲ್ಲಿ ಹೊಯ್ಸಳರ ಕಾಲದ ವೀರಗಲ್ಲುಗಳಲ್ಲಿ ಹೆಚ್ಚಾಗಿ ವೀರರು ಮತ್ತು ಅಪ್ಸರೆಯರು ಕಿರೀಟವನ್ನು ಧರಿಸಿರುವುದು ತಿಳಿದು ಬರುತ್ತದೆ.

**ಕೇಶವಿನ್ಯಾಸ :** ಶೃಂಗಾರ ಮಾಡಿಕೊಳ್ಳುವುದು ಸ್ತ್ರೀಯರಿಗೆ ಒಂದು ಕಲೆಯಾಗಿತ್ತು. ಇದು ಪ್ರಾಚೀನ ಕರ್ನಾಟಕದಲ್ಲಿ ಹೆಚ್ಚಾಗಿ ರೂಢಿಯಲ್ಲಿತ್ತು. ಈ ಒಂದು ಕಲೆಯ ಬಗ್ಗೆ ನಮ್ಮ ಶಾಸನ ಶಿಲ್ಪಗಳು ವಿವರಣೆಯನ್ನು ಒದಗಿಸುತ್ತವೆ. ಸ್ತ್ರೀಯರಂತೆ ಪುರುಷರೂ ಸಹ ಜಡೆಯನ್ನು ಹಿಂದಕ್ಕೆ ಬಿಟ್ಟು ಗಂಟುಗಳನ್ನು ಹಾಕಿಕೊಳ್ಳುತ್ತಿದ್ದರು. ಶಾಸನ ಶಿಲ್ಪಗಳಲ್ಲಿ ಸತಿಯರು ಸಾಮಾನ್ಯವಾಗಿ ಕೂದಲನ್ನು ಹಿಂದಕ್ಕೆ ಗಂಟು ಹಾಕಿಕೊಂಡಿರುವರು. ತಪಸೀಹಳ್ಳಿಯ ವೀರಗಲ್ಲಿನಲ್ಲಿ ಸತಿಯು ಕೂದಲಿನ ಗಂಟನ್ನು ಎಡಭಾಗಕ್ಕೆ ಹಾಕಿರುವುದನ್ನು ಚಿತ್ರಿಸಲಾಗಿದೆ. ಗಂಗಸಂದ್ರ, ಹುಲ್ಲುಕುಂಟೆ, ಹಿರೇಮುದ್ದೇನಹಳ್ಳಿ, ಜಾಲಿಗೆರೆಯ ವೀರಗಲ್ಲುಗಳಲ್ಲಿ ಸತಿಯರು ಬಲಭಾಗಕ್ಕೆ ಗಂಟನ್ನು ಹಾಕಿಕೊಂಡಿದ್ದಾರೆ. ಟಂಕಸಾಲ ಹೊಸಹಳ್ಳಿ ಗ್ರಾಮದ ವೀರಮಾಸ್ತಿಕಲ್ಲಲ್ಲಿ ತಲೆಗೂದಲನ್ನು ಬಲಭಾಗಕ್ಕೆ ಗಂಟು ಹಾಕಿದೆ. ಇಲ್ಲಿ ನೆತ್ತಿಯ ಭಾಗವು ಬೋಳುತಲೆಯಂತೆ ಕಂಡುಬರುತ್ತದೆ. ಇದು ಭದ್ರಾವತಿಯ ವೀರಗಲ್ಲಿನ ಸತಿಯ ಕೇಶವಿನ್ಯಾಸವನ್ನು ಹೋಲುತ್ತದೆ. ತಿಮ್ಮಸಂದ್ರ ಗ್ರಾಮದ ಶಿಲ್ಪದಲ್ಲಿ ಸತಿಯ ತಲೆಗಿಂತ ತಲೆಗೂದಲಿನ ಗಂಟೇ ದೊಡ್ಡದಾಗಿ ಚಿತ್ರಿಸಿದ್ದಾರೆ. ಹುಲ್ಲುಕುಂಟೆಯ ವೀರಗಲ್ಲಿನಲ್ಲಿ ವೀರನು ಸ್ತ್ರೀಯರಂತೆ ಉದ್ದವಾದ ಜಡೆಯನ್ನು ನಿತಂಬದವರೆಗೂ ಉದ್ದವಾಗಿ ಇಳಿಬಿದ್ದಿದು, ಕೊನೆಯಭಾಗ ಚೇಳು ಕೊಂಡಿಯಂತೆ ಹಿಂದಕ್ಕೆ ಬಾಗಿದೆ. ದಾವಣಗೆರೆ ಜಿಲ್ಲೆ ಚನ್ನಗಿರಿ ತಾಲ್ಲೂಕಿನ ಬೊಮ್ಮನಹಳ್ಳಿಯ ಮಾಸ್ತಿಕಲ್ಲುಗಳಲ್ಲಿ ಮಹಾಸತಿಯರ ಉದ್ದವಾದ ಜಡೆ ನಿತಂಬದವರೆಗೆ ಇದ್ದರೆ, ಹುಲುಕುಂಟೆಯ ವೀರಗಲ್ಲಿ ವೀರನು ಉದ್ದವಾದ ಜಡೆಯನ್ನು ಬಿಟ್ಟಿರುವುದು ಕಂಡುಬರುತ್ತದೆ. ಇಂತಹ ಶಿಲ್ಪಗಳು ಕರ್ನಾಟಕದಲ್ಲಿ ಬಹಳ ಅಪರೂಪದ ಶಿಲ್ಪಗಳಾಗಿವೆ. ಗಂಗರ ಕಾಲದ ಬಹುತೇಕ ವೀರಗಲ್ಲುಗಳಲ್ಲಿ ವೀರರ ಮುಡಿಗಳು ಹಿಂಭಾಗದಲ್ಲಿ ಗಂಟಿನಿಂದ ಕೂಡಿರುತ್ತವೆ. ಆ ಗಂಟು ಬಲಭಾಗಕ್ಕೋ ಅಥವಾ ಎಡಭಾಗಕ್ಕೋ ಬರುವಂತೆ ಬಿಗಿದು ಕೊಂಡಿರುವರು. ಅಥವಾ ಶಿಲ್ಪಿಯ ಅದನ್ನು ಬಿಡಿಸುವಾಗ ಎಲ್ಲರಿಗೂ ಕಾಣಲೆಂದು ಪಕ್ಕದಲ್ಲಿ ಚಿತ್ರಿಸಿರಬಹುದು.

**ಆಯುಧಗಳು :** ಮಾನವನು ಆಯುಧಗಳನ್ನು ರಕ್ಷಣೆಗಾಗಿ ಮತ್ತು ಯುದ್ಧದಲ್ಲಿ ಹೋರಾಡುವ ಸಲುವಾಗಿ ಬಳಸುತ್ತಿದ್ದರು. ಈ ಆಯುಧಗಳ ವಿವಿಧರೂಪಗಳು, ಕಾವ್ಯಗಳು ಹಾಗೂ ಶಾಸನಗಳಲ್ಲಿ ತಿಳಿದುಬರುತ್ತವೆ. ಆದರೆ ಶಾಸನಶಿಲ್ಪಗಳಲ್ಲಿ ಆಯುಧಗಳು ಕಂಡುಬರುತ್ತವಾದರೂ ಅವುಗಳ ಸ್ವರೂಪ

ಸ್ಪಷ್ಟವಾಗಿ ದೊರೆಯುವುದಿಲ್ಲ. ದೇವಾಲಯಗಳಲ್ಲಿನ ದೇವತಾಮೂರ್ತಿಗಳಲ್ಲಿ ಶಂಖ, ಚಕ್ರ, ಡಮರು, ತ್ರಿಶೂಲ, ಗದೆ, ಶೂಲ, ಪಾಶ, ಖಡ್ಗ, ಬಾಣ, ಧನಸ್ಸು, ಅಂಕುಶ, ಕೊಡಲಿ, ನೇಗಿಲು ಮುಂತಾದ ಆಯುಧಗಳನ್ನು ಅಲಂಕಾರಯುತವಾಗಿ ಮತ್ತು ಕಲಾತ್ಮಕವಾಗಿ ಚಿತ್ರಿಸಿದ್ದು, ಅವುಗಳ ಕ್ರಿಯೆಯು ತಟಸ್ಥವಾಗಿರುತ್ತದೆ. ಆದರೆ ಶಾಸನ ಶಿಲ್ಪಗಳಲ್ಲಿ ಆಯುಧಗಳು ವೀರರ ಕೈಗಳಲ್ಲಿ ಕ್ರಿಯಾಶೀಲವಾಗಿದ್ದು, ಎದುರಾಳಿಗಳ ಮೇಲೆ ಪ್ರಯೋಗಿಸಿರುವಂತೆ ಚಿತ್ರಿತವಾಗಿರುತ್ತವೆ. ಶಿಲ್ಪಶಾಸ್ತ್ರ, ಅರ್ಥಶಾಸ್ತ್ರ, ಅಗ್ನಿಪುರಾಣ ಹಾಗೂ ಶುಕ್ರನೀತಿಸಾರಗಳು ಆಯುಧಗಳ ಬಗ್ಗೆ ಮಾಹಿತಿ ನೀಡುತ್ತವೆ. ಶಾಸನ ಶಿಲ್ಪಗಳಲ್ಲಿ ಸಂಪೂರ್ಣವಾಗಿ ಎಲ್ಲಾ ಆಯುಧಗಳು ಕಂಡಬರದಿದ್ದರೂ ಕೆಲವೊಂದು ಆಯುಧಗಳನ್ನು ಇಲ್ಲಿ ಗುರುತಿಸಬಹುದು.

**ಬಾಣ :** ಶಾಸನ ಶಿಲ್ಪಗಳಲ್ಲಿ ಅಧಿಕವಾಗಿ ಕಂಡುಬರುವ ಆಯುಧಗಳಲ್ಲಿ ಒಂದು. ದೂರದಲ್ಲಿದ್ದವರ ದೇಹಕ್ಕೆ ಚುಚ್ಚಿಕೊಳ್ಳುವಂತೆ ಪ್ರಯೋಗ ಮಾಡಿದ್ದಾರೆ. ಒಂದು ರೀತಿಯಲ್ಲಿ ಇವು ಚುಚ್ಚುವ ಆಯುಧಗಳು ಎಂದೂ ಕರೆಯಬಹುದು. ಆದಿ ಕವಿಯಾದ ಪಂಪನು ಕೆಂಗರಿಯ ಮೊನೆಯಂಬು, ಕೆಲ್ಲಂಬು, ಕಿತ್ತಂಬು, ನಲ್ಲಂಬು, ಮಸೆಯೆಂಬು, ಬಟ್ಟನಂಬು, ಪಾರೆಯಂಬು, ಮುಂತಾದ ಬಾಣಗಳ ವಿಧಗಳನ್ನು ಹೇಳುತ್ತಾನೆ.[೨೨] ರನ್ನಕವಿಯು ಕವಲಂಬು ಎಂಬ ಬಾಣವನ್ನು ತಿಳಿಸುತ್ತಾನೆ.[೨೩] ಶಾಸನಗಳ ಮೇಲಿರುವ ಶಿಲ್ಪಗಳನ್ನು ನೋಡಿ ಹೇಳುವುದಾದರೆ ಕನ್ನಡಿಗರು ಬಳಸುತ್ತಿದ್ದ ಬಿಲ್ಲು ಮೂರು ಅಡಿಯಿಂದ ನಾಲ್ಕು ಅಥವಾ ನಾಲ್ಕುವರೆ ಅಡಿಗಳಷ್ಟು ಉದ್ದವಾಗಿದ್ದಿತು ಎಂಬುದಾಗಿ ಡಾ. ಎಂ.ಚಿದಾನಂದಮೂರ್ತಿಯವರು ತಮ್ಮ ಅಭಿಪ್ರಾಯವನ್ನು ಹೇಳುತ್ತಾರೆ. ಆದರೆ ಮಧುರೆ, ವಾಣಿಗರಹಳ್ಳಿ ವಡಗೆರೆ, ಗೆದ್ದಲಪಾಳ್ಯ, ಹಾದ್ರಿಪುರಗಳಲ್ಲಿ ಎತ್ತರವಾದ ಬಿಲ್ಲುಗಳನ್ನು ಹಿಡಿದು ವೀರರು ಹೋರಾಡುತ್ತಿರುವ ದೃಶ್ಯಗಳನ್ನು ಕಾಣಬಹುದು.

**ಭರ್ಜಿ :** ಭರ್ಜಿಯು ಮೂರು-ನಾಲ್ಕು ಅಡಿಗಳಿಂದ ಆರು ಅಥವಾ ಏಳು ಅಡಿಗಳವರೆಗೆ ಉದ್ದವಿರುತ್ತದೆ. ಭರ್ಜಿಯ ಮುಂಭಾಗ ಹರಿತವಾಗಿದ್ದು, ಚೂಪಾಗಿರುತ್ತದೆ. ಎದುರಾಳಿಗಳನ್ನು ಅಥವಾ ಬೇಟೆಯಾಡುವ ಸಂದರ್ಭದಲ್ಲಿ ಕ್ರೂರ ಪ್ರಾಣಿಗಳನ್ನು ತಿವಿಯಲು ಬಳಸುತ್ತಿದ್ದರು. ಕೋಟೆಯುದ್ಧದಲ್ಲಿ ಇದನ್ನು ಮೇಲಿನಿಂದ ಕೆಳಗಿರುವವರ ಮೇಲೆ ಎಸೆಯುತ್ತಿದ್ದರು. ಹರಿತವಾದ ತುದಿಯು ಎಲೆಯ ಆಕಾರದಲ್ಲಿದ್ದರೆ ಎಲೆಭರ್ಜಿ ಎಂದೂ, ಸೂಜಿಯಂತೆ ಇದ್ದರೆ ಸೂಜಿಭರ್ಜಿ ಎಂದು ಕರೆಯುತ್ತಾರೆ.[೨೪] ಕ್ರಿ.ಶ.ಹತ್ತನೇ ಶತಮಾನದ ತಿಮ್ಮಾಜನಹಳ್ಳಿಯ ಎರಡು ಎಂದು ಹುಲಿಬೇಟೆ ವೀರಗಲ್ಲುಗಳಲ್ಲಿ ಭರ್ಜಿಯನ್ನು ಹಿಡಿದು ಹುಲಿಯನ್ನು ತಿವಿಯುತ್ತಿರುವುದು ಕಾಣುತ್ತದೆ. ಗೆದ್ದಲಪಾಳ್ಯ ವೀರಗಲ್ಲುವಿನಲ್ಲಿ ವೀರನು ಸುಮಾರು ಐದು ಅಡಿ ಉದ್ದದ ಭರ್ಜಿಯಿಂದ ಹುಲಿಯನ್ನು ತಿವಿಯುತ್ತಿದ್ದಾನೆ. ಆ ಭರ್ಜಿಯು ಮುಂಭಾಗದಿಂದ ಹುಲಿಯ ಬೆನ್ನ ಹಿಂದೆ ಬಂದಿದೆ.

**ಖಡ್ಗ :** ಕತ್ತರಿಸುವ ಆಯುಧಗಳಲ್ಲಿ ಖಡ್ಗವು ಪ್ರಮುಖವಾದ ಒಂದು ಆಯುಧವಾಗಿದೆ. ಈ ಆಯುಧದಿಂದ ವೀರರು ಶತ್ರುಗಳ ತಲೆ ಮತ್ತು ಕೈಕಾಲುಗಳನ್ನು ಕತ್ತರಿಸಲು ಕೊಲ್ಲಲು ಉಪಯೋಗಿಸುತ್ತಿದ್ದರು. ಖಡ್ಗಕ್ಕೆ ಕೋಲಾರ ದಾವಣಗೆರೆ, ಸಾಗರದ ಕೆಲವು ಶಾಸನಗಳಲ್ಲಿ ಬಾಳ್, ತೋಳಬಾಳ್, ಕರವಾಳ್ ಎಂಬ ಹೆಸರುಗಳಿಂದ ಕರೆದಿದ್ದಾರೆ. ಟಂಕಸಾಲ ಹೊಸಹಳ್ಳಿಯ ವೀರಗಲ್ಲಿನಲ್ಲಿ ವೀರನು ಸುಮಾರು ಮೂರು ಅಡಿ ಉದ್ದದ ಖಡ್ಗವನ್ನು ಹಿಡಿದಿದ್ದಾನೆ. ಇಲ್ಲಿ ಖಡ್ಗವನ್ನು ವೀರನ ಗಾತ್ರಕ್ಕೆ ಅನುಗುಣವಾಗಿ ಶಿಲ್ಪಿ ಕೆತ್ತಿದ್ದಾನೆ. ಇದೇ ರೀತಿಯ ಖಡ್ಗವನ್ನು ಹಿಡಿದಿರುವ ವೀರನನ್ನು ಬೂಚನಹಳ್ಳಿ ವೀರಗಲ್ಲುಗಳಲ್ಲಿ ಕಾಣಬಹುದು. ಸುಮಾರು ಮೂರು ಅಡಿ ಉದ್ದದ ಖಡ್ಗವನ್ನು ವೀರ ಶತ್ರುಗಳನ್ನು ಸಂಹರಿಸಲು ಮೇಲಕ್ಕೆ ಎತ್ತಿದ್ದಾನೆ.

**ಚಾಕು ಅಥವಾ ಕತ್ತಿ :** ಕತ್ತಿ ಬಹಳ ಹರಿತವಾಗಿದ್ದು ಮುಂಭಾಗ ಚೂಪಾಗಿರುತ್ತದೆ. ಇದು ಒಂದು ಗೇಣಿನಿಂದ ಎರಡು ಗೇಣಿನವರೆಗೆ ಉದ್ದವಾಗಿರುತ್ತದೆ. ಸುಲಭವಾಗಿ ವೈರಿಗಳ ಮೇಲೆ ಇದನ್ನು ಪ್ರಯೋಗ ಮಾಡಬಹುದು. ಇದನ್ನು ವೀರರು ಸೊಂಟದಲ್ಲಿ ಸಿಲುಕಿಸಿ ಕೊಂಡಿರುತ್ತಾರೆ. ಬೂಚನಹಳ್ಳಿಯ ವೀರಗಲ್ಲಿನಲ್ಲಿ ವೀರನು ಒಂದು ಗೇಣುದ್ದದ ಕತ್ತಿಯನ್ನು ಸೊಂಟಕ್ಕೆ ಸಿಕ್ಕಿಸಿಕೊಂಡಿದ್ದಾನೆ. ಮಧುರೆ, ಗಂಗಸಂದ್ರ, ವಾಣಿಗರಹಳ್ಳಿ, ದೊಡ್ಡವಡಗೆರೆ, ವೀರಗಲ್ಲುಗಳಲ್ಲಿ ಕತ್ತಿಯನ್ನು ವೀರರು ಸೊಂಟಕ್ಕೆ ಸಿಕ್ಕಿಸಿಕೊಂಡಿದ್ದಾರೆ. ಹುಲ್ಲುಕುಂಟೆಯ ವೀರಗಲ್ಲಿನಲ್ಲಿ ವೀರನು ಚೂಪಾದ ಕತ್ತಿಯಿಂದ ಶತ್ರುವನ್ನು ಇರಿಯಲು ಮುನ್ನುಗ್ಗುತ್ತಿದ್ದಾನೆ. ಇದೇ ಸ್ಥಳದ ಮತ್ತೊಂದು ವೀರಗಲ್ಲಿನಲ್ಲಿ ವೀರ ಕೈಗಳಿಂದ ಕೊಡಲಿಯನ್ನು ಎತ್ತಿ ಹಿಡಿದಿರುವ ಅಪರೂಪದ ಆಯುಧವೀರ ಎಂದು ಹೇಳಬಹುದು.

**ಗುರಾಣಿ :** ವೀರನು ರಕ್ಷಣೆಗೋಸ್ಕರ ಹಿಡಿಯುವ ಸಾಧನ ಶತ್ರುಗಳಿಂದ ತಪ್ಪಿಸಿಕೊಳ್ಳಲು, ಕತ್ತಿ, ಈಟಿ, ಹಾಗು ಬಾಣಗಳ ಹೊಡೆತಗಳನ್ನು ತಡೆಯುವ ಪ್ರಮುಖ ಸಾಧನವಾಗಿದೆ. ರಣರಂಗದಲ್ಲಿ ವೀರನು ಅಥವಾ ಯೋಧನು ಮುಂದೆ ಹಿಡಿದಾಗ ಕೊರಳಿನಿಂದ ಸೊಂಟದವರೆಗೂ ರಕ್ಷಣೆಯನ್ನು ಕೊಡುತ್ತದೆ ಎನ್ನಬಹುದು. ಇದನ್ನು ಪಲಗೆ, ಹರಿಗೆ, ಅಡ್ಡಣ ಎಂದು ಕರೆಯುತ್ತಾರೆ. ಕುಮಾರವ್ಯಾಸನು ಹಲಗೆ ಎಂಬ ಶಬ್ದವನ್ನು ಪ್ರಯೋಗಿಸಿದ್ದಾನೆ.[೨೫] ರಾಷ್ಟ್ರಕೂಟರ ಕಾಲದಲ್ಲಿ ಆಯತಾಕಾರದ ಗುರಾಣಿಗಳು ಕಂಡುಬರುತ್ತವೆ. ಇಲ್ಲಿನ ವೀರಗಲ್ಲುಗಳಲ್ಲಿ ದುಂಡಾಕಾರದ ಗುರಾಣಿಗಳನ್ನು ಯೋಧರು ಕೈಯಲ್ಲಿ ಹಿಡಿದಿದ್ದಾರೆ. ಚಿಕ್ಕ ಕಾಳೇನಹಳ್ಳಿ ವೀರಗಲ್ಲಿನಲ್ಲಿ ವೀರ ಎಡಭಾಗದ ಕೈಯಲ್ಲಿ ದುಂಡಾಕಾರದ ಗುರಾಣಿಯನ್ನು ಹಿಡಿದು ಬಲಗೈಯಲ್ಲಿ ಕತ್ತಿಯಿಂದ ಶತ್ರುವನ್ನು ತಿವಿಯುತ್ತಿದ್ದಾನೆ. ಪುರುಷನಹಳ್ಳಿ ವೀರಗಲ್ಲಿನಲ್ಲಿ ವೀರನು ಬಲಗೈಯಲ್ಲಿ ಖಡ್ಗವನ್ನು ಮೇಲಕ್ಕೆ ಎತ್ತಿ, ಎಡಗೈಯಲ್ಲಿ ಗುರಾಣಿಯನ್ನು ಹಿಡಿದು ಹೋರಾಡುತ್ತಿದ್ದಾನೆ. ಬೂಚನಹಳ್ಳಿ ಕೆಸ್ತೂರು, ತಿಪ್ಪೂರು, ವೀರಗಲ್ಲುಗಳಲ್ಲಿ ಗುರಾಣಿ ಹಿಡಿದಿರುವ ವೀರರು ಕಂಡುಬರುತ್ತಾರೆ. ಈ ವೀರರು ಹಿಡಿದಿರುವ ಗುರಾಣಿಗಳ ಮೇಲೆ ಯಾವುದೇ ರೀತಿಯ ವಿನ್ಯಾಸಗಳಿರದೆ ಸಹಜವಾಗಿವೆ.

### ಅಡಿಟಿಪ್ಪಣಿಗಳು

೧. ಶಿವರಾಮಕಾರಂತ, ಭಾರತೀಯ ಶಿಲ್ಪ, ಪು.೮

೨. ಡಾ. ಪರಮಶಿವಮೂರ್ತಿ, ಕನ್ನಡ ಶಾಸನ ಶಿಲ್ಪ, ಪು.೧೮

೩. ಎಂ.ಜಿ.ನಾಗರಾಜು, ಶಾಸನ ಶಿಲ್ಪಗಳು, ಪು.೪೨

೪. ಡಾ.ಎಂ.ಎಂ.ಕಲಬುರ್ಗಿ, ಸಮಾಧಿ, ಬಲಿದಾನ, ವೀರಮರಣಸ್ಮಾರಕಗಳು, ಪು.೯

೫. ಡಾ. ಪರಮಶಿವಮೂರ್ತಿ, ಕನ್ನಡ ಶಾಸನ ಶಿಲ್ಪ, ಪು.೨೨

೬. ಡಾ. ಆರ್ .ಶೇಷಾಶಾಸ್ತ್ರಿ, ಕರ್ನಾಟಕದ ವೀರಗಲ್ಲುಗಳು, ಪು.೨೬೯

೭. ಡಾ. ಎಂ.ಎಂ.ಕಲಬುರ್ಗಿ, ಸ.ಬ.ವೀ.ಸ್ಮಾರಕಗಳು, ಪು.೩

೮. ಡಾ. ಪರಮಶಿವಮೂತಿರ, ಕನ್ನಡ ಶಾಸನ ಶಿಲ್ಪ, ಪು.೨೪.

೯. ಡಾ. ಎಂ.ಎಂ.ಕಲಬುರ್ಗಿ, ಸ.ಬ.ವೀ.ಸ್ಮಾರಕಗಳು, ಪು.೩

೧೦. ಅದೇ, ಪು.೩

೧೧. IA : XV, ಪು.೩೦೫

೧೨. ಡಾ. ಪರಮಶಿವಮೂರ್ತಿ, ಕನ್ನಡ ಶಾಸನಶಿಲ್ಪ, ಪುಟ.೪೭

೧೩. ಎ.ಕ.ಸಂಪುಟ.೯, ದೊಡ್ಡಬಳ್ಳಾಪುರ, ನಂಬರ್ ೩, ೪ ದೊಡ್ಡಬೆಳವಂಗಲ

೧೪. ಡಾ. ಡಿ.ವಿ.ಪರಿಮಶಿವಮೂರ್ತಿ, ಕನ್ನಡ ಶಾಸನಶಿಲ್ಪ, ಪು.೪೭

೧೫. ರನ್ನ, ಸಾಹಸಭೀಮ ವಿಜಯಂ, ೩-೩೫

೧೬. ಎ.ಕ. ಸಂಪುಟ-೯, ದೊಡ್ಡಬಳ್ಳಾಪುರ, ನಂಬರ್ ೯-೧೦, ಜಕ್ಕಸಂದ್ರ

೧೭. ಡಾ.ಡಿ.ವಿ.ಪರಮಶಿವಮೂರ್ತಿ, ಕನ್ನಡ ಶಾಸನಶಿಲ್ಪ, ಪು.೧೦೭

೧೮. ಎ.ಕ.ಸಂಪುಟ.೯, ದೊಡ್ಡಬಳ್ಳಾಪುರ, ನಂಬರ್ ೨೦, ೨೧ ತಿಮ್ಮೋಜನಹಳ್ಳಿ

೧೯. ಅದೇ, ನಂಬರ್ ೫೩, ಮುಪ್ಪಡಿಘಟ್ಟ

೨೦. ಕೃಷ್ಣಮೂರ್ತಿ ಹನೂರು (ಸಂ), ಕತ್ತಲದಾರಿದೂರ (ಮಹಾಸತಿ ತಾಡಿ ನಾಗಮ್ಮ)

೨೧. ಡಾ. ಬಸವರಾಜ ಕಲ್ಗುಡಿ, ಮ.ಆ. ಒಂದು ಅಧ್ಯಯನ, (ಮಾಯಮ್ಮಮಾಸ್ತಿ), ಪು.೧೨೪

೨೨. ಪಂಪ-ವಿಕ್ರಮಾರ್ಜುನ ವಿಜಯ, ೧೦, ೭, ೩

೨೩. ರನ್ನನ ಗದಾಯುದ್ಧ, ಪು.೪-೨೬

೨೪. ಡಾ. ಪರಮಶಿವಮೂರ್ತಿ, ಕನ್ನಡ ಶಾಸನಶಿಲ್ಪ, ಪು.೧೨೪

೨೫. ಡಾ.ಎಂ.ಚಿದಾನಂದಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೨೯೭

# ಅಧ್ಯಾಯ ೫

# ಸ್ಮಾರಕಗಳ ಅಧ್ಯಯನ

೫

# ಸ್ಮಾರಕಗಳ ಅಧ್ಯಯನ

## ೫.೧. ದೇವಾಲಯಗಳು

ಭಾರತದ ಪ್ರತಿಯೊಂದು ಹಳ್ಳಿ ಹಳ್ಳಿಯಲ್ಲೂ, ಬೆಟ್ಟಗಳಲ್ಲಿ ನದಿ-ತೊರೆಗಳ ದಡದಲ್ಲಿ, ಗ್ರಾಮಗಳ ಮಧ್ಯದಲ್ಲಿ, ಗ್ರಾಮದ ಸಾರ್ವಜನಿಕ ಸ್ಥಳಗಳಲ್ಲಿ, ಒಂದಲ್ಲಾ ಒಂದು ಕಡೆ ದೇವಾಲಯಗಳು ಕಂಡುಬರುತ್ತವೆ. ದೇವಾಲಯಗಳಲ್ಲಿ ದೇವತೆಗಳು ಗ್ರಾಮದೇವತೆಯಾಗಿರಬಹುದು ಅಥವಾ ಗ್ರಾಮದ ಒಂದು ಜನಾಂಗಕ್ಕೆ ಸೀಮಿತವಾದ ಅಧಿದೇವತೆಯಾಗಿರಬಹುದು ಅಥವಾ ಆ ದೇವಾಲಯವನ್ನು ನಿರ್ಮಿಸಿ ಪೋಷಣೆ ಮಾಡಿದ ಕುಲದೇವತೆಯಾಗಿರಬಹುದು, ಇಷ್ಟದೇವತೆಯಾಗಿರಬಹುದು. ದೇವರು ಯಾವುದಾದರೂ ಸರಿ. ಅದರ ಆರಾಧನೆಯ ಉದ್ದೇಶ, ಹಿನ್ನೆಲೆ ಎಲ್ಲರಿಗೂ ಒಂದೇ. ಈ ಎಲ್ಲಾ ಕಾರಣಗಳಿಂದಲೇ ರಾಜರ, ಅಧಿಕಾರಿಗಳ ನಾಡ ಪ್ರಭುಗಳ ಆಳ್ವಿಕೆಯ ಆಶ್ರಯದೊಂದಿಗೆ ಊರಿನ ಜನರ ಪೋಷಣೆಯಲ್ಲಿ ದೇವಾಲಯಗಳು ಬೆಳೆದು ಬಂದವು ಎಂಬುದು ಸ್ಪಷ್ಟ. ಈ ದೇವಾಲಯಗಳು ಪ್ರಾಚೀನ ಕರ್ನಾಟಕದ ಜನರ ಜನಜೀವನದ ಅವಿಭಾಜ್ಯ ಅಂಗವಾಗಿ ಕಾಣಬರುತ್ತವೆಂದು ಹೇಳಬಹುದು. ಆದರೆ ಈ ದೇವಸ್ಥಾನದ ಹುಟ್ಟು ಬೆಳವಣಿಗೆ ಹೇಗೆ ಆಯಿತು ಎಂಬ ವಿಷಯದಲ್ಲಿ ಸ್ಪಷ್ಟವಾದ ನಿಲುವಿಗೆ ಇನ್ನೂ ಬರಲಾಗಿಲ್ಲ. ಡಾ. ಅಲ್ತೇಕರರು - "ಮೂರ್ತಿ ಪೂಜೆಯ ಆರಂಭ ಮತ್ತು ಬೆಳವಣಿಗೆಗಳ ವಿಷಯವಾಗಿ ಇನ್ನೂ ಕೆಲಸ ನಡೆಯಬೇಕಾಗಿದೆ. ಮನೆಯಲ್ಲಾಗಲಿ, ದೇವಸ್ಥಾನಗಳಲ್ಲಾಗಲಿ, ದೇವತಾ ಮೂರ್ತಿಗಳನ್ನು ಪೂಜಿಸುವ ವಿಷಯವನ್ನು ಧರ್ಮಸೂತ್ರಕಾರರು ಸಾಮಾನ್ಯವಾಗಿ ಹೇಳುವುದಿಲ್ಲ. ಮನುವೂ ಹೇಳಿಲ್ಲ. ದೇವಸ್ಥಾನಗಳನ್ನು ಸ್ಥಾಪಿಸುವ ಸಂಪ್ರದಾಯವು ಅಶೋಕನಿಗಿಂತ ಈಚಿನದೆಂದು ಕಾಣುತ್ತದೆ. ಬಹು ಜನರು ನೆರೆಯುತ್ತಿದ್ದ ಶ್ರೌತಯಜ್ಞಗಳ ಸ್ಥಾನದಲ್ಲಿ ಕಾಣಿಸಿಕೊಂಡವು. ಬೌದ್ಧರ ಭವ್ಯ ದೇವಾಲಯಗಳನ್ನೂ ವಿಹಾರಗಳನ್ನೂ ನೋಡಿದ ಹಿಂದೂಗಳ ಮನಸ್ಸಿನಲ್ಲಿ ಅಂತ ಸಾರ್ವಜನಿಕ ಆರಾಧನಾ ಕೇಂದ್ರಗಳನ್ನು ಸ್ಥಾಪಿಸಬೇಕೆಂಬ ಇಚ್ಛೆ ಉದಯಿಸಿದ್ದರೂ ಇರಬಹುದು. ಅಂತೂ ನಿಜವಾದ ಕಾರಣಗಳೇನೆ ಇರಲಿ, ದೇವಸ್ಥಾನಗಳು ಸಾರ್ವಜನಿಕ ಪೂಜಾ ಕೇಂದ್ರಗಳೆಂದು ಮುಂದೆ ಪರಿಗಣಿತವಾದುವು."[೧]

ಪ್ರಾಚೀನ ಕರ್ನಾಟಕದಲ್ಲಿನ ದೇವಸ್ಥಾನಗಳು ಅಲ್ಲಿನ ಜನರ ಭಕ್ತಿ ಮತ್ತು ನಿಷ್ಠೆಗಳ ಪ್ರತೀಕಗಳು ಎಂಬುದನ್ನು ಮರೆಯಬಾರದು. ಪ್ರಾಚೀನ ಕಾಲದಿಂದ, ಈಗಿನ ಶಾಸನಗಳೂ ದೇವಾಲಯಗಳಿಗೆ,

ದಾನ ನೀಡಿರುವುದನ್ನು ಗಮನಿಸಿದರೆ ಆ ಕಾಲದಲ್ಲಿನ ಆದರ್ಶ, ಮಾನವೀಯತೆಯನ್ನು ಪ್ರತಿಬಿಂಭಿಸುತ್ತವೆ. ನ್ಯಾಯವಾದ ರೀತಿಯಲ್ಲಿ ಸಂಪಾದನೆ ಮಾಡಿ, ಆ ಸಂಪಾದನೆಯ ಧನವನ್ನು ದಾನ ಮಾಡಬೇಕು. ಅಥವಾ ಅವುಗಳ ಸಹಾಯದಿಂದ ದೇವಾಲಯಗಳನ್ನು ನಿರ್ಮಿಸಬೇಕು. ಇವುಗಳಿಗೆ ಬಳಸದಿದ್ದರೆ ಸಂಪಾದಿಸಿದ ಹಣವನ್ನು ಅನ್ಯರು ಅಪಹರಿಸಿ ಬಿಡಬಹುದು." ಎಂಬ ಭಾವನೆಗಳಿಂದ ಶ್ರದ್ಧೆ ಮತ್ತು ನಿಷ್ಠೆಯಿಂದ ಜನೋಪಕಾರಿ ಕಾರ್ಯಗಳಾದ ದೇವಸ್ಥಾನಗಳನ್ನು ಮತ್ತು ಕೆರೆಗಳನ್ನು ನಿರ್ಮಿಸುತ್ತಿದ್ದರು. ಅಂದಿನ ಜನರ, ರಾಜರುಗಳ, ಅಧಿಕಾರಿಗಳ ಸಾಂಘಿಕ ಪ್ರಯತ್ನದಿಂದ ಒಂದು ದೇಶದ ಸಾಂಸ್ಕೃತಿಕ ಸಂಪತ್ತು ಎನಿಸಿಕೊಂಡಿರುವ ದೇವಾಲಯಗಳು ನಿರ್ಮಾಣಗೊಂಡು ಆ ದೇಶದ ಸಂಸ್ಕೃತಿಯನ್ನು ಶ್ರೀಮಂತಗೊಳಿಸುವಲ್ಲಿ ಪ್ರಮುಖ ಪಾತ್ರವಹಿಸಿವೆ. ಈ ನಿಟ್ಟಿನಲ್ಲಿಯೇ ಭಾರತ ಪ್ರಾಚೀನ ಕಾಲದಿಂದಲೂ ಭವ್ಯ ಪರಂಪರೆಯನ್ನು ಹೊಂದಿದ ದೇಶವಾಗಿದೆ. ಆರ್ಥಿಕ ಸಂಪತ್ತೊಂದೇ ಅಲ್ಲದೆ, ಸಾಹಿತ್ಯ, ಧರ್ಮ, ಕಲೆ ಮತ್ತು ವಾಸ್ತುಶಿಲ್ಪಗಳ ವೈವಿಧ್ಯಪೂರ್ಣ ಬೆಳವಣಿಗೆಯೊಂದಿಗೆ ಭಾರತವು ತನ್ನದೇ ಆದ ಸಂಸ್ಕೃತಿಯನ್ನು ಪಡೆದು ಒಂದು ವೈಶಿಷ್ಟ್ಯಪೂರ್ಣವಾದ ಸ್ಥಾನವನ್ನು ಇಂದಿಗೂ ಉಳಿಸಿಕೊಂಡಿದೆ.

ಹಲವಾರು ಧಾರ್ಮಿಕ ಕಲ್ಪನೆಗಳ ಮೂಲಕ ಸಂಸ್ಕೃತಿಯನ್ನು ನಿರ್ಮಿಸಿಕೊಂಡು ಭಾರತೀಯರು ದೇಶದ ತುಂಬೆಲ್ಲಾ ದೇವಾಲಯಗಳನ್ನು ನಿರ್ಮಾಣ ಮಾಡಿದರು ಎನ್ನಲಾಗಿದೆ. ಬಹುಶಃ ಜಗತ್ತಿನ ಯಾವುದೇ ಭಾಗಕ್ಕಿಂತಲೂ ಅಧಿಕ ಪ್ರಮಾಣದ ದೇವಾಲಯಗಳು ಭಾರತದಲ್ಲಿ ರಚನೆಯಾದವು. ಈ ದೇವಾಲಯಗಳ ಪ್ರಾಚೀನ ಕಾಲದ ಧಾರ್ಮಿಕ ಮತ್ತು ಸಾಂಸ್ಕೃತಿಕ ಅಭಿವೃದ್ಧಿಗಾಗಿ ಅಂದಿನ ಜನರು ನೀಡಿರುವ ಪ್ರೋತ್ಸಾಹವನ್ನು ರೂವಾರಿಗಳ ಕೈಚಳಕ ಮತ್ತು ಕಲಾ ನೈಪುಣ್ಯತೆಯ ಮಹಿಮೆಯನ್ನು ಇಂದಿನ ಹಾಗೂ ಮುಂದಿನ ಜನತೆಗೆ ಸಾರಿ ಹೇಳುವ ಜೀವಂತ ಸಾಕ್ಷಿಯಾಗಿವೆ. ಅಲ್ಲದೆ ಇವು ಕಲಾ ಕ್ಷೇತ್ರಕ್ಕೆ ನೀಡಿದ ಮಹಾನ್ ಕೊಡುಗೆಗಳಾಗಿವೆ. ಅಲ್ಲದೆ, ಕರ್ನಾಟಕ ಕಲಾ ಸಿರಿಯ ಅನೇಕ ಶಿಲ್ಪ ಪದ್ಧತಿಗಳನ್ನು ಹಾಗು ಅನೇಕ ಬಗೆಯ ಶೈಲಿಗಳನ್ನು ತನ್ನಲ್ಲಿ ಹುದುಗಿಸಿಕೊಂಡಿದೆ.

'ಅರ್ಕಿಟೆಕ್ಚರ್' ಅಥವಾ 'ವಾಸ್ತುಕೃತಿ' ಎಂಬ ಪದ ಪ್ರಯೋಗ ಪರಿಮಿತ ಅರ್ಥದಲ್ಲಿ ಗಾತ್ರ ದೃಷ್ಟಿಯಿಂದ ಸಣ್ಣದೂ ಇರಬಹುದು. ದೊಡ್ಡದೂ ಇರಬಹುದು. ಕಲ್ಲಿನಿಂದ ಮರಮುಟ್ಟುಗಳಿಂದ ನಿರ್ಮಿತಿಯಾಗಿರಲೂಬಹುದು. ಒಟ್ಟಾರೆ ಇದು ವಾಸ್ತುಕೃತಿ.[೨] ಒಟ್ಟಾರೆಯಾಗಿ ಇದೊಂದು ಕಟ್ಟಡ, ಇದಕ್ಕೊಂದು ಆಕೃತಿ ಇರಬೇಕು. ಇದು ಚೌಕ ಅಥವಾ ಆಯತ ಅಥವಾ ವೃತ್ತಾಕಾರವಾಗಿರಲೂ ಬಹುದು. ಇವುಗಳ ಜೊತೆ ಜೊತೆಗೆ ಕಟ್ಟಡಗಳು ಸುಂದರವಾಗಿರಬೇಕೆಂಬ ಪ್ರಜ್ಞೆಯೂ ಒಳಗೊಂಡಿರ ಬೇಕು. ಈ ಕಟ್ಟಡಗಳು ನೈಸರ್ಗಿಕವಾಗಿಯೂ ಇರಬಹುದು. ಅಥವಾ ರಕ್ಷಣೆಗೋಸ್ಕರವಾಗಿಯೂ ನಿರ್ಮಿತಿಯಾಗಿರಬಹುದು. ನೈಸರ್ಗಿಕ ಗುಹೆಗಳನ್ನೇ ಮೂಲ ಉದ್ದೇಶಕ್ಕಾಗಿ ಬಳಸಿಕೊಂಡರೂ

ಅವುಗಳ ಮುಂಭಾಗದಲ್ಲಿ ಸೇರಿದ ಜನರಿಗೆ ಕಾಣುವಂತೆ ವೇದಿಕೆಗಳನ್ನು, ಕಾಲಾನಂತರ ರಕ್ಷಣೆಗೋಸ್ಕರ ಆಲಯಗಳನ್ನು ನಿರ್ಮಾಣ ಮಾಡುವ ಕಾರ್ಯಚಟುವಟಿಕೆ ಪ್ರಾರಂಭವಾಯಿತೆನ್ನಬಹುದು. ಮೊದಲು ದೇವರನ್ನಿಡಲು ಚಿಕ್ಕದಾದ ಸಣ್ಣ ಮಂಟಪವಿದ್ದು ದೇವಾಲಯದ ಸೀಮಿತ ಉದ್ದೇಶಗಳನ್ನು ಪೂರೈಸುತ್ತಿತ್ತು. ಕಾಲ ಉರುಳಿದಂತೆ ವಿಧಿ ವಿಧಾನಗಳು ಆಚರಣೆಗಳು ಹೆಚ್ಚಾದಂತೆ ದೇವಾಲಯವು ವಿಸ್ತಾರಗೊಳ್ಳುತ್ತಾ ಹೋದವು. ವ್ಯಕ್ತಿಗಳ ಜೀವನ ಪ್ರಜ್ಞೆ ಬೆಳೆದಂತೆ ಸುಸಂಸ್ಕೃತ ವಿಚಾರಗಳು ವಿಶಾಲವಾಗಿ ಬೆಳೆದಂತೆ ದೇವಾಲಯಗಳ ಬೆಳವಣಿಗೆ ಪೂರ್ಣರೂಪ ಪಡೆಯಲು ಸಾಧ್ಯವಾಗಿ, ಸಂಸ್ಕೃತಿಯ ಅವಿಭಾಜ್ಯ ಅಂಗಗಳಾದವು. ಅವು ಸಾರ್ವಜನಿಕ ಪೂಜಾ ಮಂದಿರಗಳಾಗುವುದರೊಂದಿಗೆ ಸಮಾಜದ ವಿವಿಧ ಕ್ಷೇತ್ರಗಳಲ್ಲೂ ಮಹತ್ತರ ಪಾತ್ರವಹಿಸಿದವು. ಹಾಗೆಯೇ ಪ್ರಮುಖ ವಿದ್ಯಾಕೇಂದ್ರಗಳಾಗಿ ಮೆರೆಯುವುದರೊಂದಿಗೆ ಸಂಗೀತ, ನೃತ್ಯ ಮುಂತಾದ ಕಲೆಗಳಿಗೂ ಆಸರೆಯಾದವು.[३] ಹಲವಾರು ವಿವಿಧ ಉದ್ದೇಶಗಳನ್ನು ಇಟ್ಟುಕೊಂಡು ಸಮಾಜದ ಎಲ್ಲಾ ವರ್ಗಗಳ ಮತ್ತು ವ್ಯಕ್ತಿಗಳ ಮನ್ನಣೆ ಪಡೆದು ಜನರ ಜೀವನದಲ್ಲಿ ಹಾಸು ಹೊಕ್ಕಾಗಿವೆ ಎಂದರೆ ತಪ್ಪಾಗಲಾರದು. ಪ್ರಾಚೀನ ಕಾಲದಿಂದಲೂ ಧಾರ್ಮಿಕ ಶ್ರದ್ಧೆಯ ಜೀವನದ ಒಂದು ಪ್ರಮುಖ ಅಂಶ ಎಂದೆನಿಸಿರುವ ದೇವಾಲಯಗಳು ನಿರ್ಮಾಣಗೊಂಡವು. ಪ್ರಾಚೀನ ಕರ್ನಾಟಕದ ಜನಜೀವನದ ಅವಿಭಾಜ್ಯ ಅಂಗಗಳಾಗಿವೆ. ಈ ದೇವಾಲಯಗಳು ಅಥವಾ ಸ್ಮಾರಕಗಳು. ಇವು ಒಟ್ಟಾರೆ ಕೋಟೆ ಕಟ್ಟಡಗಳಾಗಿರಬಹುದು. ಅಥವಾ ದೇವಾಲಯ ಕಟ್ಟಡವಾಗಿಯೇ ಇರಬಹುದು. ವಿಭಿನ್ನ ರೀತಿಯ ಶೈಲಿಗಳಿಗೆ ಸಂಬಂಧಿಸಿದಂತೆ ಶಿಲ್ಪ ಶಾಸ್ತ್ರಗಳಲ್ಲಿ ಪುರಾಣಗಳಲ್ಲಿ ವಾಸ್ತುಲಕ್ಷಣದ ಪ್ರಸ್ತಾಪಗಳು ಬಂದಿವೆ.

ಕಾಲಾನುಕ್ರಮದಲ್ಲಿ ಔತ್ತರೇಯ ಮತ್ತು ದಕ್ಷಿಣಾತ್ಯ ಪರಂಪರೆಗಳು ಬೇರೆ ಬೇರೆಯಾಗಿ ಹೊರಬಂದವು. ಔತ್ತರೇಯ ಮತ್ತು ದಕ್ಷಿಣಾತ್ಯ ಎರಡೂ ಪರಂಪರೆಯನ್ನು ಐಹೊಳೆ, ಬಾದಾಮಿ, ಪಟ್ಟದಕಲ್ಲಿನ ದೇವಾಲಯಗಳಲ್ಲಿ ಇಂದಿಗೂ ಕಾಣಬಹುದು. ಅಂತೆಯೇ ಐಹೊಳೆಯನ್ನು 'ದೇವಾಲಯಗಳ ತೊಟ್ಟಿಲು' ಎಂದೂ ಕರೆಯಲಾಗಿದೆ. ಪ್ರಧಾನವಾದ ವಾಸ್ತುಶೈಲಿಗಳೆಂದರೆ ದ್ರಾವಿಡ ಶೈಲಿ, ನಾಗರಶೈಲಿ ಮತ್ತು ವೇಸರ ಶೈಲಿಗಳು, ಕರ್ನಾಟಕದ ಪ್ರಾದೇಶಿಕತೆಗೆ ಸಂಬಂಧಿಸಿದಂತೆ ರಚಿತವಾದುದೇ ಕದಂಬನಾಗರ ಶೈಲಿ. ಈ ಒಂದು ಹಿನ್ನೆಲೆಯನ್ನು ಆಧರಿಸಿ, ಕರ್ನಾಟಕದ ದೊಡ್ಡಬಳ್ಳಾಪುರ ತಾಲ್ಲೂಕಿನ ಪ್ರಾದೇಶಿಕ ವಾಸ್ತುಶೈಲಿಯನ್ನು, ಲೌಖಿಕ ವಾಸ್ತುಶೈಲಿ, ಸ್ವಾಭಾವಿಕ ಗುಹಾ ಮಂದಿರಗಳು, ದೇವಾಲಯಗಳ ವಾಸ್ತುಶೈಲಿ ಎಂಬುದಾಗಿ ವಿಭಾಗಿಸಬಹುದು.

ವಾಸ್ತುಶೈಲಿಗೆ ಸಂಬಂಧಿಸಿದಂತೆ ಹುಲುಕಡಿನಾಡಿನ ದೇವಾಲಯಗಳು ಗರ್ಭಗುಡಿ, ಅಂತರಾಳ ಮುಖಮಂಟಪಗಳನ್ನು ಒಳಗೊಂಡಿದೆ. ಅಲ್ಲಲ್ಲಿ ಪ್ರತ್ಯೇಕ ಮಂಟಪಗಳು ಕಾಣಸಿಗುತ್ತವೆ. ಶೈವ ದೇವಾಲಯಗಳಲ್ಲಿ ಸಭಾಮಂಟಪದಲ್ಲಿ ನಂದಿಮೂರ್ತಿ, ಶಿವಮೂರ್ತಿ, ಮುಖ ಮಾಡಿ ಕುಳಿತಿರುವುದು

ಸಾಮಾನ್ಯ ಲಕ್ಷಣವಾಗಿದೆ. ಆದರೆ ಇಲ್ಲಿನ ದೇವಾಲಯಗಳೆಲ್ಲವೂ ನಿರಾಂಧಾರ ದೇವಾಲಯಗಳಾಗಿರುವುದೇ ಹೆಚ್ಚು. ಹೆಚ್ಚಿನ ದೇವಾಲಯಗಳು ಚಚ್ಚೌಕಾರ, ಇನ್ನು ಕೆಲವು ದೇವಾಲಯಗಳು ಆಯತಾಕಾರದಲ್ಲಿವೆ. ಕೆಲವು ದೇವಾಲಯಗಳ ಗೂಡಿನಲ್ಲಿ ಮೂರ್ತಿಶಿಲ್ಪಗಳಿವೆ. ಹೆಚ್ಚಿನ ಅಲಂಕಾರತೆ ಇಲ್ಲದೆ ಭಿತ್ತಿಗಳು ಮೂಲರೂಪದಲ್ಲಿದ್ದು, ನೈಜತೆಗೆ ಪ್ರಾಧಾನ್ಯತೆ ನೀಡಿರುವುದೇ ಈ ದೇವಾಲಯಗಳ ವೈಶಿಷ್ಟ್ಯವಾಗಿದೆ. ಇಲ್ಲಿ ಕೆಲವು ಆಯ್ದ ದೇವಾಲಯಗಳ ವಾಸ್ತು ವೈವಿಧ್ಯತೆಯ ಅಧ್ಯಯನ ಕೈಕೊಳ್ಳಲಾಗಿದೆ.

**೫.೧.೧. ಶೈವ ದೇವಾಲಯಗಳು-ವಾಸ್ತುಶೈಲಿ-ಶಿಲ್ಪಗಳು**

| | | |
|---|---|---|
| **ಹೆಸರು** | : | ವೀರಭದ್ರ ದೇವಾಲಯ |
| **ಸ್ಥಳ** | : | ಗ್ರಾಮದ ಮಧ್ಯಭಾಗದಲ್ಲಿ |
| **ದಿಕ್ಕು** | : | ಪೂರ್ವಾಭಿಮುಖ |
| **ಪಂಥ** | : | ಶೈವ |
| **ವಸ್ತು** | : | ಗ್ರಾನೈಟ್ ಶಿಲೆ |

ದೊಡ್ಡ ಬಳ್ಳಾಪುರ ತಾಲ್ಲೂಕಿನ ಸುಂದರ ದೇವಾಲಯ ಹಣಬೆ ಗ್ರಾಮದ ವೀರಭದ್ರಸ್ವಾಮಿ ದೇವಾಲಯ. ಈ ದೇವಾಲಯವು ಗರ್ಭಗುಡಿ, ಅಂತರಾಳ, ಸಭಾಮಂಟಪ, ಹಾಗೂ ತೆರೆದ ಮುಖಮಂಟಪವನ್ನು ಒಳಗೊಂಡಿದೆ.

ಈ ದೇವಾಲಯದ ಗರ್ಭಗೃಹವು ಪೂರ್ವಾಭಿಮುಖವಾಗಿದೆ. ಗರ್ಭಗೃಹದಲ್ಲಿ ವೀರಭದ್ರಮೂರ್ತಿಯು ಒಂದು ಅಡಿ ಪೀಠದ ಮೇಲೆ ಸ್ಥಾನಿಕ ಭಂಗಿಯಲ್ಲಿದೆ. ಈ ವೀರಭದ್ರ ಮೂರ್ತಿಯ ಬಲಭಾಗಕ್ಕೆ ನಂದಿಯನ್ನು ಪ್ರತಿಷ್ಠಾಪಿಸಿದ್ದಾರೆ. ಗರ್ಭಗುಡಿಯಲ್ಲಿನ ಗ್ರಾನೈಟ್‌ಕಲ್ಲು ವಿಸ್ತೃತ ಆಕಾರದಲ್ಲಿ ಮೇಲ್ಛಾವಣಿ ಹಾಸಲ್ಪಟ್ಟಿದ್ದು ಮೇಲ್ಛಾವಣಿಯಲ್ಲಿ ಕಮಲದ ಮೊಗ್ಗುಂದಿದೆ.

ಗರ್ಭಗುಡಿಯ ದ್ವಾರದ ಲಲಾಟಬಿಂಬದಲ್ಲಿ ಕಮಲ, ಪುಷ್ಪಶಾಖೆಗಳನ್ನು ಒಳಗೊಂಡಿದ್ದು, ಗರ್ಭಗೃಹದ ದ್ವಾರದ ಪಟ್ಟಿಕೆಯಲ್ಲಿ ಕುಸುರಿ ಕೆತ್ತನೆ ಮೂಡಿಬಂದಿದೆ. ಗರ್ಭಗೃಹದ ಮುಂದಿನ ಭಾಗವೇ ಅಂತರಾಳ, ಈ ಭಾಗದಲ್ಲಿ ಅಲಂಕರಣೆ ಕಂಡುಬರದೇ ಮೂಲರೂಪದಲ್ಲಿರುವುದೇ ಇದರ ವೈಶಿಷ್ಟ್ಯತೆ. ದೇವಾಲಯದ ಅಂತರಾಳದ ಮುಂದಿನ ಭಾಗವೇ ಸಭಾಮಂಟಪ. ಸಭಾ ಮಂಟಪವು ನಾಲ್ಕು ಸ್ತಂಭಗಳನ್ನು ಒಳಗೊಂಡಿದ್ದು, ಚಚ್ಚೌಕ ಮಾದರಿಯಲ್ಲಿವೆ. ಚಾಲುಕ್ಯರ ಕಾಲದಲ್ಲೂ

ಕರಿಗಲ್ಲಿನ ಮೃದುತೆಯನ್ನು ಬಳಸಿ ಸ್ತಂಭಗಳನ್ನು ಕಡೆಯುವ, ಕೆತ್ತುವ ಮೂಲಕ ರೂಪ, ವೈವಿಧ್ಯಗಳ ಪ್ರಯೋಗ ಯಶಸ್ವಿಯಾಗ ತೊಡಗಿತು. ಎಷ್ಟು ಬೇಕೋ ಅಷ್ಟೊಂದು ಸ್ತಂಭಗಳ ಮಾದರಿಗಳು ಉಂಟಾದವು. ಆದರೆ ವಾಸ್ತುಕಾರರು ಕಸುಬುದಾರರಾಗುತ್ತ ಸರಿದು ಸೂಕ್ಷ್ಮತೆಯ ಕಣ್ಣನ್ನು ಬೆಳೆಯಿಸಿಕೊಂಡಷ್ಟೆ ಚೆಲುವಿನ ದೃಷ್ಟಿಯನ್ನು ಬೆಳೆಯಿಸ ಹೋದರು. ಕಡಚಲಿನ ಸಹಾಯದಿಂದ ಸ್ತಂಭಗಳಿಗೆ ದುಂಡು ಭೇದದ ನೂರಾರು ಆಕಾರ ಕೊಡಬಹುದು. ಆದರೆ ಕೆತ್ತನೆಯಿಂದ ನಾಲ್ಕು ಎಂಟು, ಹದಿನಾರು ಮೂಲೆ-ಏಣು ಮೊದಲಾದವುಗಳು ಪಟ್ಟಿಮೈ ಕೊಡುವುದರಿಂದ ಸ್ತಂಭಗಳಿಗೆ ಬರುವಂಥ ಶೋಭೆ ವಿಶೇಷ.[೪] ಇಂತಹ ಸ್ತಂಭಗಳಲ್ಲಿ ನೃತ್ಯಭಂಗಿ, ಮೃದಂಗ ನುಡಿಸುತ್ತಿರುವುದು. ಬ್ರಹ್ಮ, ವಿಷ್ಣು, ನವಿಲು, ಶಿವಲಿಂಗ, ಗಣಪ ಮುಂತಾದ ಶಿಲ್ಪಗಳನ್ನು ಒಳಗೊಂಡಿದೆ. ಸಭಾಮಂಟಪದ ಮೇಲ್ಛಾವಣಿ. ಭುವನೇಶ್ವರಿಯನ್ನು ಒಳಗೊಂಡಿದೆ. 'ಭುವನೇಶ್ವರಿ' ಎಂಬುದು ವಾಸ್ತುಶಿಲ್ಪದಲ್ಲಿ ಬರುವ ಒಂದು ಪರಿಭಾಷಿಕ ಪದ. ದೇವಾಲಯಗಳ ಮೇಲ್ಛಾವಣಿಯ ಒಳಭಾಗದಲ್ಲಿ ಒಂದೊಂದು ಅಂಕಣದ ನಾಲ್ಕು ಕಂಬಗಳ ಮಧ್ಯೆ ನಿರ್ಮಿತವಾದ ಅಲಂಕಾರಕ್ಕೆ ಈ ಹೆಸರು ಕೊಟ್ಟಿದ್ದಾರೆ. ಹೊಯ್ಸಳ ದೇವಾಲಯಗಳಲ್ಲಿ ಇದನ್ನು ಹೆಚ್ಚಾಗಿ ಕಾಣಬಹುದು. ಈ ದೇವಾಲಯದ ಮುಖಮಂಟಪವು ತೆರೆದ ಮಂಟಪವಾಗಿದೆ. ಸಭಾಮಂಟಪದ ಎರಡು ಸ್ತಂಭಗಳ ಮೇಲೆ ಉಬ್ಬಿದ ಶಿಲ್ಪಗಳು ಗಣಪತಿ ಮತ್ತು ಆಮೆ ನೋಡುಗರ ಕಣ್ಣನ್ನು ಸೆಳೆಯುತ್ತವೆ. ಮುಖಮಂಟಪದ ದ್ವಾರದ ಲಲಾಟಬಿಂಬದಲ್ಲಿ ಅರಳಿದ ಕಮಲ ಸುರುಳಿಯಾಕಾರದ ಕೆತ್ತನೆಯನ್ನು ಹೊಂದಿರುವುದು.

ದೇವಾಲಯದ ಸಭಾಮಂಟಪದಲ್ಲಿ ಒಟ್ಟು ನಾಲ್ಕು ಸ್ತಂಭಗಳನ್ನು ಒಳಗೊಂಡಿದ್ದು. ಕಮಲದಾಕಾರದ ಬೋಧಿಗೆಗಳನ್ನು ಹೊಂದಿದೆ. ಹಲವಾರು ಉಬ್ಬಿದ ಅನೇಕ ರೀತಿಯ ಶಿಲ್ಪಗಳನ್ನು ಸ್ತಂಭಗಳಲ್ಲಿ ಕೆತ್ತಲಾಗಿದೆ. ನರಸಿಂಹ, ಯಕ್ಷ, ನಂದಿ ಮತ್ತು ನವಿಲು, ವೀರಭದ್ರ ದೇವಾಲಯದ ಸಭಾಮಂಟಪದ ಬಲಭಾಗದ ಸ್ತಂಭಗಳಲ್ಲಿ ಆಸೀನಳಾಗಿರುವ ಸ್ತ್ರೀಶಿಲ್ಪ ನವಿಲನರ್ತಕಿ, ನಡುವಿನ ಮೇಲೆ ಕೈ ಇಟ್ಟು ಕತ್ತಿಯನ್ನು ಹಿಡಿದಿರುವ ಸ್ತ್ರೀ ನರ್ತಕಿ, ಅರಳಿದ ಪದ್ಮ ಪುಷ್ಪಗಳಿಂದ ಅಲಂಕೃತಗೊಂಡಿರುವ ಶಿವಲಿಂಗ, ನಾಗಲಿಂಗ, ಆಯಾಸವನ್ನು ಪರಿಹರಿಸಿಕೊಳ್ಳುವಂತೆ ಕುಳಿತಿರುವ ಸ್ತ್ರೀ, ಸಿಂಹ, ಯಕ್ಷಿಣಿ, ಎರಡನೆಯ ಸ್ತಂಭದಲ್ಲಿ ನಾಟ್ಯಾರಾಣಿ, ಶಂಖ ಊದುತ್ತಿರುವ ದಕ್ಷಬ್ರಹ್ಮ ಮತ್ತು ಅವನ ಮಡದಿ ತಲೆಯ ಮೇಲೆ ಬುಟ್ಟಿ ಹೊತ್ತಿರುವುದು ನಮ್ಮ ಗ್ರಾಮ ಜೀವನ ಸಂಸ್ಕೃತಿಯ ಪ್ರತೀಕವೆಂಬಂತೆ ಕೆತ್ತಲಾಗಿದೆ. ನಾಗಶಿಲ್ಪ, ಅರಳಿದ ಪದ್ಮ, ಕೊಳಲು ಊದುತ್ತಿರುವ ಸ್ತ್ರೀಯರು, ನರಸಿಂಹ, ರೇಖಾಕೃತಿಯಲ್ಲಿ ಬಿಡಿಸಿರುವ ಗಣಪನ ಮುಖಚರ್ಯೆ, ಶಿವಲಿಂಗದ ಮೇಲೆ ಅಮೃತ ಸುರಿಸುತ್ತಿರುವ ಕಾಮಧೇನುವಿನ ಮೂರ್ತಿಶಿಲ್ಪ, ಕಮಲ ಅಶ್ವ, ನಾಟ್ಯ ನಟರಾಜ ಶಿಲ್ಪಗಳು ಚಾಲುಕ್ಯರು ಆರಾಧಿಸುತ್ತಿದ್ದ ವಿಷ್ಣು, ಶಕ್ತಿಯರ ಪ್ರಭಾವ ಎಲ್ಲಕ್ಕಿಂತ ವಿಶೇಷವಾಗಿದೆ. ದೇವಾಲಯಗಳಲ್ಲಿ ಶಿವನನ್ನು ಬರಿಯ ಲಿಂಗವಾಗಿ ಪ್ರತಿನಿಧಿಸುವಾಗಲೂ, ಅವೇ ದೇಗುಲಗಳ ಗೋಡೆಗಳಲ್ಲಿ ಆತ ನಟರಾಜನಾಗಿ

ಕಾಣಿಸುತ್ತಾನೆ; ಅರ್ಧನಾರೀಶ್ವರನಾಗಿ ಕಾಣಿಸುತ್ತಾನೆ. ಉಮೆಯೊಡನೆ ಕಾಣಿಸುತ್ತಾನೆ. ಗಣಸಮುದಾಯ ದೊಡನೆ ಕಾಣಿಸುತ್ತಾನೆ. ಶಿಲ್ಪಿಗಳ ಮನಸ್ಸನ್ನು ತುಂಬಿ ತುಳುಕಿಸುವಷ್ಟು ಉತ್ಸಾಹ, ಪ್ರೇರಣೆಗಳನ್ನು ಇಂಥ ಹಿನ್ನೆಲೆ ಕಲ್ಪಿಸಿದ್ದುದರಿಂದಲೇ ಚಾಲುಕ್ಯರ ಸಂಪತ್ತು ಸಹಾಯ ಹೇಗೆ ಈ ಪ್ರದೇಶದಲ್ಲಿ ಎರಡು ವಾಸ್ತು ಶೈಲಿಗಳನ್ನು ಪ್ರೇರಿಸಿತೋ ಹಾಗೆಯೇ ಶಿಲ್ಪದಲ್ಲೂ ಒಂದಲ್ಲ, ಹಲವು ಶೈಲಿಗಳನ್ನು ಪ್ರೇರಿಸಿತು[೫] ಎಂಬುದನ್ನು ಇಲ್ಲಿಯ ದೇವಾಲಯಗಳಲ್ಲಿ ಗೋಚರವಾಗುತ್ತದೆ. ಮೂರನೆಯ ಸ್ತಂಭದಲ್ಲಿ ಕುಳಿತಿರುವ ವಿಘ್ನವಿನಾಯಕ, ನರ್ತನಸ್ತ್ರಿ, ಕಳಸ, ಶಿವ ಮತ್ತು ಗೌರಿ, ನಾಟ್ಯಯಕ್ಷ ಕೈಯಲ್ಲಿನ ನಾಗವನ್ನು ಹಿಡಿದ ಹನುಮ ನಾಲ್ಕನೆಯ ಸ್ತಂಭದಲ್ಲಿ ಚಿಂತಾಮಗ್ನ ಸ್ತ್ರೀ, ಶಿವಪರಮಭಕ್ತ ಬೇಡರ ಕಣ್ಣಪ್ಪ, ಧ್ಯಾನಾಸಕ್ತ ಸ್ತ್ರೀ ಯಕ್ಷ ಮತ್ತು ನಂದಿ, ಹಂಸ, ಗಜ, ಸೊಂಡಲಿನಾಕಾರದಂತೆ ಅರಳಿರುವ ಪದ್ಮ ಮುಂತಾದ ಸ್ತಂಭ ಮೂರ್ತಿಶಿಲ್ಪಗಳು ಹಾಗು ಮುಖಮಂಟಪದ ಸ್ತಂಭಗಳಲ್ಲಿ ಕೆಲವು ಮೂರ್ತಿಶಿಲ್ಪಗಳನ್ನು ಕಾಣಬಹುದು. ಈ ಸ್ತಂಭಮೂರ್ತಿ ಶಿಲ್ಪಗಳು ಮನಮೋಹಕವಾಗಿ ಕಲ್ಲರಳಿರುವಂತೆ ಗೋಚರಿಸುತ್ತವೆ. ಇದು ಅಂದಿನ ರಾಜಮನೆತನಗಳ ಕಲೆಯನ್ನು ಪ್ರತಿಬಿಂಬಿಸುತ್ತದೆ ಎಂದರೆ ತಪ್ಪಾಗಲಾರದು. ದೇವಾಲಯದ ಹೊರಭಾಗ ಅಧಿಷ್ಠಾನ ಭಿತ್ತಿಯನ್ನು ಒಳಗೊಂಡಿದೆ. ಹೊರಭಾಗದಲ್ಲಿ ರಚನೆಗಳು ಅಷ್ಟಾಗಿ ಕಂಡುಬರುವುದಿಲ್ಲ.

ದೇವಾಲಯದ ಭಿತ್ತಿಯು ಇಷ್ಟಕ ಕುಡ್ಯದಿಂದ (ಇಟ್ಟಿಗೆಯಿಂದ ನಿರ್ಮಿಸಿರುವ ಭಿತ್ತಿ) ನಿರ್ಮಿತವಾಗಿದೆ. ಭೀತ್ತಿಯ ಒಳ ಹಾಗು ಹೊರಭಾಗಗಳಲ್ಲಿ ಅಲಂಕೃತ ರಚನೆಗಳು ಕಂಡುಬರುವುದಿಲ್ಲ. ಹಾಗೂ ದೇವಾಲಯದ ಕಟ್ಟಡದ ಮೇಲ್ಛಾವಣಿಯು ಕಲ್ಲಿನಿಂದ ಮುಚ್ಚಲ್ಪಟ್ಟಿದೆ. ಈ ದೇವಾಲಯಕ್ಕೆ ಶಿಖರವಾಗಲಿ, ಕಪೋತವಾಗಲಿ ಸ್ತೂಪಿಯಾಗಲಿ ಇಲ್ಲ.

ಈ ದೇವಾಲಯದ ಮೇಲೆ ಉತ್ತರ ದಕ್ಷಿಣಕ್ಕೆ ಮುಖಮಾಡಿ ಕುಳಿತಿರುವ ನಂದಿ ಶಿಲ್ಪಗಳನ್ನು ಎರಡು ದೇಹ ಒಂದೇ ಮುಖ ಹೊಂದಿರುವಂತೆ ಗಾರೆಯಲ್ಲಿ ನಿರ್ಮಿಸಿರುವುದು ಇದೊಂದು ವೈಶಿಷ್ಟ್ಯತೆಯೇ ಸರಿ. ಇವುಗಳನ್ನೆಲ್ಲವನ್ನು ಗಮನಿಸಿದಾಗ ಕುಸುರಿ ಕೆಲಸ ಸೂಕ್ತವಾಗಿ ಮೂಡಿಬಂದಿದೆ. ಎನ್ನಬಹುದು. ಹಾಗಾಗಿ ಇದು ಒಬ್ಬ ಕಲಾಕಾರನಲ್ಲಿರಬಹುದಾದ ಕಲಾ ಪ್ರಜ್ಞೆಯನ್ನು ಪ್ರತಿಬಿಂಬಿಸುತ್ತದೆ. ಈ ದೇವಾಲಯವಲ್ಲದೆ ಇಲ್ಲಿ ಸಾಧಾರಣವಾದ ರಂಗನಾಥಸ್ವಾಮಿ ದೇವಾಲಯ, ಬಸವ ದೇವಾಲಯಗಳಿದ್ದು, ಇವು ಇತ್ತೀಚಿನ ಕಾಲಕ್ಕೆ ಸೇರಿದವುಗಳಾಗಿವೆ. ಲಿಂಗಾಪುರದ ಲಕ್ಷ್ಮೀ ದೇವಾಲಯ, ಅರಳುಮಲ್ಲಿಗೆಯ ಚನ್ನಕೇಶವ ಸ್ವಾಮಿ ದೇವಾಲಯ, ಇಸ್ತೂರಿನ ಕೋದಂಡರಾಮಸ್ವಾಮಿ ದೇವಾಲಯ ಇಸ್ತೂರಿನ ನೀಲಕಂಠೇಶ್ವರ ದೇವಾಲಯ, ಅಂಬಲಗೆರೆಯ ಆಂಜನೇಯ ದೇವಾಲಯ ಇತ್ತೀಚೆಗೆ ನವೀಕರಣಗೊಂಡಿವೆ. ಈ ದೇವಾಲಯಗಳಲ್ಲಿ ಗರ್ಭಗುಡಿಯು ಬಿಳಿಬಣ್ಣ ಹಾಗೂ ತಿಳಿ ನೀಲಿ ಬಣ್ಣದ ಟೈಲ್ಸ್ ಗಳಿಂದ ಒಳಗೊಂಡಿದ್ದು, ಮೂಲ ಆಕಾರವನ್ನು ಕಳೆದುಕೊಂಡಿವೆ. ನವರಂಗ ಮುಂಭಾಗದ ಮೇಲೆ ಸಣ್ಣ ಗೂಡಿನಲ್ಲಿ ಮೂರ್ತಿಗಳನ್ನು, ದೇವಾಲಯದ ಮೇಲೆ ನಾಲ್ಕು ದಿಕ್ಕಿಗೆ

ಬಸವಣ್ಣನ ಮೂರ್ತಿ ನಿರ್ಮಿಸಲಾಗಿರುತ್ತದೆ. ಈ ಗ್ರಾಮಗಳಲ್ಲಿನ ದೇವಾಲಯಗಳ ಮಾದರಿ, ಪರಿಸರದ ದೇವಾಲಯಗಳ ಮಾದರಿಯನ್ನೇ ಹೋಲುತ್ತದೆ. ಬಹುಶಃ ಕಲಾಕಾರ ಪರಿಸರ ಮಾದರಿಯನ್ನೇ ಅನುಸರಿಸಿರಬೇಕು. ಇಲ್ಲಿ ತಮಿಳರ ಶೈಲಿ ಎದ್ದು ಕಾಣುವಂತಿದೆ. ಬಹುಶಃ ಕಲಾಕಾರ ತಮಿಳುನಾಡಿನಿಂದ ಬಂದವರು ಆಗಿರಬಹುದು.

| | | |
|---|---|---|
| **ಹೆಸರು** | : | ಮುಕ್ಕಣ್ಣೇಶ್ವರ ದೇವಾಲಯ |
| **ಸ್ಥಳ** | : | ಮಾಡೇಶ್ವರ ಗ್ರಾಮದ ಹೊರವಲಯ |
| **ದಿಕ್ಕು** | : | ಪೂರ್ವಾಭಿಮುಖ |
| **ಪಂಥ** | : | ಶೈವ |
| **ವಸ್ತು** | : | ಗ್ರಾನೈಟ್ ಶಿಲೆ |
| **ಶಾಸನ** | : | ಕ್ರಿ.ಶ.೧೧೧೫ರ ತಮಿಳು ಶಾಸನ |

ದೊಡ್ಡ ಬಳ್ಳಾಪುರ ತಾಲ್ಲೂಕಿನ ಸುಮಾರು ೧೫ ಕಿಲೋ ಮೀಟರ್ ದೂರದಲ್ಲಿಯ ಹುಲುಕಡಿ ಬೆಟ್ಟದ ತಪ್ಪಲಿನಲ್ಲಿ ಪೂರ್ವದಿಕ್ಕಿಗೆ ಮಾಡೇಶ್ವರ ಗ್ರಾಮವಿದೆ. ಗ್ರಾಮದ ಹೊರವಲಯದಲ್ಲಿ ಈ ದೇವಾಲಯವಿರುವುದು. ಈ ದೇವಾಲಯದ ಪಕ್ಕದಲ್ಲೇ ಲಕ್ಷ್ಮೀ ದೇವಾಲಯವಿರುವುದು. ಆದರೆ ಇದು ಬಹಳಷ್ಟು ಶಿಥಿಲವಾಗಿದೆ. ಈ ಎರಡೂ ದೇವಾಲಯಗಳ ಮಧ್ಯೆ ಹುಟ್ಟುಬಂಡೆಯ ಮೇಲೆ ಕ್ರಿ.ಶ.೧೧೧೫ರ ಒಂದು ತಮಿಳು ಶಾಸನ ಈ ಎರಡೂ ದೇವಾಲಯಗಳಿಗೆ ದಾನ ನೀಡಿರುವ ವಿಷಯ ಉಲ್ಲೇಖವಿದೆ. ಈ ಶಾಸನದಂತೆ ಕ್ರಿ.ಶ.೧೧೧೫ರಲ್ಲಿ[೬] ತ್ರಿಭುವನಮಲ್ಲ ಮಹಾಮಂಡಲೇಶ್ವರ ವಿರುತರ ಭಯಂಕರ ಮಣ್ಣಯ್ಯನಾಡ ಗಾಮುಂಡರಾದ ಸತ್ತಿಯನ್ ಅನ್ನುವನು ಜಲಧಾರೆಯಲ್ಲಿ ಶಿವಬ್ರಾಹ್ಮಣನಿಗೆ ಮುಡೀಪ್ಪರಂ ಉಭಯ ಮಹಾದೇವಾಲಯವನ್ನು ಕೊಟ್ಟಿದ್ದಾರೆ. ನನ್ನ ಸಂತಾನವು ಪೊನ್ನಭಟ್ಟರ ಸಂತಾನವಿರುವವರೆಗೂ ಪೂಜೆಯು ನಡೆದುಕೊಂಡು ಬರತಕ್ಕದ್ದು, ಹಾಗೆಯೇ ಶಾಸನ ಮುಂದುವರಿದು ಪೊನ್ನಭಟ್ಟನಿಗಾಗಲಿ, ಅವನ ವಂಶಸ್ಥರಿಗಾಗಲಿ ಯಾರಾದರೂ ಮುಡೀಶ್ವರರ ಒಡೆಯರ ದೇವರನ್ನು ಪೂಜಿಸಬೇಡವೆಂದು ಭೋಧಿಸಿದಲ್ಲಿ ಅಂತಹವನು ಗಂಗೆ ಮತ್ತು ಕುವರಿಯರ ನಡುವೆ ಗರ್ಭಸ್ಥ ಗೋವನ್ನು ಕಡಿದಂತಹ ಪಾಪಕ್ಕೆ ಗುರಿಯಾಗಿರುತ್ತಾನೆ. ಬಹುಶಃ ಕರ್ನಾಟಕ ಸಂಸ್ಕೃತಿಯ ಒಂದು ಪ್ರಧಾನವಾದ ಅಂಶವನ್ನು ಎತ್ತಿ ತೋರಿಸುತ್ತದೆ. ಜೀವನದ ಮೌಲ್ಯಗಳಲ್ಲಿ ಧರ್ಮಕ್ಕೆ ಪ್ರಪ್ರಥಮ ಸ್ಥಾನವನ್ನಿತ್ತ ಧಾರ್ಮಿಕ ಸಂಸ್ಕೃತಿಯ ಸ್ವರೂಪ ಈ ಶಾಸನದಲ್ಲಿ ಪ್ರತಿಬಿಂಬಿತವಾಗಿದೆ. ಶಾಸನಗಳ ಉಗಮಕ್ಕೆ ಈ ಮನೋಧರ್ಮವೇ ಪ್ರೇರಕ ಶಕ್ತಿಯೆನ್ನಬಹುದು.

ಈ ಮುಕ್ಕಣ್ಣೇಶ್ವರ ದೇವಾಲಯ ಪೂರ್ವಾಭಿಮುಖವಾಗಿದ್ದು, ಏಕಕೂಟ ದೇವಾಲಯವಾಗಿದೆ. ಈ ದೇವಾಲಯವು ಗರ್ಭಗುಡಿ, ಅಂತರಾಳ, ಸಭಾಮಂಟಪ, ಮುಖಮಂಟಪವನ್ನು ಹೊಂದಿದ

ದೇವಾಲಯವಾಗಿದೆ. ಈ ದೇವಾಲಯದ ಗರ್ಭಗುಡಿ ನೈಸರ್ಗಿಕ ಹೆಬ್ಬಂಡೆಯ ಮಧ್ಯದಲ್ಲಿದೆ. ಗರ್ಭಗುಡಿಯಲ್ಲಿರುವ ಮೂರ್ತಿ ಶಿವಲಿಂಗ, ಈ ಶಿವಲಿಂಗ ಪಾನಪೀಠದ ಮೇಲೆ ಸುಮಾರು ಮೂರು ಅಡಿ ಎತ್ತರದಲ್ಲಿದೆ. ಗರ್ಭಗುಡಿಯ ದ್ವಾರದಲ್ಲಿ ಹೂವಿನ ಬಳ್ಳಿಗಳಂತೆ ಬಿಡಿಸಿರುವ ರೇಖಾಚಿತ್ರಗಳಿವೆ. ದ್ವಾರದ ಲಲಾಟಬಿಂಬದಲ್ಲಿ ಪುಷ್ಪಶಾಖೆಗಳನ್ನು ಬಿಡಿಸಿದ್ದಾರೆ.

ದೇವಾಲಯದ ಸಭಾಮಂಟಪದಲ್ಲಿ ಚಚ್ಚೌಕದ ಎತ್ತರದ ವೇದಿಕೆ ಮತ್ತು ಚಚ್ಚೌಕದ ನಾಲ್ಕು ಸ್ತಂಭಗಳಿವೆ. ಸ್ತಂಭಗಳು ಬೋಧಿಗೆಗಳನ್ನು ಹೊಂದಿವೆ. ಈ ಸಭಾಮಂಟಪದ ಮೇಲ್ಛಾವಣಿ ಭುವನೇಶ್ವರಿಯನ್ನು ಒಳಗೊಂಡಿದೆ. ದೇವಾಲಯದ ಹೊರಮೈ ಅಧಿಷ್ಠಾನ ಭಿತ್ತಿಯನ್ನು ಒಳಗೊಂಡಿದೆ. ದೇವಾಲಯದ ಅಧಿಷ್ಠಾನ ಶಾಖೆಗಳನ್ನು ಒಳಗೊಂಡಿದ್ದು, ಕಪೋತದ ಮೇಲ್ಭಾಗ ಮಾತ್ರ ಕಾಣುವಂತಿದೆ. ದೇವಾಲಯದ ಮುಂಭಾಗದಲ್ಲಿ ಕಟಾಂಜನವಿದ್ದು, ಬಿತ್ತಿಯಲ್ಲಿ ಯಾವುದೇ ಅಲಂಕರಣವಿಲ್ಲದೆ ಸಪಾಟಾಗಿದೆ. ದೇವಾಲಯವು ಹೆಚ್ಚಿನ ಎತ್ತರವಿಲ್ಲದೆ ದೇವಾಲಯದ ಮೇಲ್ಛಾವಣಿಗೆ ಕಲ್ಲನ್ನು ವಿಸ್ತೃತವಾಗಿ ಹಾಸಲಾಗಿದೆ. ದೇವಾಲಯದ ಗರ್ಭಗುಡಿಗೆ ಎದುರಾಗಿ ಸಭಾಮಂಟಪದಲ್ಲಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ.

| | | |
|---|---|---|
| **ಹೆಸರು** | : | ವೀರಭದ್ರ ದೇವಾಲಯ |
| **ಸ್ಥಳ** | : | ಹುಲುಕಡಿ ಬೆಟ್ಟ |
| **ದಿಕ್ಕು** | : | ಪಶ್ಚಿಮಾಭಿಮುಖ |
| **ಪಂಥ** | : | ಶೈವ |
| **ವಸ್ತು** | : | ಗ್ರಾನೈಟ್ ಶಿಲೆ |

ಈ ವೀರಭದ್ರದೇವಾಲಯವು ಪಶ್ಚಿಮಾಭಿಮುಖವಾಗಿದ್ದು ಗರ್ಭಗೃಹ ಹಾಗೂ ಸಭಾಮಂಟಪ ವನ್ನು ಹೊಂದಿದ ಏಕಕೂಟ ದೇವಾಲಯವಾಗಿದೆ. ಗರ್ಭಗೃಹವು ಒಂದು ದೊಡ್ಡ ಬಂಡೆಯ ಕೆಳಗಿದ್ದು ಪಶ್ಚಿಮಕ್ಕೆ ಮುಖ ಮಾಡಿ ಸ್ಥಾನಿಕ ಭಂಗಿಯಲ್ಲಿದೆ. ಗರ್ಭಗೃಹದ ಒಳಗೆ ಒಂದು ಅಡಿ ಪೀಠದ ಮೇಲೆ ಸುಂದರವಾದ ವೀರಭದ್ರನ ಮೂರ್ತಿಯಿದೆ. ಈ ದೇವಾಲಯದ ಗರ್ಭಗೃಹದ ಉದ್ದಗಲ ಆರು ಮತ್ತು ಐದು ಅಡಿ ಅಳತೆಯಲ್ಲಿದೆ.

ಗರ್ಭಗೃಹದ ದ್ವಾರವು ದ್ವಾರಶಾಖೆಗಳನ್ನು ಸುರುಳಿಯಾಕಾರದ ಕೆತ್ತನೆಯನ್ನು ಹೊಂದಿದ್ದು ನಾಲ್ಕು ಅಡಿ ಅಗಲ, ಆರು ಅಡಿ ಎತ್ತರವಿದೆ. ಗರ್ಭಗುಡಿಯು ಬೃಹತ್ತಾಗಿರುವ ಬಂಡೆಯ ಕೆಳಗಡೆ ಇರುವುದರಿಂದ, ಇದು ಮೂಲರೂಪದಲ್ಲಿರುವುದೇ ಇದರ ವೈಶಿಷ್ಟ್ಯವಾಗಿದೆ. ಅಂತರಾಳದಲ್ಲಿ ಯಾವುದೇ ಅಲಂಕಾರಗಳು ಕಂಡುಬರುವುದಿಲ್ಲ.

ವೀರಭದ್ರ ದೇವಾಲಯದ ಸಭಾಮಂಟಪದಲ್ಲಿ ಒಟ್ಟು ನಾಲ್ಕು ಸ್ತಂಭಗಳು ಇವೆ. ಈ ನಾಲ್ಕು ಸ್ತಂಭಗಳು ಚೌಕಾಕಾರವಾಗಿದ್ದು ಬೋಧಿಗೆಗಳ ಮೇಲೆ ಮೇಲ್ಛಾವಣೆಯನ್ನು ಹೊಂದಿಸಲಾಗಿದೆ. ಈ ಸ್ತಂಭಗಳು ಅಲಂಕರಣೆಯಿಲ್ಲದೆ ಚೌಕಾಕಾರದಲ್ಲಿವೆ.

ಅಂತರಾಳದ ಮುಂಭಾಗದಲ್ಲಿ ಇತ್ತೀಚೆಗೆ ಕಲ್ಲುಗಳಿಂದ ನಿರ್ಮಿಸಿರುವ ಸಭಾ ಮಂಟಪವಿದೆ. ನಾಲ್ಕು ಕಂಬಗಳ ಮೇಲೆ ಹಾಗೂ ಕಲ್ಲಿನ ಕಟ್ಟಡದ ಮೇಲೆ ಕಲ್ಲಿನ ಮೇಲ್ಛಾವಣೆಯನ್ನು ಹೊಂದಿಸಿದ್ದಾರೆ. ಈ ಸಭಾಮಂಟಪದಲ್ಲಿ ಅನೇಕ ರೀತಿಯ ನಾಗಶಿಲ್ಪಗಳು ಇವೆ. ಸಭಾಮಂಟಪದ ಮೇಲೆ ಹಾಗೂ ಗರ್ಭಗೃಹದ ಮೇಲೆ ಗೋಪುರಗಳು ಹಾಗು ಸ್ತೂಪಗಳಿಲ್ಲ. ಈ ದೇವಾಲಯ ನವೀಕರಿಸಿರುವುದರಿಂದ ದೇವಾಲಯದ ಮೇಲೆ ಶಿಖರವನ್ನು ಅಳವಡಿಸಲಾಗಿಲ್ಲ.

ಪಶ್ಚಿಮಾಭಿಮುಖವಾಗಿರುವ ವೀರಭದ್ರನ ದೇವಾಲಯದ ಅಧಿಷ್ಠಾನವು ಭೂಮಿಯಲ್ಲಿ ಹೂತು ಹೋಗಿದೆ. ಭಿತ್ತಿಯ ಮೇಲ್ಮೈ ಸಪಾಟಾಗಿದೆ. ಯಾವುದೇ ರೀತಿಯ ಕಾವ್ಯ ಸ್ತಂಭಗಳಾಗಲಿ, ದೇವಕೋಷ್ಠಗಳಾಗಲಿ ಕಂಡುಬರುವುದಿಲ್ಲ.

ಈ ದೇವಾಲಯವು ಹುಲುಕಡಿ ಬೆಟ್ಟದಲ್ಲಿರುವ ಶೈವ ದೇವಾಲಯವಾಗಿದ್ದು, ಇಂದಿಗೂ ಈ ದೇವಾಲಯದಲ್ಲಿ ಪ್ರತಿ ಮಂಗಳವಾರ ಹಾಗೂ ಶುಕ್ರವಾರ ಪೂಜೆ ಪುನಸ್ಕಾರ ಹಾಗೂ ಕಾರ್ತಿಕಮಾಸದಲ್ಲಿ ದಿನನಿತ್ಯ ಪೂಜೆ ನಡೆಯುವುದು. ಅಲ್ಲದೆ ವರ್ಷದ ಜನವರಿ ತಿಂಗಳಲ್ಲಿ ಪ್ರತಿವರ್ಷ ಹುಲುಕಡಿ ವೀರಭದ್ರಸ್ವಾಮಿ ರಥೋತ್ಸವ ಜಾತ್ರೆ ಹೂವಿನ ಪಲ್ಲಕ್ಕಿ ನೀಲಕಂಠನ ನೃತ್ಯ ಹಾಗೂ ರಾಸುಗಳ ಜಾತ್ರೆ ನಡೆಯುವುದು. ಈ ದೇವಾಲಯದ ಪಶ್ಚಿಮ ದಿಕ್ಕಿಗೆ ಮದ್ದಿನ ಮನೆ ಇದೆ. ಈ ಮದ್ದಿನ ಮನೆಯ ಬಾಗಿಲಿನ ಲಲಾಟಬಿಂಬದಲ್ಲಿ ಗಜಲಕ್ಷ್ಮಿಯನ್ನು ಬಹಳ ಸುಂದರವಾಗಿ ಕೆತ್ತಿದ್ದಾರೆ. ದೇವಾಲಯದ ಉತ್ತರಾಭಿಮುಖಕ್ಕೆ ಸ್ವಲ್ಪ ದೂರದಲ್ಲೇ ಒಂದು ಬಂಡೆಯ ಮೇಲೆ ಗಣಪತಿಯ ವಿಗ್ರಹವಿದೆ. ಈ ವೀರಭದ್ರಸ್ವಾಮಿ ಎಲ್ಲಾ ಜನಾಂಗದ ಆರಾಧ್ಯ ದೈವವೂ ಹೌದು.

| | | |
|---|---|---|
| **ಹೆಸರು** | : | ವೀರಭದ್ರ ದೇವಾಲಯ |
| **ಸ್ಥಳ** | : | ಹಾದ್ರಿಪುರದ ಗ್ರಾಮದ ಮಧ್ಯಭಾಗದಲ್ಲಿ |
| **ದಿಕ್ಕು** | : | ಪೂರ್ವಾಭಿಮುಖ |
| **ಪಂಥ** | : | ಶೈವ |
| **ವಸ್ತು** | : | ಗ್ರಾನೈಟ್ ಶಿಲೆ |

ದೊಡ್ಡಬಳ್ಳಾಪುರ ತಾಲ್ಲೂಕಿನ ಹಾದ್ರಿಪುರ ಗ್ರಾಮದ ವೀರಭದ್ರ ದೇವಾಲಯಕ್ಕೆ ಬಹಳ ದೂರದಿಂದ ಬರುತ್ತಾರೆ. ವೀರಭದ್ರಸ್ವಾಮಿಯ ಒಕ್ಕಲಿಗೆ ಬಹುತೇಕ ಎಲ್ಲಾ ಜನಾಂಗದವರೂ

ಇದ್ದಾರೆ ಎಂಬುದು ವಿಶೇಷ ಸಂಗತಿ ಹಾಗಾಗಿ ಹುಲುಕಡಿ ಬೆಟ್ಟದ ವೀರಭದ್ರಸ್ವಾಮಿ ದೇವಾಲಯದಷ್ಟೇ. ಒಕ್ಕಲು ಹಾದ್ರಿಪುರದ ವೀರಭದ್ರಸ್ವಾಮಿ ದೇವರಿಗೆ ಇದ್ದಾರೆ ಎಂಬುದು ತಿಳಿಯುತ್ತದೆ.

ಈ ದೇವಾಲಯವು ಗ್ರಾಮದ ಮಧ್ಯಭಾಗದಲ್ಲಿದ್ದು, ಪೂರ್ವಾಭಿಮುಖವಾಗಿದೆ. ಹಾಗು ಏಕಕೂಟ ದೇವಾಲಯವಾಗಿದೆ. ಈ ದೇವಾಲಯವು ಗರ್ಭಗುಡಿ, ಅಂತರಾಳ, ಸಭಾಮಂಟಪ, ಮುಖಮಂಟಪವನ್ನು ಹೊಂದಿದ ದೇವಾಲಯವಾಗಿದೆ. ಈ ದೇವಾಲಯದ ಗರ್ಭಗುಡಿಯು ಸುಮಾರು ೫ ಅಡಿ ಎತ್ತರದ ಚೌಕಾಕಾರದ ಕಟ್ಟೆಯ ಮೇಲೆ ನಿರ್ಮಿಸಿರುವುದು ದೇವಾಲಯದ ಸೌಂದರ್ಯವನ್ನು ಇಮ್ಮಡಿಗೊಳಿಸಿದೆ. ಗರ್ಭಗುಡಿಯಲ್ಲಿ ವೀರಭದ್ರಮೂರ್ತಿಯು ಪೂಜಿಸಲ್ಪಟ್ಟಿದ್ದು, ಸುಮಾರು ಒಂದು ಅಡಿ ಪೀಠದ ಮೇಲೆ ಸ್ಥಾನಿಕ ಭಂಗಿಯಲ್ಲಿದೆ. ಗರ್ಭಗುಡಿಯ ದ್ವಾರದಲ್ಲಿ ಹೂವಿನ ಬಳ್ಳಿಗಳಂತೆ ಬಿಡಿಸಿರುವ ವಲ್ಲೀಬಂಧವಿದೆ. ದ್ವಾರದ ಲಲಾಟಬಿಂಬದಲ್ಲಿ ಪುಷ್ಪ ಶಾಖೆಗಳನ್ನು ಬಿಡಿಸಿರುವುದು ಗರ್ಭಗುಡಿಯ ಸೌಂದರ್ಯವನ್ನು ಹೆಚ್ಚಿಸಿದೆ.

ಸಭಾ ಮಂಟಪದಲ್ಲಿ ನಾಲ್ಕು ಸ್ತಂಭಗಳಿವೆ. ಈ ಸ್ಥಂಭಗಳು ಸಾಧಾರಣ ಶೈಲಿಯಲ್ಲಿದ್ದು, ಸ್ತಂಭಗಳು ಬೋಧಿಗೆಗಳನ್ನು ಹೊಂದಿವೆ. ಈ ಸಭಾಮಂಟಪದ ಮೇಲ್ಛಾವಣಿ ಭುವನೇಶ್ವರಿಯನ್ನು ಒಳಗೊಂಡಿದೆ.

ದೇವಾಲಯದ ಹೊರಮೈ ಅಧಿಷ್ಠಾನ ಭಿತ್ತಿಯನ್ನು ಒಳಗೊಂಡಿದೆ. ಇದರ ತಳವಿನ್ಯಾಸವು ಚೌಕಾಕಾರವಾಗಿರುವುದು. ದೇವಾಲಯದ ಅಧಿಷ್ಠಾನ ಶಾಖೆಗಳನ್ನು ಒಳಗೊಂಡಿದ್ದು, ಕಪೋತ ಮೇಲ್ಭಾಗ ಮಾತ್ರ ಕಾಣುವಂತಿದೆ. ದೇವಾಲಯದ ಮುಂಭಾಗದಲ್ಲಿ ಕಟಾಂಜನವಿದ್ದು, ಭಿತ್ತಿಯಲ್ಲಿ ಯಾವುದೇ ಅಲಂಕರಣೆಗಳು ಕಂಡುಬರದೆ ಶೈಲ ಕುಡ್ಯ 'ಭಿತ್ತಿ' ಎನಿಸಿದೆ. ದೇವಾಲಯದ ಮೇಲ್ಛಾವಣಿಗೆ ಕಲ್ಲನ್ನು ವಿಸ್ತೃತವಾಗಿ ಹಾಸಲಾಗಿದೆ. ದೇವಾಲಯದ ಗರ್ಭಗುಡಿಗೆ ಎದುರಾಗಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ.

ದೇವಾಲಯದ ಶಿಖರವು ದೇವಾಲಯದ ತಳವಿನ್ಯಾಸವನ್ನೆ ಹೊಂದಿದೆ. ಶಿಖರವು ನಾಲ್ಕು ಮೂಲೆಯನ್ನು ಹೊಂದಿದ್ದು, ಇದನ್ನು 'ಬ್ರಹ್ಮಚಂದ ಶಿಖರ' ಎಂದು ಕರೆಯಲಾಗಿದೆ. ಈ ದೇವಾಲಯದ ಗೋಪುರ ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಲಾಗಿದೆ. ಮೂರ್ತಿ ಶಿಲ್ಪಗಳು ಬಹಳಷ್ಟು ಶಿಥಿಲಾವಸ್ಥೆಯನ್ನು ಕಂಡಿವೆ. ನಂದಿ, ಯಕ್ಷ, ವಿಷ್ಣುವಿನ ಶಿಲ್ಪಗಳನ್ನು ಕಾಣಬಹುದು. ಶಿಖರದ ಮೇಲೆ ಸ್ತೂಪಿಗಳಿವೆ. ಬಹುತೇಕ ದೇವಾಲಯಗಳಲ್ಲಿ ಸ್ತೂಪಿಗಳನ್ನು ಕಲ್ಲು ಮತ್ತು ಲೋಹ ವಸ್ತುವಿನಿಂದ ತಯಾರಿಸಿರುತ್ತಾರೆ. ಆದರೆ ಇಲ್ಲಿ ಇಟ್ಟಿಗೆ ಮತ್ತು ಗಾರೆಯನ್ನೇ ಬಳಸಿದ್ದಾರೆ. ಇವು ಕುಂಭಾಕಾರದ ರೂಪದಲ್ಲಿದ್ದು ಮೊಗ್ಗಿನಂತಹ ಆಕಾರ ಹೊಂದಿರುವುದು ವಿಶೇಷವಾಗಿದೆ.

ಈ ಹಾದ್ರಿಪುರದ ದೇವಾಲಯದ ಇತಿಹಾಸವನ್ನು ಸುಮಾರು ೩೦೦ ರಿಂದ ೪೦೦ ವರ್ಷಗಳ ಹಿಂದಕ್ಕೆ ಕೊಂಡೊಯ್ಯಬಹುದು. ಇದರ ಉಲ್ಲೇಖವು ಕ್ರಿ.ಶ.೧೭೬೫ರ ಚನ್ನಬಸವ ಪುರಾಣದ ಹಸ್ತಪ್ರತಿಯಲ್ಲಿದೆ. (ಈಗ ಇದು ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿ ವಿಭಾಗದಲ್ಲಿದೆ. ಈ ಮಾಹಿತಿಯನ್ನು ಕೊಟ್ಟ ಗುರುಗಳಾದ ಶ್ರೀ ಪರಮಶಿವಮೂರ್ತಿಯವರಿಗೆ ಧನ್ಯವಾದಗಳು) ಕೋಡಿಹಳ್ಳಿದಳವಾಯಿಗಳಾದ ಬೈಲಪನವರ ಮಗನಾದ ಸಂಚದಯ್ಯನು ಕೋಡಿಹಳ್ಳಿಗೌಡರಾದ ವೀರೇಗೌಡರಿಗೆ ಚನ್ನಬಸವ ಪುರಾಣಕೃತಿಯನ್ನು ಬರೆದುಕೊಟ್ಟಿರುವನು. ಇದರ ಆರಂಭದ ಪದ್ಯದಲ್ಲೇ "ಹಾದ್ರಿಪುರದ ವೀರಭದ್ರಸ್ವಾಮಿ ಚರಣಾರವಿಂದವೇ ಗತಿ"[೭] ಎಂದು ಹೇಳಲಾಗಿದೆ. ಹಾಗಾಗಿ ಈ ದೇವಾಲಯ ೧೭೬೫ಕ್ಕಿಂತಲೂ ಹಿಂದೆಯೇ ನಿರ್ಮಾಣಗೊಂಡಿದೆ ಎನ್ನಬಹುದು.

### ೫.೧.೨. ವೈಷ್ಣವ ದೇವಾಲಯಗಳು - ವಾಸ್ತುಶೈಲಿ - ಶಿಲ್ಪಗಳು

ವಿಷ್ಣುವನ್ನೇ ಆರಾಧ್ಯದೈವವಾಗುಳ್ಳ ವೈಷ್ಣವ ಧರ್ಮವು ಭಗವಂತನು ಸಗುಣನೆಂದು ಭಾವಿಸಿ ಅವನ ಪ್ರತಿಕೋಪಾಸನೆಯನ್ನು ಮಾಡುವುದು ಇದರ ಮುಖ್ಯ ಲಕ್ಷಣ. ವಿಷ್ಣುವಿನ ಹತ್ತು ಅವತಾರಗಳಲ್ಲಿ ಯಾವುದನ್ನೇ ಪೂಜಿಸಲಿ ಈ ಧರ್ಮವು ಮುಖ್ಯವಾಗಿ ಏಕದೇವೋಪಾಸನೆಯನ್ನು ಎತ್ತಿ ಹಿಡಿಯುತ್ತದೆ. ಈ ಇಷ್ಟದೈವದ ಪ್ರಸಾದ ಅಥವಾ ಕರುಣೆಗಾಗಿ ತನ್ನನ್ನು ತಾನು ಭಗವಂತನಿಗಾಗಿ ಸಂಪೂರ್ಣವಾಗಿ ಸಮರ್ಪಿಸಿಕೊಳ್ಳಬೇಕು. ವಿಷ್ಣುವಿಗಿಂತ ಕೆಳಮಟ್ಟದಲ್ಲಿದ್ದರೂ ಬೇರೆ ಬೇರೆ ಸಾಮರ್ಥ್ಯಗಳನ್ನು ಪಡೆದು, ಭಿನ್ನ ಭಿನ್ನ ಕರ್ತವ್ಯಗಳನ್ನು ಹೊತ್ತಿರುವ ಬ್ರಹ್ಮ, ಶಿವ ಮುಂತಾದ ಅಸಂಖ್ಯಾತ ದೇವತೆಗಳಿಗೆ ಈ ಧರ್ಮವು ಗೌರವವನ್ನು ತೋರಿಸುತ್ತದೆ. ಭಗವಂತನು ಈ ಲೋಕವನ್ನು ಸೃಷ್ಟಿಸಿರುವಂತೆ. ಅದರ ಉದ್ಧಾರಕ್ಕಾಗಿ ಆಗಾಗ ಅವತರಿಸುತ್ತಾನೆಂದು ಅದು ನಂಬುತ್ತದೆ. ಮೋಕ್ಷದಲ್ಲಿ ಬೇರೆ ಬೇರೆ ಹಂತಗಳುಂಟೆಂದೂ, ಭಕ್ತಿಯೊಂದೇ ಪಾಪಗಳನ್ನು ಹೋಗಲಾಡಿಸಲು ಸಮರ್ಥವಾದುದೆಂದೂ, ಸಾಧಕನಿಗೆ ಗುರು ಅತ್ಯವಶ್ಯವೆಂದೂ ಭಗವಂತನ ನಾಮೋಚ್ಚಾರಣೆಗೆ ಅದ್ಭುತವಾದ ಶಕ್ತಿಯಿದೆಯೆಂದೂ ವೈಷ್ಣವ ಧರ್ಮವು ಒತ್ತಿಹೇಳುತ್ತದೆ. ಈ ರೀತಿಯ ವಿಶಾಲ ವ್ಯಾಪ್ತಿಯ ಮನೋಧರ್ಮವನ್ನು ಹೊಂದಿದ ವೈಷ್ಣವಧರ್ಮ ಕರ್ನಾಟಕದಲ್ಲಿ ಕ್ರಿಸ್ತಶಕಕ್ಕಿಂತ ಪೂರ್ವದಲ್ಲಿಯೇ ಪ್ರವೇಶ ಮಾಡಿರಬಹುದು. ಕ್ರಿಸ್ತಶಕದ ಪ್ರಾರಂಭದಲ್ಲಿ ವೈಷ್ಣವಧರ್ಮ ಶಾಸನಗಳಲ್ಲಿ 'ಭಾಗವತ', ವೈಷ್ಣವ ಎಂಬ ಪದಗಳು ದೊರೆಯುತ್ತವೆ. ಕನ್ನಡ ಭಾಷೆಯ ಅತ್ಯಂತ ಪ್ರಾಚೀನ ಶಾಸನವಾದ ಹಲ್ಮಿಡಿ ಶಾಸನವು[೮] ವಿಷ್ಣುವಿನ ಪ್ರಾರ್ಥನೆಯೊಂದಿಗೆ ಆರಂಭವಾಗುತ್ತದೆ. ಆರನೆಯ ಶತಮಾನದಿಂದೀಚೆಗೆ ವೈಷ್ಣವಧರ್ಮದ ದೇವಾಲಯಗಳಲ್ಲಿ, ಬೇಲೂರಿನ ಶಾಸನಗಳಲ್ಲಿ ಈ ವೈಷ್ಣವರ ಹೆಸರುಗಳು ಕಂಡುಬಂದಿರುವುದರಿಂದ. ೧೨ನೆಯ ಶತಮಾನದಲ್ಲಿ ರಾಮಾನುಜರು ಕರ್ನಾಟಕಕ್ಕೆ ಬಂದು ವಿಷ್ಣುವರ್ಧನನ ಪ್ರೋತ್ಸಾಹವನ್ನು ಪಡೆದು ದಕ್ಷಿಣ ಕರ್ನಾಟಕದಲ್ಲಿ ಶ್ರೀ ವೈಷ್ಣವ ಧರ್ಮವನ್ನು ಪ್ರಚಾರ ಮಾಡಿದುದರ ಫಲವಾಗಿ

ವೈಷ್ಣವ ಪಂಥ ಕರ್ನಾಟಕದಲ್ಲಿ ಮತ್ತಷ್ಟು ಬೆಳೆದುಬಂದುದರಿಂದ ವೈಷ್ಣವ ಧರ್ಮದ ದೇವಾಲಯಗಳು ನಿರ್ಮಾಣಗೊಳ್ಳತೊಡಗಿದವು. ಹೀಗೆ ಬೆಳೆದುಬಂದ ವೈಷ್ಣವ ದೇವಾಲಯಗಳು ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿಯೂ ಕಾಣಬಹುದು.

| | | |
|---|---|---|
| **ಹೆಸರು** | : | ಚನ್ನಕೇಶವ ದೇವಾಲಯ |
| **ಸ್ಥಳ** | : | ಕಾಡನೂರು, ಗ್ರಾಮದ ಮಧ್ಯಭಾಗದಲ್ಲಿ |
| **ದಿಕ್ಕು** | : | ಪೂರ್ವಾಭಿಮುಖ |
| **ಪಂಥ** | : | ವೈಷ್ಣವ |
| **ವಸ್ತು** | : | ಗ್ರಾನೈಟ್ ಶಿಲೆ |
| **ಶಾಸನ** | : | ಕ್ರಿ.ಶ,.೧೫೩೧ರ ಹೊಯ್ಸಳ ಶಾಸನ |

ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿಯೇ ಅತ್ಯಂತ ಸುಂದರವಾದ ದೇವಾಲಯವಿದು. ಹುಲುಕಡಿನಾಡ ಪ್ರಭುಗಳ ಕಾಲಾವಧಿಯಲ್ಲಿ ರಚನೆಗೊಂಡ ದೇವಾಲಯವಿದು. ತಾಲ್ಲೂಕಿನ ಮಧುರೆ ಹೋಬಳಿಯ ಕಾಡನೂರು ಗ್ರಾಮದ ಶ್ರೀ ಚನ್ನಕೇಶವ ಸ್ವಾಮಿ ದೇವಲಾಯದ ಆವರಣದಲ್ಲಿ ದೇವಾಲಯಕ್ಕೆ ಸಂಬಂಧಪಟ್ಟಂತೆ ವಿಜಯನಗರ ಅರಸರ ಕಾಲದ ಕ್ರಿ.ಶ.೧೫೩೧ರ ಅಚ್ಚುತರಾಯರ ಕಾಲಾವಧಿಯ ಶಾಸನವಿದೆ.[೯] ಈ ದೇವಾಲಯಕ್ಕೆ ಹುಲುಕಡಿ ನಾಡ ಪ್ರಭುಗಳು ಗಂಡ್ರಗೊಳ್ಳಿಪುರದ ದಳವಾಯಿಗಳಾದ ಸೋಣ್ಣಪ್ಪನಾಯಕನ ಮಕ್ಕಳು ನಾಗಪ್ಪನಾಯಕರು ಕಾಡನೂರು ಚನ್ನಕೇಶವ ದೇವರಿಗೆ ಕಾಡನೂರು ಗ್ರಾಮವನ್ನು ಅಚ್ಚುತರಾಯರಿಗೆ ತುಂಗಭದ್ರ ತೀರದ ವಿರೂಪಾಕ್ಷ ದೇವರ ಸಾನ್ನಿಧ್ಯದಲ್ಲಿ ದಾನ ನೀಡುತ್ತಾನೆ ಎಂಬುದನ್ನು ಶಾಸನ ಪ್ರಸ್ತಾಪಿಸುತ್ತದೆ.

ಈ ದೇವಾಲಯವು ಗರ್ಭಗುಡಿ ಅಂತರಾಳ, ನವರಂಗ ಸಭಾಮಂಟಪವನ್ನು ಒಳಗೊಂಡಿದೆ. ದೇವಾಲಯದ ಗರ್ಭಗುಡಿಯ ಬಾಗಿಲು ತೆಳುವಾದ ಸಮತಟ್ಟಾದ ಪಟ್ಟಿಯನ್ನು ಹೊಂದಿದ್ದು, ದ್ವಾರದ ಲಲಾಟ ಬಿಂಬದಲ್ಲಿ ಪದ್ಮವನ್ನು ಕೆತ್ತಲಾಗಿದೆ. ಹಾಗೂ ದ್ವಾರದಲ್ಲಿ ಎರಡು ಭಾಗಗಳಲ್ಲಿ ಪೂರ್ಣಕುಂಬಗಳು ಪ್ರತಿಬಿಂಬಿತವಾಗಿವೆ.

ಅರಳಿದ ಕಮಲ, ಪುಷ್ಪಶಾಖಬಂಧ, ಹಾಗೂ ವಲ್ಲೀಬಂಧಗಳಿರುವುದು ದೇವಾಲಯದ ವೈಶಿಷ್ಟ್ಯತೆಗಳಾಗಿದೆ. ಆದರೆ ಇವು ಈಗ ಬಣ್ಣದಿಂದ ಆವರಿಸಲ್ಪಟ್ಟಿವೆ. ಗರ್ಭಗೃಹ ಆದ ನಂತರ ಬರುವ ಭಾಗವೇ ಅಂತರಾಳ. ಈ ಅಂತರಾಳದ ಮೇಲ್ಛಾವಣೆಯಲ್ಲಿ ಕಮಲದ ಹೂವಿನ ಕೆತ್ತನೆಯಿದೆ. ಹಾಗೂ ಮೇಲ್ಛಾವಣೆಯಲ್ಲಿ ಆಮೆ, ಮೀನು, ಜೋಡಿಮೀನು. ಮುಂತಾದ ಶಿಲ್ಪಗಳ ಕೆತ್ತನೆ ಇವೆ. ಸಭಾಮಂಟಪದಲ್ಲಿ ನಾಲ್ಕು ಸ್ತಂಭಗಳು ಹಾಗೂ ಸ್ತಂಭದ ಮಧ್ಯಮೇಲ್ಛಾವಣೆಯಲ್ಲಿ ಭುವನೇಶ್ವರಿ

ಇದೆ. ಈ ಸಭಾಮಂಟಪದ ಎಡಭಾಗದಲ್ಲಿ ನವಗ್ರಹ ಮತ್ತು ಗಣಪತಿ ಶಿಲ್ಪಗಳಿವೆ. ವಿಶಾಲವಾದ ಈ ದೇವಾಲಯದ ಮುಖಮಂಟಪ ಮೂವತ್ತಾರು ಸ್ತಂಭಗಳನ್ನು ಒಳಗೊಂಡು ಕಲ್ಲಿನ ಮೇಲ್ಛಾವಣಿ ವಿಸ್ತೃತ ಆಕಾರದಲ್ಲಿ ಹಾಸಲ್ಪಟ್ಟಿದೆ. ಪ್ರಸ್ತುತ ಇದು ತೆರೆದ ಮಂಟಪ. ದೇವಾಲಯದ ಸಭಾಮಂಟಪ ವಿವಿಧ ಮಾದರಿಯ ಸ್ತಂಭಗಳ ಕಲಾವೈಶಿಷ್ಟ್ಯತೆಯನ್ನು ಹೊಂದಿದೆ. ಈ ಸ್ತಂಭಗಳು ಚಚ್ಚೌಕಕಾರವಾಗಿದ್ದು, ಬೋಧಿಗೆಗಳನ್ನು ಒಳಗೊಂಡಿದೆ. ಸ್ತಂಭಗಳಲ್ಲಿ ಉಬ್ಬು ಶಿಲ್ಪಗಳಾದ ನವಿಲು, ಮೀನು ಆಮೆ, ಹೂವಿನ ಚಿತ್ರಗಳಿವೆ. ಈ ದೇವಾಲಯದ ಹೊರಮೈ ಅದಿಷ್ಠಾನ, ಭಿತ್ತಿ ಶಿಖರವನ್ನು ಒಳಗೊಂಡು ತನ್ನ ಕಲಾವೈಶಿಷ್ಟ್ಯತೆಯನ್ನು ಮೆರೆದಿದೆ.

ದೇವಾಲಯದ ಅಧಿಷ್ಠಾನವು ಮೂರು ಅಡಿ ಎತ್ತರವಿದ್ದು ಮಂಚಬಂಧದ ಮಾದರಿಯಲ್ಲಿದೆ. ದೇವಾಲಯದ ಗರ್ಭಗುಡಿ ಹಾಗೂ ಸಭಾಮಂಟಪದ ಮೇಲ್ಛಾವಣಿ ವಿಸ್ತೃತ ಆಕಾರದಲ್ಲಿ ಹಾಸಲ್ಪಟ್ಟಿದೆ. ಯಾವುದೇ ಅಲಂಕರವಿಲ್ಲದೆ ಸಪಾಟಾಗಿದೆ.

ದೇವಾಲಯದ ಗರ್ಭಗುಡಿಯ ಮೇಲ್ಭಾಗದಲ್ಲಿರುವುದೇ ಶಿಖರದ ಶಿಖರ ಮೇಲ್ಭಾಗ ಸ್ತೂಪಿ ಯನ್ನು ಹೊಂದಿದೆ. ಅತ್ಯಂತ ಸುಂದರವಾದ ಗೋಪುರವನ್ನು ಒಳಗೊಂಡಿದ್ದು ಶಿಖರ ಹಾಗೂ ಕಳಶಗಳನ್ನು ಹೊಂದಿದೆ. ಅಲಂಕೃತಗೊಂಡಿರುವ ಗರ್ಭಗುಡಿಯ ಮೇಲಿರುವ ಗೋಪುರದಲ್ಲಿ ದುಂಡಾದ ಶಿಖರ, ಶಿಖರದ ಮೇಲ್ಭಾಗ ಮೂರು ಕಳಶಗಳನ್ನು ಹೊಂದಿದ್ದು, ಬಹಳ ಕಲಾತ್ಮಕವಾಗಿ ಕೂಡಿದುದಾಗಿದೆ. ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿಯೇ ಅತ್ಯಂತ ಸುಂದರವಾದ ಈ ದೇವಾಲಯ ಇತ್ತೀಚೆಗೆ ಜೀರ್ಣೋದ್ದಾರಗೊಂಡಿದೆ. ವಿಶಾಲವಾದ ಈ ದೇವಾಲಯದಲ್ಲಿ ಪೂಜೆ ಪುನಸ್ಕಾರಗಳು, ಜಾತ್ರೆ, ಉತ್ಸವಗಳು ನಡೆಯುತ್ತಲೇ ಇರುತ್ತವೆ. ದೇವಾಲಯದ ದ್ವಾರಬಾಗಿಲು ವಿಶಾಲವಾಗಿದ್ದು, ಆವರಣದ ಒಳಗೆ ಪ್ರದಕ್ಷಿಣಾ ಪಥವನ್ನು ಹೊಂದಿದೆ. ಸಭಾಮಂಟಪ ಹಾಗೂ ಮುಖಮಂಟಪದಲ್ಲಿರುವ ಸ್ತಂಭಗಳಿಗೆ ಇತ್ತೀಚೆಗೆ ಬಣ್ಣವನ್ನು ಹಚ್ಚಿ, ಬಣ್ಣದಿಂದ ಆವೃತಗೊಳಿಸಲಾಗಿದೆ.

ಈ ದೇವಾಲಯ ಆ ಕಾಲದ ವಾಸ್ತುಶಿಲ್ಪಕಲೆಯ ಪ್ರರಿಣಿತ ಸ್ಥಿತಿಯ ಪ್ರತೀಕವಾಗಿದೆ. ಪೂಜಾಪರಿಕರ್ಮಗಳಿಗೆ ಅಗತ್ಯವಾದ ಅನುಕೂಲದೃಷ್ಟಿ ಮತ್ತು ಚನ್ನಕೇಶವಸ್ವಾಮಿ ಸಾನ್ನಿಧ್ಯದ ಒಂದು ಸಂಕೇತವಾದ ಕಲಾಸೌಂದರ್ಯಗಳೆರಡನ್ನೂ ಒಟ್ಟಿಗೆ ಮೈಗೂಡಿಸಿಕೊಂಡು ಅಪೂರ್ವ ಕಲಾಕೃತಿಯಾಗಿ ಈ ದೇವಾಲಯ ನಿಂತಿದೆ.

**ಹೆಸರು** : ಚನ್ನಿಗರಾಯಸ್ವಾಮಿ ದೇವಾಲಯ

**ಸ್ಥಳ** : ಹುಲುಕಡಿ ಬೆಟ್ಟ, ಹುಲುಕಡಿಬೆಟ್ಟದ ತಪ್ಪಲು

**ದಿಕ್ಕು** : ಪೂರ್ವಾಭಿಮುಖ

ಪಂಥ : ವೈಷ್ಣವ

ವಸ್ತು : ಗ್ರಾನೈಟ್ ಶಿಲೆ

ವಿಜಯನಗರ ಅರಸರ ಆಳ್ವಿಕೆಯ ಅವಧಿಯಲ್ಲಿಯೇ ನಿರ್ಮಾಣಗೊಂಡಿರಬಹುದೆನ್ನಲಾದ ದೇವಾಲಯವಿದು. ಹುಲುಕಡಿಬೆಟ್ಟದ ಲಾವೆಹಳ್ಳಕ್ಕೆ ಸ್ವಲ್ಪದೂರದಲ್ಲಿ ಈ ದೇವಾಲಯವಿದೆ. ಈ ದೇವಾಲಯ ಗರ್ಭಗುಡಿ, ಸಭಾಮಂಟಪವನ್ನು ಮಾತ್ರ ಒಳಗೊಂಡಿದ್ದು, ಹೆಚ್ಚಿನ ವಿಷಯಗಳ ಚರ್ಚೆಗೆ ಅವಕಾಶ ನೀಡಿರುವುದಿಲ್ಲ. ಚನ್ನಿಗರಾಯಸ್ವಾಮಿ ದೇವಾಲಯವು ಪೂರ್ವಾಭಿಮುಖವಾಗಿದೆ. ಗರ್ಭಗುಡಿ ಹಾಗು ಸಭಾಮಂಟಪವನ್ನು ಮಾತ್ರ ಒಳಗೊಂಡಿರುವ ಈ ದೇವಾಲಯದ ಮುಂದೆ ಒಂದು ಪುಷ್ಕರಣಿ ಇದೆ. ಗರ್ಭಗುಡಿಯಲ್ಲಿ ಸ್ವಾಮಿಯ ಮೂರ್ತಿ ಶಿಲ್ಪವನ್ನು ಪ್ರತಿಷ್ಠಾಪಿಸಿದ್ದಾರೆ. ಗರ್ಭಗುಡಿಯ ದ್ವಾರವು ಸಪಾಟಾಗಿದ್ದು, ಯಾವುದೇ ಅಲಂಕರಣೆಯನ್ನು ಒಳಗೊಳ್ಳದೇ ಮೂಲರೂಪದಲ್ಲಿದೆ. ಎಡಬಲಭಾಗದಲ್ಲಿ ಜಯವಿಜಯರ ಮೂರ್ತಿಶಿಲ್ಪಗಳಿವೆ. ಈ ದೇವಾಲಯದ ಸಭಾಮಂಟಪದಲ್ಲಿ ಎರಡು ಸ್ತಂಭಗಳಿದ್ದು ಮುಂಭಾಗದಲ್ಲಿ ಸ್ತಂಭಗಳ ಕಮಾನಿನ ಮೇಲೆ ಮೇಲ್ಛಾವಣಿಯನ್ನು ಲಂಬವಿಸ್ತೃತ ಆಕಾರದಲ್ಲಿ ಹಾಸಲ್ಪಟ್ಟಿದೆ. ಸ್ತಂಭಗಳು ಚಚ್ಚೌಕವಾಗಿದ್ದು ಯಾವುದೇ ಅಲಂಕರಣೆ ಕಂಡುಬರುವುದಿಲ್ಲ. ದೇವಾಲಯದ ಹೊರಭಾಗ ಅಧಿಷ್ಠಾನ ಭಿತ್ತಿಯನ್ನು ಒಳಗೊಂಡಿದ್ದು ಪ್ರಸ್ತುತ ಈ ದೇವಾಲಯಕ್ಕೆ ಶಿಖರವಿರುವುದಿಲ್ಲ. ದೇವಾಲಯದ ಭಿತ್ತಿಯು ಕಲ್ಲು ಮತ್ತು ಮಣ್ಣಿನಿಂದ ಆವೃತವಾಗಿರುವಂತೆ ಕಾಣುತ್ತದೆ. ಕಪೋತವಾಗಲಿ, ಶಿಖರವಾಗಲಿ, ಪ್ರದಕ್ಷಿಣೆ ಪಥವಾಗಲಿ ಈ ದೇವಾಲಯಕ್ಕೆ ಇರುವುದಿಲ್ಲ.

ದೇವಾಲಯದ ಮುಂಭಾಗದಲ್ಲಿ ಹುಲುಕಡಿನಾಡಪ್ರಭುಗಳಿಂದ ನಿರ್ಮಾಣವಾಗಿರ ಬಹುದೆನ್ನಲಾದ ಒಂದು ದೊಡ್ಡ ಪುಷ್ಕರಣಿ ಇದೆ. ಇದು ಸುಮಾರು ಇಪ್ಪತ್ತೈದು ಅಡಿ ಆಳ ೩೦x೩೦ ಅಡಿ ಉದ್ದಗಲತೆಯ ವಿಸ್ತೀರ್ಣವನ್ನು ಹೊಂದಿರುವುದು. ಈ ದೇವಾಲಯದ ಪಕ್ಕದಲ್ಲಿ ಅಶ್ವತ್ಥ ವೃಕ್ಷದ ಕೆಳಗೆ ನಾಗಶಿಲ್ಪಗಳನ್ನು ಇಡಲಾಗಿದೆ. ಈ ದೇವಾಲಯದ ಸ್ವಲ್ಪ ದೂರದಲ್ಲೇ ದಾಸರಗವಿ ಕಂಡುಬರುವುದು. ಇಲ್ಲಿನ ಒಂದು ವಿಶೇಷತೆ ಎಂದರೆ ಈಗಲೂ ಮಂಗಳವಾರ, ಹಾಗೂ ಶುಕ್ರವಾರ ವಿಶೇಷ ಪೂಜೆ ಪುನಸ್ಕಾರಗಳು ನಡೆಯುತ್ತಲೇ ಇರುತ್ತವೆ. ದೇವಾಲಯದ ಮುಂಭಾಗದಲ್ಲಿ ದೊಡ್ಡ ಬಂಡೆಯಿದ್ದು, ಈ ಬಂಡೆಯ ಮೇಲೆ ಗರುಡಗಂಭವನ್ನು ನಿರ್ಮಿಸಿದ್ದಾರೆ. ಈ ಗರಡುಗಂಭದ ಮೇಲೆ ವ್ಯಾಸಪೂರ್ಣಿಮೆಯ ದಿನದಂದು ಜ್ಯೋತಿಯನ್ನು ಬೆಳಗಿಸುವುದು ಇಲ್ಲಿನ ಜನರ ಸಂಪ್ರದಾಯ ಇಂದಿಗೂ ಮುಂದುವರಿದಿದೆ.

ಹೆಸರು : ಚನ್ನಕೇಶವ

ಸ್ಥಳ : ಕನ್ನಮಂಗಲ, ಗ್ರಾಮದ ಪಶ್ಚಿಮದಿಕ್ಕಿಗೆ

**ದಿಕ್ಕು** : ಪೂರ್ವಾಭಿಮುಖ

**ಪಂಥ** : ವೈಷ್ಣವ

**ವಸ್ತು** : ಗ್ರಾನೈಟ್ ಶಿಲೆ

ಈ ದೇವಾಲಯವು ಪೂರ್ವಭಿಮುಖವಾಗಿದ್ದು. ಇದರ ತಳವಿನ್ಯಾಸವು ಗರ್ಭಗೃಹ ಹಾಗೂ ಸಭಾಮಂಟಪವನ್ನು ಹೊಂದಿರುವ ಏಕಕೂಟ ದೇವಾಲಯವಾಗಿದೆ. ಈ ದೇವಾಲಯದ ಗರ್ಭಗೃಹದಲ್ಲಿ ಪೂರ್ವಕ್ಕೆ ಮುಖಮಾಡಿದ ಚನ್ನಕೇಶವಸ್ವಾಮಿ ಮೂರ್ತಿಶಿಲ್ಪವಿದೆ. ಮೂರ್ತಿಯು ನಿಂತಭಂಗಿಯಲ್ಲಿದ್ದು ಗರ್ಭಗೃಹದ ದ್ವಾರದಲ್ಲಿ ಯಾವುದೇ ಅಲಂಕಾರತೆ ಇಲ್ಲ, ಬಹುಶಃ ೧೨ನೆಯ ಶತಮಾನದಲ್ಲಿ ರಚಿತವಾದ ದೇವಾಲಯವೆಂದು ಊಹಿಸಬಹುದು. ಕಲ್ಲು ಮಣ್ಣು ಇಟ್ಟಿಗೆಗಳಿಂದ ಕಟ್ಟಡ ನಿರ್ಮಿತವಾಗಿದ್ದು, ಮೇಲ್ಛಾವಣೆ ಗ್ರಾನೈಟ್ ಕಲ್ಲಿನಿಂದ ನಿರ್ಮಿತವಾದುದಾಗಿದೆ. ದೇವಾಲಯದ ಮೇಲ್ಛಾವಣಿ ಚಚ್ಚೌಕಕಾರದ ನಾಲ್ಕು ಸ್ತಂಭಗಳು ಬೋಧಿಗೆಗಳ ಮೇಲೆ ನಿಲ್ಲಲ್ಪಟ್ಟಿದೆ. ಸ್ತಂಭದ ಬುಡಭಾಗ ಚೌಕಕಾರವಾಗಿದ್ದು ಸ್ತಂಭದ ಮಧ್ಯಭಾಗ ಅಷ್ಟಮೂಲೆಗಳಿಂದ ಕೂಡಿದ್ದು, ಮೇಲ್ಭಾಗದ ನಾಲ್ಕು ದಿಕ್ಕಿನಲ್ಲಿ ಪದ್ಮ ಶಿಲ್ಪಗಳನ್ನು ಬಿಡಿಸಿದ್ದಾರೆ. ಈ ದೇವಾಲಯದ ಎದುರು ಗರುಡ ಗಂಭವಿದ್ದು, ಗರ್ಭಗೃಹಕ್ಕೆ ಎದುರಾಗಿ ನಿಲ್ಲಿಸಿ ಜ್ಯೋತಿಬೆಳಗಿಸಲು ಅನುಕೂಲವಾಗಿದೆ.

ದೇವಾಲಯದ ಅಂತರಾಳ ಭಾಗದಲ್ಲಿ ಜಯ-ವಿಜಯರ ಶಿಲ್ಪಗಳನ್ನು ಹೊಂದಿದೆ. ಮುಖ ಮಂಟಪದಲ್ಲಿ ಸುಖನಾಸಿಯನ್ನು ನೋಡಬಹುದು. ದೇವಾಲಯದ ದ್ವಾರಗಳು ಬೃಹತ್ತಾದ ಕಪ್ಪು ಶಿಲೆಯಿಂದ ಕೂಡಿದ್ದು ಸಾಧಾರಣ ಶೈಲಿಯನ್ನು ಪಡೆದಿದೆ.

ದೇವಾಲಯದ ಹೊರಭಾಗ ಅಧಿಷ್ಠಾನ ಭಿತ್ತಿಯನ್ನು ಒಳಗೊಂಡಿದೆ. ಅಧಿಷ್ಟಾನದ ಸ್ವಲ್ಪ ಮೇಲ್ಭಾಗದಲ್ಲಿ ನಾಗಶಿಲ್ಪಗಳಿಂದ ಕೂಡಿದ್ದು ಬಹಳಷ್ಟು ಸುಂದರವಾಗಿ ಬಿಡಸಿದ್ದಾರೆ. ಭಿತ್ತಿಯು ಸಾಧಾರಣ ಗೋಡೆಯಿಂದ ನಿರ್ಮಿತವಾಗಿದ್ದು, ಭಿತ್ತಿಯಲ್ಲಿ ಯಾವುದೇ ಕಾವ್ಯಸ್ತಂಭಗಳು ಇಲ್ಲ. ಅಲಂಕರಣೆ ಇಲ್ಲದೆ ಮೂಲರೂಪದಲ್ಲಿದೆ, ಕಪೋತ, ಶಿಖರ, ಸ್ತೂಪಿ, ಕಳಸವಾಗಲಿ ಈ ದೇವಾಲಯದಲ್ಲಿ ಕಂಡುಬರದೆ ಸಾಮಾನ್ಯ ಕಟ್ಟಡದ ದೇವಾಲಯವಾಗಿದೆ. ಗ್ರಾಮದ ಪೂರ್ವದಿಕ್ಕಿಗೆ ರಸ್ತೆಯ ಬಲಭಾಗದಲ್ಲಿ ಆರು ಚೌಕಾಕಾರದ ಸ್ತಂಭಗಳಿದ್ದು, ಈ ಸ್ತಂಭಗಳಲ್ಲಿ ಯಕ್ಷ, ಸಿಂಹನಾರಿ, ಲಿಂಗ, ನಂದಿ, ನವಿಲು, ಮಕರ, ಸ್ತಂಭದ ಮೇಲೆ ಆಸೀನನಾಗಿರುವ ಗಣಪ, ಸಿಂಹ, ಗರುಡನ ಉಬ್ಬು ಶಿಲ್ಪಗಳು ನೋಡುಗರಿಗೆ ಮುದನೀಡುವ ಶಿಲ್ಪಗಳಾಗಿ ಕಂಡುಬರುತ್ತವೆ.

**ಹೆಸರು** : ಆಂಜನೇಯಸ್ವಾಮಿ

**ಸ್ಥಳ** : ಲಿಂಗನಹಳ್ಳಿ, ಗ್ರಾಮದ ಮಧ್ಯಭಾಗದಲ್ಲಿ

ದಿಕ್ಕು : ದಕ್ಷಿಣಾಭಿಮುಖ

ಪಂಥ : ವೈಷ್ಣವ

ವಸ್ತು : ಗ್ರಾನೈಟ್ ಶಿಲೆ

ವಿಜಯನಗರ ಕಾಲಾವಧಿಯಲ್ಲಿ ರಚನೆಗೊಂಡ ದೇವಾಲಯವಿದು. ಈ ದೇವಾಲಯವು ಗರ್ಭಗುಡಿ, ಅಂತರಾಳ, ನವರಂಗ ಸಭಾಮಂಟಪವನ್ನು ಒಳಗೊಂಡಿದೆ. ಗರ್ಭಗುಡಿಯು ಚೌಕಾಕಾರವಾಗಿದ್ದು, ಅಂತರಾಳವನ್ನು ಹೊಂದಿರುವ ಈ ದೇವಾಲಯದ ಸಭಾಮಂಟಪದಲ್ಲಿ ನಾಲ್ಕು ಸ್ತಂಭಗಳು, ಈ ನಾಲ್ಕು ಸ್ತಂಭಗಳಲ್ಲಿ ಎರಡು ಭಿತ್ತಿ ಸ್ತಂಭ, ಹಾಗು ಮುಖಾಮಂಟಪದ ಎರಡು ಸ್ತಂಭಗಳು ಸಾಧಾರಣ ಶೈಲಿಯಲ್ಲಿದ್ದು, ವಾದ್ಯ ನುಡಿಸುತ್ತಿರುವ ಶಿಲ್ಪಗಳು, ಜಯವಿಜಯರ ಶಿಲ್ಪಗಳು, ನೋಡುಗರ ಮನಸ್ಸನ್ನು ಸೆಳೆಯುತ್ತವೆ. ಸ್ತಂಭದ ಮಧ್ಯ ಮೇಲ್ಛಾವಣೆಯಲ್ಲಿ ಭುವನೇಶ್ವರಿ ಇದೆ. (ಮೇಲ್ಛಾವಣಿ ವಿಸ್ತೃತ ಆಕಾರದಲ್ಲಿ ಹಾಸಲ್ಪಟ್ಟಿದೆ) ಸಭಾಮಂಟಪದ ಸ್ತಂಭಗಳಲ್ಲಿ ನೃತ್ಯಶಿಲ್ಪ, ನಿಂತಭಂಗಿಯಲ್ಲಿರುವ ಸ್ತ್ರೀಶಿಲ್ಪಗಳು ಮರ್ಕಟ, ದ್ಯಾನಮಗ್ನನಾದ ಶಿಲ್ಪಗಳು, ನವಗ್ರಹಗಳಾದ ಸೂರ್ಯ, ಶುಕ್ರ, ಮಂಗಳ, ಬುಧ, ಗುರು, ಕೇತು, ಶನಿ, ರಾಹು, ಅಂಗಾರಕ, ಚಂದ್ರರು ಸಭಾಮಂಟಪದ ಬಲಭಾಗದಲ್ಲಿ ಪೂಜಿಸಲ್ಪಟ್ಟಿವೆ. ಮುಖಮಂಟಪದ ಹೊರಭಾಗದಲ್ಲಿ ನಾಲ್ಕು ಸಾಧಾರಣ ಶೈಲಿಯ ಸ್ತಂಭಗಳ ಮೇಲೆ ವಿತಾನ, ಸ್ತಂಭಗಳ ಭೋದಿಗೆಗಳು ಚಚ್ಚೌಕಾರಕಾರವಾಗಿದ್ದು ಬೋಧಿಗೆಗಳನ್ನೊಳ ಗೊಂಡಿದೆ. ಮಂಟಪದ ಮೇಲ್ಛಾವಣೆ, ಲಂಬವಿಸ್ತೃತ ಆಕಾರದಲ್ಲಿ ಹಾಸಲ್ಪಟ್ಟಿದೆ. ಸ್ತಂಭಗಳ ಪಾದಗಳಲ್ಲಿ ಎರಡು ಉಬ್ಬುಶಿಲ್ಪಗಳು ಮಂಟಪದ ಕೆಳಗೆ ಜ್ಯೋತಿ ಬೆಳಗಿಸಲು ಆಳೆತ್ತರದ ಶಿಲೆಗಳನ್ನು ಜೋಡಿಸಲಾಗಿದೆ. ದೇವಾಲಯಕ್ಕೆ ಹತ್ತಿ ಹೋಗಲು ಹಸ್ತಿಹಸ್ತ ಬಹಳ ಸುಂದರವಾಗಿದೆ. ಇದು ಹೊರಭಾಗದಲ್ಲಿ ಪುಷ್ಪದ ಉಬ್ಬುಶಿಲ್ಪ ಮುಂತಾದ ಅಲಂಕರಣಗಳಿಂದ ಕೂಡಿರುವುದು ವಿಶೇಷವಾಗಿದೆ. ಶ್ರವಣಬೆಳಗೊಳದ ಚಾವುಂಡರಾಯ ಬಸದಿಯಲ್ಲಿ ಈ ಭಾಗದಲ್ಲಿ ಪುಷ್ಪವನ್ನು ಬಿಡಿಸಿದ್ದರೆ, ಹೇಮಾವತಿಯ ದೊಡ್ಡೇಶ್ವರ ದೇವಾಲಯದ ಈ ಭಾಗಗಳಲ್ಲಿ ವಲ್ಲಿಗಳೊಳಗೆ ಮಿಥುನ, ಕುಬ್ಜರು ಇತ್ಯಾದಿ ಶಿಲ್ಪಗಳಿವೆ. ಬನ್ನೇರುಘಟ್ಟದ ಚಂಪಕಧಾಮ ದೇವಾಲಯದಲ್ಲಿ ಪಕ್ಷ ಶಿಲಾದಲ್ಲಿ ಆನೆಯ ಉಬ್ಬುಶಿಲ್ಪವಿದ್ದು, ವ್ಯಕ್ತಿಯೊಬ್ಬನು ಆನೆಯನ್ನು ತಿವಿಯುತ್ತಿರುವಂತಿದೆ. ಕೈದಾಳದ ಚನ್ನಕೇಶವ ದೇವಾಲಯದಲ್ಲಿ ಸಪ್ತಮಾತೃಕೆಯಂತಿರುವ ಸ್ತ್ರೀಬಿಂಬಗಳನ್ನು ಬಿಡಿಸಲಾಗಿದೆ.[೧೦] ಇವುಗಳು ದೇವಾಲಯದ ಬಾಹ್ಯ ಸೌಂದರ್ಯವನ್ನು ಮತ್ತಷ್ಟು ಹೆಚ್ಚಿಸುತ್ತದೆ.

ದೇವಾಲಯದ ಅದಿಷ್ಟಾನವು ಕಲ್ಲುಗಳಿಂದ ಕೂಡಿದ್ದು ಮಣ್ಣಿನಿಂದ ಆವರಿಸ್ಪಟ್ಟಿದೆ. ಈ ದೇವಾಲಯದ ಅಧಿಷ್ಟಾನದ ತಳವಿನ್ಯಾಸವು ಆಯತಾಕಾರವಾಗಿರುವುದು. ಇಲ್ಲಿ ಕಪೋತವಾಗಲಿ, ಇನ್ನಿತರ ಅಲಂಕಾರಗಳಾಗಲಿ ಕಂಡುಬರುವುದಿಲ್ಲ. ದೇವಾಲಯದ ಭಿತ್ತಿಯು ಇಟ್ಟಿಗೆಯಿಂದ

ಮಾಡಿರುವುದರಿಂದ 'ಇಷ್ಟಕಕುಡ್ಯ' ಎಂದೆನಿಸಿದೆ. ಭಿತ್ತಿಯ ಮಧ್ಯದಲ್ಲಿ ಯಾವುದೇ ಫಲಕ ಕುಡ್ಯಗಳಿಲ್ಲದಿರುವುದರಿಂದ ಸಾಧಾರಣ ಶೈಲಿಯಿಂದ ಕೂಡಿದ ದೇವಾಲಯವಾಗಿದೆ. ಈ ದೇವಾಲಯವು ಶಿಖರ, ಸ್ತೂಪಿ, ಕಳಸಗಳನ್ನು ಹೊಂದಿರುವುದು. ಚೌಕಾಕಾರದ 'ಶಿಖರ'ವಿರುವ ಈ ದೇವಾಲಯ, ಚೌಕಾಕಾರದ ತಳವಿನ್ಯಾಸವನ್ನೇ ಹೊಂದಿದೆ. ತಳವಿನ್ಯಾಸವು ಯಾವ ರೀತಿಯಲ್ಲಿ ಇದ್ದರೂ, ಒಂದು ದೇವಾಲಯದ ಶೈಲಿಯನ್ನು ನಿರ್ಧರಿಸುವಲ್ಲಿ 'ಶಿಖರ'ದ ಆಕಾರವೇ ಪ್ರಧಾನ ವಾದುದು. ಈ ಶಿಖರಕ್ಕೆ ನಾಲ್ಕು ಮುಖಗಳಿವೆ. ಶಿಖರವು ಚೌಕಾಕಾರವಾಗಿರುವುದರಿಂದ 'ಬ್ರಹ್ಮಛಂದ ಶಿಖರ' ಎಂದು ಕರೆಯಬಹುದು. ಶಿಖರದ ಉತ್ತರ ಭಾಗದ ಕೆಳಭಾಗದಲ್ಲಿ ಕೋಷ್ಟಕದಲ್ಲಿ ನಿಂತಭಂಗಿಯಲ್ಲಿನ ಮಾರುತಿ, ದಿಕ್ಕು ಮತ್ತು ಉಪದಿಕ್ಕುಗಳಲ್ಲಿ ಸಿಂಹಶಿಖರವನ್ನು ನಿರ್ಮಿಸಿದ್ದಾರೆ. ಶಿಖರದ ಪೂರ್ವದಿಕ್ಕಿಗೆ ಗಣಪತಿ, ನರಸಿಂಹ, ಸಿಂಹ, ಪಶ್ಚಿಮದಿಕ್ಕಿನ ಕೋಷ್ಟಕದಲ್ಲಿ ನಿಂತಭಂಗಿ ಯಲ್ಲಿರುವ ಮಾರುತಿ, ನರಸಿಂಹ, ದಕ್ಷಿಣ ದಿಕ್ಕಿಗೂ ಶಿಲ್ಪಗಳನ್ನು ನಿರ್ಮಿಸಿರುವುದು ಶಿಖರದ ಸೌಂದರ್ಯವನ್ನು ಹಿಮ್ಮಡಿಗೊಳಿಸಿದೆ. ಸ್ತೂಪಿ ಮತ್ತು ಕಳಸಗಳು ಬಹುತೇಕ ದೇವಾಲಯಗಳಲ್ಲಿ ಕಲ್ಲು ಅಥವಾ ಲೋಹಗಳಿಂದ ಕೂಡಿರುತ್ತವೆ. ಆದರೆ ಇಲ್ಲಿ ಇಟ್ಟಿಗೆ ಮತ್ತು ಗಾರೆಗಳಿಂದ ಮಾಡಲಾಗಿದೆ. ಕುಂಬಾಕಾರದ ಸ್ಥೂಪಿ ಮತ್ತು ಕಳಶಗಳು ದೇವಾಲಯಕ್ಕೆ ಮೆರುಗು ನೀಡಿವೆ.

| | | |
|---|---|---|
| **ಹೆಸರು** | : | ಕಾಳಮ್ಮ ದೇವಾಲಯ |
| **ಸ್ಥಳ** | : | ಹುಲುಕಡಿಬೆಟ್ಟದಲ್ಲಿ |
| **ದಿಕ್ಕು** | : | ಪಶ್ಚಿಮಾಭಿಮುಖ |
| **ಪಂಥ** | : | ಶಕ್ತಿ |
| **ವಸ್ತು** | : | ಗ್ರಾನೈಟ್ ಶಿಲೆ |

ಕಾಳಮ್ಮ ದೇವಾಲಯವು ಪಶ್ಚಿಮಾಭಿಮುಖವಾಗಿದ್ದು. ಈ ದೇವಾಲಯದ ತಳವಿನ್ಯಾಸವು ಗರ್ಭಗೃಹ ಹಾಗೂ ಸಭಾಮಂಟಪವನ್ನು ಒಳಗೊಂಡ ಏಕಕೂಟ ದೇವಾಲಯವಾಗಿದೆ. ಗರ್ಭಗೃಹದಲ್ಲಿ ಪಶ್ಚಿಮಕ್ಕೆ ಮುಖ ಮಾಡಿದ ಕಾಳಮ್ಮನ ಮೂರ್ತಿಶಿಲ್ಪವಿದೆ. ಇದು ನಿಂತ ಭಂಗಿಯಲ್ಲಿದೆ. ಗರ್ಭಗೃಹದ ದ್ವಾರದಲ್ಲಿ ಲಲಾಟಬಿಂಬ ಮತ್ತಿತರ ಯಾವುದೇ ಅಲಂಕರಣ ಇಲ್ಲ. ಅಂತರಾಳದಲ್ಲೂ ಯಾವುದೇ ಅಲಂಕಾರತೆ ಇಲ್ಲ. ಸಾಧಾರಣವಾದ ಕಲ್ಲಿನ ಕಟ್ಟಡವಾಗಿದ್ದು ಮೇಲ್ಛಾವಣಿ ಕಲ್ಲಿನಿಂದ ನಿರ್ಮಿತವಾಗಿದೆ. ದೇವಾಲಯದ ಮಧ್ಯದಲ್ಲಿ ಮೇಲ್ಛಾವಣಿ ದುಂಡಾದ ಸ್ತಂಭದ ಬೋದಿಗೆಗಳ ಮೇಲೆ ನಿಲ್ಲಲ್ಪಟ್ಟಿದೆ. ಸ್ತಂಭದ ಬುಡಭಾಗ ಚೌಕಾಕಾರ. ಸ್ತಂಭದ ಮಧ್ಯಭಾಗ ಅಷ್ಟಮೂಲೆ. ಮೇಲ್ಭಾಗದ ನಾಲ್ಕು ದಿಕ್ಕಿನಲ್ಲಿ ಪದ್ಮಶಿಲ್ಪಗಳನ್ನು ಬಿಡಿಸಿದ್ದಾರೆ. ಈ ದೇವಾಲಯದ ಮೂರ್ತಿಯ ಎದುರು

ಸಭಾಮಂಟಪದಲ್ಲಿ ನಂದಿಮೂರ್ತಿಗಳಿದ್ದು ಗರ್ಭಗೃಹದ ಮೂರ್ತಿಗೆ ಮುಖ ಮಾಡಿವೆ. ಇಲ್ಲಿನ ದಂತಕಥೆಯೊಂದರ ಪ್ರಕಾರ ಇಲ್ಲಿಗೆ ಬರುವ ಭಕ್ತರು ಮನದಲ್ಲಿ ಹರಕೆ ಕಟ್ಟಿಕೊಂಡು ಬಸವ ಮೂರ್ತಿಗಳನ್ನು ಎತ್ತಿದಲ್ಲಿ ಕೆಲಸವಾಗುವುದೆಂತಲೂ ಸಾಧ್ಯವಾಗದಿದ್ದಲ್ಲಿ ಕೆಲಸ ಆಗುವುದಿಲ್ಲವೆಂಬ ನಂಬಿಕೆ ಇದೆ. ಇದು ಹಿಂದಿನಿಂದ ನಡೆದುಕೊಂಡು ಬಂದ ಪ್ರತೀತಿ.

ಈ ದೇವಾಲಯದ ಹೊರಭಾಗ ಅಧಿಷ್ಠಾನ ಭಿತ್ತಿಯನ್ನು ಒಳಗೊಂಡಿದೆ. ಭಿತ್ತಿಯಲ್ಲಿ ಯಾವುದೇ ಕುಡ್ಯ ಸ್ತಂಭಗಳು ಇಲ್ಲ. ಅಲಂಕಾರತೆ ಇಲ್ಲದೆ ಮೂಲ ರೂಪದಲ್ಲಿದೆ. ಹೀಗಾಗಿ ಸಾಮಾನ್ಯವಾಗಿ ಈ ದೇವಾಲಯವನ್ನು ಆಧುನಿಕ ಕಟ್ಟವೆಂದು ಊಹಿಸಬಹುದು. ಸಾಧಾರಣ ಶೈಲಿಯಲ್ಲಿರುವ ದೇವಾಲಯಕ್ಕೆ ಕಪೋತವಾಗಲಿ, ಸ್ಥೂಪಿಯಾಗಲಿ,ಕಳಸವಾಗಲಿ ಯಾವುದೇ ರಚನೆಯನ್ನು ಹೊಂದಿರದ ಸಾಮಾನ್ಯ ಕಟ್ಟಡ ದೇವಾಲಯ ಆಗಿದೆ.

ದೊಡ್ಡಬಳ್ಳಾಪುರದ ಪ್ರಾಚೀನ ಕಟ್ಟಡಗಳಲ್ಲಿ ಮುಖ್ಯವಾದುವುಗಳೆಂದರೆ ಅನುರ್‌ಖಾನಾ ಎಂದು ಸ್ಥಳೀಯವಾಗಿ ಕರೆಯಲ್ಪಡುವ ಮುಸಾಫರ್ ಕಟ್ಟಡ. ಇದು ಅಬ್ಬಾಸ್ ಖುಲಿಖಾನನಿಂದ ನಿರ್ಮಿತವಾಗಿರುವ ಈ ಕಟ್ಟಡ, ಇಂಡೋ ಸಾರ್‌ಸೆನಿಕ್ ಶೈಲಿಯಲ್ಲಿ ರಚಿತವಾಗಿದೆ. 'ಸೈಯದ್ ಹುಸೇನ್ ಷಾ ಖಾದ್ರಿ' ಮತ್ತು ಸೈಯಿದ್ ಅಲ್ಲಾವುದ್ದೀನ್ ಚಿಸ್ತಿ ದರ್ಗಾ, ಅಲಿಕುಲಿಖಾನ್, ಗೌಹರ್ ಉಲ್ಲಾಷಾ, ಕಂಬಾಲ್ ಪೋಷಂ, ಖಾದ್ರಿಪೀರ್‌ಗಳ ಹೆಸರುಗಳಿಂದ ಕರೆಯಲ್ಪಡುವ ಆರು ದರ್ಗಾಗಳಿವೆ. ಇವುಗಳ ಪೈಕಿ ಮೊಯಿದ್ದಿನ್ ಅಲ್ಲಾ ಉದ್ ದೀನ್ ಚಿಸ್ತಿಯ ದರ್ಗಾವು ದೊಡ್ಡ ಕಟ್ಟಡವನ್ನು ಹೊಂದಿದೆ. ಇಲ್ಲಿ ಪ್ರತಿವರ್ಷ ಮೊಹರಂನ್ನು ವೈಭವದಿಂದ ಆಚರಿಸಲಾಗುತ್ತದೆ. ದೇಶದ್ಯಾಂತ ಇರುವ ಷೀಯಾಪಂಥೀಯರನ್ನು ಇದು ಆಕರ್ಷಿಸುತ್ತದೆ.

ನಗರದಲ್ಲಿರುವ ಪ್ರಮುಖ ದೇವಾಲಯಗಳೆಂದರೆ ವೆಂಕಟರಮಣ, ಚೌಡೇಶ್ವರಿ, ಈಶ್ವರ, ಸೋಮೇಶ್ವರ, ಜನಾರ್ಧನ, ಕಾಶಿವಿಶ್ವೇಶ್ವರ, ನಗರೇಶ್ವರ ಮತ್ತು ಅರ್ಕಾವತಿ, ಇವುಗಳಲ್ಲಿ ವೆಂಕಟರಮಣ ದೇವಾಲಯವು ಬೃಹತ್ ಕಟ್ಟವಾಗಿದ್ದು, ವಿಶಾಲವಾದ ಆವರಣದಲ್ಲಿದೆ. ಈ ದೇವಾಲಯವು ಚತುಷ್ಕೋನಾಕಾರದಲ್ಲಿದ್ದು, ಗರ್ಭಗೃಹದ ಮುಂಭಾಗದಲ್ಲಿ ಆಯಾತಾಕಾರದ ನವರಂಗವಿದೆ. ಈ ನವರಂಗದಲ್ಲಿ ಎರಡು ಕೋಣೆಗಳಿದ್ದು, ಅವುಗಳಲ್ಲಿ ಪದ್ಮಾವತಿ, ವಿನಾಯಕರ ವಿಗ್ರಹಗಳನ್ನು ಪ್ರತಿಷ್ಠಾಪಿಸಿದ್ದಾರೆ. ನವರಂಗದ ಮುಂಭಾಗದಲ್ಲಿ ಲಂಬ ಕೋನಾಕೃತಿಯ ಮುಖಮಂಟಪವಿದ್ದು, ಅದರ ಸ್ತಂಭಗಳಲ್ಲಿ ಆಕರ್ಷಕವಾದ ವಿಜಯನಗರ ಶೈಲಿಯ ಉಬ್ಬುಶಿಲ್ಪಗಳಲ್ಲಿ ಸುಂದರವಾದ ಗಾರೆಯ ಶಿಲ್ಪಗಳ ಅಲಂಕಾರವನ್ನು ನೋಡಬಹುದು. ದೇವಾಲಯದ ಸುತ್ತಲೂ ಹೊರಪ್ರಾಕಾರವಿದ್ದು ವಿಶಾಲವಾದ ಪ್ರದಕ್ಷಿಣಾ ಪಥವಿದೆ. ಗರ್ಭಗೃಹದ ಮೇಲಿರುವ ಶಿಖರವು ವಿಜಯನಗರ ಶೈಲಿಯಲ್ಲಿ ನಿರ್ಮಿತವಾಗಿದೆ. ಈ ದೇವಾಲಯವನ್ನು ಹೈದರಾಲಿಯ ಕೈಕೆಳಗೆ ಅಧಿಕಾರಿಯಾಗಿದ್ದ ಅರುಣಾಚಲಪಂಥ್ ಎಂಬ

ಅಧಿಕಾರಿಯು ವಿಜಯನಗರ ಶೈಲಿಯನ್ನು ಅನುಕರಣೆ ಮಾಡಿ ಹದಿನೆಂಟನೆಯ ಶತಮಾನದ ಕೊನೆಯಲ್ಲಿ ನಿರ್ಮಿಸಿದನು ಎಂದು ತಿಳಿದುಬರುತ್ತದೆ. ದೇವಾಲಯದ ಎರಡು ಬೆಳ್ಳಿ ಚಾಮರಗಳ ಮೇಲೆ, 'ಶ್ರೀ ವೆಂಕಟರಮಣಶಾಮರಾಯನ ಸೇವೆ' ಎಂಬ ಲಿಪಿಯಿದೆ. ಬಹುಶಃ ಶಾಮರಾಯ ಎಂಬ ವ್ಯಕ್ತಿ ದೇವರಿಗೆ ಬೆಳ್ಳಿ ಚಾಮರಗಳನ್ನು ಉಡುಗೊರೆಯಾಗಿ ನೀಡಿರಬಹುದು ಎಂಬುದಾಗಿ ಅರ್ಥೈಸಬಹುದು. ದೇವಾಂಗಪೇಟೆಯಲ್ಲಿರುವ ಪಾರ್ವತಿ ದೇವಾಲಯವು ಇತ್ತೀಚೆಗೆ ಜೀರ್ಣೋದ್ಧಾರಗೊಂಡಿದೆ. ಸುಮಾರು ಮುನ್ನೂರು ವರ್ಷಗಳಷ್ಟು ಹಳೆಯ ದೇವಾಲಯ ಎಂದು ಹೇಳಬಹುದು. ತಾಲ್ಲೂಕು ಕಛೇರಿ ಆವರಣದಲ್ಲಿರುವ ಆಂಜನೇಯ ಗುಡಿಯಲ್ಲಿ ಹೊಯ್ಸಳರ ಕಾಲದ ಕಂಬಗಳು, ಗಂಗರ ಕಾಲದ ಮಹಿಷಮರ್ದಿನಿ, ದುರ್ಗಾ ಮುಂತಾದ ಶಿಲ್ಪಗಳು ಕಂಡುಬರುತ್ತವೆ. ಔತ್ತರೇಯ ಶೈಲಿಯಲ್ಲಿ ನಿರ್ಮಿಸಲಾಗಿರುವ ಮಹಾವೀರ ಶ್ವೇತಾಂಬರ ಜೈನ ಬಸದಿಯು ಇಲ್ಲಿದೆ. ಇದು ಈಗ ಆಧುನಿಕ ಶೈಲಿಯಲ್ಲಿ ರೂಪಾಂತರಗೊಳಿಸಿದ್ದಾರೆ. ಇಲ್ಲಿ ಒಂದು ರೋಮನ್ ಕ್ಯಾಥೋಲಿಕ್ ಚರ್ಚ್ ಕೂಡಾ ಇದೆ. ಈ ದೇವಾಲಯಗಳು ಜನರ ಕಣ್ಣಿನಲ್ಲಿ ಕಲ್ಲಿನ ವಿಗ್ರಹವನ್ನೊಳಗೊಂಡಿರುವ ಮಂದಿರಗಳಲ್ಲಿ ಅವರಿಗೆ ಅದೊಂದು ಆಶ್ರಯಸ್ಥಾನ, ಭಗವಂತನ ವಿಗ್ರಹ ಒಂದು ಜೀವಂತ ವಸ್ತು ಭಗವಂತನು ಅವರ ಕಷ್ಟಸುಖಗಳನ್ನು ವಿಚಾರಿಸಲು ಇರತಕ್ಕವನು ಎಂಬ ಭಾವನೆ ಜನರಲ್ಲಿ ಮಡುಗಟ್ಟಿ ನಿಂತಿದೆ.

## ೫.೨. ಶಿಲ್ಪಗಳು

ಶಿಲ್ಪ ಎನ್ನುವ ಮಾತು ಮೊದಲು ಬಹಳ ವ್ಯಾಪಕವಾದ ಅರ್ಥವನ್ನು ಪಡೆದಿದೆ ಪ್ರಸಿದ್ಧವಾದ ಅರವತ್ತನಾಲ್ಕು ಕಲೆಗಳಿಗೆಲ್ಲಾ 'ಶಿಲ್ಪ' ಎನ್ನುವ ಹೆಸರೇ ಅನ್ವಯವಾಗುತ್ತಿತ್ತು. ಶಿಲ್ಪ ಎಂಬುದು ಒಂದು ಸೃಷ್ಟಿಕಾರಿ ಮಾಧ್ಯಮ; ಅದು ಅನುಕರಣ ಕಸುಬಲ್ಲ; ವಸ್ತುವಿಗೂ, ಅದರ ಆಕೃತಿಗೂ ನಿಕಟ ಸಂಬಂಧವನ್ನು ಕಲ್ಪಿಸಬೇಕಾದ ಮಾಧ್ಯಮವಷ್ಟೇ ಅದು.[೧೧] ಯಾವುದೇ ಒಂದು ವಾಸ್ತವಿಕ ಇಲ್ಲವೆ ಕಾಲ್ಪನಿಕ ಆಕೃತಿಯನ್ನು ಒಂದು ಮಾಧ್ಯಮದ ಮೂಲಕ ರೂಪಿಸುವ ಕಲೆಗೆ 'ಶಿಲ್ಪ' ಎಂಬ ಶಬ್ದವನ್ನು, ಅರ್ಥವಾಗಿ ಬಳಸಬಹುದು. ದೇವಾಲಯವೆಂದ ಮೇಲೆ ಅಲ್ಲಿ ಮೂರ್ತಿಶಿಲ್ಪ ಇರಲೇಬೇಕು. ಭಾರತೀಯ ಶಿಲ್ಪಶಾಸ್ತ್ರದಲ್ಲಿ ಶಾಸನಶಿಲ್ಪವು ಪ್ರಮುಖ ಪಾತ್ರವಹಿಸಿವೆ. ಕರ್ನಾಟಕದ ಪ್ರಾಚೀನ ದೇವಾಲಯಗಳ ಹೊರಗೆ ಮತ್ತು ಒಳಗೆ ಹಲವು ರೀತಿಯ ಶಿಲ್ಪಗಳು ಗೋಚರಿಸುತ್ತವೆ. ದೇವಾಲಯಗಳಲ್ಲಿ ಮಾತ್ರವಲ್ಲದೆ, ಹಲವು ಸ್ಥಳಗಳಲ್ಲಿ ಶಾಸನ ಶಿಲ್ಪಗಳು ಉಬ್ಬು ಶಿಲ್ಪದ ಮಾದರಿಗಳಲ್ಲಿ ಕಂಡುಬರುತ್ತವೆ. ಅಂದರೆ ಶಾಸನ ಶಿಲ್ಪದ ಅಧ್ಯಯನವೆಂದರೆ ಶಾಸನಗಳ ಮೇಲಿರುವ ಉಬ್ಬುಶಿಲ್ಪಗಳ ಅಧ್ಯಯನ.[೧೨] ಪ್ರಾಚೀನ ಶಿಲ್ಪಶಾಸ್ತ್ರದ ಗ್ರಂಥಗಳಾದ ಮಾನಸಾರ, ಮಯಮತ, ಅಂಶುಮದ್ಭೇದಾಗಮ ಶಿಲ್ಪ ಸಂಗ್ರಹ ಇವು ದೇವಾನುದೇವತೆಗಳಾದ ವಿಷ್ಣು, ಗಣಪತಿ, ಶಿವ ಮೊದಲಾದ ದೇವತೆಗಳ

ದಪ್ಪ, ಅಗಲ ಕಿರೀಟದ ಪ್ರಮಾಣ, ಅವರು ನಿಂತ ಭಂಗಿ, ಹಿಡಿದಿರುವ ಆಯುಧಗಳ ಭಂಗಿ, ಧರಿಸಿರುವ ಉಡುಗೆಗಳು, ಅವರ ವಾಹನಗಳು ಮುಂತಾದವನ್ನು ಲಕ್ಷಣಗಳ ಸಮೇತ ಬಹಳ ವಿವರವಾಗಿ ತಿಳಿಸುತ್ತವೆ. ಇವುಗಳಲ್ಲದೆ ಡಾ.ಕೆ.ಶಿವರಾಮಕಾರಂತರ ಚಿತ್ರ, ಶಿಲ್ಪ ವಾಸ್ತುಕಲೆಗಳು ಜ್ಞಾನಗಂಗೋತ್ರಿ ಕಲಾಕೋಶ, ಭಾರತೀಯ ಶಿಲ್ಪ, ಕಲಾ ಪ್ರಪಂಚಗಳಲ್ಲಿ ಶಿಲ್ಪದ ಬಗ್ಗೆ ವಿವರಣೆಗಳು ದೊರೆಯುತ್ತವೆ.

ಭಾರತೀಯ ಶಿಲ್ಪಕಾರರು ಪಾಶ್ಚಾತ್ಯ ಕಲೆಗಾರರ ಪ್ರಭಾವದಿಂದ ಹೊಸ ಹೊಸ ಮಾರ್ಗತಂತ್ರ ಮತ್ತು ವಸ್ತುಗಳನ್ನು ಇತ್ತೀಚಿನ ಅವಧಿಯಲ್ಲಿ ಅಳವಡಿಸಿಕೊಳ್ಳುತ್ತಿರುವವರು. ಆದರೆ ನಮ್ಮ ಪೂರ್ವಿಕರ ಮನದಲ್ಲಿ ಶಿಲ್ಪ ಎಂದರೆ ದೇವಾನುದೇವತೆಗಳೇ ಅವರ ಪರಿವಾರಗಳು. ಆದುದರಿಂದ ಭಾರತೀಯ ಶಿಲ್ಪದ ಬೆಳವಣಿಗೆಯೆಂದರೆ ಧರ್ಮದಿಂದ ಪ್ರಭಾವಿತವಾದ ಮೂರ್ತಿಶಿಲ್ಪದ ಬೆಳವಣಿಗೆ ಎಂದೇ ಹೇಳಬೇಕಾಗುತ್ತದೆ. ವಾಸ್ತುಶಿಲ್ಪದ ದೃಷ್ಟಿಯಿಂದಲೂ ಪ್ರಮುಖವಾಗಿ ಇದೇ ಅಂಶ ವ್ಯಕ್ತವಾಗುತ್ತದೆ. ಆಯಾ ಧರ್ಮಗಳು ನಮ್ಮ ನಾಡಿನಲ್ಲಿ ಉನ್ನತ ಸ್ಥಾನದಲ್ಲಿದ್ದಾಗ ಆ ಧರ್ಮಕ್ಕೆ ಸಂಬಂಧಿಸಿದ ಶಿಲ್ಪ ವಾಸ್ತುಶಿಲ್ಪ, ಲಲಿತ ಕಲೆಗಳೂ ಕೂಡ ಉನ್ನತ ಸ್ಥಾನದಲ್ಲಿದ್ದವು. 'ಶಿಲ್ಪಂಜಗಜ್ಜೀವನಂ' ಎಂಬ ಉಕ್ತಿಯಂತೆ ಜಗಜ್ಜೀವನವೆಲ್ಲಾ ಶಿಲ್ಪವೆ. ನಾವು ನೋಡುವ ಈ ಜಗತ್ತು ಭಗವಂತನ ದೇವಾನುದೇವತೆಗಳ ವಿಶ್ವ ಶಿಲ್ಪವೇ ಸರಿ.

ಶಿಲ್ಪಕಾರ ದೇವಾಲಯದ ಗೋಡೆಯ ಪಟ್ಟಿಕೆಗಳಲ್ಲಿ ಸತಿಯ ಮರಣ ಪ್ರಸಂಗವನ್ನು, ಯುದ್ಧದ ಹೋರಾಟದ ಚಿತ್ರಣವನ್ನು ಅಥವಾ ಸಮಾಜದ ದಿನನಿತ್ಯದ ಬದುಕಿಗೆ ಸಂಬಂಧಿಸಿದ ಘಟನೆಗಳ ವಿವರವನ್ನು ಮೂಡಿಸಲು ಪ್ರಯತ್ನಿಸುತ್ತಾನೆ.

ಹೀಗೆ ಜನರ ಬದುಕಿನ ರೀತಿ ನೀತಿಗಳನ್ನು ಶಿಲ್ಪಿ ಕಂಡಿರಿಸಲು ಪ್ರಯತ್ನಪಟ್ಟಿದ್ದರಿಂದ ಅವನ ಸೃಷ್ಟಿಯಲ್ಲಿ ಜನಪದೀಯ ಮೆರಗನ್ನು ಗುರುತಿಸಬಹುದು. ಶಿಲ್ಪಗಳು ಜನಪದ ಬದುಕಿಗೆ ಸಂಬಂಧಿಸಿದ ಆಚರಣೆಗಳು ಉಡುಗೆ ತೊಡಗೆಗಳು, ಸಂಪ್ರದಾಯಗಳು ಮೊದಲಾದ ವಿಷಯಗಳ ಮೇಲೆ ಬೆಳಕು ಚೆಲ್ಲುವ ಜೀವಂತ ಸಾಕ್ಷಿಗಳಾಗಿವೆ.

ಒಂದು ಶಿಲ್ಪಕೃತಿಯನ್ನು ಅದರ ಹಿಂದೆ, ಮುಂದೆ ಮತ್ತು ಮಗ್ಗುಲಲ್ಲಿ ನಿಂತು ನೋಡ ಬಹುದಾದರೆ ಇದನ್ನು ಮಾತ್ರ ನೋಡಬಹುದಾದ ರೀತಿ ಒಂದು ಚಿತ್ರವನ್ನು ನೋಡುವಂತೆ ಕೇವಲ ಇದಿರಿನಿಂದ ಮಾತ್ರ ಇದು ಒಂದು ಶಿಲ್ಪವನ್ನು ವೀಕ್ಷಿಸುವ ದೃಷ್ಟಿ, ಚಿತ್ರಕಾರನು ತನ್ನ ಬಣ್ಣದಲ್ಲಿ ಭಾವನೆಗಳನ್ನು ವ್ಯಕ್ತಿಪಡಿಸಿದರೆ, ಶಿಲ್ಪಕಾರನು ತನ್ನ ಮಾಧ್ಯಮಗಳಾದ ಶಿಲೆ, ಲೋಹ, ಮರ ಮುಂತಾದವುಗಳ ಮೂಲಕ ಭಾವನೆಗಳನ್ನು ವ್ಯಕ್ತಪಡಿಸುತ್ತಾನೆ. ದೇವಾಲಯಗಳಲ್ಲಿ ಶಿಲ್ಪಗಳನ್ನು ಕಡೆಯುತ್ತಿರುವ ಶಿಲ್ಪಿಯ ಹೆಸರುಗಳನ್ನು ನಮ್ಮಲ್ಲಿ ಹಲವಾರು ಶಾಸನಗಳು ಉಲ್ಲೇಖಿಸುತ್ತವೆ.

ದೇವಾಲಯದ ವಾಸ್ತುವಿನ್ಯಾಸಕ್ಕಿಂತಲೂ ದೇವಾಲಯವನ್ನು ಆಕರ್ಷಿಸುವುದೇ ಅಲ್ಲಿನ ಮೂರ್ತಿಶಿಲ್ಪಗಳು ಅಂದರೆ ದೇವಾಲಯವನ್ನು ಪ್ರಸಿದ್ಧಗೊಳಿಸುವುದು ಅದರ ಸ್ಥಾನ, ಮಹತ್ವ ಮತ್ತು ಶಿಲ್ಪಕಲೆ, ಹಾಗೆ ನೋಡಿದಲ್ಲಿ ದೇವಾಲಯದ ಗರ್ಭಗೃಹದಲ್ಲಿರುವ ಪ್ರಧಾನವಾದ ಸ್ಥಾನ ಮೂರ್ತಿಶಿಲ್ಪಕ್ಕಿದೆ.

ಗರ್ಭಗೃಹದಲ್ಲಿ ಮತ್ತು ಅಂತರಾಳದಲ್ಲಿ ಹೆಚ್ಚಿನ ಜನರಿಗೆ ಸ್ಥಳಾವಕಾಶ ನೀಡದೆ ಅಲ್ಲಿನ ಪಾವಿತ್ರ್ಯತೆಯನ್ನು ಕಾಯ್ದು, ನಂತರ ಸಭಾ ಮಂಟಪದ ಭಾಗವು ಮಾತ್ರ ಶಿಲ್ಪಕಲೆಯ ತಾಂತ್ರಿಕ ಮತ್ತು ಕುಶಲತೆಗೆ ಪ್ರದರ್ಶನಾತ್ಮಕ ಅಂಶಗಳಿಗೆ ಎಡೆ ಮಾಡಿಕೊಟ್ಟವು. ಕಂಬಗಳು ಅವುಗಳ ರಚನೆ, ಶಿಲ್ಪ, ಮದನಿಕಾ ಕನ್ನಿಕೆಯರು ಹೀಗೆ ಕಲಾ ಪ್ರೌಢಿಮೆಯನ್ನು ಪ್ರದರ್ಶಿಸಲು ಸಭಾಮಂಟಪ ಮತ್ತು ಶಿಖರಗಳು ಎಡೆ ಮಾಡಿಕೊಟ್ಟವು. ದೇವಾಲಯದ ಗೂಡು ಜಾಲಂದ್ರ ಮತ್ತಿತರ ವಿನ್ಯಾಸಗಳಿಗೆ ಅವಕಾಶವನ್ನು ನೀಡಲಾಯಿತು.

ಶಿಲ್ಪಶಾಸ್ತ್ರದಲ್ಲಿ ಶಿಲ್ಪ ತನ್ನೊಳಗೆ ಹೇಗೆ ದೇವಾಲಯದ ಮೂರ್ತಿಯನ್ನು ರೂಢಿಸಿ ಕೊಳ್ಳುತ್ತಾನೆಯೋ ಹಾಗೆಯೇ ಭೌತಿಕ ನೆಲೆಯಲ್ಲಿ ಸ್ಫುಟಗೊಳಿಸುತ್ತಾನೆ. ಶಿಲ್ಪಶಾಸ್ತ್ರ ಗ್ರಂಥದಲ್ಲಿ ಶಿಲ್ಪಕೃತಿ ರಚನೆಯನ್ನು ಹೇಳುವುದಾದರೂ ಆಕೃತಿಯ ಲಕ್ಷಣಗಳನ್ನು ಹೇಳುವಂತಿಲ್ಲ. ಆ ಕೃತಿಯ ಲಕ್ಷಣ ಶಿಲ್ಪ ನಿಷ್ಪವಾದುದು. ಶಿಲ್ಪಿಯ ಧ್ಯಾನ ತಂತ್ರವಾದುದು. ಮೂರ್ತಿಶಿಲ್ಪದಲ್ಲಿ ಮುಖ್ಯವಾಗಿ ಮೂರು ವಿಧಗಳನ್ನು ಗುರುತಿಸಬಹುದು.

೧. ಸ್ಥಾನಿಕ

೨. ಆಸೀನ

೩. ಶಯನ

ಮೂರ್ತಿಗಳಲ್ಲಿ ಎರಡು ಕೈ, ನಾಲ್ಕು ಕೈ, ಎಂಟುಕೈ, ಹದಿನಾರು ಕೈಗಳುಳ್ಳ ಮೂರ್ತಿಶಿಲ್ಪಗಳು ಇರಬಹುದು. ಕೆಲವೊಮ್ಮೆ ಆಯುಧಗಳಿಂದ ನಿರ್ದೇಶಿಸುವ ಪರಿಪಾಠವೂ ಇರುತ್ತದೆ. ಉದಾಹರಣೆ ಗಾಗಿ ವಿಷ್ಣುಮೂರ್ತಿಗೆ ಶಂಖ, ಚಕ್ರ, ಗಧೆ, ಪದ್ಮ, ಅಗ್ನಿ ಮತ್ತು ಗಣಪತಿಗೆ ಪಾಶ, ಶಿವನಿಗೆ ತ್ರಿಶೂಲ, ಡಮರುಗ, ಲಕ್ಷ್ಮಿಗೆ ಕಮಲ, ಪಾರ್ವತಿಗೆ ನೀಲೋತ್ಪಲ, ಪರಶುರಾಮನಿಗೆ ಕೊಡಲಿ, ಬಲರಾಮನಿಗೆ ನೇಗಿಲು, ರಾಮನಿಗೆ ಬಿಲ್ಲುಬಾಣ. ಸುಬ್ರಹ್ಮಣ್ಯನಿಗೆ ಶೂಲ, ಟಂಕ, ವಜ್ರ, ಬ್ರಹ್ಮನಿಗೆ ಕಮಂಡಲು, ಅಕ್ಷಮಾಲೆ, ಸರಸ್ವತಿಗೆ ವೀಣೆ, ಅಕ್ಷಮಾಲೆ ಪುಸ್ತಕ. ಈ ಆಯುಧಗಳಿರುವುದರಿಂದ ಇದೇ ದೇವತೆಯೆಂದು ಗುರುತಿಸಲು ಸಾಧ್ಯವಾಗುತ್ತದೆ.[೧೩] ಮೂರ್ತಿಶಿಲ್ಪದ ಮತ್ತೊಂದು ವೈಶಿಷ್ಟ್ಯವೆಂದರೆ ವಾಹನಗಳು ಮತ್ತು ಲಾಂಛನಗಳು ಇವು ನಿರ್ದೇಶನಕ್ಕೆ ನೆರವಾಗುವುದಾದರೂ ಆಯುಧಗಳು ಲಕ್ಷಣಗಳಾಗಿ ಪರಿಣಮಿಸಿವೆ. ಈ ಒಂದು ಹಿನ್ನೆಲೆಯನ್ನು ಆಧರಿಸಿ ದೊಡ್ಡಬಳ್ಳಾಪುರ ತಾಲ್ಲೂಕನ್ನು ತುಲನಾತ್ಮಕವಾಗಿ ಅಧ್ಯಯನ ಮಾಡಿ ನೋಡಿದ್ದಲ್ಲಿ ಶೈವ ಪಂಥ ಹೆಚ್ಚಿಗೆ ರೂಢಿಯಲ್ಲಿತ್ತೆಂಬುದು

ಸ್ಪಷ್ಟವಾಗುತ್ತದೆ. ಇದಕ್ಕೆ ಕಾರಣಾತೀತವಾಗಿ ಇಲ್ಲಿ ಹೆಚ್ಚಿನ ಶೈವ ಭಕ್ತರಿದ್ದರೆಂಬುದು ಆದಾಗ್ಯೂ, ಶೈವಪಂಥ, ಹೆಚ್ಚಿನ ಬಳಕೆಯಿದ್ದರೂ ಉಳಿದ ಪಂಥವನ್ನು ಕಡೆಗಣಿಸಿರಲಿಲ್ಲ ಎಂಬುದೂ ಸ್ಪಷ್ಟವಾಗುತ್ತದೆ. ಈ ಒಂದು ಹಿನ್ನೆಲೆಯನ್ನು ಆಧರಿಸಿ ದೊಡ್ಡಬಳ್ಳಾಪುರ ತಾಲ್ಲೂಕಿನ ಮುಖ್ಯವಾದ ಮೂರ್ತಿಶಿಲ್ಪ ಲಕ್ಷಣಗಳನ್ನು ಇಲ್ಲಿ ಪರಿಚಯ ಮಾಡಲಾಗಿದೆ.

### ೫.೨.೧. ವೀರಭದ್ರ

ವೀರಭದ್ರ ದೇವಾಲಯವು ಬಂಡೆಗೆ ಹೊಂದಿಕೊಂಡಂತೆ ಹುಲುಕಡಿ ಬೆಟ್ಟದ ತುದಿಯಲ್ಲಿದೆ. ಗರ್ಭಗೃಹದಲ್ಲಿ ಸುಂದರವಾದ ವೀರಭದ್ರ ಮೂರ್ತಿಯಿದೆ. ಈ ಮೂರ್ತಿಯು ಉತ್ತರಕ್ಕೆ ಮುಖ ಮಾಡಿ ಸ್ಥಾನಿಕ ಭಂಗಿಯಲ್ಲಿದೆ. ಸುಮಾರು ಒಂದು ಅಡಿ ಚೌಕಾಕಾರದ ಕಲ್ಲಿನ ಪೀಠದ ಮೇಲೆ ನಾಲ್ಕು ಅಡಿ ಎತ್ತರದ ಮೂರ್ತಿ ಇದ್ದು, ಕಪ್ಪು ಶಿಲೆಯನ್ನು ಬಳಸಿದ್ದಾರೆ. ಈ ವೀರಭದ್ರ ಮೂರ್ತಿಗೆ ನಾಲ್ಕು ಕೈಗಳಿದ್ದು, ಬಲಭಾಗದ ಕೈಯಲ್ಲಿ ಬಿಲ್ಲು ಮತ್ತು ಕತ್ತಿ, ಎಡಭಾಗದ ಕೈ ಅಭಯಮುದ್ರೆ ಮತ್ತು ಬಾಣವನ್ನು ಹಿಡಿದಿದೆ. ಈ ಮೂರ್ತಿಯು ಅತ್ಯಂತ ಸೂಕ್ಷ್ಮವಾದ ಕೆತ್ತನೆಯಿಂದ ಕೂಡಿದ್ದು, ಪ್ರಭಾವಳಿಯನ್ನು ಹೊಂದಿದೆ. ಇದರ ಕಾಲವನ್ನು ಕ್ರಿ.ಶ.೧೧ನೇ ಶತಮಾನಕ್ಕೆ ಸೇರಿಸಬಹುದು. ಇಂತಹುದೇ ಮತ್ತೊಂದು ಮೂರ್ತಿಶಿಲ್ಪವು ಹಾದ್ರಿಪುರದ ದೇವಾಲಯದಲ್ಲಿ ವೀರಭದ್ರಮೂರ್ತಿಯು ಪೂರ್ವಕ್ಕೆ ಮುಖ ಮಾಡಿನಿಂತಿದೆ.

### ೫.೨.೨. ಶಿವಲಿಂಗ

ದೊಡ್ಡಬಳ್ಳಾಪುರ ನಗರ ಮಧ್ಯದಲ್ಲಿ ನಗರೇಶ್ವರ ದೇವಾಲಯವಿದೆ. ಈ ದೇವಾಲಯದ ಮೂರ್ತಿ ಶಿವಲಿಂಗ. ಸುಮಾರು ಒಂದು ಅಡಿ ಪಾನ ಪೀಠದ ಮೇಲೆ ಎರಡು ಅಡಿ ಎತ್ತರದ ಶಿವಲಿಂಗ ಪೂಜಿಸಲ್ಪಟ್ಟಿದೆ. ಕಪ್ಪುಶಿಲೆಯಿಂದ ನಿರ್ಮಿಸಿದ್ದಾರೆ. ಮತ್ತೊಂದು ಶಿವಲಿಂಗದ ದೇವಾಲಯವು ಹುಲುಕಡಿ ಬೆಟ್ಟದ ತಪ್ಪಲಿನಲ್ಲಿರುವ ಮಾಡೇಶ್ವರ ಗ್ರಾಮದ ಹೊರವಲಯದಲ್ಲಿದೆ. ಈ ದೇವಾಲಯದ ಮೂರ್ತಿ ಶಿವಲಿಂಗ. ಸುಮಾರು ಮೂರು ಅಡಿ ಎತ್ತರವಿದೆ. ಒಂದು ಅಡಿ ಎತ್ತರದ ಪಾಣಿಪೀಠದ ಮೇಲಿದೆ. ಕಪ್ಪುಶಿಲೆಯಿಂದ ನಿರ್ಮಿಸಲ್ಪಟ್ಟಿದ್ದು, ಶಿವಲಿಂಗದ ಎದುರಿನಲ್ಲಿ ನಂದಿಮೂರ್ತಿ ಇದೆ. ಹುಲ್ಲುಕುಂಟೆ ಗ್ರಾಮದಲ್ಲೂ ಈಶ್ವರ ದೇವಾಲಯವಿದ್ದು ಪೂರ್ವದಿಕ್ಕಿಗೆ ಮುಖಮಾಡಿ ನಿಂತಿದೆ. ಗರ್ಭಗೃಹದಲ್ಲಿ ಶಿವಲಿಂಗವು ಒಂದೂವರೆ ಅಡಿ ಎತ್ತರದ ಪಾಣಿಪೀಠದ ಮೇಲೆ ಎರಡು ಅಡಿ ಎತ್ತರದ ಶಿವಲಿಂಗವು ಪೂಜಿಸಲ್ಪಟ್ಟಿದೆ.

### ೫.೨.೩. ನಂದಿ

ಮಾಡೇಶ್ವರ ಗ್ರಾಮದ ಊರ ಹೊರವಲಯದಲ್ಲಿ ನಂದಿ ಮೂರ್ತಿಯಿದೆ. ಸುಮಾರು ಮೂರು ಅಡಿ ಎತ್ತರ ನಾಲ್ಕು ಅಡಿ ಉದ್ದವಿದ್ದು, ಆಸೀನ ಸ್ಥಾನದಲ್ಲಿ ಕಂಡುಬರುತ್ತದೆ. ಕೊರಳಲ್ಲಿ

ಕಂಠೀಹಾರ, ಕಟ್ಟಿದ ಗಂಟೆ, ಬೆನ್ನ ಹಿಂಬದಿಯಲ್ಲಿ ಪಟ್ಟಿಕೆ, ಮಣಿಸರ, ಇವುಗಳು ನಂದಿಮೂರ್ತಿಯ ವೈಶಿಷ್ಟ್ಯಗಳಾಗಿವೆ. ಟಂಕಸಾಲಹೊಸಹಳ್ಳಿ, ಹಾದ್ರಿಪುರ, ಕಾರೇಪುರ, ಬೋಕಿಪುರ, ಹುಸ್ಕೂರು, ಮೆಣಸಿ, ಅಲುಪನಹಳ್ಳಿ, ಬೈಪನಹಳ್ಳಿ, ಹುಲ್ಲುಕುಂಟೆ, ಮುತ್ತುಗದಹಳ್ಳಿ, ಚನ್ನಬಸವಯ್ಯನಪಾಳ್ಯ, ಕತ್ತಿಹೊಸಹಳ್ಳಿ, ಮೂಗೇನಹಳ್ಳಿ, ಅಂಚರಹಳ್ಳಿ, ಜಾಲಿಗೆರೆ, ಸಾಸಲು, ಹೊಸಹಳ್ಳಿ, ಲಕ್ಷ್ಮೀದೇವಿಪುರ, ಚಿಕ್ಕಹೆಜ್ಜಾಜಿ, ಗಂಡ್ರಗೊಳ್ಳಿಪುರ, ಅಂಬಲಗೆರೆ, ಗ್ರಾಮಗಳಲ್ಲಿ ಬಸವಣ್ಣ ದೇವಾಲಯಗಳಲ್ಲಿ ನಂದಿ ಮೂರ್ತಿಯ ಕಲಾವೈಶಿಷ್ಟ್ಯಗಳನ್ನು ಕಾಣಬಹುದು.

### ೫.೨.೪. ಕೋದಂಡರಾಮ

ದೊಡ್ಡಬಳ್ಳಾಪುರ ತಾಲ್ಲೂಕು ಇಸ್ತೂರು ಗ್ರಾಮದಲ್ಲಿ ಈ ದೇವಾಲಯವಿದೆ. ಗರ್ಭಗೃಹದಲ್ಲಿ ಮೂರು ಮೂರ್ತಿಶಿಲ್ಪಗಳನ್ನು ಕಾಣಬಹುದಾಗಿದೆ. ಲಕ್ಷ್ಮಣ, ಶ್ರೀರಾಮ ಮತ್ತು ಸೀತೆ, ಪಕ್ಕದ ಒಂದು ಪೀಠದಲ್ಲಿ ಹನುಮನ ಮೂರ್ತಿಯಿದೆ. ಈ ಮೂರ್ತಿಶಿಲ್ಪಗಳು ದಕ್ಷಿಣ ದಿಕ್ಕಿಗೆ ಮುಖ ಮಾಡಿದ್ದು, ಹನುಮ ಮೂರ್ತಿಯ ಮುಖ ಪೂರ್ವಾಭಿಮುಖವಾಗಿದೆ. ಈ ಮೂರು ಮೂರ್ತಿಗಳು ಸುಮಾರು ಎರಡೂವರೆ ಅಡಿ ಎತ್ತರವಾಗಿದ್ದು, ಪಾಣಿಪೀಠದ ಮೇಲೆ ಪ್ರತಿಷ್ಠಾಪಿಸಲಾಗಿದೆ. ದೇವಾಲಯದಲ್ಲಿನ ರಾಮನಮೂರ್ತಿಶಿಲ್ಪವು ಕಿರೀಟ ಮುಕುಟ ಎರಡು ಕೈಗಳನ್ನು ಹೊಂದಿದ್ದು, ಎಡ ಮತ್ತು ಬಲ ಕೈಗಳಲ್ಲಿ ಬಿಲ್ಲು ಮತ್ತು ಬಾಣಗಳನ್ನು ಹೊಂದಿದೆ. ಕಿರೀಟ ಮುಕುಟ, ಕಿವಿಯೋಲೆ, ಉದರಬಂಧ, ಕೈಕಡಗ, ಕಾಲ್ಕಡಗಗಳ ಸೂಕ್ಷ್ಮವಾದ ಕೆತ್ತನೆಯನ್ನು ಕಲಾಕಾರ ಚಿತ್ರಿಸಿದ್ದಾನೆ. ಎಡಕ್ಕೆ ಮಡದಿ ಸೀತಾಮೂರ್ತಿ, ಪ್ರತಿಬಿಂಬಿತವಾಗಿದೆ. ಸೀತೆಯ ಬಲಭಾಗದ ಕೈ ಅಭಯಮುದ್ರೆ, ಎಡಗೈ ಇಳಿಜಾರಿನಂತೆ ಸೂಕ್ಷ್ಮವಾಗಿ ಕೆತ್ತಲಾಗಿದೆ. ನೆರಿಗೆ ಹಿಡಿದ ಸೀರೆ ಮೂರ್ತಿಶಿಲ್ಪದ ಅಲಂಕರತೆಯು ಕಲಾಕಾರನ ನೈಪುಣ್ಯತೆಯನ್ನು ತೋರಿಸುತ್ತದೆ. ಲಕ್ಷ್ಮಣನ ಮೂರ್ತಿ, ಬಲಭಾಗದಲ್ಲಿ ನಿಂತಭಂಗಿಯಲ್ಲಿದ್ದು, ಎಡ ಮತ್ತು ಬಲಕೈಗಳಲ್ಲಿ ಬಿಲ್ಲು ಮತ್ತು ಬಾಣಗಳು ಚಿತ್ರಿತವಾಗಿದೆ. ಈ ಮೂರ್ತಿಶಿಲ್ಪಗಳು ಕಪ್ಪುಶಿಲೆಯಿಂದ ಮಾಡಲ್ಪಟ್ಟಿದೆ. ತಾಲ್ಲೂಕಿನ ಚುಂಚೇಗೌಡನ ಹೊಸಹಳ್ಳಿ ಗ್ರಾಮದಲ್ಲೂ ಇದೇ ರೀತಿಯ ದೇವಾಲಯವಿದ್ದು, ಗರ್ಭಗೃಹದಲ್ಲಿ ಈ ಮೂರ್ತಿಶಿಲ್ಪಗಳನ್ನು ಕಾಣಬಹುದು.

### ೫.೨.೫. ಚನ್ನಕೇಶವ

ಕಾಡನೂರು ಗ್ರಾಮದ ದೇವಾಲಯದಲ್ಲಿ ವಿಷ್ಣುಮೂರ್ತಿಯು ಪೂರ್ವಾಭಿಮುಖವಾಗಿ ಸ್ಥಾನಿಕ ಭಂಗಿಯಲ್ಲಿದ್ದು, ಆಯತಾಕಾರದ ಕಲ್ಲಿನ ಪೀಠದ ಮೇಲೆ ಈ ಮೂರ್ತಿಶಿಲ್ಪವಿದೆ. ನಾಲ್ಕು ಅಡಿ ಎತ್ತರ. ಈ ಚನ್ನಕೇಶವ (ವಿಷ್ಣು) ಮೂರ್ತಿಗೆ ನಾಲ್ಕು ಕೈಗಳಿದ್ದು ಬಲಭಾಗದ ಕೈಯ ಕೆಳಭಾಗ ಅಭಯಮುದ್ರೆ ಶಂಖ ಹಾಗೂ ಮೇಲ್ಭಾಗದ ಕೈ ಚಕ್ರ ಹೊಂದಿವೆ. ಎಡಭಾಗದ ಕೈಯಲ್ಲಿ ಗದಾ ಮತ್ತು ಪದ್ಮವನ್ನು ಹಿಡಿದಿದ್ದಾನೆ. ಅತ್ಯಂತ ಸುಂದರವಾದ ಈ ಪೂಜಾ ಮೂರ್ತಿಯು

ಪ್ರಭಾವಳಿಯಿಂದ ಅಲಂಕೃತವಾಗಿದೆ. ಬಹಳಷ್ಟು ಸುಸ್ಥಿತಿಯಲ್ಲಿದೆ. ಇದೇ ಹೆಸರಿನ ದೇವಾಲಯಗಳು ಕನ್ನಮಂಗಲ, ಅರಳುಮಲ್ಲಿಗೆ, ಕಮ್ಮಸಂದ್ರ ಗ್ರಾಮಗಳಲ್ಲಿ ಚನ್ನಕೇಶವಸ್ವಾಮಿ ಮೂರ್ತಿಶಿಲ್ಪವಿದೆ. ಆದರೆ ಈ ಮೂರ್ತಿಶಿಲ್ಪಗಳಲ್ಲಿ ಸ್ವಲ್ಪ ಭಿನ್ನತೆಯನ್ನು ಕಾಣಬಹುದು. ಕಾಡನೂರು ಚನ್ನಕೇಶವ ಎಡಗೈಯಲ್ಲಿ ಶಂಖ ಹಾಗೂ ಪದ್ಮವನ್ನು ಹೊಂದಿದ್ದರೆ. ಈ ಗ್ರಾಮಗಳಲ್ಲಿ ಮೂರ್ತಿಗೆ ಬಲಗೈಯಲ್ಲಿ ಶಂಖ ಹಾಗೂ ಪದ್ಮವನ್ನು ಹೊಂದಿರುವುದು ಕಂಡುಬರುತ್ತದೆ. ಈ ಮೂರ್ತಿಶಿಲ್ಪಗಳಲ್ಲಿ ತಲೆಗೆ ಕಿರೀಟವನ್ನು ಧರಿಸಿದಂತೆ ಕೆತ್ತಲಾಗಿದೆ. ಶಿರದಲ್ಲಿ ಮಣಿಹಾರ, ನಡುವಿಗೆ ಉದರಬಂಧ, ನೆರಿಗೆಯಂಥ ದೋತ್ರವನ್ನು ಸುಂದರವಾದ ಕೆತ್ತನೆಯ ಮೂಲಕ ಬಿಡಿಸಿದ್ದಾರೆ. ಇಡೀ ತಾಲ್ಲೂಕಿನಲ್ಲಿ ಅತ್ಯಂತ ಸುಂದರ ಮೂರ್ತಿಶಿಲ್ಪ ಎನ್ನಬಹುದು.

ಕಾಡನೂರು ಚನ್ನಕೇಶವಸ್ವಾಮಿ ದೇವಾಲಯದಲ್ಲಿ ಗಣಪತಿ ಮೂರ್ತಿ ಇದೆ. ಪೂರ್ವಕ್ಕೆ ಮುಖ ಮಾಡಿರುವ ಗಣಪತಿಯು ಸುಮಾರು ಎರಡು ಅಡಿ ಎತ್ತರವಿದ್ದು, ಕಪ್ಪು ಶಿಲೆಯಿಂದ ಈ ಗಣಪತಿಯನ್ನು ಮಾಡಿರುತ್ತಾರೆ. ಇನ್ನಿತರ ಮೂರ್ತಿಶಿಲ್ಪಗಳು, ಮುತ್ಸಂದ್ರ ಗ್ರಾಮದಲ್ಲಿ ನಗರದ ನಗರೇಶ್ವರ ದೇವಾಲಯದಲ್ಲಿ ವೇಣುಗೋಪಾಲಸ್ವಾಮಿ ದೇವಾಲಯದಲ್ಲಿನ ಶಿಲ್ಪವು ಜನರ ಆಕರ್ಷಣೆಯಾಗಿವೆ. ಕೈಯಲ್ಲಿ ಹಿಡಿದ ದಂತ, ಅಭಯಮುದ್ರೆ, ಎಡಕೈಯಲ್ಲಿ ಪದ್ಮ ಹಾಗೂ ಶಂಖವನ್ನು ಹಿಡಿದಿರುವುದು ಈ ಮೂರ್ತಿಶಿಲ್ಪದ ಲಕ್ಷಣಗಳು. ಸುಮಾರು ಐದುವರೆ ಅಡಿ ಎತ್ತರದ ನಾಗಗಣಪತಿಶಿಲ್ಪವು ದೊಡ್ಡಬಳ್ಳಾಪುರ, ಘಾಟಿಸುಬ್ರಹ್ಮಣ್ಯ ಕ್ಷೇತ್ರಕ್ಕೆ ಹೋಗುವ ದಾರಿಮಧ್ಯ ಪ್ರತಿಷ್ಠಾಪಿಸಲ್ಪಟ್ಟಿದ್ದು, ಪೂಜಾರ್ಹವಾಗಿದೆ.

**೫.೨.೬. ಭದ್ರಕಾಳಿ**

ಹುಲುಕಡಿಬೆಟ್ಟದ ಕಾಳಮ್ಮನ ಗುಡಿಯ ದೇವಾಲಯದಲ್ಲಿ ಮತ್ತು ದೊಡ್ಡಬಳ್ಳಾಪುರ ನಗರದ ಶಾಂತಿನಗರದಲ್ಲಿ, ಕಾಳಮ್ಮನ ಮೂರ್ತಿಶಿಲ್ಪ ಇದೆ. ಹುಲುಕಡಿ ಬೆಟ್ಟದ ಕಾಳಮ್ಮನ ಮೂರ್ತಿಶಿಲ್ಪವು ಪಶ್ಚಿಮಕ್ಕೆ ಮುಖ ಮಾಡಿ ಸುಮಾರು ಎರಡೂವರೆ ಅಡಿ ಎತ್ತರವಿದೆ. ಮೂರ್ತಿಗೆ ಎರಡು ಕೈಗಳಿವೆ. ಬಲಭಾಗದ ಕೈಯಲ್ಲಿ ಪದ್ಮವನ್ನು ಹಾಗೂ ಎಡಭಾಗದ ಕೈಯಲ್ಲಿ ಆಯುಧವನ್ನು ಹಿಡಿದು ಆಯುಧ ನೆಲಕ್ಕೆ ಊರಲ್ಪಟ್ಟಿದೆ. ಕಿರೀಟ ಮುಕುಟ, ವೈಜಯಂತಿ ಹಾರ ವರ್ತುಲಾಕಾರದ ಕಿವಿಯೋಲೆ, ಕೈಕಡಗ, ಕಾಲ್ಕಡಗ ಇವು ಮೂರ್ತಿ ಶಿಲ್ಪದ ವೈಶಿಷ್ಟಗಳಾಗಿವೆ. ಇದೊಂದು ಗ್ರಾಮದೇವತೆಯೆಂದು ಪ್ರಸಿದ್ಧಿಯಾಗಿದ್ದು, ಪೂಜಾರ್ಹವಾಗಿದೆ.

**೫.೨.೭. ಮಹಿಷಮರ್ದಿನಿ ಶಿಲ್ಪಗಳು**

ದೊಡ್ಡಬಳ್ಳಾಪುರ ನಗರಕ್ಕೆ ಸುಮಾರು ೧೨ ಕಿ.ಮೀ. ದೂರದಲ್ಲಿ ವಾಯುವ್ಯ ದಿಕ್ಕಿಗೆ ಕೆಸ್ತೂರು ಗ್ರಾಮವಿದೆ. ಈ ಗ್ರಾಮದ ಚನ್ನಿಗರಾಯಸ್ವಾಮಿ ದೇವಾಲಯದ ಮುಂಭಾಗದಲ್ಲಿ ಅಶ್ವತ್ಥಮರದ

ಕೆಳಗೆ ಮಹಿಷಾಸುರ ಮರ್ದಿನಿ ಶಿಲ್ಪಗಳಿವೆ. ಈ ರೀತಿಯ ಶಿಲ್ಪಗಳು ತಾಲ್ಲೂಕಿನ ಯಾವ ಗ್ರಾಮದಲ್ಲೂ ಕಂಡುಬರದೆ ಅಪರೂಪದ ಶಿಲ್ಪಗಳೆನಿಸಿವೆ. ಈ ಶಿಲ್ಪಗಳಲ್ಲಿ ಮಧ್ಯದ ಶಿಲ್ಪವು ಎರಡೂವರೆ ಅಡಿ ಎತ್ತರವಾಗಿದ್ದು, ಬಲಭಾಗದ ಮೂರ್ತಿಯು ಒಂದೂವರೆ ಅಡಿ ಎತ್ತರ ಹಾಗೂ ಎಡಭಾಗದ ಮೂರ್ತಿ ೨ ಅಡಿ ಎತ್ತರವಿದೆ. ಈ ಮೂರ್ತಿಶಿಲ್ಪಗಳು ನಿಂತಭಂಗಿಯಲ್ಲಿದ್ದು, ಎಂಟು ಕೈಗಳು ಚಿತ್ರಿತವಾಗಿವೆ. ಬಲಗೈಯಲ್ಲಿ ತ್ರಿಶೂಲಹಿಡಿದು ಮಹಿಷನ ಬೆನ್ನ ಮೇಲೆ ಎಡಗಾಲನ್ನು ಇಟ್ಟು ತ್ರಿಶೂಲದಿಂದ ಮಹಿಷನ ಕುತ್ತಿಗೆಯನ್ನು ತಿವಿಯುತ್ತಿರುವ ದೃಶ್ಯ ನಿಜಕ್ಕೂ ಸುಂದರ ಇನ್ನುಳಿದ ಎರಡು ಬಲಗೈಯಲ್ಲಿ ಹಿಡಿದಿರುವ ಆಯುಧ ಅಸ್ಪಷ್ಟ. ಎಡಗೈಯಲ್ಲಿ ಪಾಶ, ಗುರಾಣಿ, ಕತ್ತಿ ಹಿಡಿದಿದೆ. ಕಿರೀಟ ಮುಕುಟ, ವರ್ತುಲಾಕಾರದ ಕಿವಿಯೋಲೆ, ಕುತ್ತಿಗೆಯಲ್ಲಿನ ಕಂಠಹಾರ, ತೋಳಬಂಧಿ, ಕೈಕಡಗ, ಕಾಲ್ಕಡಗಗಳು ಮೂರ್ತಿಶಿಲ್ಪದ ಆಕರ್ಷಣೆಯನ್ನು ಮತ್ತಷ್ಟು ಹೆಚ್ಚಿಸಿವೆ. ಶಿಲ್ಪದ ಪ್ರಭಾವಳಿಯಲ್ಲಿ ಕುಸುರಿನ ಕೆತ್ತನೆ ಇದೆ. ಇದೊಂದು ಈ ಗ್ರಾಮದಲ್ಲಿನ ವೈಶಿಷ್ಟಪೂರ್ಣ ಮೂರ್ತಿಯಾಗಿದೆ. ಈ ಮೂರ್ತಿಶಿಲ್ಪದ ಎಡಭಾಗದಲ್ಲಿ ಮತ್ತೊಂದು ಮೂರ್ತಿಶಿಲ್ಪವಿದ್ದು, ಅಸ್ಪಷ್ಟವಾಗಿ ಕಾಣುತ್ತದೆ. ಮುಖ ಅಸ್ಪಷ್ಟವಾದರೂ ಎರಡು ಕೈಗಳಲ್ಲಿ ತ್ರಿಶೂಲ ಮತ್ತು ಕತ್ತಿಯನ್ನು ಈ ಮೂರ್ತಿಶಿಲ್ಪ ಹಿಡಿದಿದೆ. ಎಡಭಾಗದಲ್ಲಿ ಡಮರುಗ ಇನ್ನೊಂದು ಎಡಗೈಯಲ್ಲಿ ಹಿಡಿದಿರುವ ಆಯುಧ ಅಸ್ಪಷ್ಟ. ಕಿರೀಟ ಮುಕುಟ, ಕಂಠಹಾರ, ಏಕಕಂಠಾಹಾರ, ವೈಜಯಂತಿಹಾರ, ಕೈಕಡಗ, ಕಾಲಕಡಗಗಳನ್ನು ಈ ಮೂರ್ತಿಶಿಲ್ಪ ಧರಿಸಲ್ಪಟ್ಟಿದೆ. ಶಿಲ್ಪದ ಪ್ರಭಾವಳಿಯಲ್ಲಿ ಯಾವುದೇ ಕುಸುರಿ ಕೆತ್ತನೆ ಇಲ್ಲ. ಇದರ ಪಕ್ಕದಲ್ಲಿ ಇನ್ನೊಂದು ಶಿಲ್ಪವಿದ್ದು, ಇದರ ಹೆಚ್ಚಿನ ಭಾಗ ನಶಿಸಲ್ಪಟ್ಟಿದೆ. ಪ್ರಭಾವಳಿಯ ಭಾಗ ಹಾಳಾಗಿದೆ. ಕುತ್ತಿಗೆಯಲ್ಲಿ ಮಣಿಕಂಠ, ಎರಡು ಕೈಗಳು ಎರಡು ಕಾಲುಗಳು ಕತ್ತರಿಸಲ್ಪಟ್ಟಿದ್ದರೂ ಈ ಮೂರ್ತಿಶಿಲ್ಪದ ಮುಖಚರ್ಯೆ ಆಕರ್ಷಿಸುವಂತಹುದು.

ಲೋಹದ ಮೂರ್ತಿಶಿಲ್ಪಗಳಲ್ಲಿ ಕೆಲವನ್ನು ಹೆಸರಿಸಬಹುದಾದರೂ ಅವುಗಳಲ್ಲಿ ಬಹಳಷ್ಟು ಉತ್ಸವ ಮೂರ್ತಿಗಳು ಹಣಬೆಯ ವೀರಭದ್ರ ದೇವಾಲಯದಲ್ಲಿ ಅರ್ಧ ಅಡಿ ಪೀಠದ ಮೇಲೆ ನಂದಿ, ವೀರಭದ್ರ ಮತ್ತು ಲಕ್ಷ್ಮಿಯ ಲೋಹಮೂರ್ತಿ ಶಿಲ್ಪಗಳಿವೆ. ನಂದಿ ಎರಡು ಅಡಿ ಎತ್ತರ ವೀರಭದ್ರಮೂರ್ತಿ ಸುಮಾರು ಮೂರುವರೆ ಅಡಿ ಎತ್ತರ, ಹಾಗೂ ಲಕ್ಷ್ಮಿಯು ಮೂರು ಅಡಿ ಎತ್ತರವನ್ನು ಒಳಗೊಂಡಿವೆ. ವೀರಭದ್ರಮೂರ್ತಿಯ ಪಕ್ಕದಲ್ಲಿ ನಂದಿಯು ಎರಡು ಕೈಗಳನ್ನು ಜೋಡಿಸಿ ವಂದಿಸುತ್ತಿರುವುದು ಹಾಗೂ ವೀರಭದ್ರ ಮೂರ್ತಿಯು ನಾಲ್ಕು ಕೈಗಳನ್ನು ಹೊಂದಿದ್ದು, ಬಲಭಾಗದ ಕೈಗಳಲ್ಲಿ ಗುರಾಣಿ ಹಾಗೂ ಕತ್ತಿ ಎಡಭಾಗದ ಕೈಗಳಲ್ಲಿ ನಾಗ, ನಂದಿಕೋಲನ್ನು ಆಯುಧಗಳನ್ನಾಗಿ ಹಿಡಿದಿದ್ದಾನೆ. ತಲೆಗೆ ಕಿರೀಟ ಮುಕುಟ, ಕೊರಳಲ್ಲಿ ಮಣಿಮಾಲೆ, ಉದರಬಂಧ, ಈ ಮೂರ್ತಿಶಿಲ್ಪದ ವೈಶಿಷ್ಟ್ಯಗಳಾಗಿವೆ. ಇದರ ಪಕ್ಕದಲ್ಲಿಯೇ ಲಕ್ಷ್ಮಿಯ ಮೂರ್ತಿಶಿಲ್ಪವಿದ್ದು ಎರಡು ಕೈಗಳನ್ನು ಹೊಂದಿದೆ. ಎರಡೂ ಕೈಗಳಲ್ಲಿ ಪದ್ಮಗಳನ್ನು ಹಿಡಿದಿದ್ದಾಳೆ. ನಿಂತಭಂಗಿಯಲ್ಲಿರುವ ಈ

ಮೂರ್ತಿಯ ತಲೆಯಲ್ಲಿ ಕಿರೀಟ, ಕಿವಿಗೆ ಓಲೆ, ಕೊರಳಲ್ಲಿ ಸರ, ನೆರಿಗೆಯಂತೆ ಉಡುಪು ಧರಿಸಿರುವುದು. ಈ ಶಿಲ್ಪದಲ್ಲಿ ಕಾಣಬಹುದಾಗಿದೆ. ಇಡೀ ದೇವಾಲಯದ ಸ್ತಂಭಗಳಲ್ಲಿ ಸ್ತಂಭಶಿಲ್ಪಗಳು ಪ್ರತಿಯೊಂದು ಸ್ತಂಭದಲ್ಲೂ ಗೋಚರಿಸುತ್ತವೆ. ಇಡೀ ದೇವಾಲಯವನ್ನು ವಾಸ್ತುಶಿಲ್ಪ ಎಂದು ಕರೆಯುವುದಕ್ಕಿಂತ ಭವ್ಯವಾದ ಒಂದು ಶಿಲ್ಪಕೃತಿ ಎಂದು ಕರೆಯುವುದು ಹೆಚ್ಚು ಸಮಂಜಸ. ಒಟ್ಟಾರೆ ಈ ಮೂರ್ತಿಶಿಲ್ಪಗಳು ಕಲಾತ್ಮಕ ಕೆತ್ತನೆಯಿಂದ ಕೂಡಿದೆ.

ಗಂಡ್ರಗೊಳ್ಳೀಪುರದ ಅಂಜನೇಯನ ದೇವಾಲಯದಲ್ಲಿ ಉತ್ಸವ ಮೂರ್ತಿಗಳಾದ ಹನುಮ, ಲಕ್ಷ್ಮಣ, ಶ್ರೀರಾಮ ಮತ್ತು ಸೀತೆಯ ಶಿಲ್ಪಗಳನ್ನು ಇಲ್ಲಿ ಕಾಣಬಹುದು. ಇದೇ ಹೆಸರಿನ ಮತ್ತೊಂದು ದೇವಾಲಯ ರಾಜಘಟ್ಟ ಗ್ರಾಮದ ಊರ ಹೊರವಲಯದಲ್ಲಿನ ಶಿಲ್ಪಗಳು ಮನೋಜ್ಞವಾಗಿ ಮೂಡಿಬಂದಿವೆ. ಈ ಶಿಲ್ಪಗಳು ಮೂರು ಅಡಿ ಎತ್ತರ ಇವೆ. ಲಕ್ಷ್ಮಣ ಮತ್ತು ಶ್ರೀರಾಮ ಎಡಭಾಗದ ಕೈಗಳನ್ನು ಭುಜದವರೆಗೂ ಮೇಲಕ್ಕೆತ್ತಿದ್ದಾರೆ. ಬಲಭಾಗದ ಕೈ ಅಭಯವನ್ನು ನೀಡುವಂತಿದೆ. ಸ್ತ್ರೀ ವಿಗ್ರಹವಾದ ಸೀತಾದೇವಿಯ ಬಲಭಾಗದ ಕೈಯಲ್ಲಿ ಕಮಲವನ್ನು ಹಿಡಿದಿದೆ. ಈ ಮೂರು ಮೂರ್ತಿಗಳಿಗೆ ಹನುಮ ಸ್ಥಾನಿಕ ಸ್ಥಾನದಲ್ಲಿದ್ದುಕೊಂಡು ಎರಡೂ ಕೈಗಳನ್ನು ಜೋಡಿಸಿ ಅಂಜಲಿ ಮುದ್ರೆಯಲ್ಲಿದ್ದಾನೆ.

ಮೂರ್ತಿಶಿಲ್ಪದ ಲಕ್ಷಣಗಳನ್ನು ಅಧ್ಯಯನ ಮಾಡಿದಾಗ ಒಂದೊಂದು ಮೂರ್ತಿಶಿಲ್ಪವು ಅಸ್ವಾಭಾವಿಕ ರೂಪವಿದ್ದಂತೆ ತೋರುತ್ತದೆ ಆಭರಣಗಳು ಬೇರೆ ಬೇರೆ. ರೂಪಗಳು ಅನೇಕ, ಕೈಗಳು ಹಲವಾರು, ಚಿತ್ರ ವಿಚಿತ್ರ ಭಂಗಿಗಳನ್ನು ಮೂರ್ತಿಶಿಲ್ಪಗಳಲ್ಲಿ ಕಾಣಬಹುದು. ದೇವದೇವತೆಗಳ ಹಲವಾರು ವೈವಿಧ್ಯಗಳನ್ನು ಹಿಂದೂ ಸಂಪ್ರದಾಯದಲ್ಲಿ ನಾವು ಕಾಣುತ್ತೇವೆ. ದೇವ ದೇವತೆಗಳು ಎಷ್ಟು ಎಂದು ಪ್ರಶ್ನೆ ಕೇಳಿದರೆ ಇದಕ್ಕೆ ಉತ್ತರ ಸಿಗುವುದು ಕಷ್ಟ. ಇದನ್ನೇ ಏಕಸತ್ ವಿಪ್ರಾಬಹುದಾವದಂತೀ ಅಂದರೆ ನಾಮಗಳು ಹಲವು ಶಕ್ತಿ ಮಾತ್ರ ಒಂದೇ. ಪ್ರತಿಯೊಬ್ಬರಿಗೂ ವಿಶಿಷ್ಟವಾದ ದೈವವಿದ್ದರೂ, ಒಂದು ಕುಲದೇವತೆ ಇದ್ದರೂ ಈ ಹಲವಾರು ದೇವ ದೇವತೆಗಳ ಹೆಸರು ಸಹಜವಾಗಿಯೇ ನಡೆದ ಮಾರ್ಪಾಟಾಗಿದೆ ಎಂದು ಹೇಳಬಹುದು. ಈ ಮೂರ್ತಿಶಿಲ್ಪದ ಅಧ್ಯಯನದಿಂದ ಈ ಪ್ರದೇಶದಲ್ಲಿ ಶೈವ, ವೈಷ್ಣವ ಮತ್ತು ಶಕ್ತಿಪಂಥ ಹೆಚ್ಚು ಪ್ರಚಲಿತವಿತ್ತೆಂಬುದು ಈ ಅಧ್ಯಯನದಲ್ಲಿ ಗಮನಿಸಬೇಕಾದ ಅಂಶ.

### ೫.೩. ಕೋಟೆಗಳು

ಪ್ರಾಚೀನ ಕಾಲದ ಜನರು ಅಂದರೆ ರಾಜ್ಯಗಳು ಸಾಮ್ರಾಜ್ಯಗಳು ಉದಯವಾಗುವುದಕ್ಕಿಂತ ಮುನ್ನ ಚಿಕ್ಕ ಗ್ರಾಮಗಳಲ್ಲಿ ವಾಸಿಸುತ್ತಿದ್ದರು. ತಮ್ಮನ್ನು ಹಾಗೂ ತಾವು ಸಂಪಾದಿಸಿದ ಸಂಪತ್ತನ್ನು ದರೋಡೆಕೋರರಿಂದ ಶತ್ರುಗಳಿಂದ, ಕಾಡುಪ್ರಾಣಿಗಳಿಂದ ಸಂರಕ್ಷಿಸಿಕೊಳ್ಳಲು ಜನರು ಊರುಗಳ

ಸುತ್ತಲೂ ಕೋಟೆಗಳನ್ನು ನಿರ್ಮಿಸಲು ಪ್ರಾರಂಭಿಸಿದರು. ಊರುಗಳು ಬೆಳೆದು ಹಲವಾರು ಊರುಗಳು ಒಟ್ಟುಗೂಡಿ, ರಾಜ್ಯಗಳು ಸ್ಥಾಪನೆಯಾದ ಮೇಲೆ ಆಳುವ ಅರಸರು ತಮ್ಮ ರಾಜ್ಯಗಳನ್ನು ಸಂರಕ್ಷಿಸಿಕೊಳ್ಳಲು ರಾಜಧಾನಿಯಲ್ಲಿ ಮತ್ತು ಗಡಿಪ್ರದೇಶಗಳಲ್ಲಿ ಬಲವಾದ ಕೋಟೆಗಳನ್ನು ನಿರ್ಮಿಸಿದರು. ಒಂದು ರಾಜ್ಯದ ಅತ್ಯವಶ್ಯಕವಾದ ಸಪ್ತಾಂಗಗಳಲ್ಲಿ ದುರ್ಗವು ಒಂದು ಎಂದು ರಾಜನೀತಿ ಹೇಳುತ್ತದೆ.[೧೪] ಕೋಟೆ ಮಹತ್ವವನ್ನು ಭದ್ರವಾದ ಕೋಟೆಯಿಲ್ಲದ ರಾಜನನ್ನು ಬಿರುಗಾಳಿಗೆ ಸಿಕ್ಕಿದ ಮೋಡಕ್ಕೆ ಸಮಾನವೆನ್ನಲಾಗಿದೆ. ಕೋಟೆ ಇಲ್ಲದ ರಾಜನನ್ನು ವಿಷ ರಹಿತವಾದ ಹಾವಿನಂತೆ ಅಥವಾ ಮದರಹಿತವಾದ ಆನೆಯಂತೆ ಸುಲಭವಾಗಿ ಸ್ವಾಧೀನಪಡಿಸಿಕೊಳ್ಳಬಹುದು. ಒಬ್ಬ ಬಿಲ್ಲುಗಾರನು ಕೋಟೆಗೋಡೆಯ ಹಿಂದೆ ರಕ್ಷಣೆ ಪಡೆದು ವೈರಿ ಪಡೆಯ ನೂರಾರು ಜನರೊಂದಿಗೆ ಹೋರಾಡಬಹುದು. ಮತ್ತು ನೂರಾರು ಬಿಲ್ಲುಗಾರರು ಸಾವಿರಾರು ವೈರಿಗಳೊಂದಿಗೆ ಹೋರಾಡಬಹುದು. ಈ ಮೇಲಿನ ಮಾತುಗಳು ಕೋಟೆಯ ಮಹತ್ವವನ್ನು ಪ್ರತಿಬಿಂಬಿಸುತ್ತವೆ.

ಪ್ರಾಚೀನ ಕರ್ನಾಟಕದಲ್ಲಿ ಕೋಟೆಗಳನ್ನು ನಿರ್ಮಿಸುವಾಗ ಸ್ಥಳಗಳ ಆಯ್ಕೆಗೆ ಪ್ರಾಶಸ್ತ್ಯ ನೀಡಲಾಯಿತು. ಶತ್ರು ಸೈನಿಕರು ಸುಲಭವಾಗಿ ಹತ್ತಿರಬರದಂತೆ ಕೋಟೆಗಳನ್ನು ಕಡಿದಾದ ಬೆಟ್ಟಗಳ ಮೇಲೆ ಕಾಡಿನ ಮಧ್ಯದಲ್ಲಿ ಮತ್ತು ನದಿಯ ದಂಡೆಯ ಮೇಲೆ ಕಟ್ಟಲಾಗಿದೆ. ಇಂತಹ ವಿವಿದ ಪ್ರಕಾರದ ಕೋಟೆಗಳ ಬಗ್ಗೆ ಪ್ರಾಚೀನ ಗ್ರಂಥಗಳಾದ ಕೌಟಿಲ್ಯನ ಅರ್ಥಶಾಸ್ತ್ರವು ಔದಕ, ಪಾರ್ವತ, ಧಾನ್ವನ, ವನ ಎಂಬ ನಾಲ್ಕು ಪ್ರಕಾರಗಳನ್ನು ಹೇಳಿ, ಕೋಟೆಗಳ ತಳವಿನ್ಯಾಸವು ವೃತ್ತ, ಆಯತ ಮತ್ತು ಚೌಕಾಕಾರವಾಗಿರಬಹುದೆಂದು ತಿಳಿಸುತ್ತಾನೆ. ಬಹುತೇಕ ದೊಡ್ಡಬಳ್ಳಾಪುರ ತಾಲ್ಲೂಕಿನ ಕೋಟೆಗಳ ತಳವಿನ್ಯಾಸವು ವೃತ್ತಾಕಾರವಾಗಿ ಕಂಡುಬರುತ್ತವೆ.

ಮನುವಿನ ಮನುಸ್ಮೃತಿಯು ಸ್ಥಳ ಕೋಟೆಗಳನ್ನು ಕಟ್ಟಲು ಉಪಯೋಗಿಸುವ ಸಾಮಾಗ್ರಿ ಮತ್ತು ಸಂರಕ್ಷಣಾ ವಿಧಾನಗಳ ಆಧಾರದ ಮೇಲೆ ಧನು, ಮಹೀ, ಜಲ, ವೃಕ್ಷ, ನರ, ಗಿರಿ ಎಂಬ ಆರು ಪ್ರಕಾರವಾಗಿ ವಿಂಗಡಿಸಲಾಗಿದೆ. ಶುಕ್ರ ನೀತಿಸಾರವು ಐರಿಣ, ಪರಿಖ, ಪರಿಘ, ವನ, ಧನ್ವ, ಜಲ, ಗಿರಿ, ಸೈನ್ಯ, ಸಹಾಯ ಎಂಬ ಒಂಭತ್ತು ಬಗೆಯ ಕೋಟೆಗಳ ವಿವರಗಳನ್ನು, ಮಾನಸಾರ ಗ್ರಂಥವು ಊರುಗಳನ್ನು ಆಧರಿಸಿ, ಶಿಬಿರ, ವಾಹಿನೀಮುಖ ಸ್ಥಾನೀಯ, ದ್ರೋಣಕ, ಸಂವಿದ್ಧ, ಕೋಲಕ, ನಿಗಮ, ಸ್ಕಂಧಾವರ ಎಂಬ ಎಂಟು ವಿಧಗಳಾಗಿ ವಿಂಗಡಿಸಿದ್ದಾರೆ. ವಾಸ್ತು ದೃಷ್ಟಿಯಿಂದ ಕೋಟೆಗಳನ್ನು ಗಿರಿದುರ್ಗ, ವನದುರ್ಗ, ಜಲದುರ್ಗ, ಪಂಕದುರ್ಗ, ರಥದುರ್ಗ, ದೇವದುರ್ಗ, ಮಿಶ್ರದುರ್ಗ ಎಂದು ಏಳು ವಿಧಗಳಾಗಿ ವಿಂಗಡಿಸಿ, ಗಿರಿದುರ್ಗ, ನೆಲದುರ್ಗಗಳು ಹೆಚ್ಚು ಪ್ರಾಮುಖ್ಯತೆಯನ್ನು ಗಳಿಸಿವೆ.

ಹನ್ನೊಂದನೆಯ ಶತಮಾನದಲ್ಲಿನ ಕಲ್ಯಾಣ ಚಾಲುಕ್ಯ ಅರಸ ಜಗದೇಕಮಲ್ಲ ಜಯಸಿಂಹನ ಸಂಧಿ ವಿಗ್ರಹಿಯಾಗಿದ್ದ ಕನ್ನಡದಲ್ಲಿ ಪಂಚತಂತ್ರವನ್ನು ಬರೆದ ದುರ್ಗಸಿಂಹನು ಜಲದುರ್ಗ, ಗಿರಿದುರ್ಗ, ಸ್ಥಳದುರ್ಗ, ವನದುರ್ಗ ಎಂಬ ವಿಭಾಗಗಳಾಗಿಯೂ ಕ್ರಿ.ಶ.೧೧೨೭ರಲ್ಲಿ ಆಳ್ವಿಕೆ ನಡೆಸುತ್ತಿದ್ದ ಕಲ್ಯಾಣ ಚಾಲುಕ್ಯ ಅರಸ ಮೂರನೇ ಸೋಮೇಶ್ವರನ ಮಾನಸೋಲ್ಲಾಸ ಅಥವಾ ಅಭಿಲಷಿತಾರ್ಥ ಚಿಂತಾಮಣಿಯಲ್ಲಿ, ಜಲದುರ್ಗ, ಗಿರಿದುರ್ಗ, ಪಾಷಾಣದುರ್ಗ, ಇಷ್ಟಕದುರ್ಗ, ವೃತ್ತಿಕಾಮಯಮ್ ವನದುರ್ಗ, ಮರದುರ್ಗ, ದಾರುಯದುರ್ಗ, ನರದುರ್ಗ ಎಂಬ ಒಂಭತ್ತು ಪ್ರಕಾರದ ಕೋಟೆಗಳನ್ನು ವಿಂಗಡಿಸಿದ್ದಾರೆ.[೧೫] ಈ ಗ್ರಂಥಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಜಲದುರ್ಗ. ಗಿರಿದುರ್ಗ ಸ್ಥಳದುರ್ಗಗಳಿಗೆ ಹೆಚ್ಚಿನ ಆದ್ಯತೆ ನೀಡಲಾಗಿದೆ. ಕರ್ನಾಟಕದ ಕೋಟೆಗಳನ್ನು ಗಮನಿಸಿದಾಗ ಈ ಮೂರು ಕೋಟೆಗಳೇ ಹೆಚ್ಚು ಪ್ರಾಮುಖ್ಯತೆಯನ್ನು ಗಳಿಸಿಕೊಂಡಂತಾಗಿದೆ. ಪ್ರಸ್ತುತ ವಿಜಯನಗರ ಆಳ್ವಿಕೆಗೆ ಸಂಬಂಧಿಸಿದಂತೆ ಕ್ರಿ.ಶ.೧೩೩೬ರಲ್ಲಿ ಸ್ಥಾಪನೆಯಾದ ವಿಜಯನಗರ ಸಾಮ್ರಾಜ್ಯ ಇಡೀ ದಕ್ಷಿಣ ಭಾರತವನ್ನು ಪಸರಿಸಿತು. ಕ್ರಿ.ಶ.೧೫೬೫ರವರೆಗೆ ಈ ಸಾಮ್ರಾಜ್ಯ ಪತನವಾಗುವವರೆಗೂ ಇವರು ಮತ್ತು ಇವರ ಅಧೀನದಲ್ಲಿದ್ದ ಆಳರಸರು ಕೋಟೆಗಳನ್ನು ನಿರ್ಮಿಸಿರುವುದು ಇತಿಹಾಸದ ಅಧ್ಯಯನದಿಂದ ತಿಳಿಯುತ್ತದೆ. ಈಗ ಉಳಿದಿರುವ ಕೋಟೆಯ ಕುರುಹುಗಳನ್ನು ಗಮನಿಸಿದರೆ ಅವುಗಳ ಹೆಚ್ಚಿನ ಸಂಖ್ಯೆ ಗಿರಿದುರ್ಗಗಳು ಉದಾಹರಣೆಗೆ ನಂದಿದುರ್ಗ. ಸಾವನದುರ್ಗ, ಚಿತ್ರದುರ್ಗ ದೇವರಾಯನದುರ್ಗ ಇತ್ಯಾದಿಗಳು ಇನ್ನೂ ಹಲವು ಇವೆ. ವಿಜಯನಗರ ಕಾಲಕ್ಕೆ ಸಂಬಂಧಿಸಿದ ಇಂತಹ ದುರ್ಗಗಳು ಇನ್ನು ಹಲವಾರು ಇವೆ. ಇನ್ನೂ ಗಮನಕ್ಕೆ ಬಾರದಂತಹ ಲಿಂಗಾಪುರದ ಕೋಟೆ, ಹುಲುಕಡಿ ಬೆಟ್ಟದ ಕೋಟೆ, ಸಾಸಲು ಗ್ರಾಮದ ಸುತ್ತಲಿನ ಕೋಟೆ, ದೊಡ್ಡಬಳ್ಳಾಪುರದ ಕೆಲವು ದೇವಾಲಯಗಳ ಸುತ್ತಲೂ ನಿರ್ಮಿತವಾಗಿರುವ ಕೋಟೆಗಳು ಉತ್ತಮ ಉದಾಹರಣೆಗಳಾಗಿವೆ.

### ೫.೩.೧. ಗಿರಿದುರ್ಗ

ಹುಲುಕಡಿ ಬೆಟ್ಟದಲ್ಲಿ ವಿಜಯನಗರ ಅರಸರ ಅಧೀನದಲ್ಲಿ ಆಳ್ವಿಕೆ ನಡೆಸುತ್ತಿದ್ದ ಹುಲುಕಡಿ ನಾಡ ಪ್ರಭುಗಳ ಕಾಲದಲ್ಲಿ ನಿರ್ಮಾಣಗೊಂಡಿರುವ ಕೋಟೆಯನ್ನು ಕಾಣಬಹುದು. ಆದರೆ ಈ ಕೋಟೆಯು ಬಹಳಷ್ಟು ಶಿಥಿಲಗೊಂಡು ಅದರ ಅವಶೇಷಗಳು ಮಾತ್ರ ಉಳಿದಿದೆ. ಬೆಟ್ಟದ ಪಶ್ಚಿಮ, ಉತ್ತರ, ಪೂರ್ವ ಭಾಗದಲ್ಲಿ ದೊಡ್ಡ ದೊಡ್ಡ ಕಲ್ಲುಗಳು ಹಾಗೂ ಗಾರೆಯಿಂದ ನಿರ್ಮಿಸಿರುವ ಕೋಟೆಯ ಕೆಲವು ಭಾಗಗಳು ಇಂದಿಗೂ ಗೋಚರಿಸುತ್ತವೆ. ಗಿರಿದುರ್ಗದ ಎಲ್ಲಾ ಲಕ್ಷಣಗಳನ್ನು ಒಳಗೊಂಡಿರುವುದು ಇಲ್ಲಿ ಸ್ಪಷ್ಟವಾಗುತ್ತದೆ. ಸುಮಾರು ೧೨೦ ಮೀಟರ್ ಪ್ರದೇಶದ ವ್ಯಾಪ್ತಿಯಲ್ಲಿ ಬೆಟ್ಟದ ಮೇಲೆ ಕೋಟೆಯನ್ನು ಕಟ್ಟಲಾಗಿದೆ. ಒಳಗೆ ಸ್ವಾಭಾವಿಕವಾಗಿ ರಚನೆಗೊಂಡಿರುವ ಕೊಳ, ಮದ್ದಿನ ಮನೆ, ವೀರಭದ್ರದೇವಾಲಯ, ಕಾಳಮ್ಮನ ದೇವಾಲಯಗಳು, ಸುತ್ತಮುತ್ತಲಿನ ಜನರನ್ನು

ಆಕರ್ಷಿಸುತ್ತದೆ. ಕೋಟೆಯು ದೊಡ್ಡ ದೊಡ್ಡ ಕಲ್ಲುಗಳು ಮತ್ತು ಗಾರೆಯಿಂದ ನಿರ್ಮಿತವಾದ ಕೋಟೆಯು ಸುಮಾರು ೩ ಮೀಟರ್ ಅಗಲ, ೬ ಮೀಟರ್ ಎತ್ತರವಾಗಿರುವ ಕಟ್ಟಗಳನ್ನು ನಿರ್ಮಿಸಿದ್ದಾರೆ. ಈ ಕೋಟೆಯ ಕಲ್ಲಿನ ಗಾತ್ರ ಸುಮಾರು ೪೫ x ೨೦ x ೬ ಸೆಂ.ಮೀ. ಕೋಟೆಯನ್ನು ತಲುಪಲು ಸುಲಭವಾಗುವಂತೆ, ಸುಲಭವಾಗಿ ಗುರುತಿಸಲು ಹುಲುಕಡಿ ಬೆಟ್ಟದ ಪೂರ್ವದಿಕ್ಕಿನಲ್ಲಿ ತೋರಣಗಂಭವನ್ನು ನಿರ್ಮಿಸಿದ್ದಾರೆ. ಇನ್ನೂ ಹೆಚ್ಚಿನ ಅಂಶಗಳನ್ನು ತಿಳಿಯಲು ಉತ್ಖನನ ಮಾಡಿದಾಗ ಮಾತ್ರ ತಿಳಿಯುತ್ತದೆ. ಕೋಟೆಯ ಗೋಡೆ ಮತ್ತು ಬಾಗಿಲುಗಳ ರಚನೆಯನ್ನು ತಿಳಿಯಲು ಉತ್ಖನನದಿಂದ ಮಾತ್ರ ಸಾಧ್ಯ. ನೈರುತ್ಯ ದಿಕ್ಕಿನಿಂದ ಪ್ರಾರಂಭವಾದ ಕೋಟೆ ಈಶಾನ್ಯ ದಿಕ್ಕಿನವರೆಗೂ ಕೋಟೆಯ ಅವಶೇಷಗಳನ್ನು ಕಾಣಬಹುದು. ಶತ್ರು ಪಡೆಗಳನ್ನು ಎದುರಿಸಲು ಹಾಗೂ ಬಲಶಾಲಿಯಾದ ಮದ್ದಿನ ತೋಪುಗಳನ್ನು ಬಹಳ ದೂರದವರೆಗೆ ಹಾರಿಸಲು ಅನುಕೂಲವಾಗುವಂತೆ ಕೋಟೆ ಗೋಡೆಯ ಪಕ್ಕದಲ್ಲಿ ಪ್ರತ್ಯೇಕವಾದ ಬತ್ತೇರಿಗಳನ್ನು ನಿರ್ಮಿಸಲಾಗಿದೆ.

ಜೀವನಾವಶ್ಯಕವಾದ ನೀರು ಮತ್ತು ಆಹಾರಧಾನ್ಯಗಳ ಸಂಗ್ರಹಣೆಗಾಗಿ ಕೆಲವು ಕಟ್ಟಡಗಳ ವ್ಯವಸ್ಥೆಯೂ ಇತ್ತು. ಮದ್ದಿನ ಮನೆ, ಇದು ಮಿಡಿಗೇಶಿಯ ಮದ್ದಿನಮನೆಯನ್ನು ಹೋಲುತ್ತದೆ. ತುಪ್ಪದ ಕೊಳಗಳು ಇದಕ್ಕೆ ಸಾಕ್ಷಿಯಾಗಿವೆ. ಗಿರಿದುರ್ಗಗಳಲ್ಲಿ ನೀರಿನ ವ್ಯವಸ್ಥೆ ಬಹಳ ಎಚ್ಚರವಹಿಸಿ ಮಾಡಲಾಗಿದೆ. ಮಳೆಗಾಲದಲ್ಲಿ ಬಿದ್ದ ನೀರು ಕೆಳಗೆ ಹರಿಯಲು ಬಿಡದೆ ಅಲ್ಲಲ್ಲಿ ನೀರು ಸಂಗ್ರಹಣೆಗಾಗಿ ವ್ಯವಸ್ಥೆ ಮಾಡಲಾಗಿದೆ. ಈ ಬೆಟ್ಟದ ಮೇಲಿರುವ ಗಂಗೆಯ ಕೊಳ ನೈಸರ್ಗಿಕವಾಗಿ ನಿರ್ಮಿತವಾಗಿರುವ ಈ ಕೊಳಕ್ಕೆ ಇಲ್ಲಿಗೆ ಬರುವ ಹೆಣ್ಣು ಮಕ್ಕಳು ಗಂಗೆಯಲ್ಲಿ ಸ್ನಾನ ಮಾಡಿ ಪೂಜೆಯನ್ನು ಸಲ್ಲಿಸುವ ಸಂಪ್ರದಾಯ ಇಂದಿಗೂ ಉಳಿದುಕೊಂಡುಬಂದಿದೆ. ಬೆಟ್ಟದ ಪೂರ್ವದಿಕ್ಕಿಗೆ ಚನ್ನಿಗರಾಯಸ್ವಾಮಿ ದೇವಾಲಯದ ಮುಂದೆ ಪುಷ್ಕರಣೆಯಿದ್ದು ಇದು ಅವರ ಕಾಲಾವಧಿಯಲ್ಲಿ ರಚನೆಗೊಂಡಿತೆನ್ನಬಹುದು. ಈ ಪುಷ್ಕರಣೆ ಗ್ರಾನೈಟ್ ಶಿಲೆಯಿಂದ ಮಾಡಲ್ಪಟ್ಟಿದೆ. ಒಟ್ಟಾರೆ ರಕ್ಷಣೆಯ ದೃಷ್ಟಿಯಿಂದ ಆಯಕಟ್ಟಿನ ಸ್ಥಳಗಳನ್ನು ಆಯ್ಕೆ ಮಾಡಿಕೊಂಡು ಕೋಟೆಗಳನ್ನು ಕಟ್ಟಿರುವವರು ಈ ಕೋಟೆಗಳು ಅಂದಿನ ಗತಕಾಲದ ಐತಿಹಾಸಿಕ ಪರಂಪರೆಗೆ ಮೂಲ ಸಾಕ್ಷಿಯಾಗಿ ನಿಂತಿವೆ.

### ೫.೩.೨. ತೋಡಲಬಂಡೆ ಕೋಟೆ

ದೊಡ್ಡಬಳ್ಳಾಪುರದ ಕೇಂದ್ರ ಸ್ಥಾನದಿಂದ ವಾಯುವ್ಯ ದಿಕ್ಕಿಗೆ ಸುಮಾರು ಇಪ್ಪತ್ತೈದು ಕಿಲೋಮೀಟರ್ ದೂರದಲ್ಲಿ ಸಾಸಲು ಗ್ರಾಮವನ್ನು ಪಾಳೇಯಗಾರರು ಗ್ರಾಮದ ರಕ್ಷಣೆಗೆಂದೇ ಊರ ಹೊರವಲಯದಲ್ಲಿ ತೋಡಲುಬಂಡೆಯ ಮೇಲೆ ಕೋಟೆಯನ್ನು ಕಟ್ಟಿದ್ದಾರೆ. ಸ್ಥಳೀಯರ ಹೇಳಿಕೆಗಳಂತೆ ತಂದೆ ಮತ್ತು ಮಗ ಇಬ್ಬರೇ ಕಟ್ಟಿದರು ಎಂಬುದಾಗಿ ಹೇಳುತ್ತಾರೆ. ಇದನ್ನು ಗಮನಿಸಿದಾಗ ಪಾಳೇಯಗಾರರ ಆಳ್ವಿಕೆಯಲ್ಲೆ ರಚಿತವಾದದ್ದೆನ್ನಬಹುದು. ಸುಮಾರು ೫೦ ಮೀಟರ್

ವೃತ್ತಕಾರದ ವಿಸ್ತೀರ್ಣ ಹೊಂದಿದೆ. ಕೋಟೆಯ ಗೋಡೆಯನ್ನು ಕಲ್ಲುಗಳಿಂದ ನಿರ್ಮಿಸಿದ್ದು, ಸುಮಾರು ೩ ಅಡಿ ದಪ್ಪದ ೨೦ ಅಡಿ ಉದ್ದವಾದ ಗೋಡೆಯನ್ನು ನಿರ್ಮಿಸಿ ಒಳ ಹೋಗಲು ಕಲ್ಲುಗಳಿಂದಲೇ ದ್ವಾರಬಾಗಿಲನ್ನು ನಿರ್ಮಿಸಿದ್ದಾರೆ.

ಕೋಟೆಯ ಒಳಭಾಗದಲ್ಲಿ ಒಂದು ಚೌಕಾಕಾರದ ಗರ್ಭಗುಡಿಯಲ್ಲಿ ಆಂಜನೇಯನ ಉಬ್ಬುಶಿಲ್ಪವನ್ನು ಹೊಂದಿರುವ ದೇವಾಲಯವಿದೆ. ಇದು ೮ ಅಡಿ ಉದ್ದ ೪ ಅಡಿ ಅಗಲ ವಿಸ್ತೀರ್ಣ ಹೊಂದಿದೆ. ಬಹುಶಃ ಆಂಜನೇಯ ಪಾಳೆಯಗಾರರ ಕುಲದೈವವಾಗಿರಬಹುದು. ಈ ದೇವಾಲಯದ ಸ್ವಲ್ಪ ಮುಂದೆಯೇ ನಾಲ್ಕು ಸ್ತಂಭಗಳು ಉರುಳಿ ಬಿದ್ದಿವೆ. ಈ ಸ್ತಂಭಗಳು ಅದೇ ಸ್ಥಳದಲ್ಲಿ ಮತ್ತೊಂದು ದೇವಾಲಯ ಇದ್ದಿರಬಹುದು. ಅದು ಶಿಥಿಲಗೊಂಡು ಪಾಳುಬಿದ್ದಿರಬಹುದು. ಈ ನಾಲ್ಕು ಸ್ತಂಭಗಳ ಮೇಲೆ ಉಬ್ಬುಶಿಲ್ಪಗಳಾದ ಚಕ್ರ, ಕಮಲ, ಆಂಜನೇಯನ ಶಿಲ್ಪಗಳಿವೆ. ಈ ಗಿರಿದುರ್ಗವನ್ನು ಪಾಳೇಯಗಾರರು ತಮ್ಮ ರಕ್ಷಣೆಗೆಂದೇ ನಿರ್ಮಿಸಿದಂತೆ ಕಂಡುಬರುತ್ತದೆ. ಕೋಟೆಯು ನೈರುತ್ಯ ದಿಕ್ಕಿನಲ್ಲಿ ಸ್ವಲ್ಪ ಭಾಗ ಹಾಳಾಗಿದೆ. ಉಳಿದಂತೆ ಎಲ್ಲಾ ಭಾಗಗಳು ಸುಸ್ಥಿತಿಯಲ್ಲಿರುವುದೇ ನಮ್ಮ ಇತಿಹಾಸಕ್ಕೆ ಕುರುಹುಗಳು ದೊರಕಿದಂತಾಗುವುದು. ಇಲ್ಲಿ ಪ್ರತಿ ವರ್ಷಕ್ಕೊಮ್ಮೆ ಕಾರ್ತಿಕ ಮಾಸದ ದಿನದಂದು ಸುತ್ತಮುತ್ತಲಿನ ಗ್ರಾಮಗಳಿಂದ ದೂರ ಊರುಗಳಿಂದ ಕೋಲಾರ ಜಿಲ್ಲೆಯ ಗೌರಿಬಿದನೂರು ಪೆನುಕೊಂಡಗಳಿಂದಲೂ ಬೇಟೆಗೆ ಬರುತ್ತಾರೆ. ಬೇಟೆಯಾಡಲು ಸಾಕಷ್ಟು ಬೆಟ್ಟ ಗುಡ್ಡಗಳಿವೆ. ಆದುದರಿಂದಲೇ ಸ್ಥಳೀಯರು ಇದನ್ನು 'ತೋಡಲಬಂಡೆ ಬೇಟೆ' ಎಂದು ಕರೆದು ಕಥೆಯಾಗಿ ಹೊರಹೊಮ್ಮಿದೆ.

ಉಜ್ಜಿನಿ ಬೆಟ್ಟದ ಮೇಲಿನ ಕೋಟೆ. ತಾಲ್ಲೂಕು ಕೇಂದ್ರದಿಂದ ಸುಮಾರು ೨೫ ಕಿ.ಮೀ. ದೂರದ ಉತ್ತರ ದಿಕ್ಕಿಗೆ ಈ ಬೆಟ್ಟವಿದೆ. ಉಜ್ಜಿನಿ ಗ್ರಾಮದ ಪಕ್ಕದಲ್ಲಿದ್ದುದರಿಂದ ಈ ಬೆಟ್ಟಕ್ಕೆ ಉಜ್ಜಿನಿ ಬೆಟ್ಟ ಎಂದು ಕರೆಯುತ್ತಾರೆ. ಈ ಉಜ್ಜಿನಿಬೆಟ್ಟದ ಮೇಲೆ ವೃತ್ತಾಕಾರವಾದ ಕೋಟೆಯು ದೊಡ್ಡ ದೊಡ್ಡ ಕಲ್ಲುಗಳಿಂದ ಮತ್ತು ನೈಸರ್ಗಿಕವಾಗಿ ಬಂಡೆಗಳಿಂದ ನಿರ್ಮಿತವಾಗಿದೆ. ಬೆಟ್ಟದ ಕೋಟೆಯ ಒಳಭಾಗದಲ್ಲಿ ಗವಿಗಳು ನಿರ್ಮಾಣಗೊಂಡಿವೆ. ಈ ಬೆಟ್ಟದ ತಪ್ಪಲಿನ ನೈರುತ್ಯದಿಕ್ಕಿನಲ್ಲಿರುವುದನ್ನು 'ಪಾಂಡವರ ದಿನ್ನೆ' ಎಂದು ಕರೆಯುವರು. ಪಾಂಡವರು ವನವಾಸಕ್ಕಾಗಿ ಬಂದು ಇಲ್ಲಿ ಬಿಡಾರ ಬಿಟ್ಟಿದ್ದರು ಎಂಬ ಕಾರಣಕ್ಕಾಗಿ ಈ ಪ್ರದೇಶವನ್ನು 'ಪಾಂಡವರ ದಿನ್ನೆ' ಎಂದು ಪ್ರತೀಕವಾಗಿದೆ. ಆದರೆ ಹೆಚ್ಚಿನ ಐತಿಹ್ಯಗಳು ಕಂಡುಬಂದಿಲ್ಲ.

ಈ ಉಜ್ಜಿನಿ ಬೆಟ್ಟದ ಕೋಟೆಯ ಒಳಗೆ ಗಂಗಮ್ಮ ದೇವಾಲಯವಿದೆ. ಇದು ಗರ್ಭಗೃಹವನ್ನು ಮಾತ್ರ ಹೊಂದಿದ್ದು, ಸಾಧಾರಣ ಶೈಲಿಯಲ್ಲಿದೆ. ಈ ಬೆಟ್ಟದ ಸುತ್ತಮುತ್ತಲಿನ ಗ್ರಾಮದವರು ಮದುವೆಯಾದ ಹೆಣ್ಣು ಮಕ್ಕಳು ಗಂಗಮ್ಮ ದೇವಾಲಯಕ್ಕೆ ಬಂದು ಪೂಜೆ ಸಲ್ಲಿಸುವ ಸಂಪ್ರದಾಯ

ಇಂದಿಗೂ ಆಚರಣೆಯಲ್ಲಿದೆ. ಸ್ಥಳೀಯರು ಈ ಸ್ಥಳವನ್ನು 'ದಕ್ಷಿಣಕಾಶಿ' ಎಂಬ ಹೆಸರಿನಿಂದ ಕರೆಯುತ್ತಾರೆ. ಇಲ್ಲಿ ಕೋಟೆಯ ಅವಶೇಷಗಳು ಉಳಿದಿವೆಯಾದರೂ ಅವು ತೀವ್ರಗತಿಯಲ್ಲಿ ಹಾಳಾಗಿವೆ. ಪಿಳ್ಳಯ್ಯನಕೆರೆ, ಕರಡಿದೊಣೆ, ಚಿಕ್ಕನಕಟ್ಟೆ ಎಂಬ ಸಣ್ಣ ಕಟ್ಟೆಗಳು ಇಂದಿಗೂ ಜನರ ಬಾಯಲ್ಲಿ ಸಾಕ್ಷಿಯಾಗಿವೆ.

### ೫.೩.೩. ಮಾಕಳಿದುರ್ಗ

ತಾಲ್ಲೂಕು ಕೇಂದ್ರದಿಂದ - ಗೌರಿಬಿದನೂರು ಕಡೆಗೆ ಹೋಗುವ ಮಾರ್ಗದಲ್ಲಿ ಸುಮಾರು ೧೫ ಕಿ.ಮೀ. ದೂರದಲ್ಲಿದೆ. ಮಾಕಳಿ ಗ್ರಾಮವು ಸುತ್ತಮುತ್ತಲೂ ಬೆಟ್ಟಗಳು ಆವರಿಸಿಕೊಂಡಿರುವುದರಿಂದ ಇದನ್ನು ಇಂದಿಗೂ ನಕಾಶೆಯಲ್ಲಿ ಮಾಕಳಿದುರ್ಗವೆಂದೇ ಸೂಚಿಸಲಾಗಿದೆ. ಬೆಟ್ಟದ ಮೇಲೆ ಬಲವಾದ ದೊಡ್ಡ ದೊಡ್ಡ ಮಧ್ಯಮ ಗಾತ್ರದ ಕಲ್ಲುಗಳಿಂದ ಕೋಟೆ ಸುತ್ತುವರಿದಿದೆ. ಪೂರ್ವ ದಿಕ್ಕಿನಿಂದ ಕೋಟೆಯ ಒಳಗೆ ಪ್ರವೇಶ ದ್ವಾರವಿದೆ. ಕೋಟೆಯನ್ನು ಹತ್ತಲು ಮೆಟ್ಟಿಲುಗಳಿವೆ. ಬಹುತೇಕವಾಗಿ ಉಜ್ಜಿನಿ ಬೆಟ್ಟದ ಕೋಟೆಯನ್ನೇ ಹೋಲುತ್ತದೆ. ವಿಜಯನಗರ ಆಳ್ವಿಕೆಯ ಸಂದರ್ಭದಲ್ಲಿ ನಾಡ ಪ್ರಭುಗಳು ನಿರ್ಮಿಸಿರಬಹುದೆಂದು ಊಹಿಸಲಾಗಿದೆ.

### ೫.೩.೪. ನೆಲದುರ್ಗ

ಕೋಟೆಗಳನ್ನು ಕಟ್ಟುವಾಗ ಸ್ಥಳಗಳ ಆಯ್ಕೆಗೆ ಹೆಚ್ಚು ಮಹತ್ವವನ್ನು ನೀಡಲಾಗಿದೆ. ಶತ್ರುಗಳು ಸುಲಭವಾಗಿ ದಾಳಿ ಮಾಡಲು ಬರದಂತೆ ಕೋಟೆಗಳನ್ನು ಗಿರಿಗಳ ಮೇಲೆ ಕಾಡಿನ ಮಧ್ಯದಲ್ಲಿ ಮತ್ತು ನದಿಯ ದಂಡೆಯ ಮೇಲೆ ಕಟ್ಟಲಾಗಿದೆ. ಅಲ್ಲದೆ ಗ್ರಾಮಗಳ ರಕ್ಷಣೆಗಾಗಿಯೂ ಕೋಟೆಗಳನ್ನು ಅಂದಿನ ಪಾಳೇಯಗಾರರು ನಿರ್ಮಿಸಿರುವುದು ಕಂಡುಬರುತ್ತದೆ. ಕರ್ನಾಟಕದಲ್ಲಿನ ಹೆಚ್ಚಿನ ಕೋಟೆಗಳನ್ನು ಗಮನಿಸಿದರೆ, ಗಿರಿದುರ್ಗಗಳೇ ಪ್ರಮುಖವಾಗಿವೆ. ಹಾಗೂ ಹೆಚ್ಚಿನ ಸಂಖ್ಯೆಯಲ್ಲಿಯೂ ಇವೆ. ಇಲ್ಲಿ ನೆಲದುರ್ಗಗಳ ಸಂಖ್ಯೆ ಕಡಿಮೆಯೇ ದೊಡ್ಡಬಳ್ಳಾಪುರ ಕೇಂದ್ರಸ್ಥಾನದಿಂದ ಸುಮಾರು ೨೫ ಕಿ.ಮೀ. ದೂರದಲ್ಲಿನ ಮತ್ತು ವಾಯುವ್ಯ ದಿಕ್ಕಿಗಿರುವ ಜಾಲಿಗೆರೆ ಊರಿನ ಪಶ್ಚಿಮದಿಕ್ಕಿನಲ್ಲಿ ಕೋಟೆಯ ಅವಶೇಷಗಳನ್ನು ಕಾಣಬಹುದು. ಈ ಅವಶೇಷಗಳು ಸುಮಾರು ೫ ರಿಂದ ೬ ಮೀ. ಎತ್ತರವಾಗಿದ್ದು ಎರಡು ಮೀಟರ್ ಅಗಲವಾಗಿದೆ. ಕಲ್ಲುಗಳ ಗಾತ್ರವೂ ಮಧ್ಯಮ ಗಾತ್ರದ್ದಾಗಿದೆ. ಪ್ರಾಚೀನ ಕಾಲದಲ್ಲಿ ಊರಿನ ಸುತ್ತಲೂ ಕೋಟೆ ಇದ್ದಿತೋ, ಇರಲಿಲ್ಲವೋ ಎಂಬುದು ಸ್ಪಷ್ಟವಾಗಿ ತಿಳಿಯುವುದಿಲ್ಲ. ಕೋಟೆಯ ಅವಶೇಷಗಳಂತೂ ನಮ್ಮ ಇತಿಹಾಸದ ಪುನರ್ರಚನೆಗೆ ಸಾಕ್ಷಿಯಾಗಿ ನಿಂತಿದೆ. ಇದೇ ರೀತಿಯ ಮತ್ತೊಂದು ಗ್ರಾಮವಾದ ಹಳೇಕೋಟೆಯಲ್ಲಿಯೂ ಇಂತಹ ಶಿಥಿಲ ಅವಶೇಷಗಳು ಇನ್ನೂ ಗಟ್ಟಿಯಾಗಿ ಉಳಿದಿವೆ.

ತಾಲ್ಲೂಕಿನ ಪಶ್ಚಿಮದಿಕ್ಕಿನ ವಾಯುವ್ಯ ದಿಕ್ಕಿನಲ್ಲಿ ಹುಲುಕಡಿ ನಾಡಿನ ವ್ಯಾಪ್ತಿಗೆ ಒಳಪಟ್ಟಿರುವ ಲಿಂಗಾಪುರದಲ್ಲಿ ಕೋಟೆಯ ಅವಶೇಷಗಳು ಗೋಚರಿಸುತ್ತವೆ. ಇಂದಿಗೂ ಆ ಗ್ರಾಮದಲ್ಲಿ ಕೋಟೆಯ ಅಕ್ಕ-ಪಕ್ಕದ ಮನೆಗಳವರನ್ನು 'ಕೋಟೆ ಮನೆಯವರು' ಎಂದೇ ಕರೆಯುತ್ತಿದ್ದಾರೆ. ಲಂಬಾಕಾರದ ಕೋಟೆಯು ಕಲ್ಲು ಮತ್ತು ಗಾರೆಯಿಂದ ನಿರ್ಮಿಸಿರುವ ಕೋಟೆಯ ಅವಶೇಷಗಳಿವೆ. ಇವು ೧೨ ಅಥವಾ ೧೩ನೇ ಶತಮಾನಕ್ಕೆ ಸೇರಿದವುಗಳೆಂದು ಊಹಿಸಬಹುದು.

ಪಶ್ಚಿಮ, ಉತ್ತರ ದಕ್ಷಿಣಭಾಗಗಳಲ್ಲಿ ಕೋಟೆಯನ್ನು ಕಟ್ಟಿ ಊರನ್ನು ರಕ್ಷಿಸಲಾಗಿತ್ತು. ಈಗಿನ ಊರು ಪೂರ್ವದಿಕ್ಕಿಗೆ ಹೆಚ್ಚು ಬೆಳೆಯಲಾರಂಭಿಸಿದ್ದು, ಗ್ರಾಮದ ಮುಖ್ಯ ಪ್ರದೇಶವನ್ನು ಕೋಟೆ ಭೂಮಿ ಎಂದು ಕರೆಯುತ್ತಾರೆ. ಈ ಗ್ರಾಮದ ಲಕ್ಷ್ಮೀದೇವಸ್ಥಾನದಲ್ಲಿ ವಿಜಯನಗರ ಕಾಲಕ್ಕೆ ಸೇರಿದ್ದೆನ್ನಲಾದ ಒಂದು ಶಾಸನವು ಇದ್ದು, ಮತ್ತಷ್ಟು ಅಧ್ಯಯನಕ್ಕೆ ಇಂಬುಕೊಡುತ್ತದೆ.

ದೊಡ್ಡಬಳ್ಳಾಪುರ ನಗರದ ಶ್ರೀ ವೇಣುಗೋಪಾಲಸ್ವಾಮಿ ದೇವಾಲಯದ ಬಳಿಯಿದ್ದ ಕ್ರಿ.ಶ.೧೨೬೭ರ ಶಾಸನ ಕೋಟೆಯ ಪಕ್ಕದಲ್ಲಿದ್ದುದನ್ನು ಈಗ ಅದನ್ನು ಕಛೇರಿ ಪಾಳ್ಯದ ಸಮೀಪ ನಿಲ್ಲಿಸಲಾಗಿದೆ.[೧೬] ಈ ಶಾಸನ ಕೋಟೆಯಲ್ಲಿದ್ದ ಸ್ಥಳ ಕೋಟೆಯ ಅವಶೇಷಗಳು ಸಂಪೂರ್ಣ ನಶಿಸಿದೆ. ವೇಗವಾಗಿ ಬೆಳೆಯುತ್ತಿರುವ ನಾಗರೀಕತೆಯ ತೆಕ್ಕೆಗೆ ಒಳಗಾಗಿ ಬೃಹತ್ ಕಟ್ಟಡಗಳು ತಲೆ ಎತ್ತಿರುವುದರಿಂದ ಕೋಟೆಯ ಅವಶೇಷಗಳು ಗೋಚರಿಸುವುದಿಲ್ಲ. ನಗರದ ಕೇಂದ್ರ ಬಿಂದುವಿನಲ್ಲಿನ ಮಂಟಪಗಳು ಸರ್ಕಾರಿ ಸ್ವಾಮ್ಯದಲ್ಲಿರುವ ಪ್ರದೇಶಗಳಾಗಿರುವುದರಿಂದ ಈ ಮಂಟಪಗಳು ಮತ್ತು ಸಾವಿರಕಣ್ಣಿನ ಭಾವಿಗಳು ಹಾಗೆಯೇ ಉಳಿದಿರುವುದು ದೊಡ್ಡ ಬಳ್ಳಾಪುರದ ಪ್ರಾಚೀನತೆಯನ್ನು ಅರಿಯಲು ಸಾಧ್ಯವಾಗುತ್ತದೆ.

### ೫.೪. ಮಂಟಪಗಳು

ಮಂಟಪಗಳು ತಾಲ್ಲೂಕಿನ ಇತಿಹಾಸವನ್ನು ತಿಳಿಯುವಲ್ಲಿ ಸಹಕರಿಸುತ್ತವೆ. ಅಶೋಕನ ಕಾಲದಲ್ಲಿ ಪ್ರಯಾಣಿಕರು ತಂಗಲು ದಾರಿಗಳಲ್ಲಿ ಮಂಟಪಗಳನ್ನು ನಿರ್ಮಾಣ ಮಾಡುವ ಪರಿಪಾಠವಿತ್ತೆಂದು ಹೇಳಬಹುದು. ಈ ತಂಗುದಾಣಗಳ ಹಿನ್ನೆಲೆಯಲ್ಲಿ ಮಂಟಪಗಳ ರಚನೆಯು ರೂಢಿಗೆ ಬಂದಿರಬಹುದು. ಪ್ರಾರಂಭದ ಅರಸು ಮನೆತನಗಳಲ್ಲಿ ಮಂಟಪಗಳ ನಿರ್ಮಾಣ ಸಾಧಾರಣ ಶೈಲಿಯಲ್ಲಿ ಕಂಡುಬಂದಿದೆ. ನಂತರದಲ್ಲಿ ಬಂದ ಹೊಯ್ಸಳ, ಕಲ್ಯಾಣಿಚಾಲುಕ್ಯ, ವಿಜಯನಗರ ಅರಸು ಮನೆತನಗಳ ಕಾಲಕ್ಕೆ ಮಂಟಪಗಳನ್ನು ಕಲಾತ್ಮಕತೆಯಿಂದ ರಚನೆ ಮಾಡಿದವುಗಳಾಗಿವೆ. ಕಸಾಘಟ್ಟ ಗ್ರಾಮದ ಹೊರವಲಯದಲ್ಲಿ ಒಂದು ಮಂಟಪವಿದೆ. ಈ ಮಂಟಪವು ಆರು ಸ್ತಂಭಗಳಿಂದ ಕೂಡಿದ್ದು, ಮೇಲ್ಛಾವಣಿ ಕಲ್ಲಿನಿಂದ ಹಾಸಲ್ಪಟ್ಟಿದೆ. ಮಂಟಪದ ಸ್ತಂಭಗಳ ಮೇಲೆ ಗಣಪತಿ,

ನಂದಿ, ನವಿಲು, ಆನೆ, ಸುರುಳಿಯಾಕಾರದ ಕೆತ್ತನೆಗಳು ಇವೆ. ಈ ಸಾಧಾರಣ ಶೈಲಿಯ ಮಂಟಪವು ವಿಜಯನಗರ ಅರಸರ ಕಾಲಕ್ಕೆ ಸೇರಿದ್ದವೆಂದು ಹೇಳಬಹುದು. ಈ ಮಂಟಪವನ್ನು ಸ್ಥಳೀಯರು ಮಕ್ಕಳರಾಯನ ತೋಪು ಎಂದು ಕರೆಯುವರು.

ದೊಡ್ಡಬಳ್ಳಾಪುರ ನಗರದ ಸರ್ಕಾರಿ ಆಸ್ಪತ್ರೆಯ ಹಿಂಭಾಗದಲ್ಲಿ ಎಂಟು ಸ್ತಂಭಗಳಿಂದ ಕೂಡಿದ ಮಂಟಪವಿದೆ. ಮಂಟಪದ ಮೇಲ್ಛಾವಣಿ ಕಲ್ಲಿನಿಂದ ಹಾಸಲ್ಪಟ್ಟಿದೆ. ಪ್ರತಿಯೊಂದು ಸ್ತಂಭದ ಮೇಲೂ ವ್ಯಾಳಿಯಾಕಾರದ ಕೆತ್ತನೆಯನ್ನು ಕಾಣಬಹುದು. ನಗರದ ಸುಂಕದ ಬೀದಿಯಪಕ್ಕದಲ್ಲಿ ನಾಲ್ಕು ಸ್ತಂಭಗಳಿಂದ ಕೂಡಿದ ಮಂಟಪವಿದ್ದು, ಮೇಲ್ಛಾವಣಿ ಕಲ್ಲಿನಿಂದ ಹಾಸಲ್ಪಟ್ಟಿದೆ. ಎರಡು ಸ್ತಂಭಗಳು ಸಾಧಾರಣ ಶೈಲಿಯಲ್ಲಿದ್ದು, ಮತ್ತೆರಡು ಸ್ತಂಭಗಳಲ್ಲಿ ಹನುಮಶಿಲ್ಪ, ಗಜಲಕ್ಷ್ಮಿಯಶಿಲ್ಪ, ಕಮಲದ ಶಿಲ್ಪಗಳನ್ನು ಬಿಡಿಸಿರುವುದನ್ನು ಕಾಣಬಹುದು. ಅರಳು ಮಲ್ಲಿಗೆ ಗ್ರಾಮದ ಚನ್ನಕೇಶವಸ್ವಾಮಿ ದೇವಾಲಯದ ಮುಂಭಾಗದಲ್ಲಿ ನಾಲ್ಕು ಸ್ತಂಭಗಳಿಂದ ಕೂಡಿದ ಮಂಟಪವಿದೆ. ಮಂಟಪದ ಮೇಲ್ಛಾವಣಿಯು ಕಲ್ಲಿನಿಂದ ಹಾಸಲ್ಪಟ್ಟಿದೆ. ಎರಡು ಸ್ತಂಭಗಳಲ್ಲಿ ಸ್ತ್ರೀ–ಪುರುಷರು ಸಮ್ಮಿಲನಗೊಂಡ ಮಿಥುನಶಿಲ್ಪಗಳಿವೆ. ಈ ಮಂಟಪದ ಮುಂಭಾಗದಲ್ಲಿ ಕ್ರಿ.ಶ.೧೩೬೭ರ ಒಂದನೇ ಬುಕ್ಕನ ಕಾಲಕ್ಕೆ ಸೇರಿದ ಶಾಸನವಿದೆ.

ಸಾಧಾರಣ ಶೈಲಿಯ ಕೆಲವು ಮಂಟಪಗಳನ್ನು ಮಂಡೇಶ್ವರ, ಲಿಂಗನಹಳ್ಳಿ, ಹಾದ್ರಿಪುರ ಇನ್ನು ಮುಂತಾದ ಗ್ರಾಮಗಳಲ್ಲಿ ಕಾಣಬಹುದು. ಈ ರೀತಿಯಾದಂತಹ ಮಂಟಪಗಳನ್ನು ನಿರ್ಮಿಸುವುದು ಅಂದಿನ ಸಮಾಜದ ಅವಿಭಾಜ್ಯ ಅಂಗವಾಗಿತ್ತೆಂದು ತೋರುತ್ತದೆ.

### ೫.೬. ಬಾವಿಗಳು

ನದಿಗಳು ಹಾಗೂ ಸರೋವರಗಳು ಮಾನವನ ಅಂಗಗಳಿಗೆ ನೀರನ್ನು ಒದಗಿಸುವ ಪ್ರಾಥಮಿಕ ಮೂಲಗಳು ಎಂದರೆ ತಪ್ಪಾಗಲಾರದು. ಒಂದು ನಿರ್ದಿಷ್ಟ ಸಮಯದಲ್ಲಿ ಭೂಮಿಯಲ್ಲಿ ದೊರೆಯುತವ ನೀರಿನ ಪ್ರಮಾಣಕ್ಕಿಂತ ಕಡಿಮೆ ಎನ್ನಬಹುದು. ಇಂತಹ ಸಂಪನ್ಮೂಲದ ನಿರ್ವಹಣೆ ತುಂಬಾ ಕಷ್ಟ. ಮಳೆಯ ಪ್ರಮಾಣದ ಏರುಪೇರಿನಿಂದ ನೀರಿನ ಸಮಸ್ಯೆಯೂ ಉಲ್ಬಣವಾಗುವುದು. ನಮಗೆ ಅಗತ್ಯವಾಗಿಲ್ಲದಿದ್ದಾಗ ಅತಿ ನೀತು ಬರುತ್ತದೆ. ಅಗತ್ಯ ಇದ್ದಾಗ ಅತಿ ಕಡಿಮೆ ಸಿಗುತ್ತದೆ. ನೆರೆ ಮತ್ತು ಬರ ಎಂದಿನಿಂದಲೂ ಇರುವ ಸಮಸ್ಯೆಗಳಾಗಿದ್ದು, ಇತ್ತೀಚಿನ ವರ್ಷಗಳಲ್ಲಿ ಜನಸಂಖ್ಯೆ ಹೆಚ್ಚಳದಿಂದ ಹಾಗೂ ಅರಣ್ಯ ನಾಶದಿಂದ ಸಮಸ್ಯೆಗಳು ತೀವ್ರವಾಗಿವೆ. ಈ ಸಮಸ್ಯೆಯ ತೀವ್ರತೆಯನ್ನು ಕಡಿಮೆ ಮಾಡಲು ಇರುವ ಮಾರ್ಗ ಎಂದರೆ ಅಂತರ್ಜಲವನ್ನು ಕಾಪಾಡುವುದು. ಇಂತಹ ಸಂಗ್ರಹಣೆಯ ಮಾರ್ಗವೆಂದರೆ ಬಾವಿಗಳನ್ನು ನಿರ್ಮಿಸುವುದು. ನಮ್ಮ ತಾಲ್ಲೂಕಿನಲ್ಲಿ ಬಾವಿಗಳ ಪ್ರಸ್ತಾಪ ಶಾಸನಗಳಲ್ಲಿ

ಎಲ್ಲೂ ಮಾಹಿತಿ ದೊರೆತಿಲ್ಲ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಪ್ರಾಚೀನವಾದ ಕೆಲವು ಬಾವಿಗಳನ್ನು ಸಂಗ್ರಹಿಸಲಾಗಿದೆ. ಹಾದ್ರಿಪುರ ಗ್ರಾಮದ ಬಸವ ದೇವಾಲಯದ ಪಕ್ಕದಲ್ಲಿ ನಾಲ್ಕುಕಣ್ಣಿನ ಬಾವಿ ಇದೆ. ಈ ಬಾವಿಯು ಸುಮಾರು ಇಪ್ಪತ್ತೈದು ಅಡಿ ಆಳವಿದ್ದು ಹತ್ತು ಅಡಿ ವೃತ್ತಾಕಾರವಾಗಿದೆ. ಬಾವಿಯ ಮೇಲೆ ಪ್ಲೆಸ್ ಆಕಾರದಲ್ಲಿ ಕಲ್ಲುಗಳನ್ನು ಹಾಸಲಾಗಿದೆ. ಈ ಹಾಸು ಕಲ್ಲುಗಳ ಮೇಲೆ ನಿಂತು ನೀರನ್ನು ಸೇದುವ ಕ್ರಮದಿಂದ ಇದಕ್ಕೆ ನಾಲ್ಕು ಕಣ್ಣಿನ ಬಾವಿ ಎಂಬ ಹೆಸರಿನಿಂದ ಕರೆದಿರಬಹುದು. ನಗರದ ಹಳೆಬಸ್ ನಿಲ್ದಾಣದಲ್ಲಿ ನಿರ್ಮಿಸಲಾಗಿರುವ ಹದಿನಾರು ಕಣ್ಣಿನ ಬಾವಿ ಎಂದು ಕರೆಯಲಾಗಿರುವ ಕಲ್ಯಾಣಿ ಇದೆ. ಈ ಕಲ್ಯಾಣಿಯು ದೊಡ್ಡದಾದ ಚೌಕಾಕಾರದ ಕಲ್ಲುಗಳಿಂದ ನಿರ್ಮಿಸಿದ್ದು, ಒಟ್ಟು ಹದಿನಾರು ಮೂಲೆಗಳು ಬರುವಂತೆ ನಿರ್ಮಿಸಿದ್ದಾರೆ. ಈಗ ಈ ಕಲ್ಯಾಣಿಯಲ್ಲಿ ನೀರು ಬರಿದಾಗಿದೆ. ಹುಲುಕಡಿಬೆಟ್ಟದ ಮೇಲ್ಭಾಗದಲ್ಲಿ ನೈಸರ್ಗಿಕವಾಗಿ ಬಂಡೆಗಳ ಮಧ್ಯೆ ನಿರ್ಮಿತವಾಗಿರುವ ದೊಣೆ ಇದೆ. ಈ ದೊಣೆಯಲ್ಲಿ ವರ್ಷಪೂರ್ತಿ ನೀರು ಸಂಗ್ರಹವಾಗಿರುತ್ತದೆ. ಹುಲುಕಡಿಬೆಟ್ಟದ ಮೇಲಿನ ವೀರಭದ್ರ ಗುಡಿಗೆ ಬರುವ ಹರಕೆ ಹೊತ್ತ ಕೆಲವು ಹೆಣ್ಣುಮಕ್ಕಳು ದೊಣೆಯಲ್ಲಿ ಮಿಂದು, ದೊಣೆಗೆ ಪೂಜೆ ಸಲ್ಲಿಸುವ ಸಂಪ್ರದಾಯವೂ ಇದೆ. ಇತ್ತೀಚಿನ ಸಂದರ್ಭದಲ್ಲಿ ಅಂತರ್ಜಲ ಕುಸಿತದಿಂದಾಗಿ ಬಾವಿಗಳಲ್ಲಿ ನೀರಿಲ್ಲದಂತಾಗಿದೆ. ನೀರು ಬರಿದಾಗಿ ಬತ್ತಿ ಹೋಗಿವೆ.

### ೫.೬. ಇತರೆ

#### ಕೆರೆಗಳ ನಿರ್ಮಾಣ-ನಿರ್ವಹಣೆ

ಕರ್ನಾಟಕದಲ್ಲಿ ಸುಮಾರು ಮೂವತ್ತು ಸಾವಿರಕ್ಕೂ ಅಧಿಕವಾಗಿ ಕೆರೆಗಳು ಕಂಡುಬರುತ್ತವೆ. ಕರ್ನಾಟಕದ ಕೆಲವು ಗ್ರಾಮಗಳ ಹೆಸರಿನಲ್ಲಿ ಕೆರೆ, ಸಮುದ್ರ, ಸಂದ್ರ, ಸಾಗರ ಮುಂತಾದವು ಅವುಗಳಿಗೆ ಸಮಾನವಾದ ಹೆಸರುಗಳು ದೊರೆಯುತ್ತವೆ.

ಕೆರೆಗಳ ಇತಿಹಾಸ ಕರ್ನಾಟಕದಲ್ಲಿ ಮೊದಲು ಕದಂಬರ ಕಾಲದಿಂದ ಆರಂಭವಾಗುತ್ತದೆ ಎಂದು ಹೇಳಬಹುದು. ಕ್ರಿ.ಶ.೩೫೦ರಲ್ಲಿ ಕದಂಬರ ಮೂಲಪುರುಷನಾದ ಮಯೂರಶರ್ಮ ಚಿತ್ರದುರ್ಗ ಜಿಲ್ಲೆ ಚಂದ್ರವಳ್ಳಿಯಲ್ಲಿ ಕೆರೆಯನ್ನು ನಿರ್ಮಿಸಿರುವುದು ತಿಳಿಯುತ್ತದೆ. ಈಗ ಈ ಕೆರೆ ಹಾಳಾಗಿದೆ. ಕದಂಬರಿಂದ ಆರಂಭವಾದ ಕೆರೆಗಳ ನಿರ್ಮಾಣ ವಿಜಯನಗರ ಅರಸರ ಕಾಲದವರೆಗೂ ಮುಂದುವರಿಯುತ್ತದೆ. ಕೆರೆಗಳು ಗ್ರಾಮಗಳ ಸ್ವತ್ತು ಜನರ ಜೀವನ ವಿಧಾನಕ್ಕೆ ಅಮೂಲ್ಯವಾದುದು. ಕೆರೆಗಳ ಮಹತ್ವವನ್ನು 'ಕೆರೆಗೆ ಹಾರ' ಎಂಬ ಜನಪದ ಕಥನ ಕವನ ಹೇಳುತ್ತದೆ. ಊರಿನ ಹಿತಕ್ಕಾಗಿ ಗುರುಹಿರಿಯರ ಮಾತಿನಂತೆ ಕೆರೆಗೆ ಆಹುತಿಯಾದ ತ್ಯಾಗಜೀವಿ ಹೆಣ್ಣು ಮಗಳೊಬ್ಬಳ ಜ್ವಲಂತ ಚಿತ್ರಣ. ಆಹುತಿಯಾದ ಹೆಂಡತಿಗಾಗಿ ತನ್ನ ಪ್ರಾಣವನ್ನೇ ಅರ್ಪಿಸಿ, ಅಮರನಾದ ಗಂಡನ

ತ್ಯಾಗ ಕವನದ ವಸ್ತುವಾಗಿದೆ. ಕೆರೆಗೆಹಾರ ಭಾರತೀಯ ಜನಪದ ಸಾಹಿತ್ಯದಲ್ಲಿ ಮಾತ್ರವೇ ಅಲ್ಲ, ಜಗತ್ತಿನ ಯಾವುದೇ ಜನಪದ ಸಾಹಿತ್ಯದ ಅತ್ಯುತ್ತಮ ಕೃತಿಗೆ ಸರಿಸಮನಾಗಿ ನಿಲ್ಲಬಲ್ಲ ಕವಿತೆ. ಹಳ್ಳಿಯ ಮುಗ್ಧ ಜೀವಿಗಳ ತ್ಯಾಗ, ಪರೋಪಕಾರ, ಉದಾತ್ತ ಸಂಸ್ಕಾರವಂತ ಹಿರಿಬಾಳಿನ ಉಜ್ವಲ ಚಿತ್ರಣ ಈ ಕವಿತೆ ಕಟ್ಟಿಕೊಡುತ್ತದೆ.

ಕ್ರಿ.ಶ.೫೧೭ರ ಮಾವಳೀಪುರದ ಶಾಸನವು ಗಂಗರ ಕಾಲದ ದೀರ್ಘವಾದ ವಂಶಾವಳಿಯನ್ನು ನೀಡುತ್ತದೆ. ಗಂಗ ಅರಸ ದುರ್ವಿನೀತನು ಕೆರೆಯನ್ನು ನಿರ್ಮಿಸಿದಂತೆ ಇಲ್ಲಿ ಉಲ್ಲೇಖವಾಗಿದೆ. ಶಾಸನದಲ್ಲಿ ಉಲ್ಲೇಖವಾಗಿರುವ 'ಪೆಣ್ಣಿನದಿ' ಯಾವುದು ಎಂದು ಹೇಳುವುದಕ್ಕೆ ಆಧಾರಗಳು ಇಲ್ಲ. ಈ ನದಿಗೆ ಈಶಾನ್ಯ ದಿಕ್ಕಿನಲ್ಲಿ ತಟಂಕವನ್ನು ನಿರ್ಮಿಸಲಾಗಿದೆ ಎಂಬುದನ್ನು ಮಾತ್ರ ಶಾಸನ ಹೇಳುತ್ತದೆ.[೧೭] ತಾಲ್ಲೂಕಿನ ದಕ್ಷಿಣ ಭಾಗದ ಅಧಿಕ ಗ್ರಾಮಗಳು ಎಲಹಂಕನಾಡಿಗೆ ಸೇರಿದ್ದರೂ ಯಾವ ದೊರೆಗಳೂ ಕೆರೆಗಳನ್ನು ನಿರ್ಮಿಸಿರುವುದರ ಬಗ್ಗೆ ಮಾಹಿತಿ ಇಲ್ಲ. ಬೆಂಗಳೂರಿಗೆ ಕುಡಿಯುವ ನೀರನ್ನು ಒದಗಿಸುವ ಸಲುವಾಗಿ ಹದಿನಾರನೆಯ ಶತಮಾನದಲ್ಲಿ ಕೆಂಪಾಂಬುದಿ ಧರ್ಮಾಂಬುದಿ ಮತ್ತು ಇನ್ನು ಅನೇಕ ಕೆರೆಗಳನ್ನು ಕಟ್ಟಿಸಿರುವುದು ತಿಳಿದುಬರುತ್ತದೆ. ದೊಡ್ಡಬಳ್ಳಾಪುರ ತಾಲ್ಲೂಕು ಬೆಂಗಳೂರು ಸನಿಹದಲ್ಲೇ ಇರುವುದರಿಂದ ಕೆರೆಗಳು ಒಂದಾದ ಮೇಲೆ ಇನ್ನೊಂದು ನಾಶವಾಗುತ್ತಿವೆ. ಇರುವ ಕೆರೆಗಳನ್ನು ಪುನರುದ್ಧಾರ ಮಾಡಿದರೆ ನೀರಿನ ಸಮಸ್ಯೆಗೆ ಸ್ವಲ್ಪ ಮಟ್ಟಿಗಾದರೂ ಪರಿಹಾರವಾಗುತ್ತದೆ ಎಂದು ಹೇಳಬಹುದು. ತಾಲ್ಲೂಕಿನ ಒಟ್ಟು ೭೮,೭೬೦ ಹೆಕ್ಟೇರ್ ವಿಸ್ತೀರ್ಣದಲ್ಲಿ ೩೪೮೯ ಹೆಕ್ಟೇರ್ ಭೂಮಿಯು ಕೆರೆ ಅಚ್ಚುಕಟ್ಟು ಪ್ರದೇಶವನ್ನು ಹೊಂದಿದೆ.

ಹೊಯ್ಸಳ ವಿಜಯನಗರ ಅರಸರು ಕೆರೆಗಳನ್ನು ನಿರ್ಮಿಸಿದರೆಂಬುದಕ್ಕೆ ತಾಲ್ಲೂಕಿನಲ್ಲಿ ಯಾವ ನಿದರ್ಶನಗಳೂ ದೊರೆಯುವುದಿಲ್ಲ. ದೊಡ್ಡಬಳ್ಳಾಪುರದ ನಾಗರಕೆರೆ, ಅರಳುಮಲ್ಲಿಗೆ ಕೆರೆ, ಕಾಡನೂರು ಕೆರೆ, ಗುಂಡಮಗೆರೆ ವಿಸ್ತಾರವಾದವುಗಳೆಂದು ಹೇಳಬಹುದು. ಹಲವಾರು ಕೆರೆಗಳು ಇದ್ದರೂ ವ್ಯವಸಾಯಕ್ಕೆ ಬೇಕಾಗುವಷ್ಟು ನೀರನ್ನು ಒದಗಿಸುವಲ್ಲಿ ನೀರು ಬರಿದಾಗಿದೆ.

೧೮ನೇ ಶತಮಾನದ ಉತ್ತರಾರ್ಧದಲ್ಲಿ ಬ್ರಿಟಿಷರಿಗೂ, ಹೈದರ್, ಟಿಪ್ಪು, ಮರಾಠರಿಗೂ ಸತತವಾಗಿ ಯುದ್ಧ ನಡೆಯುತ್ತಿತ್ತು. ಈ ಯುದ್ಧಗಳ ಕಾಲದಲ್ಲಿ ಕೆರೆಗಳು ಶತ್ರುಗಳಿಗೆ ನೀರು ಕೊಡಬಾರದೆಂದು ಅವುಗಳನ್ನು ಹಾಳು ಮಾಡಲಾಯಿತೆನ್ನಬಹುದು. ಬ್ರಿಟಿಷರು ಸಣ್ಣ ಕೆರೆಗಳನ್ನು ಅಲಕ್ಷ ಮಾಡಿದಂತೆ ತೋರುತ್ತದೆ. ದೊಡ್ಡ ಕೆರೆಗಳಿಂದ ಆದಾಯ ಬರುತ್ತಿದ್ದುದರಿಂದ ಅವುಗಳನ್ನು ಕಾಪಾಡಿರಬಹುದು. ಬ್ರಿಟಿಷರು ಬರುವ ಮುಂದೆ ಗ್ರಾಮದ ಜನರು ಊರಿನ ಎಲ್ಲಾ ಕೆರೆಗಳನ್ನು ಕಾಪಾಡುತ್ತಿದ್ದರು. ಆದರೆ ಆವರಿಗೆ ಬ್ರಿಟಿಷರು ಯಾವ ಉತ್ತೇಜನವನ್ನು ನೀಡಲಿಲ್ಲ. ಆದ್ದರಿಂದ ಸಾವಿರಾರು ಕೆರೆಗಳು ದಾಖಲೆಯಲ್ಲಿ ಮಾತ್ರ ಉಳಿದಿವೆ. ಇತ್ತೀಚೆಗೆ ಭಾರೀ ಅಣೆಕಟ್ಟುಗಳ ಬಗ್ಗೆ

ಆಸಕ್ತಿ ಹೆಚ್ಚಾಗಿದೆ. ಸಣ್ಣ ಕೆರೆಗಳ ನಾಶ ಮತ್ತು ಕಣ್ಣೆದುರಿಗೆ ನಡೆಯುತ್ತಿದೆ. ನಾಗರೀಕರಣ ಅಧಿಕವಾಗಿ, ನಗರಗಳು ಬೆಳೆದ ಹಾಗೆ ಭೂಮಿ ಒತ್ತುವರಿಯಿಂದ ಕೆರೆಗಳ ಅವನತಿ ಯಥೇಚ್ಚವಾಗಿ ನಡೆಯುತ್ತಿದೆ. ಕೆರೆಗಳಿಗೆ ಚರಂಡಿನೀರು ಮಲೀನವಾಗುತ್ತಿದೆ. ಬ್ರಿಟಿಷರು ಹೋದ ನಂತರ ಬಾರಿ ಅಣೆಕಟ್ಟುಗಳ ಆಕರ್ಷಣೆ ಹೆಚ್ಚಾಗಿ, ಕೊಳವೆ ಬಾವಿಗಳನ್ನು ತೆಗೆಯುವುದು ಅಧಿಕವಾಗಿದೆ. ಕೆರೆಗಳ ಜತೆಗೆ ಬಾವಿಗಳು ಬರಿದಾಗಿವೆ.

**ಅಡಿಟಿಪ್ಪಣಿಗಳು**

೧. A.S.Altekar, The Rastrakutas and their times, Pp.289

೨. ಡಾ.ಕೆ.ಶಿವರಾಮಕಾರಂತ, **ಭಾರತೀಯ ಶಿಲ್ಪ**, ಪು.೨೯

೩. ಕೂ.ಸ.ಅಪರ್ಣ, **ದೇವಾಲಯ ವಾಸ್ತುಶಿಲ್ಪ ಪರಿಚಯ**, ಪು.೨

೪. ಡಾ.ಕೆ.ಶಿವರಾಮಕಾರಂತ, **ಚಾಲುಕ್ಯ ವಾಸ್ತುಶಿಲ್ಪ**, ಪು.೫

೫. ಅದೇ, ಪು.೭೩

೬. ಎ.ಕೆ.ಸಂಪುಟ ೯, ದೊಡ್ಡಬಳ್ಳಾಪುರ ನಂ.೧೧, **ಹುಲುಕಡಿಬೆಟ್ಟದ ತಪ್ಪಲು**

೭. ಎಸ್.ಶಿವಣ್ಣ(ಸಂ), **ವೀರಶೈವ ಹಸ್ತಪ್ರತಿ ಪಟ್ಟಿಕೆಗಳು**

೮. ಎಂ.ಎ.ಆರ್., ೧೯೩೬, ಪು.೭೩

೯. ಎ.ಕ.ಸಂಪುಟ ೯, ದೊಡ್ಡಬಳ್ಳಪುರ, ನಂ.೫೦, **ಕಾಡನೂರು**, ಕ್ರಿ.ಶ.೧೫೩೧

೧೦. ಕೂ.ಸ.ಅಪರ್ಣ, **ದೇವಾಲಯ ವಾಸ್ತುಶಿಲ್ಪ ಪರಿಚಯ**, ಪು.೧೦೬

೧೧. ಡಾ.ಕೆ.ಶಿವರಾಮ ಕಾರಂತ, **ಭಾರತೀಯ ಶಿಲ್ಪ**, ಪು.೭

೧೨. ಡಾ.ಡಿ.ವಿ.ಪರಮಶಿವಮೂರ್ತಿ, **ಕನ್ನಡ ಶಾಸನಶಿಲ್ಪ**, ಪು.೭

೧೩. ಎಸ್.ಕೆ.ರಾಮಚಂದ್ರರಾವ್, **ಮೂರ್ತಿಶಿಲ್ಪ ನೆಲೆ ಹಿನ್ನೆಲೆ**, ಪು.೫೦

೧೪. ಡಾ.ಸಿ.ಎಸ್.ಪಾಟೀಲ್, **ಕರ್ನಾಟಕದ ಕೋಟೆಗಳು**, ಪು.೧

೧೫. ಅದೇ, ಪು.೨೦೮

೧೬. ಎ.ಕ.ಸಂಪುಟ ೯, ದೊಡ್ಡಬಳ್ಳಾಪುರ, ನಂ.೩೧, ಕೋಟೆ ಶಾಸನ, ಕ್ರಿ.ಶ.೧೨೬೭

೧೭. ಎ.ಕ.ಸಂಪುಟ ೯, ದೊಡ್ಡಬಳ್ಳಾಪುರ, ನಂ.೬೮, ಮಾವಳೀಪುರ, ಕ್ರಿ.ಶ.೫೧೭

## ಅಧ್ಯಾಯ ೬

# ಜಾತ್ರೆಗಳು ಮತ್ತು ಆಚರಣೆಗಳು

೬

# ಜಾತ್ರೆಗಳು ಮತ್ತು ಆಚರಣೆಗಳು

ನಮ್ಮ ಸಂಸ್ಕೃತಿಯ ಬೆನ್ನೆಲುಬು ಧರ್ಮ. ವ್ಯಕ್ತಿಯ ಅಥವಾ ಮಾನವ ಸಮಾಜದ ಎಲ್ಲಾ ಆಚಾರ-ವಿಚಾರಗಳಲ್ಲಿ, ವ್ಯವಹಾರಗಳಲ್ಲಿ, ಚಲನವಲನಗಳಲ್ಲಿ ಇದು ಹರಡಿಕೊಂಡಿದೆ. ಇಹ-ಪರಗಳೆರಡರ ಸಮನ್ವಯ ಸಿದ್ಧಾಂತವಾಗಿ ಜನಜೀವನದಲ್ಲಿ ಧರ್ಮ ಬೆರೆತು ಹೋಗಿದೆ. ಹಬ್ಬಗಳು ಮತ್ತು ರಥೋತ್ಸವಗಳು ನಮ್ಮ ಜನರ ಧಾರ್ಮಿಕ ಜೀವನವನ್ನು ರೂಪಿಸುವುದರಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತವೆ. ಹಬ್ಬಗಳು ನಡೆದುಬಂದ ದಾರಿ, ನಮ್ಮ ಪೂರ್ವಿಕರು ಅನುಸರಿಸಿಕೊಂಡು ಬಂದ ಮಾರ್ಗ ಮುಂದಿನ ಜನಾಂಗಕ್ಕೆ ನೀಡಿದ ಕೊಡುಗೆ ಎನ್ನಬಹುದು. ಈ ಪರಂಪರೆಗೆ ಮೂಲ ಪ್ರೇರಣೆ ಧಾರ್ಮಿಕ ಶ್ರದ್ಧೆ. ಇದು ನಮ್ಮ ಗ್ರಾಮೀಣ ಜನರ ಬಾಳಿನ ಆಧಾರ ಮತ್ತು ಜೀವನದ ಊರುಗೋಲು. ನಮ್ಮ ಜೀವನದಲ್ಲಿ ಬರುವ ಎಲ್ಲಾ ಕಷ್ಟ ಸುಖಗಳಿಗೆ, ಒಳಿತು-ಕೆಡಕುಗಳಿಗೆ ಮೂಲಭೂತವಾದ ಕಾರಣಶಕ್ತಿಯೊಂದಿದೆ. ಅದರ ಇಚ್ಛೆಯಂತೆ ಇವೆಲ್ಲಾ ನಡೆಯುತ್ತಾ ಇರುತ್ತವೆ. ಆ ಶಕ್ತಿಯ ವಿರುದ್ಧ ಹೋಗುವುದು ಸಾಧ್ಯವಿಲ್ಲ. ಕಂಡದ್ದನ್ನೆಲ್ಲ ದೇವರನ್ನಾಗಿ ರೂಪಿಸಿಕೊಂಡು ಅನೇಕ ರೂಪಗಳಲ್ಲಿ ದೇವರ ಸಾನಿಧ್ಯವನ್ನು ಕಲ್ಪಿಸಿಕೊಳ್ಳುವ ಶಕ್ತಿ ಗ್ರಾಮೀಣ ಪ್ರದೇಶದ ಜನರಲ್ಲಿದೆ. ಈ ಕಾರಣದಿಂದಾಗಿಯೇ ನಮ್ಮಲ್ಲಿ ಬಹುದೇವತೋಪಾಸನೆ ಅಸ್ಥಿತ್ವಕ್ಕೆ ಬಂದಿತು. ನಮ್ಮ ಪ್ರಕೃತಿಯಲ್ಲಿನ ಒಂದೊಂದು ವಸ್ತುವೂ ಜನರಿಗೆ ಪ್ರಾಚೀನ ಕಾಲದಿಂದಲೂ, ದೈವಶಕ್ತಿಯ ಸಂಕೇತವಾಗಿ ಮೂಡಿ ಬಂದಿದೆ. ಪರಂಪರೆಯಾಗಿ ಪರಿಣಮಿಸಿದೆ. ವ್ಯಕ್ತಿ ತಾನು ನಿತ್ಯ ಬಳಸುವ ಪ್ರತಿಯೊಂದು ಉಪಕರಣಗಳಲ್ಲೂ, ಅಂಶಗಳಲ್ಲೂ ದೈವತ್ವವನ್ನು ಕಾಣುವ ಭಾವುಕಶಕ್ತಿಯನ್ನು ಕಾಣಬಹುದು. ಮೋಕ್ಷ ಸಂಪಾದನೆಗಾಗಿ ಮತ್ತು ಹಿಡಿದ ಕಾರ್ಯಸಾಧನೆಗಾಗಿ ಮತ್ತು ಆಗಾಗ್ಗೆ ಮನುಷ್ಯನನ್ನು ಪೀಡಿಸುವ ರೋಗಗಳನ್ನು ನಿವಾರಿಸಿಕೊಳ್ಳಲು ದೈವದ ಪೂಜೆಯನ್ನು ಕೈಗೊಳ್ಳುವವರು. ಆದರೆ ಮುಂದೆ ಈ ಮನೋಧರ್ಮವೇ ಒಂದು ದೊಡ್ಡ ದೌರ್ಬಲ್ಯವಾಗಿ ಪರಿಣಮಿಸಿತೆಂದು ಹೇಳಬಹುದು. ಈ ನಂಬಿಕೆಯ ತಳಹದಿಯ ಮೇಲೆ ರೂಪಿತವಾದ ಹಬ್ಬ ಹರಿದಿನಗಳು, ಜಾತ್ರೆಗಳು, ಆಚರಣೆಯ ರೂಪದಲ್ಲಿಂದು ನಮ್ಮ ಮುಂದಿದೆ.

ನಮ್ಮ ಜನಪದ ಸಂಸ್ಕೃತಿಗೆ ಆಚರಣೆಯೇ ಬೆನ್ನೆಲುಬಾಗಿದೆ. ಆಚರಣೆ ಇಲ್ಲದೆ, ಯಾವ ದೈವದ ಅಸ್ತಿತ್ವವನ್ನು ಊಹಿಸಲೂ ಅಸಾಧ್ಯ. ಈ ಜನಪದ ಧರ್ಮ ಒಂದು ರೀತಿಯಲ್ಲಿ ಆಚರಣೆಯ ಧರ್ಮವೇ ಸರಿ. ಆಚರಣೆ ನಿರ್ದಿಷ್ಟ ಕಾಲದಲ್ಲಿ, ನಿರ್ದಿಷ್ಟ ವ್ಯಕ್ತಿಯಿಂದ ಆಗಬೇಕಾಗುತ್ತದೆ. ದೇವತೆಗೂ ಸಮಾಜಕ್ಕೂ ಇರುವ ಸಂಬಂಧ ಅಭಿನಯಗೊಳ್ಳುವ ಕ್ರಮದ ವಿವರಗಳೇ ಆಚರಣೆಗಳು, 'ಸಂಪ್ರದಾಯ ಅಂಗೀಕರಿಸಿದ ಧಾರ್ಮಿಕ ಮತ್ತು ಮಾಂತ್ರಿಕ ಆಚರಣೆಗಳ ಮೊತ್ತವೇ ಆಚರಣೆ'[೧] ಎನ್ನಬಹುದು.

ಆಚರಣೆಯ ಬೆನ್ನೆಲುಬು ನಂಬಿಕೆ. ಈ ನಂಬಿಕೆಯ ಸಿದ್ಧಾಂತದ ಮೇಲೆ ಆಚರಣೆಯನ್ನು ಮುಂದುವರಿಸಿಕೊಂಡು ಹೋಗಲು ಸಹಾಯ ಮಾಡುತ್ತದೆ. ಈ ಆಚರಣೆಗಳು ಜನ್ಮತಾಳುವ ಮೊದಲು ಪುರಾಣಗಳು ಪುರಾಣ ಕಥೆಗಳು ಬೆಂಬಲ ನೀಡುತ್ತವೆ. ಪುರಾಣಗಳ ಹಿನ್ನೆಲೆಯಲ್ಲಿ ಮರೆಯಾದ ನಂತರ ನಿರಾತಂಕವಾಗಿ ಆಚರಣೆಗಳು ಮುಂದುವರೆಯುತ್ತಾ ಹೋಗುತ್ತವೆ.

ಈ ಆಚರಣೆಯ ಅರ್ಥವನ್ನು ವಿವರಿಸುವ ಸಂದರ್ಭದಲ್ಲಿ "ಮತಧರ್ಮಗಳಿಗೆ ಸಂಬಂಧಿಸಿದಂತೆ, ಅಗೋಚರ ದೈವಶಕ್ತಿಗಳ ಪ್ರೀತ್ಯರ್ಥವಾಗಿ ಮಾನವ ನಡೆಸುತ್ತಾ ಬಂದಿರುವ ಮತಾಚಾರಗಳಿಗೆ ಕರ್ಮವಿಧಿಗಳಿಗೆ ಈ ಹೆಸರಿದೆ" ಎಂದು ಜೀಶಂಪರವರು ಅಭಿಪ್ರಾಯಪಡುತ್ತಾರೆ.[೨]

ಇನ್ನೂ ಮುಂದುವರಿದು ಹೇಳುವುದಾದರೆ "ಪುನರಾವರ್ತನೆ ಮತ್ತು ಸಾಮೂಹಿಕ ವೀಕ್ಷಣೆಯಿಂದ ಸಾಂಪ್ರದಾಯಿಕವಾಗಿ ಒಪ್ಪಿತವಾಗಿರುವ, ಭೂತ, ವರ್ತಮಾನ, ಭವಿಷ್ಯತ್ ಕಾಲಗಳಿಗೆ ಸಂಬಂಧಿಸಿದಂತೆ ಕಾರ್ಯಕಾರಣ ಸಂಬಂಧವನ್ನು ಸೂಚಿಸುವ ಕಲ್ಪನೆಯನ್ನೇ ನಂಬಿಕೆ ಎಂದು ಕರೆಯಬಹುದು.[೩] ಇದು ಮನುಷ್ಯ ಸಮಾಜಕ್ಕೆ ಹೊಂದಿಕೊಳ್ಳುವ ಪ್ರಯತ್ನದ ಹಂತ. ಒಂದು ವರ್ಗ ಪರಂಪರಾನುಗತವಾಗಿ ಒಪ್ಪಿರುವ ಮಾನವನ ಕ್ರಿಯಾವಿನ್ಯಾಸವನ್ನು ಸಂಪ್ರದಾಯ ಎಂದು ಕರೆಯಬಹುದು. ಆದರೆ ಈ ಸಂಪ್ರದಾಯವೆಂಬುದು ವೈಯಕ್ತಿಕವಾದುದಲ್ಲ. ಇದು ಸಾಮೂಹಿಕವಾಗಿ ಜನರೆಲ್ಲಾ ಸೇರಿ ಏನು ಮಾಡಬೇಕು ಎಂಬುದನ್ನು ತಿಳಿಸುವಂತಹ ಅಂಶವೇ ಸಂಪ್ರದಾಯ ಏಕೆ ಇದನ್ನು ಮಾಡಬೇಕೆಂದು ತಿಳಿದಿದ್ದಾರೋ ಅದೇ ನಂಬಿಕೆ, ಸಮಷ್ಠಿಯ ಹಿತರಕ್ಷಣೆಗಾಗಿ, ಸಾಮಾನ್ಯವಾಗಿ ವರ್ಷಕ್ಕೊಂದು ಸಲ, ವಿಶೇಷ ಸಂದರ್ಭಗಳಲ್ಲಿ ಆಚರಿಸುವ ಸಂಪ್ರದಾಯ ಆಚರಣೆಗಳನ್ನು ಒಳಗೊಂಡ ಸಂಕೀರ್ಣ ಸ್ವರೂಪವನ್ನು ಹಬ್ಬ ಎಂದು ಕರೆಯಬಹುದು. ನಂಬಿಕೆಯ ಜೀವನಧಾತುಗೆ ಸಂಪ್ರದಾಯ, ಹಬ್ಬ, ಆಚರಣೆಗಳೇ ಮೂಲಕಾರಣಗಳು ಎಂಬುದನ್ನು ಮರೆಯಬಾರದು. ಆಚರಣೆಗಳಿಂದ ಹರಕೆ ಹೊರುವುದು, ಬಲಿಕೊಡುವುದು, ಕೊಂಡ ಹಾಯುವುದು. ಉರುಳು ಸೇವೆ ಮಾಡುವುದು ಮುಂತಾದವುಗಳನ್ನು ನೋಡಬಹುದು. ನಮ್ಮ ಚರಿತ್ರೆಯಲ್ಲಿ ಮುಗಿದು ಹೋದ ಅನೇಕ ಘಟನೆಗಳು ಆಚರಣೆಗಳ ಸ್ವರೂಪದಲ್ಲಿ ಅಭಿವ್ಯಕ್ತಗೊಂಡು ಅಸ್ತಿತ್ವದಲ್ಲಿರುವುದನ್ನು ಕಾಣುತ್ತೇವೆ. ಆಚರಣೆಗಳನ್ನು ಒಬ್ಬ ವ್ಯಕ್ತಿ ತನಗೆ ಬೇಕಾದಾಗ ಸೃಷ್ಟಿಸಿಕೊಳ್ಳಲು ಸಾಧ್ಯವಿಲ್ಲ. ಅದು ಜನಸಮುದಾಯ ಅಥವಾ

ಒಂದು ಜನಾಂಗದ ಜೀವನ ವಿಧಾನದ ಆಶೋತ್ತರಗಳ ಬೇಡಿಕೆಯ ಅಂಗವಾಗಿ ರೂಪ ಪಡೆಯುತ್ತದೆ. ಆದ್ದರಿಂದ ಇವು ಬಹಳ ವರ್ಷಗಳ ಕಾಲ ಉಳಿಯುತ್ತವೆ. ಈ ಆಚರಣೆಗಳನ್ನು ಒಂದು ವಿಶೇಷವಾದ ದಿನದ ಸಂದರ್ಭದಲ್ಲಿ ಆಚರಿಸಲ್ಪಟ್ಟಾಗ ಅವುಗಳು ಹಬ್ಬಗಳೆನಿಸುತ್ತವೆ. ಈ ಹಬ್ಬಗಳಿಗೆ ವ್ಯಾಪಾರ, ವಾಣಿಜ್ಯದ ಸ್ಪರ್ಶವಾದಾಗ ಅವುಗಳಿಗೆ ಜಾತ್ರೆಯ ಸ್ವರೂಪ ಬರುತ್ತದೆ. ಜಾತ್ರೆಗಳು ಬಹುತೇಕವಾಗಿ ಪ್ರಾರಂಭದಲ್ಲಿ ಪ್ರಸಿದ್ಧವಾದ ಪುಣ್ಯ ತೀರ್ಥಕ್ಷೇತ್ರಗಳಲ್ಲಿ ನಡೆಯುತ್ತಿದ್ದವು. ಕಾಲಾನಂತರ ಸ್ಥಳೀಯವಾದವು. "ಪಾಪ ಪರಿಹಾರಕ್ಕಾಗಿ ದೇಶದ ಮೂಲೆ ಮೂಲೆಗಳಿಂದ ಜನ ಅಂತಹ ಕ್ಷೇತ್ರದಲ್ಲಿ ಅಪಾರ ಸಂಖ್ಯೆಯಲ್ಲಿ ನೆರೆಯುತ್ತಿದ್ದರು. ಅನಂತರ ಕೆಲವು ಹಳ್ಳಿಗಳಲ್ಲಿ ನಿಯತ ಅಥವಾ ಅನಿಯತ ಕಾಲಗಳಲ್ಲಿ ಅದ್ದೂರಿಯಿಂದ ಜರುಗುತ್ತಿದ್ದ ದೊಡ್ಡ ಹಬ್ಬಗಳಲ್ಲಿ ನೆಂಟರಿಷ್ಟರ ಜೊತೆಗೆ ಶ್ರದ್ಧಾವಂತ ಭಕ್ತರೂ ಬರಲಾರಂಭಿಸಿದರು. ದೇವರು ಪ್ರಭಾವಶಾಲಿ ಆದರಂತೂ ಜನರ ಗದ್ದಲವೂ ಅಧಿಕವಾಗುತ್ತಿತ್ತು. ಒಂದು ದಿನದ ಹಬ್ಬ ಮೂರು ಅಥವಾ ಹೆಚ್ಚು ದಿನಗಳಿಗೆ ಹಬ್ಬುತ್ತಾ, ಕುಣಿತ, ಮೆರೆತಗಳು ಕೂಡಿಕೊಂಡು ಮದ್ದು ಪಟಾಕಿಗಳ ವೈಭವ ಆಕರ್ಷಕವಾಗಿ, ಅಂಗಡಿ ಮುಂಗಟ್ಟುಗಳೂ ಜಮಾಯಿಸಿ, ಜನಮರುಳಾಗಿ ಪರುಷೆ ಸೇರಿದಾಗ ಅದು ಜಾತ್ರೆಯೆಂಬ ನಾಮಕರಣಕ್ಕೆ ಯೋಗ್ಯವಾಯಿತು. ಕೊನೆಗೆ ರೈತರ ಜೀವನಾಡಿಯಂತಿರುವ ದನಗಳ ನೆರವಿಯೂ ಸಂಘಟನೆಗೊಂಡಾಗ ಆ ಪದದ ಅರ್ಥ ವಿಶಾಲವಾಯಿತು. ಧಾರ್ಮಿಕ ಸ್ವರೂಪದ ಹಬ್ಬ ಕಾಲಕ್ರಮೇಣ ಸಾಂಸ್ಕೃತಿಕ ಮಹತ್ವವನ್ನು ಪಡೆದು ಕೊನೆಗೆ ವಾಣಿಜ್ಯ ಮುಖವನ್ನು ರೂಪಿಸಿಕೊಂಡಾಗ ಜಾತ್ರೆಯಾಯಿತು.[೪] ಹೀಗೆ ರೂಪಗೊಂಡ ಜಾತ್ರೆಗಳನ್ನು ತಾಲ್ಲೂಕಿನಲ್ಲಿ ವೆಂಕಟರಮಣಸ್ವಾಮಿ ಜಾತ್ರೆ, ಶ್ರೀ ಘಾಟಿಸುಬ್ರಹ್ಮಣ್ಯ ಜಾತ್ರೆ, ಕಡಲೇಕಾಯಿ ಪರುಷೆ, ರಾಜಘಟ್ಟದ ಮಾರುತಿ ದೇವಾಲಯ ಜಾತ್ರೆಗಳು ಎಂದು ಹೆಸರಿಸಬಹುದು.

ಹಬ್ಬಗಳನ್ನು ಮಾಡುವ ಸಂದರ್ಭದಲ್ಲಿ ಆಚರಿಸುವ ಆಚರಣೆಗಳು ಇಲ್ಲಿ ಅರ್ಥಪೂರ್ಣ ವಾಗಿರುತ್ತವೆ. ಹಬ್ಬಗಳನ್ನು, ಮಾಡದಿದ್ದರೆ ನಮಗೆ ಕೇಡುಂಟಾಗುತ್ತದೆ ಎಂಬ ಭಾವನೆಯಿರುವುದರಿಂದ ಆಚರಣೆಗಳನ್ನು ಜಾತ್ರೆಗಳನ್ನು ನಿಲ್ಲಿಸಬಾರದು ಎಂಬ ಧೋರಣೆ ಜನರಲ್ಲಿ ಮನೆ ಮಾಡಿಕೊಂಡಿದೆ. ಈ ಹಿನ್ನೆಲೆಯಲ್ಲಿ ತಾಲ್ಲೂಕಿನಲ್ಲಿ ಪ್ರಮುಖವಾಗಿ ಆಚರಿಸುವಂತಹ ಹಬ್ಬಗಳು, ಜಾತ್ರೆಗಳನ್ನು ಹರಕೆಗಳನ್ನು ಈ ಕೆಳಗಿನಂತೆ ವಿಶ್ಲೇಷಣೆ ಮಾಡಬಹುದು.

ವ್ಯಾಪಾರ ವ್ಯವಹಾರಗಳೊಂದಿಗೆ ಜನಪದರಿಗೆ ಮನರಂಜನೆಯನ್ನು ಒದಗಿಸುವ, ವರ್ಷದ ಯಾವುದೇ ಒಂದು ನಿರ್ದಿಷ್ಟ ಕಾಲದಲ್ಲಿ ನಡೆಯುವ ಸಾಮಾಜಿಕ ಚಟುವಟಿಕೆ. ಜಾತ್ರೆ ಶಬ್ದ ಯಾತ್ರಾದ ತದ್ಭವ ರೂಪ. ಜಾತ್ರೆಯ ಮುಖ್ಯ ಬಂಡವಾಳ 'ಜನ ಜನ ಸೇರಿದರೆ ಜಾತ್ರೆ', 'ಜನ ಮರಳೋ ಜಾತ್ರೆ ಮರುಳೋ' ಇತ್ಯಾದಿ ಗಾದೆಗಳು ಇದನ್ನು ದೃಢಪಡಿಸುತ್ತವೆ. ಹೀಗೆ ಒಂದು ಕಡೆ ಸೇರಿದ ಜನಕ್ಕೆ ಬೇಕಾಗುವಂತಹ ಸಾಮಾನು ಸರಂಜಾಮುಗಳನ್ನು ಮಾರಲು ಅಂಗಡಿ ಮುಂಗಟ್ಟುಗಳು

ಇಲ್ಲಿ ಬಂದು ಸೇರುತ್ತವೆ. ಕೆಲವು ಜಾತ್ರೆಗಳಲ್ಲಿ ದನಗಳ ಪ್ರದರ್ಶನವೂ ವ್ಯಾಪಾರವೂ ನಡೆಯುತ್ತವೆ. ಇಂಥವುಗಳಲ್ಲಿ ತಾಲ್ಲೂಕಿನ ಘಾಟಿಸುಬ್ರಹ್ಮಣ್ಯ ಜಾತ್ರೆ, ಹುಲುಕಡಿ ಬೆಟ್ಟದ ಜಾತ್ರೆ, ಕರ್ನಾಟಕದಲ್ಲಿ ಹಾಸನ, ರಾಮನಾಥಪುರ, ಗೊರುರು, ಚುಂಚನಗಿರಿ, ಹೊಳೆನರಸೀಪುರ, ಎಡೆಯೂರು, ಹೇಮಗಿರಿ, ಮದ್ದೂರು, ಮಾಗಡಿ, ಸಿದ್ದಗಂತೆ, ಚುಂಚನಕಟ್ಟೆ ಇನ್ನು ಮುಂತಾದ ಕಡೆಗಳಲ್ಲಿ ನಡೆಯುವ ಜಾತ್ರೆಗಳು ಗಮನಾರ್ಹವಾದವು. ಜನರಿಗೆ ಸಾಕಷ್ಟು ವ್ಯಾಪಾರ, ಮನರಂಜನೆ ಒದಗಿಸುತ್ತವೆ. ಒಟ್ಟಾರೆ ಜಾತ್ರೆಯ ಸ್ಥಳದಲ್ಲಿ ಸಾಮಾನ್ಯವಾಗಿ ಒಂದಿಲ್ಲೊಂದು ದೇವತೆಯ ಪೂಜೆ ಉತ್ಸವಗಳು ಜರುಗುವುದು ಕಂಡುಬರುತ್ತದೆ. ಇದನ್ನು ಗ್ರಾಮೀಣ ಭಾಷೆಯಲ್ಲಿ ಪರಿಸೆ ಎಂದು ಕರೆಯುವುದು ರೂಢಿ.

ಜಾತ್ರೆಗಳು ಯಶಸ್ವಿಯಾಗಿ ನೆರವೇರಬೇಕಾದರೆ ಪ್ರಮುಖವಾಗಿ ಜಾತ್ರೆ ನಡೆಯುವ ಸ್ಥಳದಲ್ಲಿ ನೀರು ನೆರಳಿನ ಸೌಕರ್ಯ, ಜನ ಜಾನುವಾರುಗಳಿಗೆ ಬೇಕಾದ ಆಹಾರ ಸರಬರಾಜು ಇರಬೇಕು. ವಿಶೇಷವಾಗಿ ಜಾತ್ರೆಯ ಕ್ಷೇತ್ರ ದೇವರ ಮಹಿಮೆಯಿಂದ ಕೂಡಿದ್ದು ದೇವರ ಉತ್ಸವ, ರಥೋತ್ಸವ, ಜನಪದ ಕಲೆಗಳಾದ ಕೋಲಾಟ, ಲಾವಣಿ, ದೊಣ್ಣೆವರಸೆಯೇ ಆದಿಯಾದ ಸಾದನೆ, ಕುಸ್ತಿ, ಕಂಸಾಳೆ ನೃತ್ಯ, ಗಾರುಡಿಗನ ನೃತ್ಯ ಮುಂತಾದವುಗಳ ಉತ್ತಮ ಪ್ರದರ್ಶನ, ಸಿನಿಮಾ, ನಾಟಕ, ಸರ್ಕಸಿಣ ಆಕರ್ಷಣೆ, ಬಣ್ಣದ ಭಿತ್ತಿ ಪತ್ರ, ರೆಕಾರ್ಡ್, ಸಂಗೀತ ಮುಂತಾದ್ದರ ಪ್ರದರ್ಶನ, ಹೋಟೆಲ್‌ಗಳ ಸೌಕರ್ಯ ಇತ್ಯಾದಿಗಳು ವ್ಯವಸ್ಥಿತವಾಗಿದ್ದರೆ ಇದಕ್ಕೆ ಹೊಸರಂಗು ಬರುತ್ತದೆ. ಜನಪದರು ತಮ್ಮ ವಾರ್ಷಿಕ ಉತ್ಪನ್ನಗಳನ್ನು ಸಾಮಾನ್ಯವಾಗಿ ಸುಗ್ಗಿ ಕಳೆದ ತಕ್ಷಣವೇ ಆರಂಭವಾಗುವ ಬೇಸಿಗೆಯ ಜಾತ್ರೆಗಳಲ್ಲಿ ಮಾರಾಟ ಮಾಡಿ ತಮಗೆ ಅಗತ್ಯವಾದ ಸಲಕರಣೆಗಳನ್ನು ನಿತ್ಯೋಪಯೋಗಿ ವಸ್ತುಗಳನ್ನು ಕೊಳ್ಳುತ್ತಾರೆ. ಆದ್ದರಿಂದ ಜಾತ್ರೆಯನ್ನು ಗ್ರಾಮೀಣ ಪ್ರದೇಶಗಳ ಮುಖ್ಯ ವ್ಯಾಪಾರ ಕೇಂದ್ರವೆಂದು ಕರೆಯಬಹುದು. ಆದರೆ ಇತ್ತೀಚಿಗೆ ಮೋಜಿನ ಜಾತ್ರೆ, ವಸ್ತುಪ್ರದರ್ಶನದ ಜಾತ್ರೆ, ದನದ ಜಾತ್ರೆ ಮುಂತಾದ ಬಹುಬಗೆಯ ಸುಧಾರಿತ ಜಾತ್ರೆಗಳು ರೂಢಿಗೆ ಬರುತ್ತಿರುವುದನ್ನು ಕಾಣಬಹುದು. ಅಲ್ಲದೆ ಜಾತ್ರೆಗಳು ಹೆಚ್ಚು ಹೆಚ್ಚು ನಾಗರಿಕತೆಯತ್ತ ಮುಖ ಮಾಡಿವೆ. ಶುದ್ಧೀಕರಣಗೊಂಡ ಕುಡಿಯುವ ನೀರಿನ ಸರಬರಾಜು, ಜನ ದನಗಳಿಗೆ ಔಷಧೋಪಚಾರ, ಆಹಾರ ಸರಬರಾಜು, ಸಾರಿಗೆ ಸೌಲಭ್ಯ, ವಿದ್ಯುತ್ ದೀಪದ ವ್ಯವಸ್ಥೆ, ಜಾನುವಾರುಗಳ ತಂಗಣಿಗೆ ತಕ್ಕಂಥ ತಾತ್ಕಾಲಿಕ ಮಡುಗಳ ನಿರ್ಮಾಣ, ಜನ ಹಿತವೆನ್ನಿಸುವಂಥ ಉತ್ತಮ ಮನರಂಜನೆಯ ಏರ್ಪಾಡು ಇನ್ನು ಮುಂತಾದ ಸೌಲಭ್ಯಗಳನ್ನು ಒದಗಿಸಲಾಗಿದೆ. ವಿಶೇಷವಾಗಿ ನಾಡಿನಲ್ಲಿ ತಲೆದೋರಿರುವ ನಾನಾ ಮುಖದ ಪ್ರಗತಿಯನ್ನು ಪ್ರತಿಬಿಂಬಿಸುವಂಥ ವಸ್ತುಪ್ರದರ್ಶನಗಳನ್ನು ಸರ್ಕಾರದ ವತಿಯಿಂದ ಏರ್ಪಡಿಸುವುದು ಜಾತ್ರೆಯ ಒಂದು ದೊಡ್ಡ ಆಕರ್ಷಣೆ. ಇದರ ಮುಖಾಂತರ ಜನರಂಜನೆಯೊಂದಿಗೆ

ಜನತಾ ಶಿಕ್ಷಣವೂ ಒದಗಿದಂತಾಗುತ್ತದೆ. ಪ್ರಸಾರ ಸುಲಭವಾಗಿ ಜನಸಾಮಾನ್ಯರಿಗೆ ಮುಟ್ಟುತ್ತದೆ. ಹೀಗೆ ಬಹುಜನೋಪಯೋಗಿಯಾಗಿರುವ ಜಾತ್ರೆಗಳು ಸಂಕೀರ್ಣ ಸ್ವರೂಪದ ಸಾಮಾನ್ಯ ಜನತಾ ಸೇವಾ ಕೇಂದ್ರಗಳಾಗಿಯೂ ಪರಿಣಮಿಸಿವೆ.

## ೬.೧. ಜಾತ್ರೆ ಆಚರಣೆಗಳು

ಜಾತ್ರೆಗಳಲ್ಲಿ ಪ್ರಮುಖವಾಗಿ ಆಚರಣೆಗಳಿಗೆ ಅಗ್ರಸ್ಥಾನ. ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ಅನೇಕ ರೀತಿಯ ಆಚರಣೆಗಳು ಪ್ರಚಲಿತದಲ್ಲಿವೆ. ಅವುಗಳು ಈ ಕೆಳಗಿನಂತಿವೆ.

### ಹಬ್ಬಗಳು ಮತ್ತು ಆಚರಣೆಗಳಲ್ಲಿ ಸಾರುವುದು

ಗ್ರಾಮದ ದೇವರುಗಳಿಗೆ ಉತ್ಸವವನ್ನು ಮಾಡಲು ಸಿದ್ದರಾಗಲು ತಯಾರಿ ಮಾಡುವ ಕ್ರಮವೇ ಸಾರುವುದು. ದೇವರು ಅಥವಾ ದೇವತೆಯ ಹಬ್ಬವನ್ನು ಮಾಡಲು ಜನರನ್ನು ಆರ್ಥಿಕವಾಗಿ ಮತ್ತು ಮಾನಸಿಕವಾಗಿ ತಯಾರಿಗೊಳಿಸುವ ಪ್ರಾರಂಭದ ಆಚರಣೆಯೇ ಸಾರುವುದು. ಹಬ್ಬಕ್ಕೆ ಸೂಚನೆ ಕೊಡುವ ಮತ್ತು ಪಾಲಿಸುವ ನಿಯಮಗಳನ್ನು ತಮಟೆ ಬಾರಿಸುತ್ತ ಬೀದಿ ಬೀದಿಗಳಲ್ಲಿ ಹೇಳುವುದೇ ಸಾರುವುದು ಎಂದಾಗುತ್ತದೆ. ಇದರಿಂದಾಗಿ ಪ್ರತಿಯೊಬ್ಬರೂ ತಮ್ಮ ಜವಾಬ್ದಾರಿಯನ್ನು ಅರಿತು ಕಾರ್ಯಗಳನ್ನು ನಡೆಸಲು ಸುಲಭವಾಗುವುದು. ಗ್ರಾಮದ ಮುಖ್ಯಸ್ತರು ಮತ್ತು ಪೂಜಾರಿಯವರು ದೇವಾಲಯದಲ್ಲಿ ಸಭೆ ಸೇರಿ ಈ ಹೊತ್ತಿಗೆ ಇಪ್ಪತ್ತು ದಿನಕ್ಕೆ ಹಬ್ಬ ಮಾಡಬಹುದೇ ಎಂದು ದೇವರನ್ನು ಕೇಳುವರು. ಆಗ ದೇವತೆಯ ವಿಗ್ರಹದ ಬಲಭಾಗದಲ್ಲಿ ಹೂ ಬೀಳಬೇಕು. ಹಾಗೆ ಬಿದ್ದರೆ ದೇವತೆಯ ಒಪ್ಪಿಗೆ ದೊರೆತಿದೆಯೆಂದು ತಿಳಿದು ಸಾರುವವರನ್ನು ಕರೆಸುವರು. ತಮ್ಮ ಅನುಕೂಲಕ್ಕೆ ತಕ್ಕಂತೆ ಎಂಟೋ, ಹತ್ತೋ, ದಿನಗಳಲ್ಲಿ ಜಾತ್ರೆಯ ದಿನಾಂಕವನ್ನು ನಿಗದಿಪಡಿಸಿ ಸಾರುವರು. ಈ ಸಾರುವ ವ್ಯಕ್ತಿಯನ್ನು ಸಾರುವಯ್ಯ, ಗುರಿಕಾರ ಎಂಬ ಹೆಸರುಗಳಿಂದ ಕರೆಯುವರು. ಸಾರುವ ವ್ಯಕ್ತಿ ಕೆಳವರ್ಗಕ್ಕೆ ಸೇರಿದವನಾಗಿರುತ್ತಾನೆ. ಸಾರುವವನಿಗೆ ಪ್ರತಿಫಲವಾಗಿ ಹಣವನ್ನು ಕೊಡುವ ಪದ್ಧತಿ ಇದೆ. ಆ ವ್ಯಕ್ತಿ ಸಾರಿದ ದಿನದಿಂದ ಹಬ್ಬ ಮುಗಿಯುವ ತನಕ ಮಡಿಯಿಂದ ಇರಬೇಕು. ತನ್ನ ಮನೆಯವರಿಂದ ಪ್ರತ್ಯೇಕವಾಗಿರಬೇಕು. ಪ್ರತಿನಿತ್ಯ ಸ್ನಾನ ಮಾಡಿ ಶುಭ್ರವಾದ ವಸ್ತ್ರಗಳನ್ನು ಧರಿಸಿರಬೇಕು. ಮಾಂಸಾಹಾರ, ಲೈಂಗಿಕ ಸಂಪರ್ಕಗಳನ್ನು ತ್ಯಜಿಸಬೇಕಾಗುತ್ತದೆ. ಈ ಸಂದರ್ಭದಲ್ಲಿ ಸಾರುವವನಿಗೆ ಸಮಾಜದಲ್ಲಿ ಉನ್ನತ ಅಂತಸ್ತು ಲಭಿಸಿದಂತಾಗುತ್ತದೆ. "ಸಾರುವವನು ಮತ್ತು ಪೂಜಾರಿ ಒಂದೇ ಆಗಿರುವ ಹುಸ್ಕೂರು ಮದ್ದೂರಮ್ಮನ ಜಾತ್ರೆಯಲ್ಲಿ ಈತನಿಗೆ ಊರಿನ ಮುಖಂಡರ ಸಮ್ಮುಖದಲ್ಲಿ ಜನಿವಾರಧಾರಣೆ ಆಗುತ್ತದೆ. ಉಜ್ಜನಿ ಚೌಡಮ್ಮ ಜಾತ್ರೆಯಲ್ಲಿ ಗ್ರಾಮ ದೇವತೆಯ ಮಕ್ಕಳು ಎಂಬ ಕಾರಣಕ್ಕಾಗಿ ಹೆಬ್ಬಾರ ಗುಡ್ಡರಿಗೆ ಜನಿವಾರಧಾರಣೆ ಆಗುವುದನ್ನು ನೋಡಬಹುದು. ಹೀಗೆ ಅಸ್ಪೃಶ್ಯರಿಗೆ ಜನಿವಾರಧಾರಣೆ ಆಗುವುದರ ಹಿಂದೆ ಅಸ್ಪೃಶ್ಯ ಯುವಕ

ಮತ್ತು ಬ್ರಾಹ್ಮಣ ಯುವತಿಯ ವಿವಾಹದ ಕಥೆ ತನ್ನ ಪ್ರಭಾವ ಬೀರಿರುವ ಸಾಧ್ಯತೆ ಇದೆ. ಇದರ ಜೊತೆಗೆ ಒಂದು ವಿಶೇಷ ಸಂದರ್ಭದಲ್ಲಾದರೂ ಜನಿವಾರ ಧರಿಸುವ ಆಚರಣೆಯ ಮೂಲಕ ಕೆಳವರ್ಗದ ವ್ಯಕ್ತಿ ತನ್ನ ವರ್ಣವ್ಯವಸ್ಥೆಯನ್ನು ಉಲ್ಲಂಘಿಸಿ ಉಚ್ಚವರ್ಗದ ಸ್ಥಾನಮಾನವನ್ನು ಪಡೆಯುವ ಸುಪ್ತ ಬಯಕೆಯ ಪೂರೈಕೆ ಇದಾಗಿರಬೇಕು.[೫]

**ಕಂಬ ನೆಡುವುದು**

ಕರಗದಮ್ಮ ಏಕಾಶಿಪುರದ ದೇವತೆ. ಗ್ರಾಮಗಳಲ್ಲಿ ಸಾರುವಿಕೆಯನ್ನು ಸೂಚಿಸಲು ಕಂಬ ನೆಡುತ್ತಾರೆ. ಅಥವಾ ಸಾರಿದ ದಿನವೇ ಕಂಬ ನೆಡುವ ಪದ್ಧತಿ ಇದೆ. ಕಂಬವನ್ನು ನೆಟ್ಟ ಇಂತಿಷ್ಟು ದಿನಕ್ಕೆ ಹಬ್ಬವನ್ನು ಮಾಡಲಾಗುವುದು. ಈ ಕಂಬವನ್ನು ದುರ್ಗಾದೇವತೆಯ ಗಂಡ ಎಂದು ಹೇಳುತ್ತಾರೆ. ಸಾರುವ ವ್ಯಕ್ತಿ ಸ್ನಾನ ಮಾಡಿ ಹತ್ತಿರದ ಬೆಟ್ಟಕ್ಕೆ ಹೋಗಿ, ಮಾವಿನ ಮರ ಅಥವಾ ಅತ್ತಿಯ ಮರದ ಮೂರು ಕವಲಿರುವ ಒಂದು ಕೊಂಬೆಯನ್ನು ಒಂದೇ ಏಟಿಗೆ ಕಡಿದು ತರುತ್ತಾನೆ. ಈ ಮರದ ಕಂಬವನ್ನು ಗೌರವಗಳೊಂದಿಗೆ ಹೂಳುವರು ಅಥವಾ ದೇವರ ಪಕ್ಕದಲ್ಲಿ ಇಡುವರು. ಅಂದಿನಿಂದ ಹಬ್ಬ ಶುರುವಾಗುತ್ತದೆ.

ಕರಗವನ್ನು ಏಕಾಶಿಪುರದ ಗ್ರಾಮದೇವತೆ ಸಾರುವ ವ್ಯಕ್ತಿ ಉಪವಾಸವಿದ್ದು ಅರಿಶಿನಬಟ್ಟೆ ಮತ್ತು ಕತ್ತೆಯನ್ನು ಹಿಡಿದು ಬೆಟ್ಟಕ್ಕೆ ಹೋಗಿ ಮೂರು ಕವಲುಳ್ಳ ಕೊಂಬೆಯನ್ನು ಕಡಿದು ಅರಿಶಿನ ಬಟ್ಟೆಯಲ್ಲಿ ಅದನ್ನು ಸುತ್ತಿ ತರುವನು. ಆ ಮರದ ಕೊಂಬೆಯನ್ನು ಕಾರಗದಮ್ಮನ ದೇವಾಲಯದಲ್ಲಿ ಇಡಲಾಗುವುದು. ಈ ಒಂದು ಪದ್ಧತಿ ಈಗಲೂ ಇದೆ.

**ಹೊಳೆಗೆ ಹೋಗುವುದು**

ದೇವರು ತರುವುದು, ಜಲ್ದಿ ಎಂಬ ಹೆಸರುಗಳಿಂದ ಕರೆಯುವ ಈ ಆಚರಣೆಯು ದೇವರಿಗೆ ಸ್ನಾನ ಮಾಡಿಸುವುದು ಇಲ್ಲಿಯ ವಿಶೇಷ ಆಚರಣೆ. ಹೊಳೆ ಅಥವಾ ಕೆರೆ, ಕಲ್ಯಾಣಿ ಬಾವಿಯ ಬಳಿ ದೇವತೆಯನ್ನು ತೆಗೆದುಕೊಂಡು ಹೋಗಿ, ಅಲ್ಲಿ ದೇವತೆಯ ವಿಗ್ರಹವನ್ನು ಶುಚಿಗೊಳಿಸಿ ಹೋಮ ಮಾಡುವರು. ಇದನ್ನು ಪುಣ್ಯೋಜನ, ಪುಣ್ಯಾಹ ಎಂಬ ಹೆಸರುಗಳಿಂದ ಈಗಲೂ ಕರೆಯುವರು.

ದೊಡ್ಡ ಬೆಳವಂಗಲದ ಗ್ರಾಮದೇವತೆಯಾದ ಮದ್ದೂರಮ್ಮನನ್ನು ಹೊಳೆಗೆ ಕರೆದುಕೊಂಡು ಹೋಗುತ್ತಾರೆ. ಆಗ ದೇವರನ್ನು ನಾಲ್ಕು ಜನ ಹೊತ್ತಿರುತ್ತಾರೆ. ಪೂಜಾರಿಯು ಮಂಗಳಾರತಿ ತಟ್ಟೆ ಮತ್ತು ಗಂಟೆಯನ್ನು ಹಿಡಿದು ಮುಂದೆ ಹೋಗುತ್ತಿರುತ್ತಾನೆ. ಇನ್ನೂ ಮದುವೆ ಆಗದ ಹೆಣ್ಣು ಮಗಳೊಬ್ಬಳು, ಕಳಸವನ್ನು, ಮತ್ತೊಬ್ಬ ಹೆಣ್ಣುಮಕ್ಕಳು ಉಪಹಾರವನ್ನೂ ಹಿಡಿದಿರುತ್ತಾಳೆ. ಅಲ್ಲದೆ

ಬೇರೆ ಜಾತಿಯ ಮೂವರು ಹೆಣ್ಣು ಮಕ್ಕಳು ಹೊಸದಾದ ಮೂರು ಗಡಿಗೆಗಳನ್ನು ತೆಗೆದುಕೊಂಡು ಬರುತ್ತಾರೆ. ಇದರ ಜೊತೆಯಲ್ಲಿ ಗ್ರಾಮದೇವತೆಯ ಕಥೆಯನ್ನು ಹೇಳುವ ಅಸಾದಿಯೂ ಹೊಳೆಗೆ ಬರಬೇಕಾಗುತ್ತದೆ. ದೇವತೆಗೆ ಹೊಳೆಯ ಬಳಿ ಎಡೆಯನ್ನು ಹಾಕಿ ಪೂಜಿಸಲಾಗುವುದು. ನೀರಿನ ಬಳಿಯಲ್ಲಿ ಹೋಮವನ್ನು ಮಾಡುವರು. ಈ ಹೋಮವನ್ನು ಪುರೋಹಿತನು ನೆರವೇರಿಸುವನು. ಪೂಜಾಕಾರ್ಯಗಳು ಮುಗಿದ ನಂತರ ದೇವರನ್ನು ದೇವಾಲಯಕ್ಕೆ ಹಿಂದಿರುವಾಗ ಮಡಿವಾಳ ಜನಾಂಗದವರು ಒಗೆದ ಪಂಚೆಯನ್ನು ಹಾಸುತ್ತಾರೆ. ಅದರ ಮೇಲೆ ದೇವರು ಹೊತ್ತವರು ನಡೆದು ಬರುತ್ತಾರೆ. ಇದನ್ನು ನಡೆಮುಡಿ ಎಂಬ ಹೆಸರಿನಿಂದ ಕರೆಯುವರು. ಮಡಿವಾಳ ಜನಾಂಗದ ಇಬ್ಬರು ವ್ಯಕ್ತಿಗಳು ಎರಡು ಪಂಜುಗಳನ್ನು ಹಿಡಿದು ಅದರ ಬೆಳಕಿನಲ್ಲಿ ದೇವತೆಯನ್ನು ಗುಡಿಗೆ ತಂದು ಕೂಡಿಸುವರು.

### ಉಪಾರ ಅಥವಾ ಮಡೆ

ಉಪಾರ ಎನ್ನುವುದು ಅನ್ನದ ಆರತಿ, ದೇವತೆಗೆ ಪ್ರಿಯವಾದ ಉಪಹಾರ, ಪ್ರತಿಯೊಂದು ಮನೆಯಲ್ಲೂ ಅನ್ನವನ್ನು ಮಾಡಿ ಅದಕ್ಕೆ ಅರಿಶಿಣ ಕುಂಕುಮ ಹಚ್ಚಿ, ದೊಡ್ಡದಾದ ಬಿಳಿಯ ಬಟ್ಟೆ ಹಾಸಿ ಅದರ ಮೇಲೆ ಅನ್ನವನ್ನು ಸುರಿಯುವರು ದೊಡ್ಡ ಬೆಳವಂಗಲದ ಮದ್ದೂರಮ್ಮನ ಹಬ್ಬದಲ್ಲಿ ಆದಿ ಕರ್ನಾಟಕ ಜಾತಿಯವರು ಅನ್ನವನ್ನು ತರುವಂತಿಲ್ಲ. ಈ ಉಪಾರದ ಅನ್ನವನ್ನು ಅವರಿಗೂ ಮಡಿವಾಳದವರಿಗೂ ವಾಧ್ಯದವರಿಗೂ ಹಂಚಿ, ಬಂದ ಭಕ್ತರಿಗೂ ನೀಡುತ್ತಾರೆ. ಹಾದ್ರಿಪುರದ ಮದ್ದೂರಮ್ಮನ ಹಬ್ಬದಲ್ಲಿ ಭಕ್ತರು ಮೊಸರನ್ನವನ್ನು ಎಡೆ ಇಡುವುದನ್ನು ಇಂದಿಗೂ ಕಾಣುತ್ತೇವೆ. ಇದನ್ನೇ ಉಪಾರ ಎನ್ನಲಾಗುವುದು. ಈ ಒಂದು ಪದ್ಧತಿಯಿಂದ ದೇವರು ಭಕ್ತರು ನಿವೇದನೆ ಮಾಡಿದ ಅಡುಗೆಯನ್ನು ಸ್ವೀಕರಿಸುತ್ತಾನೆ ಎಂಬ ನಂಬಿಕೆ ಜನರಲ್ಲಿದೆ. ಇಂದಿಗೂ ಕೆಲವು ಕಡೆ ದೇವರ ಹೆಸರಿನಲ್ಲಿ ಅನ್ನವನ್ನು ಮಾಡಿ ಎಲ್ಲರೂ ತಿನ್ನುವುದು ದೇವಾಲಯದ ಮುಂದೆ ಅಡುಗೆ ಮಾಡಿ ಅಲ್ಲೇ ತಿಂದು ಬರುವುದನ್ನು ಕಾಣುತ್ತೇವೆ. ತಾಲ್ಲೂಕಿನ ತೂಬುಕುಂಟೆ ಗ್ರಾಮದ ಮುತ್ತುರಾಯಸ್ವಾಮಿ ದೇವಾಲಯದ ದೇವರಿಗೆ ಪ್ರಾಣಿಗಳನ್ನು ಬಲಿ ಕೊಡುವ ಪದ್ಧತಿ ಇದೆ. ಬಲಿಕೊಟ್ಟ ಪ್ರಾಣಿಗಳನ್ನು ಅಲ್ಲಿಯೇ ಅಡುಗೆ ಮಾಡಿ, ದೇವರಿಗೆ ನೈದೇವ್ಯವಿಟ್ಟು, ಎಲ್ಲರೂ ಅಲ್ಲಿಯೇ ತಿಂದು ಮುಗಿಸಿಬರಬೇಕಂತೆ. ಒಂದು ವೇಳೆ ಬಲಿಕೊಟ್ಟ ಪ್ರಾಣಿಗಳನ್ನು ಮನೆಗೆ ತಂದು ಅಡುಗೆ ಮಾಡಿದರೆ ಅದರಲ್ಲಿ ಹುಳುಗಳು ಕಾಣುತ್ತವೆ ಎಂದು ಸ್ಥಳೀಯರು ಹೇಳುತ್ತಾರೆ. ಇದು ಪ್ರಾಚೀನ ಸಮಾಜದ ಸಮೂಹ ಜೀವನದ, ಅಥವಾ ಸಾಂಘಿಕ ಜೀವನದ ಅವಶೇಷವೊಂದು ಆಚರಣೆಯಲ್ಲಿ ಹಾಗೆಯೇ ಉಳಿದುಕೊಂಡು ಬಂದಿದೆ ಎಂಬುದಾಗಿ ಹೇಳಬಹುದು.

## ಎಳವಾರ

ಕೊಂಡದಲ್ಲಿ ಬೆಂಕಿ ಹಾಕಲು ಏಳೂ ಊರುಗಳಿಲಂದ ಸೌದೆ ಬರುವುದನ್ನು ಎಳವಾರ ಎಂದು ಕರೆಯುವರು. ಕೊಂಡಕ್ಕೆ ಬೆಂಕಿ ಇಡುವ ಸಂಪ್ರದಾಯ ವಂಶಪಾರಂಪರ್ಯವಾಗಿ ಬಂದಿರುತ್ತದೆ. ಕೊಂಡಕ್ಕೆ ಬೆಂಕಿ ಇಡುವವರು ಸ್ನಾನ ಮಾಡಿ ಉಪವಾಸವಿದ್ದು ಕೊಂಡವನ್ನು ಪೂಜಿಸಿ, ಕಾಯಿ ಒಡೆದು, ಗಂಧದ ಕಡ್ಡಿ ಹಚ್ಚಿ ಬೆಂಕಿ ಇಡುವರು. ಬೆಳಗಿನ ಜಾವ ಕೋಳಿಕೂಗುವ ವೇಳೆಗೆ ಕೊಂಡ ಸಿದ್ಧವಾಗುತ್ತದೆ..

ತಾಲ್ಲೂಕಿನ ಉಜ್ಜನಿಯ ಚೌಡಮ್ಮನ ಹಬ್ಬದಲ್ಲಿನ ಎಳವಾರದ ಆಚರಣೆ ಹೀಗಿದೆ. 'ಸುಮಾರು ಎಂಟು, ಹತ್ತು ದಿನಗಳ ಹಿಂದೆಯೇ ಕೊಂಡಕ್ಕೆಂದು ಸೌದೆಗಳನ್ನು ಕಡಿದುಕೊಂಡು ಬಂದು ಮನೆಗಳು ಮತ್ತು ಹೊಲಗಳ ಹತ್ತಿರ ಒಣಗಲು ಹಾಕಿರುತ್ತಾರೆ. ದುಂಡಾದ, ಚಂದವಾದ ಒಳ್ಳೆಯ ಜಾತಿಯ ಮರಗಳು ಎಲ್ಲೆಲ್ಲಿವೆ ಎಂದು ಅಣ್ಣ ತಮ್ಮಂದಿರು ಹೋಗಿ ಕಡಿದುಕೊಂಡು ಬರುತ್ತಾರೆ. ಮಂಗಳವಾರದಂದು ಹೊತ್ತು ಮೂಡುವುದಕ್ಕೆ ಮೊದಲೇ ಮನೆಯಲ್ಲಿರುವ ಎತ್ತು, ಹಸು, ಹೋರಿಗಳನ್ನು ಕೆರೆಗೆ ಅಟ್ಟಿಕೊಂಡು ಮೈತೊಳೆದು ಸ್ವಚ್ಛ ಮಾಡುತ್ತಾರೆ. ರಂಗುರಂಗಿನ ಗುನ್ನಂಪಟ್ಟಿ ಕಾಗದಗಳು, ನೀಲಗಜ್ಜೆ ಮುಂತಾದ ಬಣ್ಣಗಳಿಂದ ಅವುಗಳ ಕೊಂಬನ್ನು ಅಲಂಕರಿಸುತ್ತಾರೆ. ಕೊಂಬಿಗೆ ಕಳಸ, ಕೊರಳಿಗೆ ಕರಿಹುರಿ, ಹೂವಿನ ಮಾಲೆ, ಹಸಿರುಮಣಿ ಇತ್ಯಾದಿಗಳನ್ನು ಹಾಕಿ ಅಲಂಕರಿಸುತ್ತಾರೆ. ಕೊಂಡದ ಮರಗಳನ್ನು ಜೋಡಿಸಿ ಕತ್ತಾಳೆ ನಾರಿನಿಂದ ಬಿಗಿದು ಕಟ್ಟುತ್ತಾರೆ. ಸುಮಾರು ಐದರಿಂದ ಹದಿಮೂರು ಮರಗಳವರೆಗೂ ಕಟ್ಟುವರು. ಹಿಂದಿನ ರಾತ್ರಿ ಆರತಿಗೆ ಉಪಯೋಗಿಸಿದ್ದ ಹೊಂಬಾಳೆಗಳನ್ನು ಅಂದು ಸೌದೆಗೆ ಕಟ್ಟಿ ಅಲಂಕರಿಸುತ್ತಾರೆ. ಕೊಂಡದ ಸೌದೆ ತುದಿಗೆ ಗಂಧದ ಕಡ್ಡಿಗಳ ಕಟ್ಟು ಸಿಕ್ಕಿಸುತ್ತಾರೆ. ಇಷ್ಟೆಲ್ಲಾ ಅಲಂಕರಿಸಿದ ನಂತರ ಹೇರುಗಳ ಕೊರಳಿಗೆ ನೊಗ ಹೂಡಿ ಕೊಂಡದ ಸೌದೆಗಳನ್ನು ನೂಗಕ್ಕೆ ಬಿಗಿದು ಕಟ್ಟುತ್ತಾರೆ ತೋಟಿ ಸಾರಿದ ನಂತರ ಹೇರುಗಳನ್ನು ಹೊಡೆದುಕೊಂಡು ಬಸವಣ್ಣನ ಗುಡಿಯ ಮುಂದಕ್ಕೆ ಬಂದು ಸೇರುತ್ತಾರೆ. ಬಸವಣ್ಣನ ಪೂಜಾರಿ ತೀರ್ಥ ಹಾಕಿದ ಮೇಲೆ ಹೇರುಗಳನ್ನು ತಮ್ಮನ್ನು ತಾವೇ ಮರೆತು ಓಡಿಸುತ್ತಾರೆ. ಹಬ್ಬ ನೋಡಲು ಬಂದ ಪ್ರೇಕ್ಷಕರು ಹರಕೆ ಹೊತ್ತವರು, ಊರ ಯುವಕರು ಇವರೆಲ್ಲರ ಸಹಾಯದಿಂದ ಸುತ್ತಮುತ್ತಲ ಬಯಲಲ್ಲಿ ಬಿಟ್ಟ ಸೌದೆ ಹೊರೆಗಳನ್ನು ಕ್ರಮವಾಗಿ ಜೋಡಿಸುತ್ತಾರೆ.[೬] ಇದು ಕೊಂಡವನ್ನು ಹಾಯಲು ಪೂರಕ ಆಚರಣೆ. ಜಾತ್ರೆ ನಡೆಯುವಾಗ ನಾಲ್ಕು ಮೊಳ ಉದ್ದ, ಐದು ಅಡಿ ಆಳದ ಗುಂಡಿಯನ್ನು ತೆಗೆದು, ಸಗಣಿಯಿಂದ ಸಾರಿಸಿ, ರಂಗೋಲಿ ಹಾಕುತ್ತಾರೆ. ದೇವತೆಗೆ ಪೂಜೆ ಮಾಡಿದ ನಂತರ ಇತರ ಕಾರ್ಯಗಳು ನಡೆಯುತ್ತವೆ. ಸೌದೆಯನ್ನು ಮನೆಗೊಂದು ತುಂಡು ಹಾಕಿ, ಪೂಜಾರಿ ಅಥವಾ ಊರಿನ ಯಜಮಾನ ಬೆಂಕಿ ಹಚ್ಚುತ್ತಾನೆ. ಬಹುತೇಕ ಕಡೆಗಳಲ್ಲಿ

ಮಂಗಳವಾರ, ಶುಕ್ರವಾರ ಕೊಂಡ ಹಾಯುವ ಸಂಪ್ರದಾಯ ಬೆಳೆದು ಬಂದಿದೆ. ಕೆಲವು ಕಡೆ ಬುಧವಾರ ಮತ್ತು ಶನಿವಾರ ಹಾಯುವುದುಂಟು.[೭]

**ಕೊಂಡ ಹಾಯುವುದು**

ಕೊಂಡ ಹಾಯುವ ಆಚರಣೆಯನ್ನು, ಕೆಂಡ ಹಾಯುವುದು, ಅಗ್ನಿಕೊಂಡ ಹಾಯುವುದು ಎಂಬ ಹೆಸರುಗಳು ಉಂಟು. ಹರಕೆ ಹೊತ್ತ ಭಕ್ತರು ಪೂಜಾರಿಯ ಸಂಗಡ ಬೆಂಕಿಯ ಮೇಲೆ ಓಡುವ ಪದ್ಧತಿ ಕೆಲವು ಊರುಗಳಲ್ಲಿ ಈಗಲೂ ಬಳಕೆಯಲ್ಲಿದೆ. ಕೆಲವು ಕಡೆ ಪೂಜಾರಿ ಮಾತ್ರ ಕೆಂಡ ತುಳಿಯುವ ಸಂಪ್ರದಾಯಗಳೂ ಇವೆ. ರಾಮಾಯಣ ಮತ್ತು ತಮಿಳುನಾಡಿನ ಶಿವಭಕ್ತನಾದ ನಂದನಾರ್‌ನ ಕಥೆಗಳಲ್ಲಿ ಅಗ್ನಿ ಪರೀಕ್ಷೆಯ ಸಂದರ್ಭಗಳು ಬರುವುದನ್ನು ಗಮನಿಸಿದ್ದೇವೆ. ಆದರೆ ಇಲ್ಲಿ ಭಕ್ತರು ಉರಿಯುವ ಕೆಂಡವನ್ನು ತುಳಿದುಕೊಂಡು ಓಡುತ್ತಾರೆ. ಕೆಂಡ ತುಳಿಯುವ ಭಕ್ತರು ಉಪವಾಸವಿದ್ದು, ಸ್ನಾನ ಮಾಡಿ ಮಡಿಬಟ್ಟೆಯನ್ನು ಧರಿಸಿ ಬಂದಿರುತ್ತಾರೆ. ಕೆಂಡ ತುಳಿಯುವ ಭಕ್ತರು.

ದೊಡ್ಡ ಬೆಳವಂಗಲದ ಮದ್ದೂರಮ್ಮನ ದೇವಾಲಯದಲ್ಲಿ ಕೊಂಡ ಹಾಯುವ ಸಂಪ್ರದಾಯ ಆಚರಣೆಯ ಪ್ರತೀಕವಾಗಿದೆ. ಇಲ್ಲಿ ಕೊಂಡಕ್ಕೆ ಒಂದು ವರ್ಗದ ಜಾತಿಗೆ ಸೇರದೆ, ಯಾರು ಬೇಕಾದರೂ ಸೌದೆಯನ್ನು ತಂದು ಹಾಕಬಹುದು. ಪ್ರಾರಂಭದಲ್ಲಿ ಆರತಿ ಹೊತ್ತವರು, ಕೊಂಡದಲ್ಲಿ ನಡೆದು ಗುಡಿಯನ್ನು ಮೂರು ಸುತ್ತು ಪ್ರದಕ್ಷಿಣೆ ಹಾಕಿ ಬರುವರು. ನಂತರದಲ್ಲಿ ಬಾಯಿಬೀಗದವರು ನಡೆಯುತ್ತಾರೆ. ಹರಕೆ ಹೊತ್ತವರು ಕೈಗೆ ಕೆಂಡ ಹಾಕಿಸಿಕೊಳ್ಳುವರು. ಒಂದು ಬಿಳಿ ಬಟ್ಟೆಯನ್ನು ನೆನೆಸಿ ಕೈಯಲ್ಲಿ ಹಿಡಿದುಕೊಳ್ಳುವರು. ಆಗ ಪೂಜಾರಿ ಬಟ್ಟೆಗೆ ಕೆಂಡ ಹಾಕುತ್ತಾನೆ. ಆ ಬಟ್ಟೆ ಸುಡುವುದಿಲ್ಲ ಎಂದು ನಂಬುತ್ತಾರೆ.

ಕೆಂಡ ಹಾಯುವುದು ಬಹುತೇಕ ರಾತ್ರಿ ವೇಳೆ ನಡೆಯುತ್ತದೆ. ಸಂಜೆ ದೇವರ ಉತ್ಸವದೊಂದಿಗೆ ಮನೆ ಮನೆ ಹತ್ತಿರ ಆರತಿ ಹೊರಡಿಸಿಕೊಂಡು ಬರುತ್ತಾರೆ. ಹಿತ್ತಾಳೆ ಪಾತ್ರೆಯಲ್ಲಿ ಮಡಿಯಿಂದ ಹೊಸ ಭತ್ತವನ್ನು ಕುಟ್ಟಿ, ಅಕ್ಕಿಯನ್ನು ವಿಂಗಡಿಸಿ, ಬೆಲ್ಲದ ಪಾಕ ತೆಗೆದು ಕಲಸಿ, ಬೆನಕನಾಕಾರವಾಗಿ ತಂಬಿಟ್ಟು ಮಾಡಿ, ಮೇಲೆ ತುಪ್ಪದ ದೀಪವನ್ನು ಹಚ್ಚಿ, ಹೊಂಬಾಳೆ ಇಟ್ಟು ಪೂಜಿಸಿ ಹೆಣ್ಣು ಮಕ್ಕಳು ಹೊತ್ತುಕೊಂಡು ಬರುತ್ತಾರೆ. ಮುಂದೆ ವಾದ್ಯದವರು, ಪತ್ತಿನವರು, ನಂತರ ದೇವರು, ದೇವರ ಹಿಂದೆ ಆರತಿ ಹೊತ್ತ ಹೆಣ್ಣು ಮಕ್ಕಳು ಬರುತ್ತಾರೆ. ಅಗ್ನಿಕೊಂಡದ ಹತ್ತಿರ ಬಂದಾಗ ದೇವರಿಗೆ ಮಂಗಳಾರತಿ ಮಾಡುತ್ತಾರೆ. ನಂತರ ದೇವರನ್ನು ಕೊಂಡದ ಸುತ್ತ ಮೂರು ಸುತ್ತು ಪ್ರದಕ್ಷಿಣೆ ಮಾಡಿಸಿ, ಕೊಂಡದ ಮೇಲೆ ಹಾದುಹೋಗುತ್ತಾರೆ. ಅವರ ಹಿಂದೆ ಆರತಿ ಹೊತ್ತವರು ಹಾದು ಹೋಗುವರು. ನಂತರ ಊರಿನವರು ಹಾಯುತ್ತಾರೆ. ಈ ಸಂದರ್ಭದಲ್ಲಿ ಅವರಿಗೆ ಕಾಲು ಸುಡುವುದಿಲ್ಲ

ಎಂದು ಹೇಳುತ್ತಾರೆ. ಬಹುಶಃ ಹೀಗಾಗುವುದಕ್ಕೆ ಕಾರಣ ಅವರು ದೇವರ ಮೇಲೆ ಇಟ್ಟಿರುವ ನಂಬಿಕೆ ಹಾಗು ದೇವರ ಹಿಂದೆ ಹೋದರೆ ಕಾಲು ಸುಡುವುದಿಲ್ಲ ಎಂಬ ಮಾನಸಿಕ ಸ್ಥೈರ್ಯ"ದಿಂದ ಈ ಆಚರಣೆ ಅಸ್ಥಿತ್ವದಲ್ಲುಳಿಯಲು ಸಾಧ್ಯವಾಯಿತೆನ್ನಬಹುದು.[೮]

ತಾಲ್ಲೂಕಿನ ಏಕಾಶಿಪುರದ ಕರಗಮ್ಮನ ಹಬ್ಬದಲ್ಲೂ ಕೂಡಾ ಕೊಂಡ ಹಾಯುವ ಪ್ರಾರಂಭದಲ್ಲಿ ಕೊಂಡದ ಮುಂದೆ ಕುರಿ ಅಥವಾ ಮೇಕೆಯನ್ನು ಬಲಿಕೊಡುವರು. ಆಗ ದೇವತೆಯ ಗಂಡ ಸತ್ತಂತೆ ಎಂಬುದಾಗಿ ಭಾವಿಸುವರು. ಕೊಂಡಕ್ಕೆ ಮೊದಲು ಆರತಿಯನ್ನು ಬೆಳಗಬೇಕೆಂದೂ, ನಂತರ ಉಳಿದವರು ಕೊಂಡ ಹಾಯುವ ನಿಯಮವಿದೆ. ದೇವತೆ ಮಡಿಲಕ್ಕಿಯನ್ನು ಕಟ್ಟಿಸಿಕೊಂಡು ಅಗ್ನಿ ಪ್ರವೇಶ ಮಾಡುತ್ತದೆ. ಈ ಕೊಂಡಕ್ಕೆ ಹರಳು ಮತ್ತು ಎಳ್ಳನ್ನು ಹಾಕುವರು. ಒಟ್ಟಾರೆ ಬೆಂಕಿಯ ಈ ನಡಿಗೆ ಪವಾಡ ಸದೃಶ ಎಂದು ಭಕ್ತರನ್ನು, ದೈವವನ್ನು ಪರೀಕ್ಷಿಸುವ ಸಾಧನ. ಇದರಿಂದಾಗಿ ದೇವತೆಯ ಮೇಲಿನ ಭಕ್ತಿ ಅಧಿಕಗೊಂಡು, ಕೊಂಡ ಹಾಯಲು ದೈವೀಶಕ್ತಿಯೇ ಕಾರಣವೆಂದು ಜನರು ನಂಬುತ್ತಾರೆ. ಕೊಂಡದಲ್ಲಿ ಹಾಯುವಾಗ ಸುಡದಿರುವುದೇಕೆ ಎಂಬುದಕ್ಕೆ ಕಾರಣಗಳನ್ನು ನೀಡಬಹುದು. ಸಾಮಾನ್ಯವಾಗಿ ಪಾದದ ತಳಭಾಗದ ಚರ್ಮಕಣಗಳ ಉಷ್ಣತೆಗಿಂತ ಚರ್ಮದ ಮೇಲ್ಪದರದ ಉಷ್ಣತೆ ಕಡಿಮೆಯಾಗಿರುತ್ತದೆ. ತುಂಬಾ ಕಾದಿರುವ ವಸ್ತು ಬಹುಹೊತ್ತು ಆ ಭಾಗಕ್ಕೆ ಸ್ಪರ್ಶಗೊಂಡರೆ ಅದರ ಕಾವು ಏರುತ್ತದೆ. ಕಾವು ಚರ್ಮದ ಮೇಲ್ಭಾಗದಿಂದ ಒಳಕ್ಕೆ ಆಳದ ಜೀವಕೋಶಗಳಿಗೆ ಹರಿದು ಅದರ ಕಾವನ್ನು ಏರಿಸುತ್ತದೆ. ಸಾಮಾನ್ಯವಾಗಿ ೫೦ ಸಿಸಿಯಷ್ಟು ತಾಪ ಪಡೆದಾಗ ಚರ್ಮ ಸುಡುತ್ತದೆ. ಆಳದ ಜೀವಕಣಗಳಿಂದ ಕೋಶದ್ರವದ ಹೊರಕ್ಕೆ ಜಿನುಗಿ ಸುಟ್ಟು ಸತ್ತ ಚರ್ಮದ ತಳದಲ್ಲಿ ಶೇಖರಗೊಂಡು ಬೊಬ್ಬೆಗಳಾಗುತ್ತವೆ. ಈ ರೀತಿಯ ಸುಡುವಿಕೆ, ತಪ್ತ ಅನಿಲಗಳಿಂದಲೂ ಕುದಿಯುವ ದ್ರವ್ಯಗಳಿಂದಲೂ, ಕಾದ ಲೋಹಗಳ ಸಂಪರ್ಕದಿಂದಲೂ ಆಗಬಹುದು. ಶರೀರವಿಜ್ಞಾನ ನಿಯಮದಂತೆ ಉಷ್ಣಚೋದಕವು ಎಷ್ಟೆ ಬಿಸಿಯಾಗಿದ್ದರೂ, ಕೊಂಡ, ನಿರ್ದಿಷ್ಟ ಅವಶ್ಯ ಅವಧಿಯವರಗೆ ಪ್ರಭಾವ ಬೀರಿದರೆ, ಮಾತ್ರ ಸುಡುವಿಕೆ ಉಂಟಾಗುವುದು. ಕೊಂಡ ಹಾಯುವಾಗ ಸುಟ್ಟ ಗಾಯಗಳಾಗದಿರಲು ಕಾರಣವೆಂದರೆ ಉಷ್ಣ ಚೋದಕಗಳಾದ ಕೆಂಡಗಳು ಸುಡುವಿಕೆಯನ್ನುಂಟು ಮಾಡಲು ಬೇಕಾದ ಅವಶ್ಯ ಅವಧಿಗಿಂತ ಕಡಿಮೆ ಕಾಲದಲ್ಲಿ ಶರೀರ ಸಂಪರ್ಕವನ್ನು ಹೊಂದುವುದು ಎಂದು ವೈಜ್ಞಾನಿಕ ಸತ್ಯವನ್ನು ಹೇಳುತ್ತಾರೆ.[೯]

**ಬಲಿ ಆಚರಣೆ**

ದೇವತೆಗಳಿಗೆ ಬಲಿ ಕೊಡುವುದು ನಮ್ಮ ತಾಲ್ಲೂಕಿನ ಒಂದು ಪ್ರಧಾನವಾದ ಆಚರಣೆಯಾಗಿದೆ. ಇಲ್ಲಿ ದೇವತೆಗಳನ್ನು ಮೆರವಣಿಗೆ ತಂದು ಪೂಜೆ ಮಾಡಿಸಿ, ಬಲಿಕೊಡುವುದು, ಕೊಂಡ ಹಾಯುವುದಕ್ಕೆ ಮುಂಚಿತವಾಗಿ ಕುರಿ, ಮೇಕೆ, ಕೋಳಿಗಳನ್ನು ಬಲಿ ಕೊಡುವ ಸಂಪ್ರದಾಯ ಸಾಮಾನ್ಯವಾಗಿದೆ.

ಹಿಂದೆ ಕೋಣವನ್ನು ಬಲಿ ಕೊಡುವುದು ಪ್ರಧಾನವಾದ ಆಚರಣೆಯಾಗಿತ್ತು. ಆದರೆ ಇತ್ತೀಚೆಗೆ ಕೋಣವನ್ನು ಬಲಿ ಕೊಡುವುದು ಕಡಿಮೆ ಆಗಿದೆ. ಬಲಿ ಕೊಡುವ ಪ್ರಾಣಿಗಳ ಕೊರಳಿಗೆ ಹೂವಿನ ಹಾರವನ್ನು ಹಾಕಿ ಅರಿಶಿನ, ಕುಂಕುಮ ಇಟ್ಟು ತಲೆಯ ಮೇಲೆ ನೀರನ್ನು ಚುಮುಕಿಸುತ್ತಾರೆ. ಬಲಿಪಶು ತಲೆ ನಂತರ ದೈವ ಅಪ್ಪಣೆ ನೀಡಿತು ಎಂದು ಭಾವಿಸಿ, ನಂತರ ಕಡಿಯುತ್ತಾರೆ. ದೊಡ್ಡಬಳ್ಳಾಪುರದ ಕಾಡತಿಪ್ಪೂರು ಗ್ರಾಮದಲ್ಲಿ ಕೋಣವನ್ನು ಬಲಿಕೊಡುವ ಸಂಪ್ರದಾಯವನ್ನು ಇಂದಿಗೂ ಕಾಣಬಹುದು. ನಗರದ ಮದ್ದೂರಮ್ಮನ ಹಬ್ಬದಲ್ಲಿ ಪಟ್ಟದ ಕೋಣವನ್ನು ಬಲಿಕೊಡುತ್ತಾರೆ. ಬಲಿಯನ್ನು ಕಡಿಯುವ ವ್ಯಕ್ತಿ ಕೆಳವರ್ಗಕ್ಕೆ ಸೇರಿದವನಾಗಿರುತ್ತಾನೆ. ಆ ವ್ಯಕ್ತಿಯನ್ನು 'ಬೇಡರ ಕನ್ನಯ್ಯ' ಎಂಬ ಹೆಸರಿನಿಂದ ಕರೆಯುವರು. ಕೋಣನನ್ನು ಕಡಿದು ಅದರ ಬಾಯಿಗೆ ಬಲಗಾಲನ್ನು ಇಡುವರು. ನಂತರ ತಲೆಯ ಮೇಲೆ ಅದರ ಕೊಬ್ಬಿನಿಂದ ದೀಪಹಚ್ಚುತ್ತಾರೆ. ನಂತರ ಕುರಿ, ಕೋಳಿಗಳ ಬಲಿ ಆಗುತ್ತದೆ. ಈ ರೀತಿಯ ಒಂದು ಸಂಪ್ರದಾಯ ಹಾದ್ರಿಪುರ, ಕುರುವಿಗೆರೆ, ಗಂಟಿಗಾನಹಳ್ಳಿ, ರಾಜಘಟ್ಟ, ರಾಮೇಶ್ವರಗಳಲ್ಲಿ ಕಂಡುಬರುತ್ತದೆ. ನಾಗರೀಕತೆ ಹಾಗು ಸಂಸ್ಕೃತೀಕರಣದ ಪ್ರಭಾವದಿಂದಾಗಿ ಬಲಿ ಕಡಿಮೆ ಆಗುತ್ತಿದೆ ಎನ್ನಬಹುದು. ಆದರೆ ಕೆಲವು ಕಡೆ ವ್ಯಕ್ತಿಗಳ ಅಭಿರುಚಿಗೆ ತಕ್ಕಂತೆ ಇನ್ನೂ ಈ ಆಚರಣೆ ಅಸ್ತಿತ್ವದಲ್ಲಿದೆ.

**ಗಾವು ಸಿಗಿಯುವುದು**

ಇದೊಂದು ಅಮಾನವೀಯವಾದ ಆಚರಣೆ ಎಂದರೆ ತಪ್ಪಾಗುವುದಿಲ್ಲ. ಗ್ರಾಮದೇವತೆಯ ಹಬ್ಬಕ್ಕೆ ಗಾವು ಸಿಗಿಯಲು ಕಪ್ಪು ಬಣ್ಣದ ಕುರಿಮರಿಯನ್ನು ಆಯ್ಕೆ ಮಾಡಿ ಅದನ್ನು ಮನುಷ್ಯನೊಬ್ಬ ಹಲ್ಲುಗಳಿಂದ ಸಿಗಿದು ಅದರ ರಕ್ತವನ್ನು ಕುಡಿದು ಮಾಂಸ ತಿನ್ನುವುದೇ ಈ ಆಚರಣೆಯ ಪ್ರಧಾನವಾದ ಕ್ರಿಯೆ, ಗಾವನ್ನು ಸಿಗಿಯುವ ಕ್ರಿಯೆ. ಆತನಿಗೆ ಬಂದ ವಂಶಪಾರಂಪರ್ಯ ಹಕ್ಕು. ಕುರಿಮರಿಯನ್ನು ಹಲ್ಲಿನಿಂದ ಸಿಗಿಯುವಾಗ ದೈವವು ಗಾವು ಸಿಗಿಯುವ ವ್ಯಕ್ತಿಯ ಮೈಮೇಲೆ ಬಂದಿದೆ ಎಂಬುದಾಗಿ ಅಲ್ಲಿ ನೆರೆದಿದ್ದ ಭಕ್ತ ಸಮೂಹ ಭಾವಿಸುತ್ತದೆ. "ಗಾವು ಸಿಗಿಯುವುದಕ್ಕೆ ಮೂರು ದಿನ ಮುಂಚಿತವಾಗಿ ಗಾವು ಸಿಗಿಯುವ ವ್ಯಕ್ತಿ ಉಪವಾಸವಿದ್ದು, ದಿನಕ್ಕೆ ಮೂರು ಏಲಕ್ಕಿಯನ್ನು ತಿನ್ನಬೇಕೆಂಬ ನಿಯಮವಿದೆ. ಆ ಸಂದರ್ಭದಲ್ಲಿ ಅಂಟು ಮುಂಟು ಸೋಕುವಂತಿಲ್ಲ. ಈ ಮೂರು ದಿನದ ಅವಧಿಯಲ್ಲಿ ಹೆಂಡತಿಯಿಂದ ದೂರವಿದ್ದು, ಮಡಿಯಿಂದ ದೇವರಿಗೆ ಭಕ್ತಿಯಿಂದ ನಡೆದು ಕೊಳ್ಳುತ್ತಾನೆ. ಮನಃಶಾಸ್ತ್ರೀಯ ದೃಷ್ಟಿಯಿಂದ ನೋಡಿದಾಗ ವ್ಯಕ್ತಿ ಉಪವಾಸವಿದ್ದಾಗ ಅವನಿಗೆ ರೋಷ, ಅವೇಶ ಹೆಚ್ಚಾಗುತ್ತದೆ. ಆ ವೇಳೆಯಲ್ಲಿ ಏನು ಸಿಕ್ಕಿದರೂ ತಿಂದುಬಿಡುವಷ್ಟು ಕೆಚ್ಚು ಇರುತ್ತದೆ. ಬಹುಶಃ ಈ ಹಿನ್ನೆಲೆಯಲ್ಲಿ ಗಾವು ಸಿಗಿಯುವ ವ್ಯಕ್ತಿಯ ಶಕ್ತಿ ಸಂಚಯನಕ್ಕಾಗಿಯೇ ಉಪವಾಸವಿರುವ ನಿಯಮವನ್ನು ಅನುಸರಿಸಿಕೊಂಡು ಬಂದಿರಬೇಕು.[೧೦] ಈ ಮಾತನ್ನು ನಾವು ಒಪ್ಪ ಬಹುದಾದರೂ ಎಲ್ಲಾ

ಸಂದರ್ಭದಲ್ಲೂ ಅನ್ವಯಿಸಲು ಸಾಧ್ಯವಿಲ್ಲ. ಏಕೆಂದರೆ ಉಪವಾಸವು ಯಾವುದೇ ಧಾರ್ಮಿಕ ಕ್ರಿಯೆಯನ್ನು ಆಚರಿಸುವ ಮುನ್ನ ಅನುಸರಿಸಬೇಕಾದ ಒಂದು ನಿಯಮವೆಂದು ಭಾವಿಸುವುದು ಸೂಕ್ತವಾಗುತ್ತದೆ. ಕುರುವಿಗೆರೆಯ ಮದ್ದೂರಮ್ಮ ನಗರದ ದೊಡ್ಡಮ್ಮನ ಹಬ್ಬದಲ್ಲಿ ದೇವರು ಮೈದುಂಬಿ ಪೂಜಾರಿ ಒಂದು ಕುರಿಮರಿಯ ಕುತ್ತಿಗೆಯನ್ನು ಹಲ್ಲುಗಳಿಂದ ಸಿಗಿದು ಸಾಯಿಸಿ ರಕ್ತವನ್ನು ಕುಡಿಯುವುದನ್ನು ಕಾಣುತ್ತೇವೆ. ಯಾವುದೇ ಒಂದು ಆಯುಧವಿಲ್ಲದೆ ಪ್ರಾಣಿಯನ್ನು ಕೈಯಲ್ಲಿ ಹಿಡಿದು ಹಲ್ಲಿನಿಂದ ಕಚ್ಚಿ ತಿನ್ನುವ ಕ್ರಿಯೆಯು ಪ್ರಾಚೀನ ಕಾಲದಲ್ಲಿದ್ದ ಬೇಟೆ ಸಂಸ್ಕೃತಿಯ ಅವಶೇಷವಾಗಿ ಆಚರಣೆಯ ರೂಪದಲ್ಲಿ ಉಳಿದು ಬಂದಿರಬೇಕು.

**ಆರತಿ ಬೆಳಗುವುದು**

ಮೆರವಣಿಗೆಯಲ್ಲಿ ಬರುವ ಹೆಣ್ಣು ಮಕ್ಕಳು ಬುದ್ದಿ ಅಥವಾ ತಟ್ಟೆಯಲ್ಲಿ ತಂಬಿಟ್ಟನ್ನು ಮಾಡಿಟ್ಟುಕೊಂಡು ಅದರ ಮೇಲೆ ದೀಪವನ್ನು ಹಚ್ಚಿ ತಲೆಯ ಮೇಲೆ ಹೊತ್ತು ಸಾಗುವರು. ತಂಬಿಟ್ಟಿದ್ದರೆ ಇದನ್ನು ತಂಬಿಟ್ಟಿನಾರತಿ ಎಂದೂ, ಬೆಲ್ಲ ಇದ್ದರೆ ಬೆಲ್ಲದಾರತಿ ಎಂದೂ, ದೀಪಗಳು ಮಾತ್ರ ಇದ್ದರೆ ದೀಪದಾರತಿ ಎಂದು ಕರೆಯುವರು. ಆರತಿಯ ಬುಟ್ಟಿಯಲ್ಲಿ ಹೊಂಬಾಳೆ, ಬೇವಿನಸೊಪ್ಪು, ಹೂವು ಇರುತ್ತದೆ. ಆರತಿಗಳನ್ನು ಮೆರವಣಿಗೆಯಲ್ಲಿ ತಂದು ದೇವರಿಗೆ ಬೆಳಗಿ ಹಿಂದಕ್ಕೆ ತೆಗೆದುಕೊಂಡು ಹೋಗುವರು. ದೇವರಿಗೆ ಆರತಿ ತರುವಾಗ ಮೊದಲು ಗ್ರಾಮದ ಮುಖಂಡನ ಮನೆಯ ಆರತಿಗಳು ಮೇಲ್ವರ್ಗ. ಮಧ್ಯಮವರ್ಗದವರ ಆರತಿಗಳು ನಂತರ ಕೆಳವರ್ಗದವರ ಆರತಿಗಳು ಬರುತ್ತವೆ. ಇದು ನಮ್ಮ ಸಮಾಜದಲ್ಲಿನ ಸಾಮಾಜಿಕ ಅಂತಸ್ತಿನ ಪರಿಪಾಲನೆ ಎಂದು ಹೇಳಬಹುದು.

**ಬಾಯಿಬೀಗ**

ಹರಕೆ ಹೊತ್ತವರು ತಾಮ್ರದ ತಂತಿಯಿಂದ ಎರಡೂ ಕೆನ್ನೆಯನ್ನು ತೂತು ಮಾಡಿಸಿಕೊಂಡು ಬಾಯಿಗೆ ಬೀಗ ಹಾಕಿಕೊಳ್ಳುವರು. ಸಾಮಾನ್ಯವಾಗಿ ಮಾರಮ್ಮನ ಹಬ್ಬಗಳಲ್ಲಿ ಬೆಳ್ಳಿಯ ತಂತಿಯನ್ನು ಹಾಕಿಸಿಕೊಳ್ಳುವರು. ಬಾಯಿಬೀಗ ಹಾಕಿಸಿಕೊಂಡಾಗ ಮಾತನಾಡಲು ಸಾಧ್ಯವಿಲ್ಲ. ಬಾಯಿಬೀಗ ಹಾಕಿ ತೆಗೆಯುವ ಕೆಲಸವನ್ನು ನಿಗಧಿತ ಕುಟುಂಬಗಳಿಂದಲೇ ಆಗಬೇಕು. ಇದಕ್ಕೆ ಅನೇಕ ರೀತಿಯ ಕಾಣಿಕೆಯನ್ನು ನೀಡುತ್ತಾರೆ.

**ಉರುಳು ಸೇವೆ**

ಹರಕೆ ಹೊತ್ತವರು ಸ್ನಾನ ಮಾಡಿ, ಮಡಿಬಟ್ಟೆ ಉಟ್ಟು ದೇವರು ಬರುವಾಗ ಅಡ್ಡವಾಗಿ ಮಲಗುವರು. ಆಗ ದೇವರನ್ನು ಹೊತ್ತ ಪೂಜಾರಿ ಉರುಳು ಸೇವೆ ಮಾಡುವವರನ್ನು ದಾಟುವರು.

ಇನ್ನೂ ಕೆಲವರು ದೇವಾಲಯದ ಸುತ್ತ ಉರುಳುವರು. ಉರುಳು ಸೇವೆ ಆದ ನಂತರ ದೇವರಿಗೆ ಪೂಜೆ ಮಾಡಿಸುವ ಸಂಪ್ರದಾಯವನ್ನು ಕಾಣಬಹುದು.

ಶ್ರೀ ಘಾಟಿಸುಬ್ರಹ್ಮಣ್ಯ ಕ್ಷೇತ್ರ ಬೆಂಗಳೂರಿನಿಂದ ಐವತ್ತನಾಲ್ಕು ಕಿ.ಮೀ ಮತ್ತು ತಾಲ್ಲೂಕು ಕೇಂದ್ರದಿಂದ ಹದಿನಾಲ್ಕು ಕಿ.ಮೀ. ದೂರದಲ್ಲಿದೆ. ಬೆಂಗಳೂರು ಗುಂತಕಲ್ಲು ರೈಲ್ವೆ ಮಾರ್ಗದಲ್ಲಿ ಬರುವ ಮಾಕಳಿದುರ್ಗದಲ್ಲಿ ಇಳಿದರೆ ಪೂರ್ವಕ್ಕೆ ಎರಡು ಮೈಲಿ ಅಂತರದಲ್ಲಿದೆ. ಈ ದೇವಾಲಯಕ್ಕೆ ಸುಮಾರು ಆರುನೂರು ವರ್ಷಗಳಷ್ಟು ಹಿಂದಿನ ಇತಿಹಾಸವಿದೆ. ಸೊಂಡೂರು ಸಂಸ್ಥಾನದ ರಾಜರು ಅತ್ಯಂತ ಸುಖ ಸಂತೋಷ ಸಂಭ್ರಮಗಳಿಂದ ರಾಜ್ಯವಾಳುತ್ತಿದ್ದರು. ಆಗ ಮಹಾರಾಷ್ಟ್ರದ ಆಳ್ವಿಕೆಯ ಕಾಲವಾಗಿತ್ತು. ಆಗ ದೊಡ್ಡಬಳ್ಳಾಪುರವನ್ನು ಮಲ್ಲಬೈರೇಗೌಡನೆಂಬ ಪಾಳೇಯಗಾರನು ಆಳುತ್ತಿದ್ದನು. ಬೆಂಗಳೂರಿನ ಯಶವಂತಪುರದವರೆಗೂ ಮರಾಠರ ರಾಜ್ಯ ಹಬ್ಬಿತ್ತು. ಈ ಸರಹದ್ದೆಲ್ಲಾ ಬಳ್ಳಾರಿ ಜಿಲ್ಲೆ ಸೊಂಡೂರು ಸಂಸ್ಥಾನದ ಘೋರ್ಪಡೆ ವಂಶದ ಪೂರ್ವಿಕರ ಆಳ್ವಿಕೆಯಲ್ಲಿತ್ತು. ಅವರು ದೈವಭಕ್ತರು, ಆಚಾರವಂತರು, ವಿಚಾರವಂತರೂ ಆಗಿದ್ದರು. ಅವರ ಮನೆದೇವರು ಶ್ರೀ ಸುಬ್ರಹ್ಮಣ್ಯಸ್ವಾಮಿ ಆಗಿದ್ದನು. ಹೀಗೆ ಸೊಂಡೂರು ಸಂಸ್ಥಾನದ ರಾಜರು ಅತ್ಯಂತ ಸುಖ ಸಂತೋಷಗಳಿಂದ, ಸಂಭ್ರಮಗಳಿಂದ ರಾಜ್ಯವಾಳುತ್ತಿದ್ದರು.

ಹೀಗಿರುವಾಗ ಒಬ್ಬ ವೀಳೆದೆಲೆಯ ವರ್ತಕನು ತನ್ನ ಸರಕುಗಳನ್ನು ಮಾರಾಟ ಮಾಡಲು ಬೇರೆ ಬೇರೆ ಗ್ರಾಮಗಳಿಗೆ ಹೋಗಬೇಕಾಗಿತ್ತು. ಹೋಗುವಾಗ ಬರುವಾಗಲೆಲ್ಲ ಈ ಕ್ಷೇತ್ರದಲ್ಲಿ ತಂಗುತ್ತಿದ್ದನು. ಅವನ ವಸತಿಯು ಈಗಿನ ದೇವಾಲಯದ ಗರ್ಭಗುಡಿಯ ಬಲಭಾಗದಲ್ಲಿ ಏಳು ಹೆಡೆಗಳು ಉದ್ಭವಿಸಿರುವ ದೇವರ ಶಿಲೆ. ಆತ ಕುಮಾರತೀರ್ಥದ ಬಳಿ ಊಟ ಮುಗಿಸಿ ಶಿಲೆಯ ಮೇಲೆ ಬಂದು ಮಲಗುತ್ತಿದ್ದನು. ನೆರಳಾಗಿರುವ ಮರದಡಿಯ ಈ ಶಿಲೆಯ ಮೇಲೆ ಭಾರವಾಗಿ ಮಲಗಿರುವೆ. ಏಳು, ಏಳು ಎಂದು ಶಬ್ದವಾಗುತ್ತಿತ್ತು. ಆದರೆ ಕನಸಿನಲ್ಲಿ ಮಾತ್ರ ಏನೂ ಕಾಣುತ್ತಿರಲಿಲ್ಲ. ಯಾವಾಗಲೂ ಈ ರೀತಿ ಶಬ್ದ ಆಗುತ್ತಿದ್ದರಿಂದ ಅದಕ್ಕೆ ಕಿವಿಗೊಡಲಿಲ್ಲ. ಹೀಗೆ ದಿನಗಳು ಕಳೆದವು. ಒಂದು ದಿನ ಸ್ವಾಮಿಯು ಸ್ವಪ್ನದಲ್ಲಿ ತನ್ನ ನಿಜರೂಪದಲ್ಲಿ ದರ್ಶನಕೊಟ್ಟು ಇಲ್ಲೇ ಸಮೀಪದಲ್ಲೇ ನಾನು ವಾಸವಾಗಿರುವೆನು. ನನ್ನ ಮೂಲಸ್ಥಾನವು ೨೦ ಗಜಾಂತರದಲ್ಲಿರುವುದು. ನನ್ನ ಭಕ್ತರು ಸೊಂಡೂರಿನಲ್ಲಿರುವರು. ನಾಳೆ ಪ್ರಾತಃ ಕಾಲದಲ್ಲಿ ನಿನ್ನ ಸಹಾಯಕ್ಕೆ ಒಬ್ಬ ವಿಪ್ರನು ಬರುವನು. ಅವನ ಜೊತೆ ಹೋಗಿ ರಾಜನಿಗೆ ನಾನು ಇಲ್ಲಿರುವ ವಿಚಾರವನ್ನು ತಿಳಿಸು. ಆತನು ಬಂದು ಗುಡಿ ಗೋಪುರಗಳನ್ನು ನಿರ್ಮಿಸಿ ಪೂಜಾ ಕೈಂಕರ್ಯಗಳಿಗೆ ಅನುಕೂಲ ಮಾಡುವನು. ನಿನಗೆ ಈ ಜೀವನದ ನಂತರದಲ್ಲಿ ಮುಕ್ತಿಯನ್ನು ಕರುಣಿಸುವೆನು ಎಂದು ಹೇಳಿ ಸ್ವಾಮಿಯು ಅಂತರ್ಧಾನನಾದನು. ಆ ವರ್ತಕನಿಗೆ ಭಯವಾಗಿ ಎಚ್ಚರವಾಗಿ ಕಣ್ಣು ತೆರೆಯಲು ಭಾಸ್ಕರನು ಪೂರ್ವದಲ್ಲಿ ಆಗ ತಾನೆ

ಮೂಡುತ್ತಿದ್ದನು. ಸ್ವಲ್ಪ ಸಮಯದ ನಂತರ ಕುಮಾರ ತೀರ್ಥದಲ್ಲಿ ವರ್ತಕನು ಮುಖಮಾರ್ಜನ ಮಾಡಿ ದಾರಿಯಲ್ಲಿ ಹೋಗುತ್ತಿರುವಾಗ ವಿಪ್ರನು ಕಣ್ಣಿಗೆ ಕಾಣಿಸಿದನು. ತಕ್ಷಣವೇ ವರ್ತಕನಿಗೆ ಸ್ವಪ್ನದ ನೆನಪು ಬಂದು ಬ್ರಾಹ್ಮಣನ ಬಳಿ ಎಲ್ಲಾ ವಿಚಾರವನ್ನೂ ತಿಳಿಸಿದನು. ಬ್ರಾಹ್ಮಣನು ಶಿಲೆಯ ಬಳಿ ಬರಲು ಸ್ವಾಮಿಯು ಸರ್ಪರೂಪ ದರ್ಶನ ಕೊಟ್ಟು ಮಾಯವಾದನು. ನಂತರ ಬ್ರಾಹ್ಮಣನು ಸಾಂಗವಾಗಿ ವರ್ತಕರಿಗೆ ಎಲ್ಲಾ ವಿಚಾರ ತಿಳಿಸಿ, ಇಬ್ಬರೂ ಸೊಂಡೂರಿಗೆ ಪ್ರಯಾಣ ಬೆಳೆಸಿದರು.

ಒಂದು ದಿನ ಬೆಳಗಿನ ಜಾವ ಆ ಬ್ರಾಹ್ಮಣ ಮತ್ತು ವರ್ತಕನು ರಾಜದರ್ಶನಾರ್ಥವಾಗಿ ಬಂದು ಹೇಳಿ ಕಳುಹಿಸಿದರು. ರಾಜನು ಅವರಿಗೆ ಸಂದರ್ಶನಕ್ಕೆ ವೇಳೆಯನ್ನು ನಿಗಧಿಮಾಡಿ, ಬರಲು ಹೇಳಿದನು. ಅಂತೆಯೇ ಇಬ್ಬರೂ ರಾಜನನ್ನು ಸಂದರ್ಶಿಸಿದನು. ಆಗ ರಾಜನು ತಮ್ಮ ಪೂರ್ವಾಪರವನ್ನು ಕೇಳಿದಾಗ, ನಾವು ಬೆಂಗಳೂರಿನ ಬಳಿ ದೊಡ್ಡಬಳ್ಳಾಪುರ ಹತ್ತಿಲದ ಹಳ್ಳಿಯ ಕಡೆಯಿಂದ ಬಂದೆವೆಂದೂ, ಕ್ಷೀರಸಾಗರಪುರದ (ಈಗಿನ ಪಾಲ್‌ಪಾಲ್ ದಿನ್ನೆ) ಸಮೀಪದ ಒಂದು ಮೈಲಿ ದೂರದಲ್ಲಿರುವ ಕಾಡಿನಲ್ಲಿ ತಮ್ಮ ಕುಲದೇವರಾದ ಕುಮಾರಸ್ವಾಮಿಯು ಉದ್ಭವಿಸಿರುವನೆಂದೂ ನಮಗೆ ಆತನು ಸ್ವಪ್ನದಲ್ಲಿ ದರ್ಶನಕೊಟ್ಟು "ನನ್ನ ಭಕ್ತರು ಸೊಂಡೂರು ಸಂಸ್ಥಾನದವರು, ಆದ್ದರಿಂದ ಅವರಿಗೆ ಪೂಜೆ ತಿಳಿಸಿ, ಅವರು ಬಂದು ಗುಡಿ ಗೋಪುಗಳನ್ನು ನಿರ್ಮಿಸಲು ಅನುಕೂಲ ಮಾಡಿಕೊಡುವರು. ಪೂಜೆ ಪುನಸ್ಕಾರಾದಿಗಳನ್ನು ನಡೆಸುವಂತೆ ಏರ್ಪಾಡು ಮಾಡಿಕೊಡುವರು. ನೀವು ಈ ಕೆಲಸವನ್ನು ಮಾಡಬೇಕೆಂದು ಸ್ವಾಮಿಯು ಆಜ್ಞಾಪಿಸಿದನು. ನಮಗೆ ಎಚ್ಚರವಾದ ನಂತರ ಅಲ್ಲಿರುವ ಶಿಲೆಯಲ್ಲಿ ಸರ್ಪರೂಪದಿಂದ ದರ್ಶನ ನೀಡಿ, ಸ್ವಾಮಿ ಇರುವ ವಿಚಾರವನ್ನು ತಿಳಿಸಿರುವೆವು. ತಾವು ದಯವಿಟ್ಟು ಆ ಸ್ಥಳಕ್ಕೆ ಆಗಮಿಸಬೇಕೆಂದು ಬೇಡಿಕೊಳ್ಳುತ್ತೇವೆ ಎಂಬುದಾಗಿ ಹೇಳಲು ಆಗ ರಾಜನು ನೋಡಿ ನಾವು ಈ ರಾಜಕಾರ್ಯಗಳನ್ನು ಬಿಟ್ಟು ಈ ಸಣ್ಣ ಕೆಲಸಕ್ಕೆ ಅಷ್ಟು ದೂರ ಬರುವುದಕ್ಕೆ ಸಾಧ್ಯವಿಲ್ಲ. ತಮಗೆ ಆ ಕಾರ್ಯಕ್ಕೆ ಬೇಕಾದಷ್ಟು ಹಣ, ಸಲಕರಣೆಗಳನ್ನು ಕೊಡುವೆ ನೀವೇ ಮಾಡಿಬಿಡಿ ಎಂದು ಹೇಳುತ್ತಾರೆ. ರಾಜನ ಈ ಮಾತಿಗೆ ವಿಪ್ರ ಹಾಗೂ ವರ್ತಕ ನಾವೇ ಮಾಡುವ ಹಾಗಿದ್ದಲ್ಲಿ ನಮ್ಮ ಬಳಿ ವಸ್ತು ಸಲಕರಣೆಗಳಿಲ್ಲವೇ? ಶ್ರೀಸ್ವಾಮಿಯ ಇಚ್ಛೆಯು ನಿಮ್ಮಿಂದಲೇ ಆಗಬೇಕೆಂದಿರುವಾಗ ಅದು ನಮ್ಮಿಂದ ಹೇಗೆ ಸಾಧ್ಯ? ಬರುವ ಹಾಗಿದ್ದರೆ ಬನ್ನಿ ಇಲ್ಲದಿದ್ದರೆ ಅಪ್ಪಣೆ ಕೊಡಿ, ನಾವು ಹೊರಡುವೆವು ಎಂದು ಹೇಳಿ ಅಪ್ಪಣೆ ಪಡೆದುಕೊಂಡು ಹೊರಟರು. ಬರುವಾಗ ಒಂದೇ ಸಮನೆ ನಡೆದು ಬಂದುದರಿಂದ ಆಯಾಸ ಪರಿಹಾರಾರ್ಥವಾಗಿ ಆ ರಾತ್ರಿಯನ್ನು ಕಳೆಯಲು ಆ ಊರಿನಲ್ಲಿ ಒಬ್ಬ ವಿಪ್ರನ ಮನೆಯಲ್ಲಿ ತಂಗಿದರು.

ಅದೇ ದಿನ ರಾತ್ರಿ ಮಹಾರಾಜರಿಗೆ ಸ್ವಾಮಿಯು ಬಹು ಉಗ್ರವಾಗಿ ಕಾಣಿಸಿ "ನೀನು ನನ್ನನ್ನು ತಿರಸ್ಕರಿಸುತ್ತಿದ್ದಿಯೇ, ನಿನ್ನ ಇಡೀ ರಾಜ್ಯಕೋಶ ಪುತ್ರ ಮಿತ್ರ ಕಳತ್ರಾದಿಗಳೆಲ್ಲವೂ ಕಷ್ಟಕ್ಕೆ

ಸಿಕ್ಕಿ ಹಾಳಾಗುವುದು" ಎಂದು ಹೇಳುತ್ತಾನೆ. ಮಹಾರಾಜನಿಗೆ ಕೂಡಲೇ ಎಚ್ಚರವಾಗಿ ಸ್ವಪ್ನವನ್ನು ಕುರಿತು ಭಯಗ್ರಸ್ತನಾಗಿ ಚಿಂತಿಸುತ್ತಾ ಸ್ವಾಮಿಯ ಬಳಿ ಕ್ಷಮಾಪಣೆ ಕೇಳಿಕೊಂಡನು.

ನಂತರ ಮಾರನೆಯ ದಿನ ಪ್ರಾತಃಕಾಲದಲ್ಲಿ ರಾಜಭಟರನ್ನು ಕಳುಹಿಸಿ ಆ ವರ್ತಕ ಮತ್ತು ಬ್ರಾಹ್ಮಣರನ್ನು ಪತ್ತೆ ಹಚ್ಚಿ ತಂದು ಅಮೂಲಾಗ್ರವಾಗಿ ವಿಚಾರ ತಿಳಿಸಿ, ನಾವು ಕೂಡ ನಿಮ್ಮ ಸಂಗಡ ಪ್ರಯಾಣಕ್ಕೆ ಸಿದ್ಧರಾಗಿ ಬರುವೆವೆಂದು ತಿಳಿಸಿದರು. ಮಹಾರಾಜರ ಪರಿವಾರವು ಈ ಕ್ಷೇತ್ರವನ್ನು ತಲುಪುವ ವೇಳೆಗೆ, ಮಧ್ಯಾಹ್ನ ಮೂರು ಗಂಟೆಯಾಗಿತ್ತು. ಸ್ವಲ್ಪ ಹೊತ್ತು ಎಲ್ಲರೂ ಆಯಾಸ ಪರಿಹರಿಸಿಕೊಂಡು ನಂತರ ಶೋಧನೆಗೆ ತೊಡಗಿದರು. ಈ ಕ್ಷೇತ್ರದ ವಿಶೇಷವೆಂದರೆ ಯಾವ ಕಲ್ಲುಗಳನ್ನು ನೋಡಿದರೂ ಎಲ್ಲವೂ ಸರ್ಪಾಕೃತಿಯಿಂದಲೇ ಕಾಣುವವು. ಹಾಗಾಗಿ ಮೂಲ ಸ್ವಾಮಿಯದು ಯಾವ ಜಾಗವೆಂಬುದು ತಿಳಿಯದೇ ಎಲ್ಲರೂ ಮರಳಿ ಬಂದರು. ಸಂಜೆಯಾಗುತ್ತಿರುವಾಗಲೇ ಅಡುಗೆ ಮಾಡಲು ಪ್ರಾರಂಭಿಸಿ ದೊಡ್ಡ ಗುಂಡುಗಳನ್ನು ಸಣ್ಣ ಗುಂಡುಗಳನ್ನು ಜೋಡಿಸಿ ಬೆಂಕಿ ಹಚ್ಚಿ ಪದಾರ್ಥವನ್ನು ಬೇಯ ಹಾಕಿದರು. ನಂತರ ಪದಾರ್ಥವು ಬೆಂದಿರುವುದೇನೋ ಎಂದು ಮುಚ್ಚಿರುವ ತಟ್ಟೆಯನ್ನು ತೆಗೆದು ನೋಡಲು ಎಲ್ಲವೂ ರಕ್ತಮಯವಾಗಿ ಕಾಣಿಸಿತು. ಇದನ್ನು ಕಂಡು ಗಾಬರಿಯಾಗಿ ಕೂಡಲೇ ಮಹಾರಾಜರಿಗೆ ತಿಳಿಸಲು, ಅವರು ಬಂದು ವೀಕ್ಷಿಸಿ, ಇಲ್ಲೇ ಆ ಸ್ವಾಮಿಯು ಇರುವನೆಂದು ನಿಷ್ಕರ್ಷೆ ಮಾಡಿ ಸೂಕ್ತವಾಗಿ ಪರಿಶೀಲಿಸಲು ಹುತ್ತದ ಕೋವಿಗಳು ಕಂಡುಬಂದವು.

ಅದೇ ದಿನ ಸಂಜೆ ಮತ್ತೊಂದು ದೃಶ್ಯವನ್ನು ನೋಡತೊಡಗಿದರು. ಪಕ್ಕದ ಹಳ್ಳಿಯಾದ ಕ್ಷೀರ ಸಾಗರಪುರದಿಂದ ಪ್ರತಿದಿನ ಮೇಯಿಸಲು ಹಸುಗಳನ್ನು ಹೊಡೆದುಕೊಂಡು ಗೊಲ್ಲ ಜಾತಿಗೆ ಸೇರಿದ ಒಬ್ಬ ಹುಡುಗನು ಬರುತ್ತಿದ್ದನು. ಆ ಗುಂಪಿನಲ್ಲಿದ್ದ ಒಂದು ಹಸು ಮಾತ್ರ ಸಾಯಂಕಾಲ ವಾಪಸ್ಸು ಬರುವಾಗ, ಹುತ್ತದ ಬಳಿ ಬಂದು ತನ್ನ ಕೆಚ್ಚಲನ್ನು ಹುತ್ತಕ್ಕೆ ಸರಿಯಾಗಿ ಇಟ್ಟು ನಿಲ್ಲಲು ತನ್ನಷ್ಟಕ್ಕೆ ತಾನೇ ಧಾರಾಕಾರವಾಗಿ ಹಾಲು ಸುರಿಯುತ್ತಿತ್ತು. ಈ ರೀತಿಯಾಗಿ ಪ್ರತಿದಿನವೂ ನಡೆಯುತ್ತಿರಲು ಮನೆಯಲ್ಲಿ ಹುಡುಗನಿಗೆ ನೀನು ಹಾಲು ಕರೆದು ಕುಡಿಯುತ್ತೀಯ ಎಂದು ಬೈಯುವುದು, ಹೊಡೆಯುವುದು ನಡೆಯುತ್ತಿತ್ತು. ಗೊಲ್ಲರೂ ಕೂಡಾ ಅದೇ ದಿನವೇ ಹುಡುಗನನ್ನು ಪರೀಕ್ಷಿಸಲು ಬಂದಿದ್ದರು. ಮತ್ತು ಅದೇ ದೃಶ್ಯ ಸಂಜೆ ಕಂಡುಬಂದಿತು. ಇದನ್ನು ನೋಡಿದ ರಾಜಪರಿವಾರದವರೂ ಮಹಾರಾಜರೂ ನೋಡಿ ಆಶ್ಚರ್ಯವಾಗಿ ಸ್ವಾಮಿಯನ್ನು ಸ್ತೋತ್ರಮಾಡಿ ಆ ರಾತ್ರಿ ಭೋಜನಾದಿಗಳನ್ನು ಮುಗಿಸಿ ಮಲಗಿದರು. ಆ ರಾತ್ರಿ ರಾಜನಿಗೆ ಸ್ವಪ್ನದಲ್ಲಿ ಸ್ವಾಮಿಯು ಕಾಣಿಸಿಕೊಂಡು ತನ್ನ ಮೇಲಿರುವ ವಲ್ಮೀಕವನ್ನು ತೆಗೆ, ನಾನು ಸರ್ಪರೂಪದಲ್ಲಿ ಶಿಲಾಮೂರ್ತಿಯಾಗಿ ಲಕ್ಷ್ಮೀನರಸಿಂಹಸ್ವಾಮಿಯ ಸಮೇತವಾಗಿ ನೆಲೆಸಿದ್ದೇನೆ ಎಂದು ಹೇಳಿತು.

ಮಾರನೇ ದಿನ ಪ್ರಾತಃ ಕಾಲ ಗೊಲ್ಲರೊಡಗೂಡಿ ವಲ್ಮೀಕವನ್ನು ತೆಗೆಯಲು ಒಳಗೆ ಶಿಲಾರೂಪದಲ್ಲಿ ಲಕ್ಷ್ಮೀನರಸಿಂಹ ಸಮೇತನಾಗಿ ಸರ್ಪರೂಪದಲ್ಲಿರುವ ಸುಬ್ರಹ್ಮಣ್ಯ ಸ್ವಾಮಿಯನ್ನು ಕಂಡರು. ಎಲ್ಲರೂ ಪರಿವಾರದಿಂದೊಡಗೂಡಿ ಗರ್ಭಾಂಕಣವನ್ನು ಕಟ್ಟಿ ಕೆಲವು ಜಮೀನುಗಳನ್ನು ಸ್ವಾಮಿಗೆ ದಾನವಾಗಿ ಕೊಟ್ಟು ಅದೇ ವಿಪ್ರನನ್ನು ಅರ್ಚಕನನ್ನಾಗಿ ನೇಮಿಸಿ, ಪೂಜೆಗೆ ರಾಜರು ಅನುಕೂಲ ಒದಗಿಸಿದನು. ಆ ವಂಶಸ್ಥರೇ ಇಂದಿಗೂ ಶ್ರೀಯವರಿಗೆ ಅರ್ಚಕರಾಗಿ ಸೇವೆ ಸಲ್ಲಿಸುತ್ತಿರುವರು. ಪಕ್ಕದ ಹಳ್ಳಿಯ ಆ ಗೊಲ್ಲರ ವಂಶಸ್ತರೇ ಇಂದಿಗೂ ರಥೋತ್ಸವ ಕಾಲದಲ್ಲಿ ರಥ ಎಳೆಯುವುದು, ಕಟ್ಟುವುದು, ಉತ್ಸವಾದಿಗಳನ್ನು ಹೊರುವುದು ಮುಂತಾದ ಸೇವೆಗಳನ್ನು ಮಾಡುವರು. ಭಕ್ತಾದಿಗಳು ಅಂದಿನಿಂದ ಸ್ವಾಮಿಗೆ ವಾರಕ್ಕೊಂದು ಬಾರಿ ಬಂದು ಪೂಜೆ ಸಲ್ಲಿಸಿ ಹೋಗುತ್ತಿದ್ದರು. ಇವರು ಕ್ಷೇತ್ರಕ್ಕೆ ಐದು ಕಿ.ಮೀ. ದೂರದಲ್ಲಿರುವ ಸುಬ್ರಾಯ ನಾಗೇನಹಳ್ಳಿಯಿಂದ ಬರುತ್ತಿದ್ದರು. ಕ್ರಮೇಣ ದಿನ ಪೂಜೆಯು ಆಗಿ ಈಗ ಮೂರು ಹೊತ್ತು ದೀಪಾರಾಧನೆ ನಡೆಯುತ್ತಿರುವುದು. ಈಗ ಸ್ವಾಮಿಯು ಮುಂಭಾಗದಿಂದ ನೋಡಿದರೆ ಸುಬ್ರಹ್ಮಣ್ಯನಾಗಿಯೂ, ಹಿಂಭಾಗದಿಂದ ನೋಡಿದರೆ ಲಕ್ಷ್ಮೀ ನರಸಿಂಹಸ್ವಾಮಿಯು ಪಶ್ಚಿಮಾಭಿಮುಖವಾಗಿರುವುದರಿಂದ ಹಿಂಭಾಗದಲ್ಲಿ ದೊಡ್ಡ ಕನ್ನಡಿಯ ಮುಖಾಂತರ ಸ್ಪಷ್ಟ ದರ್ಶನವಾಗುವುದು.

ಘಾಟಿ ಸುಬ್ರಹ್ಮಣ್ಯ ಪ್ರಮುಖ ಯಾತ್ರಾಸ್ಥಳವಾಗಿದ್ದು ಘಟ್ಟಗಳ ಮಧ್ಯದಲ್ಲಿದೆ. ನಾಗದೇವತೆಯಾದ ವಾಸುಕಿ ಇಲ್ಲಿ ತಪಸ್ಸು ಮಾಡಿದನೆಂದು ಹೇಳಲಾಗುತ್ತಿದೆ. ಈ ದೇವಾಲಯ ಆಧುನಿಕ ಶೈಲಿಯಲ್ಲಿ ನಿರ್ಮಾಣಗೊಂಡಿದೆ. ಗರ್ಭಗೃಹ, ನವರಂಗವನ್ನು ಒಳಗೊಂಡಿದ್ದು, ನವರಂಗದಲ್ಲಿ ಸಾಧಾರಣ ಶೈಲಿಯ ನಾಲ್ಕು ಸ್ತಂಭಗಳಿವೆ. ಪ್ರದಕ್ಷಿಣಾ ಪಥವನ್ನು ಒಳಗೊಂಡಿದೆ. ದೇವಾಲಯದ ಮುಂಭಾಗದ ಗೋಪುರ ಆಕರ್ಷಕವಾಗಿದೆ. ದೇವಾಲಯದ ಹಿಂಭಾಗದಲ್ಲಿ ಕುಮಾರಧಾರಾ ಎಂಬ ಹೆಸರಿನ ಪುಷ್ಕರಣಿಯಿದೆ. ದೇವಾಲಯದ ಮುಂಭಾಗದಲ್ಲಿ ಅನೇಕ ಭಕ್ತಾದಿಗಳು ನಾಗರ ಪ್ರತಿಮೆಗಳನ್ನು ಪ್ರತಿಷ್ಠಾಪಿಸಿರುವರು. ಇಲ್ಲಿ ಒಂದು ಹನುಮಂತನ ದೇವಾಲಯವೂ ಇದೆ.

ಇಲ್ಲಿ ಪುಷ್ಯ ಷಷ್ಠಿಯಂದು ಬ್ರಹ್ಮರಥೋತ್ಸವ ನಡೆಯಲಿದೆ. ಅದರ ಅಂಗವಾಗಿ ಬಿದಿಗೆಯಿಂದ ಅಂಕುರಾರ್ಪಣ, ಧ್ವಜಾರೋಹಣ, ಮುಂತಾದ ಕಾರ್ಯಕ್ರಮಗಳು ಜರುಗುವವು. ಅಷ್ಟಮಿಯ ದಿನ ಶ್ರೀ ಸ್ವಾಮಿಗೆ ಅವಭೃತಸ್ನಾನವಾಗುವುದು. ಜಾತ್ರೆಯ ಅಂಗವಾಗಿ ಬಿದಿಗೆಯಿಂದ ತ್ರಯೋದಶಿಯವರೆಗೂ ಇಲ್ಲಿ ವಿವಿಧ ಉತ್ಸವಗಳು ಜರುಗುವವು. ಈ ಸಂದರ್ಭದಲ್ಲಿ ದೇವರನ್ನು ಹೂವಿನ ಅಲಂಕಾರದಿಂದ ಅಲಂಕೃತಗೊಳಿಸುವರು. ಇದೇ ದಿನಗಳಲ್ಲಿ ದೊಡ್ಡದಾಗಿ ದನಗಳ ಜಾತ್ರೆಯು ನಡೆಯುವುದು. ಜನವರಿ ತಿಂಗಳಲ್ಲಿ ನಡೆಯುವ ಈ ಜಾತ್ರೆ ಕರ್ನಾಟಕದಲ್ಲೇ ಸುಪ್ರಸಿದ್ಧವಾದ ಜಾತ್ರೆ, ಸುಮಾರು ಒಂದು ಲಕ್ಷಕ್ಕೂ ಹೆಚ್ಚಿನ ಜನ ಭಾಗವಹಿಸುವರು. ದೇವರನ್ನು ನೋಡಲು

ಬೆಳಿಗ್ಗೆ ೩.೩೦ರ ಸಮಯದಿಂದಲೇ ಸಾಲಾಗಿ ನಿಂತು ದರ್ಶನ ಪಡೆದು ಹೋಗುವರು. ಜಾತ್ರೆಯ ಸಂದರ್ಭದಲ್ಲಿ ಅಂಗಡಿ, ಹೋಟೆಲ್‌ಗಳು, ರಾಸುಗಳು, ವಿವಿಧ ವಿನೋದಾವಳಿಗಳು ಹಬ್ಬದ ಸಂಭ್ರಮ ಜನರಿಗೆ ಸಂತಸ ತರುತ್ತದೆ. ಜಾತ್ರೆಯ ಮೂರನೇ ದಿನ ಷಷ್ಠಿಯು ಕೂಡಾ ಇಲ್ಲಿ ನಡೆಯುತ್ತದೆ.

ಜಾತ್ರೆಯ ದಿನ ಅನ್ನದಾನ ನಡೆಯುವುದು. ಇಲ್ಲಿನ ಒಂದು ವೈಶಿಷ್ಟ್ಯವೆಂದರೆ ಜಾತ್ರೆಯ ಕಾಲದಲ್ಲಿ ಜನಗಳೂ, ರಾಸುಗಳು ಎಲ್ಲೆಂದರಲ್ಲಿ ಮಲಗಿರುವವು. ಈವರೆಗೂ ಸರ್ಪಗಳಿಂದ ಯಾರಿಗೂ ತೊಂದರೆ ಅಗಿಲ್ಲದಿರುವುದು ಒಂದು ಪವಾಡವೇ ಸರಿ. ಇದನ್ನೇ ಸ್ವಾಮಿ ಎನ್ನುವುದು ಎಂದು ಸ್ಥಳೀಯರು ಹೇಳುತ್ತಾರೆ. ಜಾತ್ರೆಯ ಕಾಲದಲ್ಲಿ ನೀರಿನ ಸೌಕರ್ಯ ಹಾಗೂ ಬಸ್ಸಿನ ಸೌಕರ್ಯ ಬಹಳ ಉತ್ತಮವಾಗಿರುವುದು ಪ್ರತಿ ವರ್ಷ ನಡೆಯುವ ಜಾತ್ರೆಯಲ್ಲಿ ಉತ್ತಮ ರಾಸುಗಳಿಗೆ ದೇವಾಲಯದ ದತ್ತಿ ನಿಧಿಯಿಂದ ಬಹುಮಾನವನ್ನು ನೀಡುವ ಪದ್ಧತಿ ಕಂಡುಬರುತ್ತದೆ.

### ೬.೨. ಜಾತ್ರೆಗಳು

ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ಅನೇಕ ಗ್ರಾಮಗಳಲ್ಲಿ ಇಂದಿಗೂ ಜಾತ್ರೆಗಳು ಜೀವಂತವಾಗಿವೆ. ಇವು ಆಯಾಯ ಪರಿಸರದ ಜನರುಗಳನ್ನು ಒಂದುಗೂಡಿಸಲು ಮತ್ತು ಅವರ ಧಾರ್ಮಿಕ ಚಟುವಟಿಕೆಗಳನ್ನು ವ್ಯಕ್ತಪಡಿಸಲು ಮುಖ್ಯ ವೇದಿಕೆಗಳಾಗಿವೆ. ಅಂತಹ ಪ್ರಮುಖ ಜಾತ್ರೆಗಳನ್ನು ಈ ಕೆಳಗೆ ವಿವರಿಸಲಾಗಿದೆ.

### ಶ್ರೀ ಪ್ರಸನ್ನ ವೆಂಕಟರಮಣಸ್ವಾಮಿ ರಥೋತ್ಸವ

ದೊಡ್ಡಬಳ್ಳಾಪುರದ ಈ ಪ್ರಸನ್ನ ವೆಂಕಟರಮಣಸ್ವಾಮಿ ರಥೋತ್ಸವ ಪ್ರತಿವರ್ಷ ಫೆಬ್ರವರಿ ತಿಂಗಳಲ್ಲಿ ನಡೆಯುತ್ತದೆ. ತಾಲ್ಲೂಕಿನಲ್ಲಿ ನಡೆಯುವ ಹಲವಾರು ರಥೋತ್ಸವ ಕಾರ್ಯಕ್ರಮಗಳಲ್ಲಿಯೇ ವೆಂಕಟರಮಣ ಸ್ವಾಮಿ ರಥ ಎತ್ತರವಾಗಿದೆ. ಸುಮಾರು ಐದು ಅಂತಸ್ತು ರಥವನ್ನು ೧೯೧೨ರಲ್ಲಿ ದೊಡ್ಡಬಳ್ಳಾಪುರದ ಅಮಾವಾಸ್ಯೆ ನಂಜುಂಡಯ್ಯ ಎಂಬುವರು ಮಾಡಿಕೊಟ್ಟಿದ್ದಾರೆ. ಅಂದಿನಿಂದ ರಥೋತ್ಸವ ಜಾತ್ರೆ ಎರಡು ದಿನ ಬಹಳ ವಿಜೃಂಭಣೆಯಿಂದ ನಡೆಯುತ್ತದೆ. ಸಾವಿರಗಟ್ಟಲೆ ಜನ ಭಕ್ತರು ಸೇರುತ್ತಾರೆ. ಹಲವಾರು ಮಿಠಾಯಿ ಅಂಗಡಿಗಳು, ಕಡ್ಲೆಪುರಿ ಅಂಗಡಿಗಳು ಅಂದು ಬಂದು ಸೇರುತ್ತವೆ. ಇದು ಊರಿಗೆ ದೊಡ್ಡ ಹಬ್ಬ. ದೊಡ್ಡ ಬಳ್ಳಾಪುರದ ಮತ್ತೊಂದು ಜಾತ್ರೆ ಕಡಲೆಕಾಯಿ ಪರಿಷೆ. ಈ ಪರಿಷೆಯು ಡಿಸೆಂಬರ್ ತಿಂಗಳಲ್ಲಿ ನಗರದ ಬಯಲು ದಿನ್ನೆ ಬಸವಣ್ಣ ದೇವಾಲಯದ ಆವರಣದಲ್ಲಿ ನಡೆಯುತ್ತದೆ. ಈ ಪರಿಷೆಯು ಬೆಂಗಳೂರಿನ ಬಸವನಗುಡಿಯಲ್ಲಿ ನಡೆಯುವ ಕಡೆಲೆಕಾಯಿ ಪರಿಷೆಯಿಂದ ಸ್ಫೂರ್ತಿ ಪಡೆದುದು ಎನ್ನಬಹುದು. ಸುಮಾರು ಎಂಟು

ವರ್ಷಗಳಿಂದ ಕಾರ್ತಿಕ ಮಾಸದ ಕಡೆಯ ಸೋಮವಾರದಂದು ನಡೆಯುವ ಈ ಪರಿಷೆ ನಗರದ ಜನರ ಮೆಚ್ಚುಗೆಗೆ ಪಾತ್ರವಾಗಿದೆ ಎನ್ನಬಹುದು. ನೇಯ್ಗೆ ಕಾಯಕ ಮುಖ್ಯ ಕಸುಬಾಗಿರುವ ನಗರದ ಜನರಿಗೆ ಪ್ರತಿಸೋಮವಾರವು ಹಬ್ಬದ ಸಡಗರ ಸಾಮಾನ್ಯವಾಗಿ ಸಭೆ ಸಮಾರಂಭಗಳಾಗಲಿ, ಹೋರಾಟಗಳಾಗಲಿ ನಡೆಯುವುದು ಸೋಮವಾರದಂದು. ಹಾಗಾಗಿ ಕಡಲೆಕಾಯಿ ಪರಿಷೆಯೂ ಸೋಮವಾರದಂದೇ ನಡೆಯುವುದು. ಇದರಲ್ಲಿ ಪುಟ್ಟ ಮಕ್ಕಳಿಂದ ಹಿಡಿದು ಯುವಕರು, ಹಿರಿಯರೆಂಬ ವಯಸ್ಸಿನ ಅಂತರವಿಲ್ಲದೆ ಈ ಜಾತ್ರೆಯಲ್ಲಿ ಜನ ಭಾವಹಿಸುತ್ತಾರೆ. ವೆಂಕಟರಮಣಸ್ವಾಮಿ ಜಾತ್ರೆಯಲ್ಲಿ ಅಥವಾ ಯಾವುದೇ ಜಾತ್ರೆಗಳಲ್ಲಿ ದೇವಾಲಯಕ್ಕೆ ಬರುವ ಜನರಿಗೆ ಅವಲಕ್ಕಿ, ರಸಾಯನ, ಕೋಸಂಬರಿ, ಬಾಳೆಹಣ್ಣುಗಳನ್ನು ನೀಡುತ್ತಾರೆ. ಆದರೆ ಕಡಲೇಕಾಯಿ ಪರಿಷೆಗೆ ಬಂದು ದಿನ್ನೆ ಬಯಲು ಬಸವಣ್ಣನ ದರ್ಶನ ಪಡೆದು ದೇವಾಲಯದಿಂದ ಹೊರಬರುವ ಪ್ರತಿಯೊಬ್ಬರಿಗೂ ದೇವಾಲಯದ ಸಮಿತಿಯಿಂದ ಒಂದು ಬೊಗಸೆಯಷ್ಟು ಕಡಲೆಕಾಯಿಯನ್ನು ನೀಡುವುದು ಇಲ್ಲಿನ ವಿಶೇಷ.

### ಮುತ್ಯಾಲಮ್ಮ ಜಾತ್ರೆ

ದೊಡ್ಡಬಳ್ಳಾಪುರ ನಗರದ ಗ್ರಾಮದೇವತೆ ಎಂದೇ ಪ್ರಸಿದ್ಧಿ. ವರ್ಷಕ್ಕೊಮ್ಮೆ ಏಪ್ರಿಲ್‌ನಲ್ಲಿ ನಡೆಯುವ ಮುತ್ಯಾಲಮ್ಮನ ಜಾತ್ರೆಯನ್ನು ಅದ್ದೂರಿಯಾಗಿ ನಡೆಸುವರು. ಸ್ಥಳೀಯರು ಸುಮಾರು ಇನ್ನೂರು ವರ್ಷಗಳ ಹಿಂದೆ ಈ ದೇವತೆಯು ಉದ್ಭವವಾಗಿತ್ತೆಂದು ಹೇಳುವರು. ಈ ಮುತ್ಯಾಲಮ್ಮ ಜಾತ್ರೆ ಪ್ರಾರಂಭವಾಗುವುದಕ್ಕೆ ಹದಿನೈದು ದಿನಗಳ ಮುಂಚಿತವಾಗಿ ಮಂಗಳವಾರ ಆರತಿ, ಬುಧವಾರ ಜಾತ್ರೆ ಎಂಬುದಾಗಿ ಸಾರುತ್ತಾರೆ. ಮಂಗಳವಾರ ಬೆಳಿಗ್ಗೆಯಿಂದ ರಾತ್ರಿಯವರೆಗೂ ಆರತಿ ಪೂಜೆಗಳು ನಡೆದು, ದೇವಸ್ಥಾನದಲ್ಲಿ ಅಭಿಷೇಕವಾಗುತ್ತದೆ.

ದೇವಾಲಯದ ಆವರಣದಲ್ಲಿ ದೇವರ ಉತ್ಸವ ಜರುಗುತ್ತದೆ. ನಂತರ ಮಧ್ಯಾಹ್ನದ ವೇಳೆಗೆ ಗಂಗಾಧರಪುರ, ರೋಜಿಪುರ, ಶಾಂತಿನಗರದ ಗ್ರಾಮಸ್ಥರು ದೇವತೆಯನ್ನು ಮಂಗಳಾರತಿಗಳೊಂದಿಗೆ ತಮ್ಮ ಊರುಗಳಿಗೆ ಹೊತ್ತುಕೊಂಡು ಹೋಗಿ ಅಲ್ಲಿ ಪೂಜೆಯನ್ನು ಸಲ್ಲಿಸುವುದು, ನಂತರ ತೇರಿನ ಮೇಲೆ ತಂದು ದೇವಸ್ಥಾನಕ್ಕೆ ಬಿಡುವ ಪದ್ಧತಿಯಿದೆ. ಬುಧವಾರದಂದು ದೇವತೆಗೆ ಸ್ನಾನಾಭಿಷೇಕ ಮಾಡಿಸಿ, ಪಲ್ಲಕ್ಕಿ ಅಲಂಕಾರದಿಂದ ದೇವತೆಯನ್ನು ದೇವಸ್ಥಾನದಲ್ಲಿ ಕೂರಿಸಿ ಪೂಜೆ ಮಾಡುತ್ತಾರೆ. ಇಂದಿಗೂ ದೊಡ್ಡಬಳ್ಳಾಪುರ ನಗರದಲ್ಲಿ ಸಿಡುಬು ರೋಗ, ಕಾಲರಾ ರೊಗಗಳು ಕಾಣಿಸಿಕೊಂಡಾಗ ರೋಗಗಳು ಬಂದ ಪೇಟೆಯಲ್ಲಿ ಮೂರು ಅಥವಾ ಐದು ದಿನ ಕೂರಿಸಿ, ಪೂಜೆ ಸಲ್ಲಿಸಿ, ನಂತರ ಮೂಲ ಸ್ಥಳಕ್ಕೆ ಕಳುಹಿಸುವರು. ಸುಮಾರು ವರ್ಷಗಳಿಂದ ಕುರಿ, ಕೋಳಿ, ಮೇಕೆಗಳನ್ನು ಬಲಿ ಕೊಡುತ್ತಿದ್ದಾರೆ. ಹರಕೆ ಹೊತ್ತವರು, ಬಾಯಿಬೀಗ ಹಾಕಿಕೊಳ್ಳುವ ಸಂಪ್ರದಾಯವನ್ನು ಪಾಲಿಸುತ್ತಾರೆ. ಮುತ್ಯಾಲಮ್ಮನ ಅಕ್ಕತಂಗಿಯರಾದ ದೊಡ್ಡಮ್ಮ, ಅಣ್ಣಮ್ಮ, ಚೌಡೇಶ್ವರಿ, ಮಾರಮ್ಮನವರಲ್ಲಿ ಮುತ್ಯಾಲಮ್ಮ

ಪಾರ್ವತಿ ಸ್ವರೂಪಿಣಿ ಕುದುರೆಯ ಮೇಲೆ ಕುಳಿತು ಕೈಯಲ್ಲಿ ಆಯುಧಗಳಿಂದ ಕತ್ತಿ ಮತ್ತು ತ್ರಿಶೂಲವನ್ನು ಹಿಡಿದುಕೊಂಡಿದ್ದಾಳೆ. ಮೊದಲು ದೇವಾಲಯದಲ್ಲಿ ಹುತ್ತವಿತ್ತೆಂದು ಹೇಳುತ್ತಾರೆ. ಆದರೆ ಈಗ ಇಲ್ಲ. ಜಾತ್ರೆಯಲ್ಲಿ ರಣವಾದ್ಯಗಳು ಮತ್ತು ಮಂಗಳವಾದ್ಯಗಳನ್ನು ಉಪಯೋಗಿಸುತ್ತಾರೆ. ರಣವಾದ್ಯಗಳಾದ ತಮಟೆ, ತ್ರಾಸ ರಂಡೋಲುಗಳು ಮಂಗಳವಾದ್ಯಗಳಾದ ತಾಳ, ಓಲಗ, ಡೋಲುಗಳು ಜಾತ್ರೆಯಲ್ಲಿ ಮೊಳಗುತ್ತವೆ.

**ಮಾರ್ಗದಾಂಬ ಜಾತ್ರೆ**

ದೊಡ್ಡಬಳ್ಳಾಪುರ ನಗರದಿಂದ ಏಳು ಮೈಲಿ ದೂರವಿರುವ ಕೋಡಿಹಳ್ಳಿ ಗ್ರಾಮದ ಕೆರೆಯ ಕೋಡಿಯ ಬಳಿ ಇರುವ ಮಾರ್ಗದಾಂಬ ದೇವಾಲಯದ ಜಾತ್ರೆ ಎರಡು ಅಥವಾ ಮೂರು ವರ್ಷಗಳಿಗೊಮ್ಮೆ ನಡೆಯುತ್ತದೆ. ಈ ದೇವಾಲಯದ ದೇವತೆಯ ಬಗ್ಗೆ ಒಂದು ಹಿನ್ನೆಲೆ ಕಥೆ ಹೀಗಿದೆ. ಚೋಳ ರಾಜರು ಮೊದಲಿಗೆ ಈ ದೇವಾಲಯವನ್ನು ನಿರ್ಮಿಸಿದರು. ಈ ದೇವಾಲಯದ ಅರ್ಚಕರು ಚೋಳರ ಆಳ್ವಿಕೆಯ ನಂತರ ತಿರುವಣ್ಣಾಮಲೈನ ಶಿವಾಲಯಕ್ಕೆ ಹೋದರು. ಈಗಲೂ ಆರು ವರ್ಷಕ್ಕೊಮ್ಮೆ ಇಲ್ಲಿಗೆ ಬಂದು ಹತ್ತು ದಿನಗಳ ಕಾಲ ಪೂಜೆ ಸಲ್ಲಿಸಿ ಹೋಗುತ್ತಾರೆ ಎಂಬುದಾಗಿ ಸ್ಥಳೀಯರು ಹೇಳುತ್ತಾರೆ. ಆದರೆ ಇದರ ಮೂಲವನ್ನು ಅರಿಯಲು ನಮಗೆ ಶಾಸನಗಳಾಗಲಿ ಅವಶೇಷಗಳಾಗಲಿ ದೊರೆತಿಲ್ಲದಿರುವುದೇ ಒಂದು ಕೊರತೆ.

ಸಪ್ತಮಾತೃಕೆಯರ ಆರಾಧನೆ ಕರ್ನಾಟಕದಾದ್ಯಂತ ಕ್ರಿ.ಶ.-೧೦ನೇ ಶತಮಾನದಿಂದ ಬೆಳೆದು ಬಂದಿದೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಇದು ಬಹಳ ವ್ಯಾಪಕವಾಗಿ ಬೆಳೆಯಿತು. ಕೋಡಿಹಳ್ಳಿಯ ಈ ಸಪ್ತಮಾತೃಕೆಯರು ಬಿಡಿ ಬಿಡಿಯಾಗಿ ಸ್ಥಾಪನೆಯಾಗಿದ್ದು, ಬಹಳ ಎತ್ತರವಾಗಿಯೂ ಇವೆ. ಈ ರೀತಿಯ ಶಿಲ್ಪಶೈಲಿಯ ಸಪ್ತಮಾತೃಕೆಯರ ಕರ್ನಾಕಟದಲ್ಲೇ ಅಪರೂಪವಾದುದಾಗಿದೆ.

ಜಾನಪದ ಹಿನ್ನೆಲೆಯಲ್ಲಿ ಮಾರ್ಗದಾಂಬ ದೇವಾಲಯದ ಬಗ್ಗೆ ಹೀಗೆ ಸ್ಥಳೀಯರು ಹೇಳುತ್ತಾರೆ. ಇವರು ಏಳು ಜನ ಅಕ್ಕತಂಗಿಯರು ಉತ್ತರ ದಿಕ್ಕಿನಿಂದ ದಕ್ಷಿಣ ಕಡೆಗೆ ಪ್ರಯಾಣ ಮಾಡುತ್ತಿದ್ದರು. ಕೋಡಿಹಳ್ಳಿ ಗ್ರಾಮದ ಕೆರೆಗೆ ಇನ್ನೂ ಮುಕ್ಕಾಲು ಮೈಲಿಯಿರುವ ಸ್ಥಳದಲ್ಲಿ ಹುಣ್ಣಿಮೆಯ ರಾತ್ರಿ ಊಟ ಮಾಡುತ್ತಾ ಕುಳಿತರು. ಆ ದೃಶ್ಯವನ್ನು ಮಹಿಳೆಯೊಬ್ಬಳು ನೋಡಿದಳು. ಆಗ ಅಕ್ಕ ತಂಗಿಯರು ನಮ್ಮನ್ನು ನೋಡಿದ ವಿಷಯವನ್ನು ಯಾರಿಗೂ ಹೇಳಬಾರದು. ಒಂದು ವೇಳೆ ಯಾರಿಗಾದರೂ ಹೇಳಿದರೆ ನೀನು ಕಲ್ಲಾಗಿ ಹೋಗುವೆ ಎಂದು ಆ ಮಹಿಳೆಗೆ ತಿಳಿಸಿದರು. ಇದರಲ್ಲಿ ಏನೋ ಇದೆ ಎಂದು ಕುತೂಹಲ ತಡೆಯದ ಆಕೆ ಗ್ರಾಮಸ್ಥರಿಗೆ ತಿಳಿಸಿ ಅವರನ್ನು ಸ್ಥಳಕ್ಕೆ ಕರೆತಂದಳು. ಜನರನ್ನು ಕಂಡ ಏಳು ಜನ ಅಕ್ಕ-ತಂಗಿಯರು ಅಲ್ಲೇ ಕಲ್ಲಾಗಿ ಹೋದರು. ಆ ಮಹಿಳೆಯೂ ದೇವಾಲಯದ ಸಮೀಪ ಕಲ್ಲಾಗಿ ನಿಂತಳು ಎಂಬುದು ಒಂದು ಐತಿಹ್ಯ. ಈ

ಕೋಡಿಹಳ್ಳಿ ಕೆರೆಯ ಮೇಲೆ ಕಲ್ಲಾಗಿ ನಿಂತಿರುವ ಆ ಏಳು ಜನ ಅಕ್ಕತಂಗಿಯರೆಂದರೆ, ಸಪ್ತ ಮಾತೃಕೆಯರಾದ ಮಾರ್ಗದಮ್ಮ, ವೈಷ್ಣವಿದೇವಿ, ಇಂದ್ರಾಣಿದೇವಿ, ಬ್ರಹ್ಮಿಣಿದೇವಿ, ಮಹೇಶ್ವರಿ ದೇವಿ, ವರಾಹಿದೇವಿ ಮತ್ತು ಕೌಮಾರಿದೇವಿ ಹೆಸರಿನ ದೇವತೆಗಳಾಗಿದ್ದಾರೆ. ಇದಕ್ಕೆ ಭಿನ್ನವಾದ ಮತ್ತೊಂದು ಜಾನಪದ ಹಿನ್ನೆಲೆಯನ್ನು ಸಾಹಿತಿ ಸಿದ್ದಲಿಂಗಯ್ಯನವರು ಹೀಗೆ ಹೇಳುತ್ತಾರೆ.

ಕೋಡಿಹಳ್ಳಿ ಗ್ರಾಮದ ಕೆರೆಯ ಮೇಲೆ ನೆಲೆಸಿರುವ ಮಾರಗದಮ್ಮ ದೇವಿಗೆ ಏಳು ಜನ ಅಕ್ಕತಂಗಿಯರು ಇಲ್ಲಿ ನೆಲಸಿದ್ದಾರೆ. ಇಲ್ಲಿ ಕಲ್ಲು ವಿಗ್ರಹ ಇದೆ. ಇವರು ಮೊದಲು ಉತ್ತರದ ಕಡೆಯಿಂದ(ಆಂಧ್ರ) ಹೊರಟವರು, ಬರುವಾಗ ದಾರಿಯಲ್ಲಿ ಕೋಡಿಹಳ್ಳಿ ಕೆರೆಗೆ ಮುಕ್ಕಾಲು ಮೈಲಿ ದೂರದಲ್ಲಿ ಇರುವ ರಾಜಘಟ್ಟ ಏರಿಯ ಮೇಲೆ ನಾಲ್ವರು ಮಾತ್ರ ನೆಲಸಿ, ಉಳಿದವರು ಮುಂದೆ ಹೊರಟು ಕೋಡಿಹಳ್ಳಿ ಗ್ರಾಮದ ಏರಿಯ ಮೇಲೆ ಬರುತ್ತಿರಲು ಕೊನೆಯವಳು ಅಲ್ಲಿ ಮೇಯುತ್ತಿದ್ದ ಕೋಣನನ್ನು ನೋಡಿ ಕೋಣನ ಮೇಲೆ ದೀಪ ಹಚ್ಚಬೇಕೆಂದು ಆಸೆ ಪಟ್ಟಾಗ ಉಳಿದ ಏಳೂ ಜನ ಶಾಪ ಹಾಕಿದರು. ಆಗ ಅವಳು ಕಲ್ಲಾದಳು. ಇಂದಿಗೂ ಸಹ ಕಲ್ಲು ಅಂಗಳದಲ್ಲಿ ಇದೆ. ಉಳಿದ ಏಳು ಜನ ಅಲ್ಲಿಯ ಏರಿಯ ಮೇಲೆ ನೆಲೆಸಿದರು. ಅಲ್ಲಿನ ದೇವತೆಯ ಹೆಸರು ಮಾರಗದಮ್ಮ, ಬಹುಶಃ ದಾರಿಯಲ್ಲಿರುವ ದೇವತೆಯಾದ್ದರಿಂದ ಅಂತಹ ಹೆಸರು ಬಂದಿರಬೇಕು. ಈ ದೇವತೆಗಳು ಏಳು ಊರಿಗೆ ಸೇರಿವೆ. ಆ ಊರುಗಳೆಂದರೆ ಕೋಡಿಹಳ್ಳಿ ಕೊನಘಟ್ಟ, ರಾಜಗಟ್ಟ, ಲಿಂಗನಹಳ್ಳಿ, ಹಂಚರಹಳ್ಳಿ, ಗೊಲ್ಲಹಳ್ಳಿ, ದಾಸಗೊಂಡನಹಳ್ಳಿ, ಆದರೆ ಈ ಊರುಗಳಲ್ಲಿ ಕೋಣನನ್ನು ಬಲಿಕೊಡುವ ಸಂಪ್ರದಾಯ ಈಗ ಇಲ್ಲ.

ಮಾರಗದಮ್ಮ ಜಾತ್ರೆಯಲ್ಲಿ ಆ ಏಳು ಊರಿನ ದೀಪಗಳನ್ನು ಬೆಳಗಲು ಕೋಡಿಹಳ್ಳಿ ಗ್ರಾಮದ ತೋಪಿನ ಬಳಿ ಬಂದಾಗ ಪೂಜಾರಿಯು ತನ್ನ ಮಂಗಳಾರತಿ ತಟ್ಟೆಯನ್ನು ನೋಡುತ್ತಾನೆ. ಆದರೆ ಆಗ ಅದು ಇರುವುದಿಲ್ಲ. ಆಗ ಅವನು ದೀಪಗಳು ಸಾಗುತ್ತಿರುವಾಗ ದೇವರಿಗೆ ನಮಸ್ಕರಿಸಿ, ನನ್ನ ಮಾನ ಮರ್ಯಾದೆ ಉಳಿಸಮ್ಮ ಎಂದು ಹೇಳಿ ನೀರಿನಲ್ಲಿ ಧುಮುಕುವನು. ನಂತರ ಆತನೇ ಈಜಿಕೊಂಡು ಕೊನಘಟ್ಟದ ಅವನ ಮನೆಗೆ ಹೋಗಿ ತಟ್ಟೆಯನ್ನು ತರಲು ಪ್ರಯತ್ನಿಸುವನು. ಅವನು ನೀರಿನಲ್ಲಿ ಧುಮುಕಿದಾಗ ಮಧ್ಯೆ ದಾರಿಯಾಗುತ್ತದೆ. ನೀರಿನಲ್ಲಿ ಹೋಗಿ ದೀಪಗಳು ದೇವಾಲಯದ ಬಳಿ ಬರುವ ವೇಳೆಗಾಗಲೇ ತಟ್ಟೆಯನ್ನು ತಂದಿರುತ್ತಾನೆ.

ಕೊನಘಟ್ಟದಿಂದ ಜಾತ್ರೆಗೆ ದೀಪಗಳು ಮತ್ತೊಂದು ವರ್ಷದ ಸರತಿ. ಕೊನಘಟ್ಟದಿಂದ ದೀಪಗಳು ಬರುತ್ತಿರುವಾಗ ಬರುವ ಮಧ್ಯೆ ಅಂದರೆ ಕೋಡಿಹಳ್ಳಿ ಕೆರೆಯ ನಡುವೆ ಕೊನಘಟ್ಟದ 'ಕೋಡಿಯವರು' ಎಂದು ಕರೆಯುವ ಮನೆಯವರ ಒಬ್ಬ ಸೊಸೆ ಗರ್ಭಿಣಿ ಆಗಿದ್ದು, ಮಧ್ಯ ದಾರಿಯಲ್ಲಿ ದೀಪದ ತಂಬಿಟ್ಟಿನ ಮೇಲೆ ಆಸೆ ಪಡುತ್ತಾಳೆ. ಅಲ್ಲದೆ ತಂಬಿಟ್ಟನ್ನು ತಿನ್ನುತ್ತಾಳೆ.

ದಾರಿಯಲ್ಲೇ ಅವಳು ಕಲ್ಲಾಗಿದ್ದಾಳೆ. ಈ ವಿಷಯ ಗುಂಪಿನಲ್ಲಿದ್ದ ಸ್ತ್ರೀಯರಿಗೆ ತಿಳಿಯಲಿಲ್ಲ. ದೇವಾಲಯದ ಬಳಿ ಬಂದಾಗ ಪೂಜೆ ಆಗಿ ಆರತಿ ಬೆಳಗುವ ವೇಳೆಯಲ್ಲಿ ಕೋಟೆಯವರ ಮನೆಯ ಆರತಿ ಎಲ್ಲಿ ಎಂದು ವಿಚಾರಿಸಲು ಎಲ್ಲಿ ಆಕೆ ಹೋದಳು ಎಂಬುದು ತಿಳಿಯದೆ, ನಂತರ ಹಿಂದಕ್ಕೆ ಹುಡುಕಿಕೊಂಡು ಹೋಗಲು ಅಲ್ಲಿ ಆಕೆ ಕಲ್ಲಾಗಿ ನಿಂತಿದ್ದಳು. ತಲೆಯ ಮೇಲೆ ಆರತಿ. ತಲೆಯಲ್ಲಿದ್ದಂತಹ ಹೂ ಹಾಗೆಯೇ ಇದ್ದವು. ಇದನ್ನು ಕಂಡು ಊರಿನವರೆಲ್ಲ ಸೇರಿ ಕಲ್ಲನ್ನು ಇಲ್ಲಿ ಬಿಡಬಾರದು ತೆಗೆದುಕೊಂಡು ಹೋಗಬೇಕೆಂದು ಕೀಳಲು ಪ್ರಯತ್ನ ಪಟ್ಟು ಕಲ್ಲು ಬಾರದೆ ವಿಫಲರಾಗಿ ಆ ಕಲ್ಲಿನ ಮನುಷ್ಯಾಕೃತಿಯ ಕೈ ಮುಖ ಮುಂತಾದವುಗಳನ್ನೆಲ್ಲ ಭಿನ್ನಗೊಳಿಸಿದ್ದಾರೆ. ಆ ಕಲ್ಲು ಕೆರೆಯ ಮಧ್ಯೆ ಸಾಕ್ಷಿಯಂತೆ ನಿಂತಿದೆ.

ಇಂದು ಅಲ್ಲಿ ವರ್ಷಕ್ಕೊಮ್ಮೆ ಜಾತ್ರೆ ನಡೆಯುತ್ತದೆ. ಆದರೆ ಅಲ್ಲಿ ಬಲಿಕೊಡುವ ಪದ್ಧತಿ ಇಲ್ಲ. ದೇವಾಲಯದ ವ್ಯಾಪ್ತಿಗೆ ಒಳಪಟ್ಟ ಏಳೂ ಊರುಗಳಲ್ಲಿ ಆ ದಿನ ಬಲಿ ಇರಬಾರದು. ಹಾಗೂ ಹೆಂಗಸರು ಊರಿನಲ್ಲಿ ಇರದೇ ಊರ ಹೊರಗೆ ಇರಬೇಕು. ಪೂಜೆಗೂ ಹೋಗಬಾರದು. ದೇವಾಲಯ ಇರುವ ಏರಿಯ ಮೇಲೆ ನಡೆದುಕೊಂಡು ಹೋಗಬಾರದು. ಜಾತ್ರೆಯ ದಿವಸ ಏಳು ಊರಿನಲ್ಲೂ ಯಾರೂ ಸಾಯಬಾರದು. ಈ ಕಾರಣಗಳಿಂದಾಗಿ ಜಾತ್ರೆಯನ್ನು ಆಚರಿಸುವ ವಿಷಯವನ್ನು ಊರುಗಳಲ್ಲಿ ಸಾರುತ್ತಾರೆ.

ಜಾತ್ರೆಯ ದಿವಸ ಸಾಯಂಕಾಲ ದೇವರನ್ನು ವಾದ್ಯಸಮೇತ ಸಹಾಯದಿಂದ ಹೊತ್ತು ಕೊನಘಟ್ಟದ ಮತ್ತು ಇತರ ಊರುಗಳ ದೀಪಗಳೊಂದಿಗೆ ಕೋಡಿಹಳ್ಳಿ ಗ್ರಾಮಕ್ಕೆ ಬರುತ್ತವೆ. ಕೋಡಿಹಳ್ಳಿಯ ಆರತಿಗಳೂ ಕೊನಘಟ್ಟದ ಗ್ರಾಮದ ಆರತಿಗಳ ಜತೆ ಸೇರಿಕೊಳ್ಳುತ್ತವೆ. ವಾದ್ಯ ಸಮೇತಗಳಿಂದ ಹೋಗಿ ದೀಪ ಬೆಳಗಿ ಪೂಜೆ ಮಾಡುತ್ತಾರೆ. ಜಾತ್ರೆಯು ರಾತ್ರಿಯ ವೇಳೆಯಲ್ಲಿ ನಡೆಯುವುದು. ದೇವಾಲಯದ ಚೋಳರ ಕಾಲದ ಮಾದರಿ ತುಳು ಬ್ರಾಹ್ಮಣ ಈ ದೇವರ ಪೂಜಾರಿ.[೧೧] ಇಂದಿಗೂ ಸಹ ಕೋಡಿಹಳ್ಳಿಯ ಜನ ಧವಸ ಧಾನ್ಯಗಳನ್ನು ಕಲೆಹಾಕಿ ಜಾತ್ರೆಯ ವೇಳೆಯಲ್ಲಿ ಅನ್ನಸಂತರ್ಪಣೆ ಕಾರ್ಯಕ್ರಮವನ್ನು ಏರ್ಪಡಿಸುತ್ತಾರೆ. ಇಲ್ಲಿಯ ಮತ್ತೊಂದು ವಿಶೇಷತೆ ಎಂದರೆ ಹಬ್ಬ ಮಂಗಳವಾರ, ಹಾಗೂ ಶುಕ್ರವಾರಗಳೆಂದು ಮಾಡುವುದು. ಒಬ್ಬ ಹೆಂಗಸು ತಂಬಿಟ್ಟನ್ನು ಪೂಜೆಗೆ ಮೊದಲು ತಿಂದು ವ್ರತ ಕೆಡಿಸಿದಕ್ಕೆ ಅಲ್ಲೇ ಕಲ್ಲಾದಳಂತೆ. ಆದ್ದರಿಂದ ಪೂಜೆ ಮಾಡುವ ಮುನ್ನ ಏನನ್ನೂ ತಿನ್ನದೆ ಬೆಲ್ಲದ ಅಚ್ಚಿನಲ್ಲಿ ಆರತಿ ಮಾಡುವುದು ರೂಢಿಯಲ್ಲಿದೆ. ಇಂದಿಗೂ ಋತುಮತಿಯಾದವರು, ಗರ್ಭಿಣಿ ಹೆಂಗಸರು ಕೆರೆಯ ಏರಿಯ ಮೇಲೆ ಹೋಗುವುದಿಲ್ಲ. ಹುಟ್ಟುವ ಮಕ್ಕಳಿಗೆ ಮಂಡೆ ಕೊಡುವುದಾಗಿ ಹರಕೆಯನ್ನು ಮಾಡಿಕೊಳ್ಳುತ್ತಾರೆ.

## ಹುಲ್ಲುಕುಂಟೆ ಜಾತ್ರೆ

ದೊಡ್ಡಬಳ್ಳಾಪುರದಿಂದ ಇಪ್ಪತ್ತು ಕಿ.ಮೀ.ದೂರದ ಪಶ್ಚಿಮ ದಿಕ್ಕಿಗೆ ಹುಲುಕುಂಟೆ ಗ್ರಾಮವಿದೆ. ದಟ್ಟ ಕಾಡುಗಳಿಂದ ಹಾಗೂ ಘಟ್ಟ ಪ್ರದೇಶಗಳಿಂದ ಆವೃತವಾಗಿರುವ ಈ ಗ್ರಾಮ ಹುಲಿಗಳು ಮತ್ತು ಆನೆಗಳು ಹೇರಳವಾಗಿ ವಾಸವಾಗಿದ್ದವೆಂದು ಊಹಿಸಬಹುದು. ಇಲ್ಲಿನ ಜನರು ಸಾಹಸಿ ಪ್ರವೃತ್ತಿಯನ್ನು ಹೊಂದಿದವರು, ಕ್ರೀಡಾಸಕ್ತರೂ ಜೊತೆಗೆ ಬೇಟೆಗಾರರೂ ಆಗಿದ್ದರೆಂದರೆ ಅತಿಶಯೋಕ್ತಿಯೆನಿಸಲಾರದು. ಹುಲುಕುಂಟೆ ಗ್ರಾಮದಲ್ಲಿ ಹಿಂದೆ ಈ ನಾಡನ್ನು ನರಸಿಂಹ ಎಂಬ ವ್ಯಕ್ತಿ ಆಳುತ್ತಿದ್ದನು. ಈತನಿಗೆ ಬೇಟೆಯಾಡುವ ಹವ್ಯಾಸ ಇತ್ತು. ಆದುದರಿಂದ ಈತ ಸದಾ ಬೇಟೆಯಾಡುತ್ತಿದ್ದನು. ಭೇಟೆಯಾಡುತ್ತಿದ್ದ ಕಾಡಿನಲ್ಲಿ ಒಂದು ದಿನ ಒಂದು ಕುಂಟೆಗೆ ಹುಲಿಗಳು ನೀರನ್ನು ಕುಡಿಯಲು ಬರುತ್ತಿದ್ದವು ಈ ನಾಡನ್ನು ಆಳುತ್ತಿದ್ದ ನರಸಿಂಹನು ಕುಂಟೆಯ ಬಳಿ ಬರುವ ಹುಲಿಗಳನ್ನು ಕೊಲ್ಲುತ್ತಿದ್ದನು. ಅದರ ನೆನಪಿಗಾಗಿ ಆ ಸ್ಥಳಕ್ಕೆ ಹುಲಿಕುಂಟೆ ಎಂಬುದಾಗಿ ಹೆಸರು ಬಂದಿತೆಂದು ಸ್ಥಳೀಯರು ಹೇಳುತ್ತಾರೆ. ಹಾಗಾಗಿ ಈ ಕಥೆ ಈ ಗ್ರಾಮದ ಸುತ್ತಲಿನ ಜನಪದರ ನೆನಪಾಗುತ್ತದೆ. ಆತನ ಬೇಟೆಯ ಕುರುಹಾಗಿ ಪ್ರತಿವರ್ಷದ ಯುಗಾದಿ ಕಳೆದ ಒಂದು ತಿಂಗಳು ಸುತ್ತಮುತ್ತಲಿನ ಜನರು ಬೇಟೆಯಾಡಲು ಸಂಪ್ರದಾಯವನ್ನು ಆಚರಿಸಿಕೊಂಡು ಬರುತ್ತಿದ್ದಾರೆ.

ಹುಲುಕುಂಟೆ ಗ್ರಾಮದಲ್ಲಿ ರಂಗನಾಥಸ್ವಾಮಿ ದೇವಾಲಯವಿದೆ. ಇದು ಇತ್ತೀಚೆಗೆ ಜೀರ್ಣೋದ್ಧಾರಗೊಂಡಿದೆ. ಪಾಳೇಯಗಾರರ ಕಾಲದಿಂದಲೂ ಈ ದೇವಾಲಯ ಪ್ರಸಿದ್ಧಿಗೆ ಬಂದಿದೆ. ಬೇಟೆಗಾರರು ದೇವಾಲಯಕ್ಕೆ ಬಂದು ರಂಗನಾಥನನ್ನು ಪ್ರಾರ್ಥಿಸಿ ಬೇಟೆಗೆ ಹೋಗುವುದು. ವರ್ಷಕ್ಕೆ ಒಂದು ಬಾರಿ ಇವನ ಹೆಸರಿನಲ್ಲಿ ಜಾತ್ರೆ ಕೂಡುವುದು ಆದ್ದರಿಂದ ಈ ದೇವಾಲಯಕ್ಕೆ 'ಬೇಟೆ ರಂಗನಾಥಸ್ವಾಮಿ' ಎಂಬ ಹೆಸರು ಪ್ರಾಪ್ತವಾಗಿದೆ. ಎಂದು ಸ್ಥಳ ಪುರಾಣಗಳು ಹೇಳುತ್ತವೆ.

ದೊಡ್ಡಬಳ್ಳಾಪುರ, ನೆಲಮಂಗಲ, ಕೊರಟಗೆರೆ ತಾಲ್ಲೂಕುಗಳ ನಾನಾ ಗ್ರಾಮಗಳಿಂದ ಸಾವಿರಾರು ಭಕ್ತರು ಪ್ರತಿವರ್ಷ ಶೂನ್ಯ ಮಾಸದಲ್ಲಿ ಅಂದರೆ ಡಿಸೆಂಬರ್ ತಿಂಗಳಲ್ಲಿ ಹುಲುಕುಂಟೆಯಲ್ಲಿ ಜಾತ್ರೆ ನಡೆಯುತ್ತದೆ. ಇದು ಸುಮಾರು ಆರುನೂರು ವರ್ಷಗಳಿಂದ ಈ ಸಂಪ್ರದಾಯ ನಡೆದುಕೊಂಡುಬಂದಿದೆ. ಜಾತ್ರೆಯಲ್ಲಿ ಹುಲುಕುಂಟೆ ಗ್ರಾಮದಿಂದ ಮಧ್ಯಾಹ್ನದ ವೇಳೆಗೆ ಬೇಟೆ ರಂಗನಾಥಸ್ವಾಮಿ ಉತ್ಸವ ಮೂರ್ತಿಯನ್ನು ಮೆರವಣಿಗೆಯಲ್ಲಿ ತರುತ್ತಾರೆ. ಈ ಪದ್ಧತಿಯಂತೆ ಚಿಕ್ಕ ಬೆಳವಂಗಲದಿಂದ ಬರುವ ಭಕ್ತರ ತಂಡ ಬಂದ ನಂತರವೇ ಉತ್ಸವ ಮೂರ್ತಿಯನ್ನು ಹುಲುಕುಂಟೆ ಸಮೀಪವಿರುವ ಕದಿರು ಆಲದ ಮರದ ದಿಣ್ಣೆ ಜಾಗವೊಂದರಲ್ಲಿ ಚಿಕ್ಕದಾಗಿ ನಿರ್ಮಾಣ ಮಾಡಿರುವ ಬೇಟೆ ರಂಗನಾಥಸ್ವಾಮಿ ಮಂಟಪಕ್ಕೆ ತರುತ್ತಾರೆ. ಈ ಜಾತ್ರೆಗೆ ಸುಮಾರು ಒಂದುನೂರ ಐವತ್ತು ಗ್ರಾಮಗಳ ಜನ ಬರುತ್ತಾರೆ. ಹುಲುಕುಂಟೆ ಗ್ರಾಮದಿಂದ ಉತ್ಸವಮೂರ್ತಿಯನ್ನು ವಿವಿಧ ವೇಷಗಳು, ಹುಲಿವೇಷ ಡೊಳ್ಳುಕುಣಿತ,

ನಂದಿಧ್ವಜ, ಮುಂತಾದವುಗಳ ಸಮೇತ ಮೆರವಣಿಗೆಯಲ್ಲಿ ಕರೆತರುವ ಪದ್ಧತಿಯಿದೆ. ಇಲ್ಲಿನ ಒಂದು ದಂತಕಥೆಯಂತೆ, ರಾಮ ಮತ್ತು ಲಕ್ಷ್ಮಣ ವನವಾಸಕ್ಕೆ ಹೋಗುವಾಗ ಹುಲುಕುಂಟೆ ಸಮೀಪದ ಕದಿರು ಆಲದ ಮರದ ದಿಣ್ಣೆ ಸಮೀಪಕ್ಕೆ ಬಂದಾಗ ಲಕ್ಷ್ಮಣ ತನ್ನ ಹೆಗಲ ಮೇಲಿಂದ ಬಿಲ್ಲನ್ನು ರಾಜನಿಗೆ ನೀಡಿದನಂತೆ, ಮುಂದೆ ಸ್ವಲ್ಪ ದೂರವಾದ ಲಕ್ಷ್ಮಣ ಅಣ್ಣನು ಹೆಗಲ ಮೇಲೆ ಬಿಲ್ಲನ್ನು ಹೊತ್ತುಕೊಂಡು ಹೋಗುವುದನ್ನು ಕಂಡು ಮರುಕಪಟ್ಟು ತಾನೇ ಮತ್ತೆ ವಾಪಸ್ ಪಡೆದನಂತೆ ಎಂಬುದಾಗಿ ಸ್ಥಳೀಯ ಜನರು ಹೇಳುತ್ತಾರೆ.

ಹುಲುಕುಂಟೆ ಕೋಟೆಯನ್ನು ಬೇಟೆರಂಗನಾಥ ಬಿಳಿಯ ಕುದುರೆಯಲ್ಲಿ ಕಾವಲು ಕಾಯುತ್ತಿದ್ದನಂತೆ. ಬ್ರಿಟೀಷರು ಮುತ್ತಿಗೆ ಹಾಕಲು ಬಂದರೂ ಸಹ ಅವರನ್ನು ಕೋಟೆ ಒಳಗೆ ಬಿಟ್ಟುಕೊಳ್ಳದೆ ಕೋಟೆಯನ್ನು ಸಂರಕ್ಷಣೆ ಮಾಡಿದ ಕುರುಹಾಗಿ ಆತನ ಸ್ಮರಣೆಗಾಗಿ ಈ ಬೇಟೆ ನಡೆಯುತ್ತಾ ಬಂದಿದೆ ಎನ್ನುವುದು ಸ್ಥಳೀಯ ಜನರ ದಂತಕಥೆಯಾಗಿದೆ.

ಈ ಜಾತ್ರೆಗೆ ಸಾವಿರಾರು ಭಕ್ತರು ಭಾಗವಹಿಸುವರು. ಆ ಜಾತ್ರೆ ನಡೆಯುವ ಸ್ಥಳದಲ್ಲಿ ಯಾವುದೇ ದೇವಾಲಯವಿಲ್ಲ. ಜಾತ್ರೆ ಪ್ರಯುಕ್ತ ರಾತ್ರಿಯ ವೇಳೆಗೆ ಪೌರಾಣಿಕ ನಾಟಕಗಳು ಸಮಾರಂಭಗಳು ನಡೆಯುವುವು.

ಹುಲುಕುಂಟೆ ಜಾತ್ರೆಯ ಸಂದರ್ಭದಲ್ಲಿನ ಒಂದು ಆಚರಣೆ ವಿಶಿಷ್ಟವಾದುದು. ದೊಡ್ಡ ಬಳ್ಳಾಪುರ ನೆಲಮಂಗಲ, ಹಾಗು ಮಾಗಡಿ, ಕೊರಟಗೆರೆ ತಾಲೂಕುಗಳ ಕಾಡು ಪ್ರಾಣಿಗಳಿಗೆ ನಿದ್ದೆಯಿಲ್ಲ. ಏಕೆಂದರೆ, ಈ ತಾಲ್ಲೂಕುಗಳ ಗ್ರಾಮಗಳಲ್ಲಿನ ಬಹುತೇಕ ಮನೆಗಳಲ್ಲಿರುವ ಕೋಲುಗಳು ಇಲ್ಲಿನ ಕಾಡು ಪ್ರಾಣಿಗಳನ್ನು ಬಡಿದು ಸಾಯಿಸಲು ಸಿದ್ಧವಾಗುತ್ತವೆ. ಪ್ರತಿವರ್ಷ ಬೇಟೆ ರಂಗನಾಥಸ್ವಾಮಿ ಜಾತ್ರೆ ಸಂದರ್ಭದಲ್ಲಿ ನಡೆಯುವ ಪ್ರಾಣಿ ಬೇಟೆ ಆಚರಣೆಗೆಂದು ಈ ಬೇಟೆ ಡಿಸೆಂಬರ್ ತಿಂಗಳ ಅಂತ್ಯದಲ್ಲಿ ಪ್ರಾರಂಭವಾಗಿ ಜನವರಿ ತಿಂಗಳಲ್ಲಿ ಪೂರ್ಣಗೊಳ್ಳುತ್ತದೆ. ಬೇಟೆಗೆ ಒಂದು ದಿನ ಮುಂಚಿತವಾಗಿ ಅಂದರೆ ಗುರುವಾರ 'ಕೋಲುಬೇಟೆ' ಎಂಬ ಹೆಸರಿನಲ್ಲಿ ಪ್ರಾರಂಭವಾಗುತ್ತದೆ. ಈ ಕೋಲು ಬೇಟೆ ಆಚರಣೆಗೆ ಹಿರಿಯರಿಂದ ಜತನವಾಗಿ ಕಾಯ್ದುಕೊಂಡು ಬಂದಿರುವ ಕೋಲು ಪ್ರತಿ ಮನೆಗಳಲ್ಲೂ ಇರುತ್ತವೆ. ಅಂತಹ ಮನೆಗಳಲ್ಲಿ ಈ ಕೋಲುಗಳಿಗೆ ನಿತ್ಯ ಪೂಜೆ ಮಾಡುತ್ತಾರೆ. ನವೆಂಬರ್ ಕೊನೆಯ ವಾರದಲ್ಲಿ ಆರಂಭವಾಗುವ ಜಾತ್ರೆಯ ಸಂದರ್ಭದಲ್ಲಿ ಹಳ್ಳಿಗರು ತಮ್ಮ ತಮ್ಮ ಮನೆಯಲ್ಲಿನ ಕೋಲುಗಳೊಂದಿಗೆ ಸಾಮೂಹಿಕವಾಗಿ ಕಾಡಿಗೆ ತೆರಳುತ್ತಾರೆ. ಮೊಲ, ಜಿಂಕೆ, ಸಾರಂಗ, ಕಾಡುಹಂದಿ, ಉಡ, ಮುಳ್ಳುಹಂದಿ, ನರಿ ಮುಂತಾದ ಪ್ರಾಣಿಗಳನ್ನು ಬೇಟೆಯಾಡುತ್ತಾರೆ. ಬೇಟೆಗೆ ಸಿಕ್ಕಿದ ಪ್ರಾಣಿಗಳನ್ನು ತಮ್ಮ ಕೋಲುಗಳಿಗೆ ನೇತುಹಾಕಿಕೊಂಡು, ಸಂತೋಷ, ಸಂಭ್ರಮದೊಂದಿಗೆ ತಮ್ಮ ಆರಾಧ್ಯದೈವ ರಂಗನಾಥನ ದೇವಾಲಯಕ್ಕೆ ಬರುತ್ತಾರೆ. ದೇವರಿಗೆ ನೈವೇದ್ಯ ಅರ್ಪಿಸಿದ

ನಂತರ ಅಡುಗೆ ಮಾಡಿಕೊಂಡು ಭೋಜನ ಸವಿಯುತ್ತಾರೆ. ಗುರುವಾರ ಕಳೆದ ನಂತರ ಭಾನುವಾರದಂದು 'ಹೊಗೆಬೇಟೆ' ಎಂಬ ಹೆಸರಿನಲ್ಲಿ ಮತ್ತೆ ಬೇಟೆಯ ಕಾರ್ಯವನ್ನು ಪ್ರಾರಂಭಿಸುತ್ತಾರೆ. ಸುತ್ತಮುತ್ತಲಿನ ಗ್ರಾಮಗಳಿಂದ ಬೇಟೆಯಾಡುವ ಜನರು ಊರ ಬಳಿ ಬರುತ್ತಾರೆ. ಶ್ರೀ ರಂಗನಾಥನಿಗೆ ಪೂಜೆ ಸಲ್ಲಿಸಿ ಊರ ಹೊರವಲಯದಲ್ಲಿ ಒಂದು ಹುತ್ತದ ಬಳಿ ಹೋಗುತ್ತಾರೆ. ತಮ್ಮ-ತಮ್ಮ ಊರುಗಳಿಂದ ಬರುವಾಗ ಕಡ್ಡಿಪುಳ್ಳೆಗಳನ್ನು ತಂದಿಟ್ಟು ಹುತ್ತದ ಬಳಿ ಒಟ್ಟುಗೂಡಿಸಿ ಅದಕ್ಕೆ ಬೆಂಕಿ ಹಾಕುತ್ತಾರೆ. ಅರೆಬರೆ ಹಸಿರು ಹುಲ್ಲುಕಡ್ಡಿಗಳಿಂದ ದಟ್ಟವಾದ ಹೊಗೆ ಎದ್ದು ಸುತ್ತಮುತ್ತಲೂ ಆಗಸಕ್ಕೆ ಏರುತ್ತದೆ. ಬೇಟೆಗಾರರು ಸಂತೋಷದಿಂದ ಕುಣಿದು ಕುಪ್ಪಳಿಸುತ್ತಾರೆ. ಈ ಒಂದು ಬಗೆಯ ಬೇಟೆ ವಿಧಾನಕ್ಕೆ 'ಹೊಗೆ ಬೇಟೆ' ಎಂದು ಸ್ಥಳೀಯರು ಕರೆಯುವರು.

ಭಾನುವಾರ ಕಳೆದು ಮತ್ತೆ ಗುರುವಾರದಂದು ದೊಡ್ಡ ಬೇಟೆ ಪ್ರಾರಂಭವಾಗುತ್ತದೆ. ನೂರಾರು ಗ್ರಾಮಗಳಿಂದ ಗುಂಪು ಗುಂಪುಗಳಾಗಿ ಬೇಟೆಗಾರರು ಬೆಟ್ಟಗುಡ್ಡ, ಹಳ್ಳಕೊಳ್ಳ, ಕಾಡು ಅಡವಿ, ಪೊದೆ ಗಿಡ ಯಾವುದನ್ನೂ ಬಿಡದೆ ಬೇಟೆಯಾಡಿಕೊಂಡು ಬರುತ್ತಾರೆ. ಇದನ್ನೆ 'ದೊಡ್ಡ ಬೇಟೆ' ಎನ್ನುವರು. ಬೇಟೆಯು ಪೂರ್ವಿಕರಲ್ಲಿ ಒಂದು ಪ್ರತಿಷ್ಠೆಯಾಗಿತ್ತು. ಸಾಸಲು ಕಡೆಯಿಂದ ಸಾಲಟ್ಟಿವಡ್ಡರು ಬೇಟೆಗೆ ಬರುವಾಗ ಕೂಳಿನ ಮಡಿಕೆಯನ್ನು ಕಟ್ಟಿಕೊಂಡು ಬರುತ್ತಿದ್ದರಂತೆ.

ಹಲವಾರು ದಶಕಗಳ ಹಿಂದೆ ಬೆಂಗಳೂರು ಸುತ್ತ-ಮುತ್ತಲಿನ ತಾಲ್ಲೂಕುಗಳಲ್ಲಿ ಗೆಣಸು-ಆಲೂಗಡ್ಡೆಗಳನ್ನು ಹೇರಳವಾಗಿ ಬೆಳೆಯುತ್ತಿದ್ದರು. ಸಂಕ್ರಾಂತಿಯ ಸಮಯಕ್ಕೆ ಸರಿಯಾಗಿ ಈ ಫಸಲು ಕೈಗೆ ಬರುತ್ತಿತ್ತು. ಆದರೆ ಮುಳ್ಳು ಹಂದಿಗಳು ಹೊಲಗಳಿಗೆ ನುಗ್ಗಿ ಬೆಳೆ ನಾಶ ಮಾಡುತ್ತಿದ್ದವು ಇವುಗಳ ಕಾಟ ತಪ್ಪಿಸಲು ಬೇಟೆಯಾಡಿ ಕೊಂದು ತಿನ್ನುವ ಆಚರಣೆ ರೂಢಿಗೆ ಬಂದಿತು. ಕಾಲಾನಂತರ ಇದೇ ಕುಲದೇವರ ಆಚರಣೆಯಾಗಿ ಬೆಳೆಯಿತೆಂದು ಹೇಳಬಹುದು. ಬೆಂಗಳೂರು ಸುತ್ತ-ಮುತ್ತಲ ತಾಲೂಕುಗಳ ಸುಮಾರು ಐವತ್ತೆರಡು ಹಳ್ಳಿಗಳಲ್ಲಿ ಕೋಲುಬೇಟೆಯನ್ನು ಕಾಣಬಹುದಾಗಿದೆ.

ಕೋಲುಬೇಟೆಯಂತಹ ಆಚರಣೆಗಳು ರಾಜ್ಯದಲ್ಲಿ ನಾನಾ ಕಡೆ ನಾನಾ ಸಂದರ್ಭಗಳಲ್ಲಿ ನಡೆಯುತ್ತದೆ. ಬೆಂಗಳೂರಿನ ಸುತ್ತಮುತ್ತಲಿನ ತಾಲೂಕುಗಳನ್ನು ಹೊರತುಪಡಿಸಿದರೆ ಮಲೆನಾಡು, ಕರಾವಳಿ, ಹಾಗೂ ಉತ್ತರ ಕರ್ನಾಟಕದಂತಹ ಹಲವು ಭಾಗಗಳಲ್ಲಿಯೂ ಕಂಡುಬರುತ್ತದೆ.

### ಯುಗಾದಿ ಬೇಟೆ

ಯುಗಾದಿ ಬೇಟೆಯನ್ನು ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲ್ಲೂಕಿನ ಕಮಲಾಪುರದಲ್ಲಿ ಕಂಡುಬರುತ್ತದೆ. ಯುಗಾದಿ ಹಬ್ಬದ ಸಂದರ್ಭದಲ್ಲಿ ಇಲ್ಲಿನ ಬೇಡರಿಗೆ ಬಿಡುವಿಲ್ಲದ ಬೇಟೆಯ

ಸಂಭ್ರಮ. ಇದು ಬಹುಶಃ ವಿಜಯನಗರ ಕಾಲದ ಸೈನಿಕರ ಮುಂದುವರಿದ ಪೀಳಿಗೆಯವರೆಂದು ಹೇಳಿಕೊಳ್ಳುವ ಗೋಸಂಗಿ ಮತ್ತು ವಾಲ್ಮೀಕಿ ಜನಾಂಗದವರು ಬೇಟೆಯಾಡುತ್ತಾರೆ. ಭರ್ಜಿ ಕೋವಿಗಳು, ಇವರ ಆಯುಧಗಳು, ಭೇಟೆಯನ್ನರಿಸಿ ರಾತ್ರಿ ವೇಳೆ ಕಾಡಿನಲ್ಲಿ ತಿರುಗುವಾಗ ಪ್ರಾಣಿಗಳು ಸ್ಪಷ್ಟವಾಗಿ ಕಾಣಲಿ ಎಂಬ ಉದ್ದೇಶದಿಂದ ತಲೆಯ ಮೇಲೆ ಟಾರ್ಚ್ ಕಟ್ಟಿಕೊಳ್ಳುತ್ತಾರೆ. 'ನರಿಗೆ ಹದಿನಾರು ಬುದ್ಧಿಯಾದರೆ ನಮಗೆ ಹದಿನೇಳು ಬುದ್ಧಿ' ಎನ್ನುವ ಇವರು ನರಿ ಅಡಗಿರುವ ಜಾಗವನ್ನು ತಿಳಿಯಲು ಕಾಡಿನಲ್ಲಿ ನಾಯಿಗಳನ್ನು ತಿರುಗಾಡಲು ಬಿಡುತ್ತಾರೆ. ನರಿ ಸಿಕ್ಕಿ ಬೀಳುತ್ತದೆ ಎಂದು ಗೊತ್ತಾದರೆ ಸಾಕು ಬಲೆ ಹಾಕಿ ನರಿಯನ್ನು ಹಿಡಿದು ಕೇಕೆ ಹಾಕುತ್ತಾರೆ.

ನರಿ ಬೇಟೆಯಾಡುವ ಬೇಡ ಜನಾಂಗದವರ ದೃಷ್ಟಿಕೋನ ಸಂಪ್ರದಾಯವನ್ನು ಈಗಲೂ ಮುಂದುವರಿಸಿಕೊಂಡು ಹೋಗುತ್ತಿದ್ದಾರೆ. ಇಲ್ಲಿನ ಸ್ಥಳೀಯರು ಹೇಳುವಂತೆ "ಇದು ತಲೆತಲಾಂತರ ದಿಂದ ನಡೆದುಬಂದಿರುವ ಭೇಟೆ, ಅಪರಾಧ ಅಥವಾ ಹಿಂಸೆ ಎಂದು ಬೇಟೆಯನ್ನು ಕೈಬಿಟ್ಟರೆ ಸಂಪ್ರದಾಯ ಮೀರಿದಂತೆ ಎನ್ನುವರು.

ಬೇಟೆಯಲ್ಲಿ ನರಿಯನ್ನು ಮಾತ್ರ ಬೇಟೆಯಾಡುವುದಿಲ್ಲ. ನದಿ ಅಥವಾ ಕೆರೆ ತಳದ ಕೆಸರಿನಲ್ಲಿ ಅವಿತಿರುವ ಆಮೆಯನ್ನೂ ಹುಡುಕಿ ಬೇಟೆಯಾಡುತ್ತಾರೆ. ಆಮೆ ಇರುವ ಪ್ರದೇಶವನ್ನು ಗುರುತಿಸಿ ಭರ್ಜಿಯಿಂದ ಚುಚ್ಚುತ್ತಾರೆ. ಭರ್ಜಿ ಚುಚ್ಚಿದಾಗ ಸಪ್ಪಳ ಕೇಳಿತೆಂದರೆ ಆಮೆ ಸಿಕ್ಕಿದೆ ಎಂದು ಅರ್ಥ. ಮುಳ್ಳು ಹಂದಿಯ ಬಿಲಗಳಿಗೆ ಹೋಗಿ ಹೊಗೆ ಹಾಕಿ ಹಿಂಸಿಸಿ, ಸಾಯಿಸುವ ಆಚರಣೆಯೂ ಇದೆ. ಈ ರೀತಿ ಕೊಂದು ತಂದ ಪ್ರಾಣಿಗಳನ್ನು ಊರಿನಲ್ಲಿ ಮೆರವಣಿಗೆ ಮಾಡಲಾಗುತ್ತದೆ. ಹಾಗೆ ಪ್ರಾಣಿಯನ್ನು ಹಿಡಿದ ಬೇಟೆಗಾರನಿಗೆ 'ಶೂರ'ನೆಂಬ ಸನ್ಮಾನವೂ ದೊರೆಯುತ್ತದೆ. ತುಮಕೂರಿನ ದೇವಲಾಪುರ, ಉಪ್ಪಾರಳ್ಳಿ ನಲಗಾಪುರಗಳಲ್ಲಿ ಇಂತಹ ವಿಶೇಷ ಬೇಟೆ ಪದ್ಧತಿ ಇಂದಿಗೂ ಜಾರಿಯಲ್ಲಿದೆ.

ಸಂಕ್ರಾಂತಿ ಬೇಟೆಯೆಂಬ ಹೆಸರಿನ ಈ ಬೇಟೆಯನ್ನು ಶಿವಮೊಗ್ಗ ಉತ್ತರ ಕನ್ನಡ ಜಿಲ್ಲೆಯ ಕುಣಬಿ ಜನಾಂಗದವರು ಮಕರ ಸಂಕ್ರಾಂತಿಯನ್ನು 'ಹಕ್ಕಿ ಸಂಕ್ರಾಂತಿ' ಎಂದು ಆಚರಿಸುತ್ತಾರೆ. ಇಲ್ಲಿ ಹಕ್ಕಿಗಳನ್ನು ಮಾತ್ರ ಬೇಟೆಯಾಡುತ್ತಾರೆ. ಹಕ್ಕಿಗಳನ್ನು ಬೇಟೆಯಾಡುವ ದಿನ ಮೇಣದ ಕೋಲು' ಹಕ್ಕಿಗಳನ್ನು ಹಿಡಿಯುವ ಸಾಧನ. ಸಂಕ್ರಾಂತಿ ಸಂದರ್ಭದಲ್ಲಿ ಅತ್ತಿ, ಅಲದಮರಗಳು ಹಣ್ಣುಗಳಿಂದ ತುಂಬಿರುತ್ತವೆ. ಇಂತಹ ಮರಗಳಿಗೆ ಹಕ್ಕಿಗಳು ಗುಂಪು ಗುಂಪಾಗಿ ಬರುತ್ತವೆ. ಈ ಮರಗಳಿಗೆ ಮೇಣದ ಕೋಲು ಹಾಕುವುದರ ಮೂಲಕ ಸಾಕಷ್ಟು ಪ್ರಮಾಣದಲ್ಲಿ ಪಕ್ಷಿಗಳು ಸಿಕ್ಕಿ ಬೀಳುವಂತೆ ಮಾಡುತ್ತಾರೆ. ಹಕ್ಕಿಗಳು ಮೇಣದ ಕೋಲನ್ನೇ ಟೊಂಗೆಗಳೆಂದು ತಿಳಿದು ಕುಳಿತುಕೊಳ್ಳಲು ಹೋಗಿ ಸಿಕ್ಕಿಬೀಳುತ್ತವೆ. ಕೋಲಿನ ಮೇಲೆ ಕುಳಿತುಕೊಂಡ ಹಕ್ಕಿಯ ಕಾಲು, ರೆಕ್ಕೆಗಳೆಲ್ಲವೂ ಹಾರಲಾರದಷ್ಟು ಗಟ್ಟಿಯಾಗಿ ಅಂಟಿಕೊಳ್ಳುತ್ತವೆ. ಈ ರೀತಿಯಾಗಿ ಸಿಕ್ಕಿಬಿದ್ದ ಹಕ್ಕಿಯನ್ನು ಹಬ್ಬದ

ದಿನ ತಿನ್ನುವುದು ಇವರ ಉದ್ದೇಶವಾಗಿದೆ.

ಮಂಗಳೂರಿನ ಸುತ್ತ-ಮುತ್ತಲಿನ ಗ್ರಾಮಗಳಾದ ಕಾನಾ, ಮುತ್ತಲ, ಸಿದ್ದನಕಟ್ಟೆಗಳಲ್ಲಿ ಇರುವ ಕುಡುವಿ ಜನಾಂಗದವರು ವರ್ಷಕ್ಕೊಮ್ಮೆ ಇಂತಹ ವನಭೋಜನದ ಸವಿಯನ್ನು ಸವಿಯುತ್ತಾರೆ. ಮೂಲತಃ ಗೋವಾದವರಾದ ಇವರು ಪೋರ್ಚುಗೀಸರ ಕಾಲದಲ್ಲಿ ಇಲ್ಲಿಗೆ ವಲಸೆ ಬಂದವರು. ಇವರಲ್ಲಿ ಜಾತ ಮತ್ತು ಬಂಗ ಅರಸು ಎಂಬ ಪ್ರಭೇದಗಳಿವೆ.[೧೩] ಇವರು ಹಬ್ಬದ ದಿನ ಕಾಡಿನ ವನದೇವತೆಯ ಮೂರ್ತಿಯನ್ನು ಪ್ರತಿಷ್ಠಾಪಿಸುತ್ತಾರೆ. ಬೇಟೆಯಾಡಿ ತಂದ ಮೊಲ, ಕಾಡುಹಂದಿ, ಉಡಗಳ ಮಾಂಸವನ್ನು ವನದೇವತೆಗೆ ನೈವೇದ್ಯವಾಗಿ ಅರ್ಪಿಸಿ ನಂತರ ತಾವು ತಿನ್ನುತ್ತಾರೆ. ಬೇಟೆಗೆ ಆರಿಸಿಕೊಳ್ಳುವ ಪ್ರಾಣಿಗಳ ತಳಿಯಲ್ಲಿ ಬದಲಾವಣೆ ಆಗುತ್ತಿದ್ದರೂ ಬೇಟೆಯ ವಿಧಾನ ಮಾತ್ರ ಇಂದಿಗೂ ಹಾಗೆಯೇ ಉಳಿದುಕೊಂಡಿದೆ ಎನ್ನಬಹುದು.

ಭೂಮಿ ಹುಣ್ಣಿಮೆ, ದೀಪಾವಳಿಯ ವೇಳೆಯಲ್ಲಿ ಮಲೆನಾಡಿನಲ್ಲಿ ಸಾರುಬೇಟೆ, ಅಥವಾ ಸೋಬೇಟೆ ಎಂಬ ಹೆಸರಿನ ಮಲೆನಾಡ ಬೇಟೆಯು ಪ್ರಾರಂಭವಾಗುತ್ತದೆ. ಶತಮಾನಗಳಿಂದ ರೂಢಿಯಲ್ಲಿರುವ ಈ ಪದ್ಧತಿಯಲ್ಲಿ ಕೈಗೆ ಸಿಕ್ಕ ಕಾಡು ಪ್ರಾಣಿಗಳನ್ನು ಸಾಯಿಸಲಾಗುತ್ತದೆ. ಮಲೆನಾಡಿನ ಹಲವು ಜನಾಂಗಗಳು ಈ ಬೇಟೆಯನ್ನಾಡುತ್ತಾರೆ. ಬೆಳೆ ಕೊಯ್ಲಿಗೆ ಬರುವ ಸಮಯ ಇದುದ್ದರಿಂದ ಬೆಳೆ ರಕ್ಷಣೆಯ ನೆಪದಲ್ಲಿ ಈ ಬೇಟೆ ನಡೆಯುತ್ತದೆ. ಕಾಡಿನ ಹಂದಿಗಳಲ್ಲಿ ಸ್ವಲ್ಪ ಜನ ಕತ್ತಿ, ಬಂದೂಕುಗಳನ್ನು ಹಿಡಿದು ಪ್ರಾಣಿಗಳನ್ನು ಕೊಲ್ಲಲೆಂದು ಕಾಯುತ್ತಿರುತ್ತಾರೆ. ಉಳಿದವರು ಹುಲ್ಲುಗಾವಲು ಮರದ ಬುಡದಲ್ಲಿರುವ ಗಿಡ-ಗಂಟೆಗಳನ್ನು ಕೋಲಿನಿಂದ ಬಡಿದು ನೋಡುತ್ತಾರೆ. ಈ ಅಬ್ಬರಕ್ಕೆ ಬೆದರಿ ಹೊರಗೆ ಬರುವ ಪ್ರಾಣಿಯನ್ನು ಹೊಡೆದು ತರುವುದೇ ಇವರ ಸಂಪ್ರದಾಯ. ಮೊಲ ಹಾಗು ಪಾರಿವಾಳಗಳ ಮಾಂಸ ಸೇವನೆ ಗರ್ಭಿಣಿಯರ ಆರೋಗ್ಯಕ್ಕೆ ಒಳ್ಳೆಯದು ಎಂಬ ನಂಬಿಕೆ ಹಾಸನ ಸಕಲೇಶಪುರಗಳಲ್ಲಿ ಇದೆ. ಈ ನಂಬಿಕೆಯಿಂದಾಗಿಯೇ ಇಲ್ಲಿ ಮೊಲ ಮತ್ತು ಪಾರಿವಾಳಗಳನ್ನು ಬೇಟೆಯಾಡುವ ರೂಢಿ ಚಾಲ್ತಿಯಲ್ಲಿದೆ.

ಕರ್ನಾಟಕ ರಾಜ್ಯ ಸರ್ಕಾರ ೧೯೫೮ರಲ್ಲಿ "ಪ್ರಾಣಿಬಲಿ ನಿಷೇದ ಕಾನೂನನ್ನು ಜಾರಿಗೆ ತಂದಿದ್ದರೂ ಪ್ರಾಣಿಬಲಿ ನಿರಾಂತಕವಾಗಿ ಸಾಗುತ್ತಿದೆ. ಈ ಕಾನೂನಿನ ಪ್ರಕಾರ ಯಾವುದೇ ಪ್ರಾಣಿಯನ್ನು ಬಲಿ ಕೊಡಬಾರದು. ಭಾರತ ಸರ್ಕಾರದ ವನ್ಯಜೀವಿ ಸಂರಕ್ಷಣಾ ಕಾಯಿದೆ"ಯು ಸಹ ಇದನ್ನೇ ಹೇಳುತ್ತದೆ. ಕಾಡುಪ್ರಾಣಿಗಳನ್ನು ಬೇಟೆಯಾಡಿದರೆ ಇಪ್ಪತ್ತೈದು ಸಾವಿರ ರೂಗಳು ದಂಡ ಹಾಗೂ ಐದು ವರ್ಷಗಳ ಸಜೆ ಇದೆ. ಈ ರೀತಿಯ ಕಾನೂನುಗಳು ಇದ್ದರೂ ರಾಜ್ಯದ ಬಹುತೇಕ ಕಡೆಗಳಲ್ಲಿ ವನ್ಯಪ್ರಾಣಿಗಳ ಬೇಟೆ ಆಚರಣೆ ಹಾಗು ದೇವರ ಹೆಸರಿನಲ್ಲಿ ಪ್ರಾಣಿಗಳ ಬಲಿ ನಡೆಯುತ್ತಲೇ ಇದೆ. ಹಾಗಾಗಿ ನಮ್ಮಲ್ಲಿ ಕಠಿಣವಾದ ಕಾನೂನುಗಳು ಇದ್ದರೂ, ಆ ಕಾನೂನುಗಳು

ಸಮರ್ಪಕವಾಗಿ ಕಾರ್ಯಗತಗೊಳ್ಳುತ್ತಿಲ್ಲ. ಆದರೆ ಇಲ್ಲಿ ಸಂಪ್ರದಾಯ, ನಂಬಿಕೆ, ಆಚಾರ-ವಿಚಾರಗಳು ಭದ್ರವಾಗಿ ಬೇರೂರಿರುವುದರಿಂದ ಕಾನೂನುಗಳು ಪಾಲಿಸಲಾಗುತ್ತಿಲ್ಲವೆನ್ನ ಬಹುದು.

## ಹುಲುಕಡಿ ವೀರಭದ್ರಸ್ವಾಮಿ ಜಾತ್ರೆ

ತಾಲ್ಲೂಕಿನ ಸಕ್ಕರೆಗೊಲ್ಲಹಳ್ಳಿ ಗ್ರಾಮ ಪಂಚಾಯ್ತಿ ವ್ಯಾಪ್ತಿಯ ಲಿಂಗಾಪುರ ಗ್ರಾಮದಲ್ಲಿರುವ ಹುಲುಕಡಿ ವೀರಭದ್ರಸ್ವಾಮಿ ಜಾತ್ರೆ ಪ್ರತಿವರ್ಷ ಫೆಬ್ರವರಿ ತಿಂಗಳಲ್ಲಿ ನಡೆಯುತ್ತದೆ. ಸುಮಾರು ಅರವತ್ತೈದು ಗ್ರಾಮಗಳನ್ನು ಒಳಗೊಂಡ ಈ ನಾಡು ಹುಲುಕಡಿ ನಾಡ ಪ್ರಭುಗಳ ಆಳ್ವಿಕೆಗೆ ಒಳಪಟ್ಟಿತ್ತು. ಶಾಸನಗಳಲ್ಲಿ ಈ ನಾಡನ್ನು ಪುರ್ಕೋಡಿ ಎಂದು ಉಲ್ಲೇಖಿಸಲಾಗಿದೆ. ಇವರ ಕೇಂದ್ರಸ್ಥಾನ ದೊಡ್ಡಬಳ್ಳಾಪುರಕ್ಕೆ ಹದಿನಾಲ್ಕು ಕಿ.ಮೀ. ಅಂತರದಲ್ಲಿದೆ. ಈ ಹುಲ್ಲುಕಡಿನಾಡ ಪ್ರಭುಗಳು ವಿಜಯನಗರ ಅರಸರ ಅಧೀನದಲ್ಲಿ ಆಳ್ವಿಕೆಯನ್ನು ನಡೆಸಿದವರು.

ಈ ಕ್ಷೇತ್ರಕ್ಕೆ ಒಂದು ದಂತ ಕತೆಯೂ ಇದೆ. ಅಗಸ್ತ್ಯ ಮಹರ್ಷಿಗಳು ಬಹುಕಾಲ ತಪಸ್ಸು ಮಾಡಿ ವೀರಭದ್ರಸ್ವಾಮಿಯ ವಿಗ್ರಹವನ್ನು ಪ್ರತಿಷ್ಠಾಪಿಸಿದರೆಂಬ ಪ್ರತೀತಿ ಇದೆ. ಈ ಸ್ವಾಮಿಗೆ ಪ್ರತಿ ಮಂಗಳವಾರ ಹಾಗೂ ಶುಕ್ರವಾರ ವಿಶೇಷ ಪೂಜೆಗಳು ನಡೆಯುತ್ತವೆ. ಅಗಸ್ತ್ಯ ಮುನಿಗಳು ತಪಸ್ಸು ಮಾಡುತ್ತಿದ್ದಾಗ ನಿತ್ಯ ಅವರಿಗೆ ಒಂದು ಹಸು ಬಂದು ಹಾಲನ್ನು ಕೊಡುತ್ತಿತ್ತು. ಆಗ ಮುನಿಗಳು ಅದಕ್ಕೆ ಪ್ರತಿಯಾಗಿ ಹಸುವಿಗೆ ಒಂದು ಹಿಡಿ ಹುಲ್ಲು ಕುಡಿಯನ್ನು ತಿನ್ನಿಸುತ್ತಿದ್ದರು. ಈ ಹಿನ್ನೆಲೆಯಲ್ಲಿ ಈ ಕ್ಷೇತ್ರಕ್ಕೆ ಹುಲುಕಡಿ ಎಂಬ ಹೆಸರು ಬಂದಿತೆಂದು ಹೇಳುತ್ತಾರೆ.

ವೀರಭದ್ರಸ್ವಾಮಿ ಜಾತ್ರೆಯ ಸಮಯದಲ್ಲಿ ಬೆಳಗಿನ ಜಾವ ಸುಮಾರು ೪.೩೦ರ ಸಮಯಕ್ಕೆ ಸ್ವಾಮಿಗೆ ಅಭಿಷೇಕ ನಡೆಯುತ್ತದೆ. ನಂತರ ಲಿಂಗಾಪುರದಲ್ಲಿರುವ ಉತ್ಸವಮೂರ್ತಿಯನ್ನು ತಂದು ಮೆರವಣಿಗೆಯಲ್ಲಿ ರಥದಲ್ಲಿ ಕೂರಿಸಿ ಪೂಜಾ ವಿಧಾನಗಳು ನಡೆಯುವುದು ವಾಡಿಕೆ. ಪೂಜೆಯಾದ ನಂತರ ರಥವನ್ನು ಎಳೆಯುವರು. ರಾಸುಗಳ ಜಾತ್ರೆಯು ಇದೇ ಸಂದರ್ಭದಲ್ಲಿ ನಡೆಯುವುದು. ಅಂದು ಹೋಮ, ಉತ್ಸವ, ನಂದಿಧ್ವಜ ಕುಣಿತ ಮುಂತಾದ ಕಾರ್ಯಕ್ರಮಗಳಿಂದ ಜಾತ್ರೆಗೆ ಬಂದ ಭಕ್ತಾದಿಗಳಿಗೆ ದಾಸೋಹ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ. ಈ ದೇವಾಲಯದ ವಿಶೇಷವೆಂದರೆ, ಸ್ವಾಮಿಗೆ ಎಲ್ಲಾ ಜಾತಿಯ ಒಕ್ಕಲುತನವಿದೆ. ಬಹುತೇಕ ಜನಾಂಗದವರು ದೂರದಿಂದ ಬಂದು ಪೂಜೆ ಸಲ್ಲಿಸುತ್ತಾರೆ.

ಹುಲುಕಡಿ ಕ್ಷೇತ್ರಕ್ಕೆ ಮತ್ತಷ್ಟು ಐತಿಹ್ಯವನ್ನು ನೀಡುವ ಜನಪದ ಕಥೆಗಳು ಅಲ್ಲಿರುವ ಕುರುಹುಗಳು, ಹುಲುಕಡಿ ಕ್ಷೇತ್ರದ ಸಂಸ್ಕೃತಿಯನ್ನು ಬಿಂಬಿಸುತ್ತವೆ. ಇಲ್ಲಿ ದುರ್ವಾಸಮುನಿಗಳು ವಾಸವಾಗಿದ್ದರೆಂದು ಪ್ರತಿದಿನ ಈ ಬೆಟ್ಟದಲ್ಲಿ ಬೆಳೆಯುತ್ತಿದ್ದ ಹುಲ್ಲಿನ ಕುಡಿಯನ್ನು ಆಹಾರವಾಗಿ ಸ್ವೀಕರಿಸುತ್ತಿದ್ದರೆಂದು

ಹೇಳುವರು. ಇವರೊಂದಿಗೆ ಯತಿಗಳು ಇದ್ದು ತಪ್ಪಲಲ್ಲಿರುವ ಗುಹೆಗಳಲ್ಲಿ ತಪಸ್ಸನ್ನು ಆಚರಿಸುತ್ತಾ ಈಗಲೂ ಸಂಚರಿಸುತ್ತಾರೆ ಎಂಬುದಕ್ಕೆ ಅಲ್ಲಿನ ಜನಪದ ಕಥೆಗಳೂ ಉಂಟು.

ಹುಲುಕಡಿ ಬೆಟ್ಟದ ಪಕ್ಕದಲ್ಲಿ ಲಿಂಗಾಪುರ ಎಂಬ ಗ್ರಾಮವಿದೆ. ಈ ಗ್ರಾಮದ ಸ್ವಲ್ಪ ದೂರದಲ್ಲಿ ಹಾಲುಭಾವಿ ಇದೆ. ಈ ಬಾವಿಯಲ್ಲಿ ಕುಡಿಯಲು ಶುದ್ಧವಾಗಿದ್ದು ಹಾಲಿನಂತೆ ಬೆಳ್ಳಗೆ ಇದ್ದು ಸಿಹಿಯಾಗಿದೆ. ಈ ಹಳ್ಳದಲ್ಲಿ ನೀರು ವರ್ಷಪೂರ್ತಿ ಬತ್ತುವುದೇ ಇಲ್ಲ. ಹಾಗಾಗಿ ಇದಕ್ಕೆ ಹಾಲುಹಳ್ಳ, ಹಾಲುಬಾವಿ ಎಂಬ ಹೆಸರು ಅಭಿದಾನವಾಗಿದೆ. ಇದಕ್ಕೆ ಒಂದು ಐತಿಹ್ಯವೂ ಉಂಟು. ಲಿಂಗಾಪುರ ಗ್ರಾಮಕ್ಕೆ ಹೊಸದಾಗಿ ಮದುವೆಯಾಗಿ ಬರುವ ಹೆಣ್ಣು ಮಕ್ಕಳು ಮೊದಲು ಹಾಲುಬಾವಿಯ ಗಂಗಾಮಾತೆಗೆ ಪೂಜೆ ಸಲ್ಲಿಸಿ ನಂತರ ಮನೆಗೆ ಹೋಗುವ ಸಂಪ್ರದಾಯ ಈಗಲೂ ಮುಂದುವರಿದು ಕೊಂಡು ಹೋಗುವ ಪದ್ಧತಿ ಇದೆ.

ಹುಲುಕಡಿನಾಡಿನ ವ್ಯಾಪ್ತಿಗೆ ಒಳಪಟ್ಟ ಕಸಾಘಟ್ಟ ಊರಿನ ಪೂರ್ವ ದಿಕ್ಕಿನ ಒಂದು ಕಿ.ಮೀ. ದೂರದಲ್ಲಿ ಒಂದು ಸ್ಥಳವಿದೆ. ಬಹಳ ಹಿಂದೆ ಒಂದು ಸಂಸ್ಕೃತಿ ಹುಟ್ಟಿ ಬೆಳೆದು, ಇಂದು ನಾಮಾವಶೇಷಗಳನ್ನು ಮಾತ್ರ ಕಾಣಬಹುದಾಗಿದೆ. ಆ ಸ್ಥಳಕ್ಕೆ ಈಗ 'ಮಕ್ಕಳರಾಯನ ತೋಪು' ಎಂದು ಕರೆಯುತ್ತಾರೆ. ಈ ಸ್ಥಳ ಸುಮಾರು ಆರು ಎಕರೆ ಮಠಕ್ಕೆ ಸೇರಿದ್ದು ನೂರಾರು ಜಾತಿಯ ಮಾವಿನ ಮರಗಳಿದ್ದು, ಒಂದೊಂದು ಮರದ ಹಣ್ಣು ಒಂದೊಂದು ಜಾತಿಯದಾಗಿದ್ದು, ಒಂದೊಂದು ಬಗೆಯ ರುಚಿಸ್ವಾದವನ್ನು ನೀಡುತ್ತಿದ್ದವು. ಈ ರುಚಿಕರವಾದ ಹಣ್ಣುಗಳನ್ನು ತಿನ್ನಲು ಮಕ್ಕಳು ಆಟವಾಡುತ್ತ ಕಾಲಕಳೆಯುತ್ತಿದ್ದರು. ಆದ್ದರಿಂದ ಈ ಸ್ಥಳಕ್ಕೆ ಮಕ್ಕಳರಾಯನ ತೋಪು ಎಂಬ ಹೆಸರು ಅನ್ವರ್ಥವಾಗಿರಬಹುದು. ಇಲ್ಲಿ ಹಾಲುಹಳ್ಳ, ಸಂತೇಬೀಡು, ಬಸವಣ್ಣದೇವರ ಗುಡಿ, ಮಂಟಪಗಳು ಇಂದಿಗೂ ಕುರುಹುಗಳಾಗಿ ನಿಂತಿವೆ.

### ರಾಜಘಟ್ಟದ ಜಾತ್ರೆ

ರಾಜಘಟ್ಟ ಗ್ರಾಮದ ಹೊರವಲಯದಲ್ಲಿನ ಮಾರುತಿ ನಗರದಲ್ಲಿ ಮಾರುತಿ ಜಾತ್ರೆಯು ಯುಗಾದಿ ಕಳೆದ ಒಂಬತ್ತು ದಿನಗಳಿಗೆ ರಾಮ ನವಮಿಯಂದು ಜಾತ್ರೆ ನಡೆಯುತ್ತದೆ. ರಥದಲ್ಲಿ ಉತ್ಸವಮೂರ್ತಿಗಳಾದ ರಾಮ, ಲಕ್ಷ್ಮಣ, ಸೀತೆ, ಹಾಗು ಹನುಮನನ್ನು ಕೂರಿಸಿ ರಾಮನವಮಿಯಂದು ರಥೋತ್ಸವವನ್ನು ಅದ್ದೂರಿಯಾಗಿ ಆಚರಿಸುತ್ತಾರೆ. ರಾಜಘಟ್ಟ ಗ್ರಾಮ ಹಾಗೂ ಸುತ್ತಮುತ್ತಲಿನ ಗ್ರಾಮದ ಮಹಿಳೆಯರು ಅಂದು ಬೆಲ್ಲದ ಅರತಿಗಳನ್ನು ರಥಕ್ಕೆ ಬೆಳಗುವ ಪದ್ಧತಿ ಇದೆ. ಸಾವಿರಾರು ಜನರು ಜಾತ್ರೆಯಲ್ಲಿ ಪಾಲ್ಗೊಂಡು, ಸಂತೋಷ ಸಂಭ್ರಮಗಳಿಂದ ಅಚರಿಸುವವರು ಈ ಜಾತ್ರೆಯಲ್ಲಿ ಯಾವುದೇ ಪ್ರಾಣಿಬಲಿ ಇಲ್ಲ.

## ಮಾರಮ್ಮ ಜಾತ್ರೆ

ಮಾರಮ್ಮ ಜನಪದ ದೇವತೆ. ಶೂದ್ರ ದೇವತೆಯಾದ ಈಕೆ ನಾಡಿನಾದ್ಯಂತ ಜನಮನ ಹೃದಯ ಗೆದ್ದವಳು. ಹಾಗಾಗಿ ತಾಲ್ಲೂಕಿನಲ್ಲೂ ಜಾತಿಮತ ಭೇದವಿಲ್ಲದೆ ಎಲ್ಲಾ ವರ್ಗದ ಭಕ್ತಾಗ್ರಣಿಯಾಗಿದ್ದಾಳೆ. ನೂರಾರು ಊರು, ನಗರ ಪಟ್ಟಣಗಳಿಂದ ಮತಭೇದವಿಲ್ಲದೆ ಭಕ್ತಸ್ತೋಮವನ್ನು ಆಕರ್ಷಿಸುವಳು. ಕೊರಟಗೆರೆಗೆ ಹೋಗುವ ರಸ್ತೆಯಲ್ಲಿ ಮಚ್ಚೇನಹಳ್ಳಿ ಗ್ರಾಮವಿದೆ. ಈ ಗ್ರಾಮದಿಂದ ಒಂದು ಕಿ.ಮೀ. ದೂರದಲ್ಲಿ ದೇವಾಲಯವಿದೆ. ಬಹಳ ವಿಸ್ತಾರವಾದ ಗಿಡ-ಮರಗಳ ಆಯಕಟ್ಟಿನ ಸ್ಥಳದಲ್ಲಿ ತೆರೆದ ಗುಂಡಿಯೊಂದಿದೆ. ಆ ಗುಂಡಿಯಲ್ಲಿರುವಾಕೆಯೇ ಮಾರಮ್ಮ.

ಸಾಸಲು ಹೋಬಳಿ ಬಹಳ ಏರುತಗ್ಗುಗಳಿಂದ ಕೂಡಿದ್ದು, ಸುಂದರ ಬನಸಿರಿಯ ಬೀಡು. ತೀರಾ ಹಿಂದುಳಿದ ಪ್ರದೇಶ. ಇವರ ಮುಖ್ಯ ಕಸುಬು ವ್ಯವಸಾಯ. ಕುರಿ, ಮೇಕೆ, ಹಸುಗಳ್ನು ಮೇಯಿಸುವ ಕಾಯಕ ಇಲ್ಲಿಯ ಜನರದ್ದು, ನಗರ ಜೀವನಕ್ಕೆ ಬಹಳ ದೂರವಿದೆ. ಗ್ರಾಮಗಳಲ್ಲಿರುವ ಮನೆಗಳು ಹಳೇಯದಾದ ಸೂರುಗಳು, ಹಳೆಯ ಶಿಲಾಯುಗದ ಬೀಡಾಗಿರುವ ಈ ಹೋಬಳಿಯಲ್ಲಿ ಕುಗ್ರಾಮಗಲ ಹಳೆಯ ಪಳೆಯುಳಿಕೆಗಳು ನಮ್ಮನ್ನು ಜ್ಞಾಪಿಸುತ್ತವೆ. ಇಲ್ಲಿನ ಮುಗ್ಧ ಜನರ ನಂಬಿಕೆಗಳು ಹೇಗಿವೆಯೆಂದರೆ, ಹಸು ಹಾಲು ಕರೆಸದೆ ಒದೆಯುತ್ತದೆಯೇ, ಬೆಳೆಗಳಿಗೆ ರೋಗ ಬಂದರೆ, ನಮ್ಮ ಮನಸ್ಸಿನಲ್ಲಿ ಅಂದುಕೊಂಡ ಕೆಲಸ ಆಗದಿದ್ದರೆ, ತೋಡುವ ಬಾವಿಯಲ್ಲಿ ನೀರು ಬೀಳಬೇಕಾದರೆ, ಮಾರಮ್ಮ ದೇವತೆಯ ಮೊರೆ ಹೋಗುವರು. ನಂಬಿಕೆಯಿಂದ ಇಂಬು ಪಡೆದು ಬಾಳನ್ನು ಸವೆಸುತ್ತಿದ್ದ ಜನತೆಯ ಬದುಕಿಗೆ ಮಾರಮ್ಮದೇವತೆ ಶ್ರೀರಕ್ಷೆಯಿದ್ದಂತೆ. ದನಕರುಗಳಿಗೆ ರೋಗ ಬಂದು ವಾಸಿಯಾಗಬೇಕಾದರೆ, ಮಕ್ಕಳಿಗೆ ಜ್ವರ, ವಾಂತಿ, ಭೇದಿ, ಸೆಳವು ಇತ್ಯಾದಿ ರೋಗಗಳನ್ನು ವಾಸಿ ಮಾಡಲು ಈಕೆ ವೈದ್ಯರಿದ್ದಂತೆ. ಊರಿಗೆ ಹೆಣ್ಣು ತರಬೇಕಾದರೆ, ಮಕ್ಕಳಿಲ್ಲದವರಿಗೆ ಮಕ್ಕಳಭಾಗ್ಯ ಪ್ರಾಪ್ತಿಯಾಗಬೇಕಾದಲ್ಲಿ, ಬೆಳೆ ಚೆನ್ನಾಗಿ ಫಸಲು ಕೊಡಬೇಕಾದಲ್ಲಿ ಮಾರಮ್ಮ ದೇವತೆಯೇ ಮಾರ್ಗದರ್ಶಕಳು. ಈ ರೀತಿಯಿಂದ ನಂಬಿಕೆಗಳು ಗಟ್ಟಿಯಾಗಿ ಬೇರೂರಿ, ಈಕೆಯನ್ನು ಬಿಟ್ಟುಹೋಗಲಾರವು. ಈಕೆಯನ್ನು ಹೂಗಳಿಂದಲೇ ಪೂಜಿಸಬೇಕೆಂದಿಲ್ಲ. ಬೇವಿನಸೊಪ್ಪು, ಸೀರೆ ಈಕೆಯ ಉಡುಗೆ, ದನಿನಮಾರಮ್ಮನೆಂದು ಪ್ರಸಿದ್ಧಳಾದ ಈಕೆಗೆ ಪ್ರಾಣಿಬಲಿ ಆಗಬೇಕೆಂದೇನಿಲ್ಲ. ಹಾಲು, ಹಣ್ಣು ಕೊಟ್ಟರೂ ನಡೆಯುತ್ತದೆ.

ಈ ದೇವಾಲಯಕ್ಕೆ ಒಂದು ಜನಾಂಗಕ್ಕೆ ಸೇರಿದ ಪೂಜಾರಿಗಳೇ ಆಗಬೇಕೆಂಬ ನಿಯಮವಿಲ್ಲ. ಆಚಾರ್ಯ ಇಲ್ಲಿ ಪೂಜಾರಿಗಳಾಗಿದ್ದಾರೆ. ಪೂಜಾರಿ ಇಲ್ಲದ ದಿನ ಪೂಜಾರಿ ಹೆಂಡತಿ ಪೂಜೆ ಮಾಡುತ್ತಾಳೆ. ಹರಕೆಗಳನ್ನು ಹೊತ್ತ ಮಹಿಳೆಯರು, ಪುರುಷರು, ತಪ್ಪದೆ ಬಂದು ಹರಕೆಗಳನ್ನು ನೀಡುತ್ತಾರೆ. ಈ ದೇವತೆಗೆ ಮಂಗಳವಾರ ಮತ್ತು ಶುಕ್ರವಾರ ಶ್ರೇಷ್ಠವಾದ ದಿನಗಳಾಗಿವೆಯಂತೆ, ಈ ವಾರಗಳಂದು ಕುರಿ, ಮೇಕೆ, ಕೋಳಿಗಳನ್ನು ಬಲಿನೀಡಿ ತಮ್ಮ ಹರಕೆಗಳನ್ನು ತೀರಿಸುತ್ತಾರೆ.

ಈ ದೇವತೆಗೆ ಮೂರು ವರ್ಷಗಳಿಗೊಮ್ಮೆ ಜಾತ್ರೆ ನಡೆಯುತ್ತದೆ. ಬೆಂಗಳೂರು, ಗೌರಿಬಿದನೂರು, ತುಮಕೂರು, ದೊಡ್ಡಬಳ್ಳಾಪುರ, ಕೊರಟಗೆರೆ ನೆಲಮಂಗಲ, ಮುಂತಾದ ದೂರದ ಸ್ಥಳಗಳಿಂದ ಭಕ್ತರು ಬರುತ್ತಾರೆ. ಬರುವಾಗ, ಧಾನ್ಯ, ಧವಸ, ಬಟ್ಟೆ ತಂದು ದೇವಿಗೆ ಅರ್ಪಿಸುತ್ತಾರೆ. ಬಹುಶಃ ಇದೆಲ್ಲಾ ಪೂಜಾರಿಗೆ ಸೇರುತ್ತದೆ. ಮೂರುವರ್ಷಕ್ಕೊಮ್ಮೆ ಶಿವರಾತ್ರಿ ಕಾಲದ ನಂತರ ಶುಭ ದಿನವಾದ ಮಂಗಳವಾರ ಜಾತ್ರೆ ನಡೆಯುತ್ತದೆ.

ಮಚ್ಚೇನಹಳ್ಳಿ ಗ್ರಾಮಸ್ಥರು ಮತ್ತು ಪೂಜಾರಿಗಳು ಒಂದು ತಿಂಗಳ ಮುಂಚೆಗೆ ಸಭೆ ಸೇರಿ ದಿನಾಂಕವನ್ನು ನಿಗಧಿಪಡಿಸಿ, ಮನೆಗಿಂತಿಷ್ಟು ಹಣವನ್ನು ಸಂಗ್ರಹಿಸುತ್ತಾರೆ. ತಳವಾರ ಮನೆಮನೆ ಸಾರುತ್ತಾನೆ. ವಿಶ್ವಕರ್ಮದ ಪೂಜಾರಿ, ಜೇಡಿಮಣ್ಣನ್ನು ತಂದು, ನೆರಳಲ್ಲಿ ಹಾಕಿ ಹದ ಮಾಡಿ ದೇವತೆಯನ್ನು ಮಾಡಿ ಮುಖಕ್ಕೆ ಕೆಂಪು ಬಣ್ಣವನ್ನು ಲೇಪಿಸುತ್ತಾನೆ.

ಆರಾಧನೆಯ ದಿನ ಗ್ರಾಮದ ಭಕ್ತರು ಊರೆಲ್ಲಾ ಶೃಂಗಾರ ಮಾಡಿ ತಂಬಿಟ್ಟಿನ ಆರತಿಗಳನ್ನು ಮಾಡಿ ಬೆಳಗುತ್ತಾರೆ. ಮಂಗಳವಾರದ ದಿನ ಬೆಳಿಗ್ಗೆ ಹನ್ನೆರಡು ಗಂಟೆಯ ವೇಳೆಗೆ. ಊರ ಬಳಿ ಸಿದ್ಧವಾದ ಮಾರಮ್ಮ ಮೂರ್ತಿಯನ್ನು ಬೇವಿನ ಮರದ ಸೊಪ್ಪಿನಿಂದ ಶೃಂಗಾರ ಮಾಡುತ್ತಾರೆ. ಊರಿನ ಜನರು ಉದೋ, ಉದೋ ಉದೋ ಎಂದು ಹೇಳುತ್ತಾ ಹರ್ಷಿಸುತ್ತಾರೆ. ಆಗ ಪ್ರಾಣಿಗಳನ್ನು ಬಲಿ ಕೊಡುತ್ತಾರೆ. ಬಲಿಗೆ ನೀಡಿದ ಪ್ರಾಣಿಗಳನ್ನು ಕೈವಾಡದವರು ಹೊತ್ತುಕೊಂಡು ಹೋಗುತ್ತಾರೆ. ತಳವಾರ ಮನೆಗೆ ಎಂಟುಸೇರು ರಾಗಿಯನ್ನು ಭತ್ಯ ಪಡೆಯುತ್ತಾನೆ. ಭಕ್ತಾದಿಗಳು ನೀಡುವ ಸೀರೆ, ಬಟ್ಟೆ ಮತ್ತು ಧಾನ್ಯವನ್ನು ಪೂಜಾರಿ ಪಡೆಯುತ್ತಾನೆ. ಈ ಕಾರ್ಯವಾದ ಮೇಲೆ ಮೂರ್ತಿಯನ್ನು ಊರ ಪೂರ್ವದಿಕ್ಕಿಗೆ ಒಂದು ಕಿ.ಮೀ.ದೂರದ ಗಡಿಯಲ್ಲಿ ಮರದ ಕೆಳಗೆ ಇಡುತ್ತಾರೆ. ಅಲ್ಲಿಯೂ ಸಹ ದೂರದಿಂದ ಬಂದ ಸಹಸ್ರಾರು ಮಂದಿ ತಂದಿದ್ದ ಬಲಿಗಳನ್ನು ಕೊಡುತ್ತಾರೆ. ಬಲಿಯಾದ ಸ್ಥಳ ರಕ್ತದೋಕುಳಿಯಾಗಿರುತ್ತದೆ. ಬಹಳ ಹಿಂದೆ ಊರಿಗೊಂದು ಮಾರಮ್ಮ ಇದ್ದು ಕೋಳಿ, ಕುರಿ, ಕೋಣ ಬಲಿಕೊಡುತ್ತಿದ್ದರು. ಆದರೆ ಈಗ ಮನೆಗೊಂದರಂತೆ ಬಲಿಕೊಡುವುದನ್ನು ರೂಢಿ ಮಾಡಿಕೊಂಡಿದ್ದಾರೆ. ಈ ರೀತಿಯ ಧಾರ್ಮಿಕ ಆಚರಣೆಗಳು ಇಂದಿಗೂ ನಡೆಯುತ್ತವೆ. ಒಂದಂತೂ ಸತ್ಯದ ಮಾತು. ಇತ್ತೀಚೆಗೆ ಬಲಿಪದ್ಧತಿಯಲ್ಲಿ ಕೆಲವು ಕಡೆ ಕಡಿಮೆಯಾಗತೊಡಗಿದೆ. ಎಲ್ಲ ವರ್ಗದ ಭಕ್ತರು ಈಕೆಯನ್ನು ಆರಾಧಿಸುವುದು ಇಲ್ಲಿನ ಒಂದು ವಿಶೇಷ.

**ವೀರಾಪುರದ ಮಾರಮ್ಮ ಜಾತ್ರೆ**

ವೀರಾಪುರದ ಮಾರಮ್ಮ ಈ ದೇವಾಲಯವು ಬೆಂಗಳೂರು ಹಾಗೂ ದೊಡ್ಡಬಳ್ಳಾಪುರದ ಹೆದ್ದಾರಿಯ ನಡುವೆ ಇರುವ ವೀರಾಪುರದ ಗ್ರಾಮದಲ್ಲಿನ ಈ ಗ್ರಾಮ ನಗರಕ್ಕೆ ಐದು ಕಿ.ಮೀ. ಅಂತರದಲ್ಲಿದೆ. ಪ್ರಾಚೀನ ಕಾಲದಲ್ಲಿ ವೀರರ ಹೋರಾಟದ ಕ್ಷೇತ್ರವಾಗಿತ್ತು ಎನ್ನುವುದಕ್ಕೆ ಅಲ್ಲಿ

ದೊರೆತಿರುವ ವೀರಗಲ್ಲುಗಳೇ ಸಾಕ್ಷಿ. ಆದರೆ ಈಗ ಈ ಪ್ರದೇಶವೆಲ್ಲಾ ಕೈಗಾರಿಕಾ ಪ್ರದೇಶವಾಗಿದೆ. ಈ ದೇವತೆಗೆ ಮಂಗಳವಾರ ಮತ್ತು ಶುಕ್ರವಾರ ಪೂಜೆ, ನಡೆಯುತ್ತದೆ. ತಿಗಳ ಜಾತಿಗೆ ಸೇರಿದವರು ಪೂಜಾರಿಗಳಾಗಿದ್ದಾರೆ. ಈ ದೇವತೆಯು ಬರುವ ಭಕ್ತರ ಪ್ರಶ್ನೆಗಳಿಗೆ ದೇವಿ, ಪೂಜಾರಿ ಮೈ ಮೇಲೆ ಅವಾಹನಳಾಗಿ ಉತ್ತರ ನೀಡುತ್ತಾಳಂತೆ. ಭಕ್ತರು ಹರಕೆ ಹೊತ್ತು ಮೈಸೂರು, ಗೌರಿಬಿದನೂರು, ದೊಡ್ಡಬಳ್ಳಾಪುರ, ದೇವನಹಳ್ಳಿ ನಗರಗಳಿಂದ ಬರುತ್ತಾರೆ. ದೊಡ್ಡಮಾರಮ್ಮ ಮತ್ತು ಚಿಕ್ಕಮಾರಮ್ಮ ದೇವತೆಗಳಲ್ಲಿ ಚಿಕ್ಕಮಾರಮ್ಮ ಹೆಚ್ಚ ಪ್ರಸಿದ್ಧಳಾಗಿದ್ದಾಳೆ. ಭಕ್ತರ ಮೈಮೇಲೆ ಬಂದ ಈಕೆ ಭಕ್ತರು ಹರಕೆಗೆ ತಂದಿದ್ದ ಕುರಿ, ಕೋಳಿಗಳ ಕತ್ತನ್ನು ಕಡಿದು ತುಂಡರಿಸುತ್ತಾಳೆ. ಇದನ್ನೇ ಗಾವು ಸಿಗಿಯುವುದು ಎನ್ನುತ್ತಾರೆ. ಇದೇ ದೇವಾಲಯದಲ್ಲಿ ಮಹೇಶ್ವರಿಯೂ ಇದ್ದು ಈಕೆಗೂ ಪೂಜೆಯನ್ನು ಸಲ್ಲಿಸುತ್ತಾರೆ.

ಯುಗಾದಿ ಹಬ್ಬ ಕಳೆದ ವಾರದಲ್ಲಿ ಊರಜಾತ್ರೆಯಾಗಿ ದೇವತೆಗೆ ಕುರಿ, ಕೋಳಿ, ಮೇಕೆ, ಕೋಣಗಳ ಬಲಿಯು ನಡೆಯುತ್ತದೆ. ವೀರಾಪುರ, ಜಿಂಕೆಬಚ್ಚಹಳ್ಳಿ, ಚಿಕ್ಕ ತುಮಕೂರುಗಳಿಂದ ಭಕ್ತರು ತಂಬಿಟ್ಟಿನ ಆರತಿ ಬೆಳಗುತ್ತಾರೆ. ಈಕೆಗೆ ಕಣಿಗಳ ಹೂ ಮತ್ತು ಬೇವಿನ ಸೊಪ್ಪು ಶ್ರೇಷ್ಟವಾದ ಹಾರಗಳಾಗಿರುತ್ತದೆ. ಜಾತ್ರೆಯ ದಿನ ಹರಕೆ ಹೊತ್ತ ಭಕ್ತರು ಬಾಯಬೀಗ, ಚುಚ್ಚುವುದು, ತ್ರಿಶೂಲಧಾರಿಗಳಾಗಿ ಚಾಟಿ ಏಟುಗಳಿಂದ ಉನ್ಮತ್ತರಾಗಿ ಕುಣಿದು ನರ್ತಿಸುತ್ತಾ ಹರಕೆ ಸಲ್ಲಿಸುತ್ತಾರೆ. ಹರಕೆಗೆ ಹೊತ್ತು ತಂದ ವಸ್ತುಗಳನ್ನು ತಪ್ಪದೆ ವಸೂಲಿ ಮಾಡುತ್ತಾಳೆ. ದೆವ್ವ ಬಿಡಿಸುವ ಪದ್ಧತಿಯೂ ಇಲ್ಲಿದೆ. ಹಳೆಯ ದೇವಾಲಯ ಕೆಡವಿ, ಹೊಸ ದೇವಾಲಯವನ್ನು ಈಗ ನಿರ್ಮಿಸಿದ್ದಾರೆ.

## ದಂಡಿನ ಮಾರಮ್ಮ ಜಾತ್ರೆ

ತಿಪ್ಪೂರು, ಸೋಮಶೆಟ್ಟಿಹಳ್ಳಿ, ಕಲ್ಲುದೇವನಹಳ್ಳಿ, ಹಣಬೆ, ಬೊಮ್ಮೆನಹಳ್ಳಿ, ಗಲಿಬಿಲಿಕೋಟೆ, ವಾಣಿಗರಹಳ್ಳಿ, ಬೈರಾಪುರ ಮತ್ತು ಚಿಲೇನಹಳ್ಳಿ ಗ್ರಾಮಗಳು ಬೇಡರ ಜಕ್ಕಸಂದ್ರ ಗಡಿ ಪ್ರದೇಶದ ಗ್ರಾಮಗಳಾಗಿವೆ. ಕಾಡು-ಮೇಡುಗಳ ಅಡವಿ ತಾಣದಲ್ಲಿ ಬೇಡರ ನೆಲವೀಡಾಗಿತ್ತು. ಈ ಎಲ್ಲಾ ಗ್ರಾಮಗಳಿಗೆ ಮಾರಮ್ಮ, ದೇವತೆಯಾಗಿದೆ. ಅಲ್ಲದೆ ಮಾರಮ್ಮನ ಜೊತೆಯಲ್ಲಿ ಚಾಮುಂಡಿ, ದುರ್ಗಮ್ಮ ಕೂಡಾ ಇದ್ದಾರೆ. ಬೊಮ್ಮನಹಳ್ಳಿಯ ಒಕ್ಕಲು ಸಂತತಿಯ ಗೌಡರು ಈ ಸ್ಥಳಕ್ಕೆ ಅಧಿಪತಿಗಳಾಗಿದ್ದು ನಾಯಕರು ಈ ದೇವಿಯನ್ನು ಪೂಜಿಸಿ ಭಕ್ತರಿಗೆ ತೀರ್ಥ ಪ್ರಸಾದಗಳನ್ನು ನೀಡುತ್ತಿದ್ದರು.

ವೈಶಾಖ ಮಾಸದಲ್ಲಿ ಪ್ರತಿವರ್ಷ ಸುತ್ತಮುತ್ತಲಿನ ಜನರು ಜಾತ್ರೆ ಕೂಡುತ್ತಾರೆ. ತಂಬಿಟ್ಟಿನ ಆರತಿಗಳನ್ನು ಬೆಳಗುತ್ತಾರೆ. ಬಂಡಿತೇರುಗಳು ಹಾಜರಾಗುತ್ತವೆ. ಹರಕೆ ಹೊತ್ತ ಭಕ್ತರು ಬಾಯಿಬೀಗ, ತ್ರಿಶೂಲಗಳನ್ನು ಚುಚ್ಚಿ ಉಪವಾಸದಿಂದ ಬಂದು ಹರಕೆ ತೀರಿಸುತ್ತಾರೆ. ವಿಜೃಂಭಣೆಯಿಂದ ನಡೆಯುತ್ತಿದ್ದ ಜಾತ್ರೆ ಇತ್ತೀಚೆಗೆ ನಿಲ್ಲಿಸಿದ್ದಾರೆ. ಜನರು ಈ ಗ್ರಾಮದಿಂದ ವಲಸೆ ಹೊರಟ ಕಾರಣದಿಂದಾಗಿ ಅಲ್ಲಿ ಹೆಚ್ಚ ಜನ ವಾಸಿಸುತ್ತಿಲ್ಲ. ಯಾವುದೇ ಮನೆಮಟಗಳು ಇಲ್ಲ. ಬಾಣ, ಕತ್ತಿ ಹಿಡಿದು ಹೋರಾಟ

ಮಾಡುತ್ತಿರುವ ಶಾಸನ ಶಿಲ್ಪಗಳು ಅಲ್ಲಿ ಕಂಡುಬರುತ್ತವೆ. ಶಿಲೆಯಲ್ಲಿರುವ ಜಿಂಕೆಗಳ ಚಿತ್ರಗಳು ಹೋರಾಟದ ಸ್ತ್ರೀಯರೊಡನೆ ನಿಂತಿರುವ ಸ್ತ್ರೀ ಬೆತ್ತಲೆ ಶಿಲಾಮೂರ್ತಿಗಳು ಗತಕಾಲದ ಇತಿಹಾಸವನ್ನು ಹೇಳುತ್ತವೆ. ಬೊಮ್ಮನಹಳ್ಳಿ ಮತ್ತು ವಾಣಿಗರಹಳ್ಳಿಯ ವೀರಗಲ್ಲುಗಳು ಸಂಶೋಧಕರಿಗೆ ಮತ್ತಷ್ಟು ಮಾಹಿತಿಯನ್ನು ಒದಗಿಸುತ್ತವೆ.

### ಹುಲ್ಲುಕುಂಟೆ ಮಾರಮ್ಮ ಜಾತ್ರೆ

ದೊಡ್ಡಬಳ್ಳಾಪುರ ತಾಲ್ಲೂಕಿನ ಹುಲ್ಲುಕುಂಟೆ ಗ್ರಾಮದ ಬೇಟೆರಂಗನಾಥಸ್ವಾಮಿ ದೇವಾಲಯದ ಎಡಭಾಗದಲ್ಲಿ ಈಕೆಯ ದೇವಾಲಯವಿದೆ. ಈ ದೇವತೆಗೆ ಮೂರು ವರ್ಷಕ್ಕೊಮ್ಮೆ ಜಾತ್ರೆ ನಡೆಯುತ್ತದೆ. ಇಲ್ಲಿ ವಿಶೇಷ ಪೂಜೆ ನಡೆಯುತ್ತದೆ. ಬಲಿಕೊಟ್ಟು ಪ್ರಾಣಿಯ ತಲೆಯನ್ನು ಈಕೆಯ ಬಳಿ ಹೂಳುತ್ತಾರೆ. ಈ ಹಿಂದೆ ಹೂತ ಪ್ರಾಣಿಯ ತಲೆಯನ್ನು ಅಂದು ಹೊರತೆಗೆದು ಪೂಜಾ ವಿಧಾನಗಳಿಂದ ಊರ ಹೊರ ಮೂರು ವರ್ಷದ ಹಿಂದೆ ಜಾತ್ರೆಯಲ್ಲಿ ತೆಗೆದ ರುಂಡ ಆಗ ತಾನೇ ಕತ್ತರಿಸಿದ ಹಾಗೆ ರಕ್ತರಂಜಿತವಾಗಿರುವುದೊಂದು ವಿಶೇಷತೆ. ಕುರಿಯನ್ನು ಬಲಿ ಕೊಡುವ ದಿನ ದೂರದೂರದ ಭಕ್ತರು ದೀಪದಾರತಿ ಮಾಡಿ, ಹರಕೆಗಳನ್ನು ಒಪ್ಪಿಸುತ್ತಾರೆ.

### ಉಚ್ಚಗಂಗಮ್ಮ ಜಾತ್ರೆ

ತಾಲ್ಲೂಕಿನ ಕಲ್ಲುದೇವನಹಳ್ಳಿಯ ದೇವತೆ ಹುಲಿಯೂರು ದುರ್ಗದ ಬಳಿ ಇರುವ ಚಿಕ್ಕದುರ್ಗದಿಂದ ಬಂದಿರುವ ದೇವತೆ ಮಂಗಳವಾರ ಮತ್ತು ಶುಕ್ರವಾರಗಳಂದು ಪೂಜೆ ಇರುತ್ತದೆ. ಈ ದೇವಿಗೆ ಪೂಜೆ ಮಾಡುವ ಪೂಜಾರಿ ನಾಯಕ ಜಾತಿಗೆ ಸೇರಿದವನು. ಈ ದೇವತೆಯು ಸರ್ಪದ ಮೇಲೆ ಕುಳಿತಿದ್ದು, ಬಲಗೈಯಲ್ಲಿ ಕತ್ತಿ ಹಿಡಿದು ಅದಕ್ಕೆ ನಿಂಬೆಹಣ್ಣನ್ನು ಚುಚ್ಚಿದ್ದಾರೆ. ನಾಲ್ಕು ಕೈಗಳಿದ್ದು, ಎಡಗೈಯಲ್ಲಿ ತ್ರಿಶೂಲ, ತನ್ನ ಎರಡೂ ಮಗ್ಗುಲಲ್ಲಿ ಇಬ್ಬರು ಮಕ್ಕಳನ್ನು ನಿಲ್ಲಿಸಿಕೊಂಡಿದ್ದಾಳೆ. ಈ ದೇವತೆಗೆ ಆಷಾಡ ಮಾಸದಲ್ಲಿ ಜಾತ್ರೆ ಇರುತ್ತದೆ. ಜಾತ್ರೆಗೆ ಮುಂಚಿತವಾಗಿ ಸಾರುತ್ತಾರೆ. ಜಾತ್ರೆಯ ಮಂಗಳವಾರ ಹೊಳೆಗೆ ಹೋಗಿ, ಪುಣ್ಯ ಮಾಡಿಸುತ್ತಾರೆ. ಆಗ ಪೂಜಾರಿಗೆ ದೇವತೆ ಮೈಮೇಲೆ ಬಂದು ಮಳೆ ಯಾವಾಗ ಬರುತ್ತದೆ ಎಂಬುದನ್ನು ಹೇಳಿ, ಬಿಡುಗಡೆ ಆಗುತ್ತದೆ. ಹೊಳೆಯಿಂದ ಬರುವಾಗ ಅಭಿಷೇಕ ಪೂಜೆಯನ್ನು ಮಾಡಿ ಪಟ್ಟದ ಕೋಣವನ್ನು ಕಡಿಯುತ್ತಾರೆ. ಕಡಿದ ಕೋಣನ ಬಾಯಿಗೆ ಅದರ ಬಲಗಾಲನ್ನು ಇಟ್ಟು ಅದರ ಕೊಬ್ಬನ್ನು ತಲೆಯ ಮೇಲಿಟ್ಟು ದೀಪ ಹಚ್ಚುತ್ತಾರೆ. ಪೂಜೆಯನ್ನು ಪೂರೈಸಿಕೊಂಡು ಬೇರೆ ಊರಾದ ಗೊಲ್ಲಹಳ್ಳಿಗೆ ಹೋಗಿ ನಂತರ ಅಲ್ಲಿಂದ ಏಳು ಊರುಗಳಿಗೆ ಹೋಗಿ ಮಡಿಲಕ್ಕಿಯನ್ನು ಕಟ್ಟಿಸಿಕೊಂಡು ಮತ್ತೆ ಊರಿಗೆ ಬರುತ್ತದೆ. ಅಲ್ಲಿಯೂ ಕೂಡಾ ಬಲಿ ಇರುತ್ತದೆ. ಮದಗೊಂಡಹಳ್ಳಿಗೆ ಹೋಗಿ ಮಡಿಲಕ್ಕಿ ಕಟ್ಟಿಸಿಕೊಂಡು

ಕೊಂಡ ಹಾಯುತ್ತದೆ. ಈ ರೀತಿಯ ಜಾತ್ರೆಯ ಪೂಜಾ ವಿಧಾನಗಳು ಕುರುವಿಗೆರೆ, ಗ್ರಾಮದಲ್ಲೂ ನಡೆಯುತ್ತದೆ.

**ಸಾವಿರ ಕಣ್ಣಮ್ಮ ಜಾತ್ರೆ**

ಕರ್ನಾಟಕದಲ್ಲಿ ಬೇರೆಲ್ಲೂ ಇಲ್ಲದ ಈ ದೇವತೆ ತಾಲ್ಲೂಕಿನ ಕಛೇರಿ ಪಾಳ್ಯದಲ್ಲಿದೆ. ಸುಮಾರು ನಾಲ್ಕುನೂರ ವರ್ಷಗಳಿಂದ ಈ ದೇವತೆ ಇಲ್ಲಿ ನೆಲಸಿದೆ ಎಂದು ಸ್ಥಳೀಯರು ಹೇಳುತ್ತಾರೆ. ಇತ್ತೀಚೆಗೆ ಈ ದೇವಾಲಯ ಜೀರ್ಣೋದ್ಧಾರಗೊಂಡಿದೆ. ಈ ದೇವತೆಗೆ ಒಂಬತ್ತು ಜನ ಅಕ್ಕತಂಗಿಯರು ಹಾಗೂ ಒಬ್ಬ ಸಹೋದರನಿದ್ದಾನೆ. ಇವರೇ ಮುತ್ಯಾಲಮ್ಮ, ಅಣ್ಣಮ್ಮ, ಕುಕ್ಕಲಮ್ಮ, ದೊಡ್ಡಮ್ಮ, ಗಂಗಮ್ಮ, ಸೊಲ್ಲಾಪುರದಮ್ಮ, ಮಾರಮ್ಮ, ಎಲ್ಲಮ್ಮ, ಈಕೆಯ ಒಬ್ಬನೇ ಸಹೋದರ ಮುನೇಶ್ವರ. ಈ ಮುನೇಶ್ವರ ದೇವಾಲಯ ಸಾವಿರಕಣ್ಣಮ್ಮ ದೇವಾಲಯದ ಸ್ವಲ್ಪ ದೂರದಲ್ಲೇ ಇದೆ. ಈ ದೇವತೆಯು ಬಹಳ ಉಗ್ರಸ್ವರೂಪವಳು. ಕೋರೆಹಲ್ಲುಗಳು ಬಾಯಿಂದ ಹೊರಬಂದಿದೆ. ನಾಲ್ಕು ಕೈಗಳು ಇವೆ. ಖಡ್ಗ, ಡಮರುಗ, ಭರಣಿ, ತ್ರಿಶೂಲಗಳು ಮುಖ್ಯ ಆಯುಧಗಳಾಗಿವೆ.

ಸಾವಿರಕಣ್ಣಮ್ಮನ ಜಾತ್ರೆಯನ್ನು ಹತ್ತು ದಿವಸಗಳ ಕಾಲ ಮಹಾನವಮಿಯಲ್ಲಿ ಪಟ್ಟಕ್ಕೆ ಕುಳ್ಳಿರಿಸಿ ಪ್ರತಿದಿನವೂ ಪೂಜೆಯನ್ನು ಮಾಡಿ, ಒಂಭತ್ತನೇ ದಿನ ಊರಿನ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಹೊರಡಿಸುತ್ತಾರೆ. ಅಂದು ಡೋಲು, ತಮಟೆ, ರಂ ಡೋಲು ಮುಂತಾದ ವಾದ್ಯಗಳಿಂದ ಬಾರಿಸುತ್ತ, ರುದ್ರತಾಂಡವವಾಡುತ್ತಾ ಶಿವಗಣಗಳನ್ನು ಮಂತ್ರಮುಗ್ಧವನ್ನಾಗಿ ಮೈಮರೆತು ಕುಣಿಯುತ್ತಾರೆ. ದೇವಾಲಯದ ಗರ್ಭಗುಡಿಯ ಬಳಿ ಶಾಂತಿಗಾಗಿ ಮರಿಯನ್ನು ಬಲಿ ಕೊಡುತ್ತಾರೆ. ಸ್ವಾತಂತ್ರ್ಯ ಪೂರ್ವದಲ್ಲಿ ಮೊದಲು ಕೋಣವನ್ನು ಬಲಿಕೊಡುತ್ತಿದ್ದರು ಎಂಬುದಾಗಿ ಸ್ಥಳೀಯರು ಹೇಳುತ್ತಾರೆ. ಇಲ್ಲಿನ ಪ್ರಮುಖ ಮತ್ತೊಂದು ಆಚರಣೆ ಎಂದರೆ ಗಾವು ಸಿಗಿಯುವುದು. ಶೇಂದಿಯನ್ನು ತೀರ್ಥವೆಂದು ಕೊಟ್ಟು, ಪೂಜಾರಿಯು ಮಡಿಲಲ್ಲಿ ಕಟ್ಟಿಕೊಂಡಿದ್ದ ಐದು ಕೆ.ಜಿ. ಅಕ್ಕಿ ಮತ್ತು ಮೊಸರು 'ಎಡೆ' ಇಟ್ಟು ಅಹುತಿ ಕೊಡುವರು. ಇದೇ ಗಾವು ಸಿಗಿಯುವುದು. ಈ ಗಾವನ್ನು ಪ್ರತಿಯೊಂದು ಮನೆಗೂ ಒಂದು ಹಿಡಿಯಂತೆ ಅರ್ಚಕನು ಹಂಚುತ್ತಾನೆ. ವಿಜಯದಶಮಿಯ ದಿನ ದೇವತೆಯನ್ನು ಪಲ್ಲಕ್ಕಿಯಲ್ಲಿ ಮೆರವಣಿಗೆ ಮಾಡಿಸುತ್ತಾರೆ. ಕೊನೆಯಲ್ಲಿ ಬಂದ ಭಕ್ತರು, ಹಾಗು ಕೇರಿಯವರಿಗೆಲ್ಲ ದಾಸೋಹವನ್ನು ಏರ್ಪಡಿಸಿರುತ್ತಾರೆ.

**ಕರಗ**

ತಮಿಳುನಾಡಿನ ಲೌಕಿಕ ಕಲೆ, ಜಗನ್ಮಾತೆ ಆದಿಶಕ್ತಿಯ ಆರಾಧನಾ ಕಲೆಯಾಗಿದೆ. ತಮಿಳುನಾಡು ಮೂಲದ ಅಗ್ನಿಕುಲ ಕ್ಷತ್ರಿಯರೆಂದು ಕರೆದುಕೊಳ್ಳುವ ತಿಗಳ ಜನಾಂಗದವರು ಕರಗದ ಆಚರಣೆಯನ್ನು,

ಧಾರ್ಮಿಕ ಆಚರಣೆಯಾಗಿ ಪಾಲಿಸಿಕೊಂಡು ಬಂದಿದ್ದಾರೆ. ಈ ಅಗ್ನಿ ಕುಲದವರಲ್ಲಿ ಧಾರ್ಮಿಕ ಆಚರಣೆಯ ಮೂಲಕ್ಕೆ ಸಂಬಂಧಿಸಿದಂತೆ ನಂಬಿಕೆಗಳು ಇವರಲ್ಲಿ ಬೇರೂರಿವೆ. ದ್ವಾಪರಯುಗದಲ್ಲಿ ಮತ್ಸ್ಯ ಯಂತ್ರವನ್ನು ಭೇದಿಸಿ, ಅರ್ಜುನನು ದ್ರೌಪದಿಯನ್ನು ಗೆದ್ದಾಗ ಮಂಗಳ ಕಲಶವನ್ನು ಹಿಡಿದುಬಂದ ದ್ರೌಪದಿಯು ಆನಂದದಿಂದ ಆ ಕಲಶವನ್ನೇ ತನ್ನ ಶಿರದಲ್ಲಿ ಧರಿಸಿದಳೆಂಬುದು ಒಂದು ಕಥೆಯಾಗಿದೆ. ಪಾಂಡವರು ಸ್ವರ್ಗಕ್ಕೆ ಹೋಗುತ್ತಿರುವಾಗ ಕೆಳಗೆ ಬಿದ್ದ ದ್ರೌಪದಿಯನ್ನು ತಿಮಿರಾಸುರನೆಂಬ ರಾಕ್ಷಸನು ಬಲಾತ್ಕಾರ ಪಡಿಸುತ್ತಿದ್ದಾಗ ಆತನನ್ನು ದ್ರೌಪದಿ ಕೊಲ್ಲುವ ಸಂದರ್ಭದಲ್ಲಿ ಆಕೆಗೆ ಬೆಂಬಲವಾಗಿ ನಿಂತವರು ಅಗ್ನಿಕುಲ ಕ್ಷತ್ರಿಯರು ಎಂದು ಹೇಳುತ್ತಾರೆ. ಬ್ರಹ್ಮನ ಯಜ್ಞದಲ್ಲಿ ಉಟ್ಟಿದ ಅಂಗಿರಸ ಎಂಬುವನ ವಂಶಸ್ಥರೆಂಬ ಮತ್ತೊಂದು ನಂಬಿಕೆಯೂ ಇದೆ. ಈ ಮನೋಧರ್ಮ, ನಂಬಿಕೆಯ ಹಿನ್ನೆಲೆಯಿಂದಾಗಿ ಈ ಜನಾಂಗ ಆಚರಿಸುವ ಕರಗದ ಮಹೋತ್ಸವವನ್ನು ಧರ್ಮರಾಯನ ಕರಗ, ದ್ರೌಪತಮ್ಮನ ಕರಗ ಎಂದು ಕರೆಯುವುದು ವಾಡಿಕೆ ಈಕೆಗೆ ದೊಡ್ಡಬಳ್ಳಾಪುರ ನಗರದಲ್ಲಿ ಧರ್ಮರಾಯನ ದೇವಾಲಯ ಅಥವಾ ಕರಗ ದೇವಾಲಯ ಎಂಬ ಹೆಸರಿನ ದೇಗುಲವಿದೆ.

ಕರಗವನ್ನು ಹೊರುವ ಹಕ್ಕು ವಂಶಪಾರಂಪರ್ಯವಾಗಿ ಬಂದ ಅಗ್ನಿಕುಲ ಕ್ಷತ್ರಿಯರದ್ದೆ ಆಗಿವೆ. ಈ ಕರಗಕ್ಕೆ ಕುಂಭ, ಗಡಿಗೆ, ಕಳಶ ಎಂಬ ನಾನಾರ್ಥಗಳಿವೆ. ಯುಗಾದಿ ಹಬ್ಬ ಆದ ನಂತರ ಚೈತ್ರ ಶುದ್ಧ ತ್ರಯೋದಶಿಯ ದಿನದಂದು ಕರಗದ ಆಚರಣೆ ಪ್ರಾರಂಭವಾಗುತ್ತದೆ. ಕರಗದ ಆಚರಣೆಯಲ್ಲಿ ಹಸಿಕರಗ ವೀರಕುಮಾರರ ಅಲಗುಸೇವೆ, ಗಂಟೆ ಪೂಜಾರಿ, ಕರಗದ, ಮಹೋತ್ಸವ ಇನ್ನು ಹಲವು ವೈಶಿಷ್ಟ್ಯಪೂರ್ಣ ಸಂಗತಿಗಳನ್ನು ಒಳಗೊಂಡಿದೆ. ಕರಗ ಮಹೋತ್ಸವದ ಕೇಂದ್ರ ಬೆಂಗಳೂರಿನ ಧರ್ಮರಾಯನ ದೇವಸ್ಥಾನ.

ಚೈತ್ರ ತ್ರಯೋದಶಿಯ ದಿನ ಮಧ್ಯರಾತ್ರಿಯಲ್ಲಿ ವ್ರತನಿರತ ವೀರಕುಮಾರರ ರಕ್ಷಣೆಯಲ್ಲಿ ಕುಲಪುರೋಹಿತರು, ಕುಲದ ಹಿರಿಯರ ನೇತೃತ್ವದಲ್ಲಿ ಹಸಿಯ ಮಣ್ಣಿನಿಂದ ಮಾಡಿದ ಗಡಿಗೆ ಸಿದ್ದಗೊಳಿಸುತ್ತಾರೆ. ಇದನ್ನೇ ಹಸಿಕರಗ ಎನ್ನುವರು. ಈ ಹಸಿಕರಗಕ್ಕೆ ಅರಿಶಿಣ ಕೊಂಬು, ಅರಿಶಿಣ, ಕುಂಕುಮ ಬಳೆ ಇತ್ಯಾದಿಗಳನ್ನು ಹಾಕಿ ತೆಂಗಿನ ಕಾಯಿ ಇಟ್ಟು ಹೂವಿನಿಂದ ಅಲಂಕಾರ ಮಾಡುತ್ತಾರೆ. ಈ ಹಸೀಕರಗದಲ್ಲಿ ಜಗನ್ಮಾತೆ ಆದಿಶಕ್ತಿ ಇರುವಳು ಎಂಬುದು ಆ ಕುಲದವರ ನಂಬಿಕೆ, ಮಡಿ ಸಂಸ್ಕಾರಗಳಿಂದ ಪೂಜಾರಿಯು ಹಸಿಕರಗವನ್ನು ಪೂಜಿಸಿ, ವಾಮಭಾಗದಲ್ಲಿ ಹೊತ್ತು ವೀರಕುಮಾರನ ಬಿಚ್ಚುಗತ್ತಿ ಕಾವಲಿನಲ್ಲಿ ಧರ್ಮರಾಯನ ದೇವಾಲಯಕ್ಕೆ ತಂದು, ಶಕ್ತಿಪೀಠದಲ್ಲಿ ಪ್ರತಿಷ್ಠಾಪಿಸುತ್ತಾರೆ. ಕರಗಕ್ಕೆ ಅಭಿಷೇಕ ಮಾಡುತ್ತಾರೆ. ಇದಕ್ಕಿಂತ ಮೊದಲು ಕರಗ ಹೊರುವ ಕರಗದಪ್ಪನಿಗೆ ತಲೆ ಬೋಳಿಸುತ್ತಾರೆ. ಮುತ್ತೈದೆ ಬಳೆ ತೊಡಿಸಿ ಸೀರೆ ಉಡಿಸುತ್ತಾರೆ. ಕರಗವನ್ನು ಕೈಯಲ್ಲಿ ಹಿಡಿದಿರುತ್ತಾನೆ. ಒಂದು ಕೈಯಲ್ಲಿ ಬೆತ್ತ ಮತ್ತು ಚೂರಿಯನ್ನು ಹಿಡಿದಿರುತ್ತಾರೆ. ಕರಗ ಹೊರುವವನು ಐದು ದಿನ

ಉಪವಾಸ ಇರಬೇಕಾಗುತ್ತದೆ. ದಿನಕ್ಕೆ ಎರಡು ಬಾಳೆಹಣ್ಣು, ಒಂದು ಲೋಟ ಹಾಲು ಮಾತ್ರ ಉಪಯೋಗಿಸಬೇಕು.

ವೀರಕುಮಾರರು ಧ್ವಜಾರೋಹಣ ದಿನದಂದೇ ಕರಗ ದೇವತೆ ಹೆಸರಿನಲ್ಲಿ ವೀರದೀಕ್ಷೆ ಕೈಗೊಳ್ಳುತ್ತಾರೆ. ಅಂದು ವೀರರಿಗೆ ಜನಿವಾರಧಾರಣೆ ಆಗುತ್ತದೆ. ದೇವಿಯಲ್ಲಿ ಅಚಲವಾದ ಭಕ್ತಿ, ಶ್ರದ್ಧೆಗಳನ್ನು ಇಟ್ಟುಕೊಂಡಿರುವ ಇವರು ಕರಗ ದೇವಿಗೆ ಅಂಗರಕ್ಷಕರು. ಹಣಗೆ ನಾಮ, ಬಿಳಿಯ ಚಲ್ಲಣ, ಸೊಂಟಕ್ಕೆ ಕೆಂಪು ಪಟ್ಟಿ ಧರಿಸಿ, ಕೈಯಲ್ಲಿ ಬಿಚ್ಚುಗತ್ತಿ ಹಿಡಿದು ವೀರಕುಮಾರು ಜಗನ್ಮಾತೆಯ ಪ್ರೀತಿಗೋಸ್ಕರ ತಮ್ಮ ದೇಹದ ಮೇಲೆ ಬಿಚ್ಚುಗತ್ತಿಯಿಂದ ಹೊಡೆದುಕೊಳ್ಳುವರು. ಇದನ್ನು ಅಲಗುಸೇವೆ ಎನ್ನುವರು. ದೇವಾಲಯದ ಒಳಗಡೆ ದೇವಿಗೆ ಅಲಂಕಾರ ಮಾಡುತ್ತಿರುವಾಗ ಹೊರಗಡೆ ವೀರ ಕುಮಾರರು ಒಬ್ಬೊಬ್ಬರು ಅಲಗು ಸೇವೆ ಮಾಡುತ್ತಾರೆ. ನಂತರ ದೇವರು ಮೈದುಂಬುತ್ತದೆ. ದೇವಿಯು ಗುಡಿಯಿಂದ ಹೊರಗಡೆ ಬರುವವರೆಗೂ ಅವರು ದೇವರನ್ನು ಹೊರಬರುವಂತೆ ಬೇಡಿಕೊಳ್ಳುತ್ತಾರೆ.

ಒಂದು ಮೀಟರ್ ಕಪ್ಪುಬಟ್ಟೆ, ನಾಲ್ಕು ಕೆ.ಜಿ ಅಕ್ಕಿ, ಎರಡು ಕೊಬ್ಬರಿ ಬಟ್ಲು, ಅರಿಶಿನ ಕುಂಕುಮ, ಎಲೆ ಅಡಿಕೆ, ಎರಡು ರೂಪಾಯಿ ದಕ್ಷಿಣೆಯನ್ನು ಭಕ್ತಾದಿಗಳು ಕೊಟ್ಟಿರುತ್ತಾರೆ. ಅದನ್ನೆಲ್ಲಾ ಮಡಿಲುಕಟ್ಟಿ ಅದರ ನಡುವೆ ದೇವರನ್ನು ಇಟ್ಟು ಕರಗದಪ್ಪ ತಲೆ ಮೇಲೆ ಹೊತ್ತಿರುತ್ತಾನೆ. ಕರಗ ಚಿನ್ನದ ವಿಗ್ರಹ, ಅದು ಹೆಣ್ಣು ದೇವರ ವಿಗ್ರಹ. ಈ ರೀತಿಯ ಕರಗ ಮಹೋತ್ಸವದ ಸಾಧ್ಯತೆಗಳು ಚೈತ್ರ ಶುದ್ಧ ಹುಣ್ಣಿಮೆಯ ದಿನದ ಸಂಜೆಯಿಂದಲೇ ಪ್ರಾರಂಭವಾಗುತ್ತವೆ. ಕರಗ ಹೊರುವ ವ್ಯಕ್ತಿಗೂ ಅಲಂಕಾರ ಮಾಡುತ್ತಾರೆ. ಕರಗ ಹೊರುವ ಪೂಜಾರಿಗೆ ಅಗತ್ಯ ಮಡಿ ಸಂಸ್ಕಾರಗಳನ್ನು ಮಾಡಿ ಕೈಗೆ ಕಂಕಣ ಕಟ್ಟಿ, ಕೈತುಂಬಾ ಕರಿಬಳೆ ತೊಡಿಸಿ, ಆಭರಣಗಳಿಂದ ಅಲಂಕರಿಸುತ್ತಾರೆ. ಮಲ್ಲಿಗೆಯ ಜಡೆ, ಅರಿಶಿಣದ ಸೀರೆ, ಕುಪ್ಪಸ ತೊಟ್ಟು ಸ್ತ್ರೀರೂಪ ಹೊಂದಿದ ಪೂಜಾರಿ ಹೊಸ ವಧುವಿನಂತೆ ಕಂಗೊಳಿಸುತ್ತಾನೆ. ವೀರಕುಮಾರರ ಕಾವಲಿನಲ್ಲಿ ಪೂಜಾರಿಯು ದೇವಸ್ಥಾನಕ್ಕೆ ನಡೆಮುಡಿಯ ಮೇಲೆ ನಡೆದು ಬರುತ್ತಾನೆ. ತಾನೊಬ್ಬನೇ ಗರ್ಭಗುಡಿ ಪ್ರವೇಶಿಸಿ ಅರಿಶಿಣ, ಕುಂಕುಮ ಮಲ್ಲಿಗೆ ಹೂಗಳಿಂದ ಅಲಂಕೃತಗೊಂಡ ಕರಗವನ್ನು ತಲೆಯ ಮೇಲೆ ಹೊತ್ತು ಹೊರಗೆ ಬರುತ್ತಾನೆ. ಕರಗಕ್ಕೆ ಅಲಂಕರಿಸಿದ ಹೂವಿನ ಮಾಲೆಗಳು ಪೂಜಾರಿಯ ಭುಜದಿಂದ ಕೆಳಗೆ ಸುತ್ತಲೂ ಹರಡಿಕೊಂಡಿರುತ್ತವೆ. ಆ ಕಡೆ ಈ ಕಡೆ ಓಲಾಡುತ್ತಿರುತ್ತವೆ. ಈ ಹೊತ್ತಿಗಾಗಲೇ ಪೂಜಾರಿಯ ಮೇಲೆ ಆದಿಶಕ್ತಿಯು ಆವಾಹನೆಯಾಗಿರುತ್ತದೆ ಎಂದು ಹಿರಿಯರು ನಂಬುತ್ತಾರೆ.

ವೀರ ಕುಮಾರರ ಕಾವಲಿನಲ್ಲಿ ಕರಗವು ನಗರದ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಹೊರಟು ಬೆಳಗಿನ ಜಾವ ಸೂರ್ಯನ ಕಿರಣಗಳು ತಲುಪುವ ಮುನ್ನ ದೇವಸ್ಥಾನಕ್ಕೆ ಹಿಂದಿಗುತ್ತದೆ.

ನೆಟ್ಟಿದ್ದ ಧ್ವಜವನ್ನು ಹನ್ನೊಂದನೆಯ ದಿನ ಕೆಳಗಿಳಿಸುತ್ತಾರೆ. ಅಲ್ಲಿಗೆ ಕರಗದ ಉತ್ಸವ ಪೂರ್ಣವಾದಂತೆ. ಈ ಹನ್ನೊಂದು ದಿನಗಳು ಕರಗ ಹೊರುವ ಪೂಜಾರಿಯ ಪತ್ನಿ ವೈಧವ್ಯವನ್ನು ಆಚರಿಸಬೇಕಂತೆ. ಪೂಜಾರಿ ಪತ್ನಿಯ ಬಳೆಗಳನ್ನು ಒಡೆದು, ಮಾಂಗಲ್ಯವನ್ನು ತೆಗೆದು ಅವುಗಳನ್ನು ಪೂಜಾರಿಗೆ ಧಾರಣೆ ಮಾಡಿಸಿರುತ್ತಾರೆ. ಹನ್ನೊಂದನೆಯ ದಿನ ಪೂಜಾರಿಯ ಪತ್ನಿಗೆ ಮಾಂಗಲ್ಯಧಾರಣೆ ಮಾಡಲಾಗುತ್ತದೆ. ಇದು ಒಂದು ಪುನರ್ವಿವಾಹ ಎಂದು ಹೇಳಬಹುದು. "ಈ ನಡುವಿನ ಹನ್ನೊಂದು ದಿನಗಳಲ್ಲಿ ಪೂಜಾರಿ ತನ್ನ ಪತ್ನಿಯ ತಾಳಿಯನ್ನು ಧರಿಸುವುದಷ್ಟೇ ಅಲ್ಲ ಸ್ತ್ರೀಯಂತೆಯೇ ಅಲಂಕಾರ ಮಾಡಿಕೊಳ್ಳುವುದು ಒಂದು ವೈಶಿಷ್ಟ್ಯ. ಸ್ತ್ರೀ ಪ್ರಧಾನ ಆಚರಣೆಯೊಂದು ಪುರುಷ ಪ್ರಧಾನವಾಗುವುದಷ್ಟೇ ಅಲ್ಲ. ದ್ರಾವಿಡ ಆಚರಣೆಯೊಂದು ವೈದಿಕೀಕರಣಗೊಂಡ ಬಗೆಗೆ ಇದು ಸಾಕ್ಷಿಯಾಗಿದೆ" ಎಂದು ಹೇಳಬಹುದು.[೯]

ದೊಡ್ಡಬಳ್ಳಾಪುರ ನಗರದಲ್ಲಿ ನಡೆಯುವ ಕರಗ ಮಹೋತ್ಸವವು ಅತ್ಯಂತ ಜನಪ್ರಿಯವಾಗಿದೆ. ಸುತ್ತ-ಮತ್ತಲಿನ ಗ್ರಾಮಗಳಿಂದ ಜನ ಕರಗ ನೋಡಲು ಆಗಮಿಸುತ್ತಾರೆ. ಕುತೂಹಲ ಈ ಉತ್ಸವದ ಮುಖ್ಯ ಅಂಶ ಎನ್ನಬಹುದು. ಧಾರ್ಮಿಕ ಹಿನ್ನೆಲೆಯಲ್ಲಿ ನಡೆಯುತ್ತಿದ್ದ ಕರಗ ಉತ್ಸವ ಇಂದು ಮನರಂಜನಾ ಮಾಧ್ಯಮವಾಗಿದೆ. ಈ ಧರ್ಮರಾಯನ ಕರಗವನ್ನು ಹೊರತುಪಡಿಸಿದರೆ ಒನಕೆ ಕರಗ, ಚಿತ್ರಗೋಪುರ ಕರಗ, ಚಂಬಿನ ಕರಗಗಳು ಮನರಂಜನೆಯ ಕಲೆಗಳಾಗಿ ವಿಕಾಸಗೊಂಡಿವೆ ಎಂದು ಹೇಳಬಹುದು.

**ಭೂತನೆರಿಗೆ**

ಸುಮಾರು ಐದು ನೂರು ವರ್ಷಗಳಿಂದ ಏಕಾದಶಿ ಹಬ್ಬದ ದಿನ ತೂಬಗೆರೆ ಗ್ರಾಮದಲ್ಲಿ ಈ ಭೂತನೆರೆಗೆ ಹಬ್ಬ ಒಂದು ಆಚರಣೆಯಾಗಿ ನಡೆದುಕೊಂಡು ಬರುತ್ತಿದೆ. ಇಲ್ಲಿ ಭೂತಗಳದ್ದೇ ದರ್ಬಾರು. ಇದಕ್ಕೆ ಪುರಾಣದ ಅಂಶಗಳನ್ನು ಹೇಳುತ್ತಾರೆ. ಲಕ್ಷ್ಮೀ ನರಸಿಂಹಸ್ವಾಮಿಯ ಎಡಗೈ ಮತ್ತು ಬಲಗೈ ಭಂಟರೆಂದು ಇವರನ್ನು ಕರೆಯುತ್ತಾರೆ. ವಿಷ್ಣುವಿನ ದ್ವಾರಪಾಲಕರಾದ ಜಯ ವಿಜಯರು ಹಿರಣ್ಯಕಶ್ಯಪುವಿನ ಅವತಾರವೆಂದೂ ಕರೆಯುತ್ತಾರೆ. ಇವರಿಗೆ ಕೆಂಚರಾಯ ಮತ್ತು ಕರಿರಾಯ ಎಂಬ ಹೆಸರುಗಳೂ ಅಭಿದಾನವಾಗಿವೆ.

ಪ್ರತಿವರ್ಷ ಏಕಾದಶಿಯ ದಿನದಂದು ಇಬ್ಬರು ವ್ಯಕ್ತಿಗಳು ಕೆಂಚರಾಯ ಮತ್ತು ಕರಿರಾಯ ಎಂಬ ಹೆಸರಿನಲ್ಲಿ ಭೂತವೇಷಗಳನ್ನು ಧರಿಸಿ, ಅಲಂಕರಿಸಿಕೊಂಡು ಊರ ಹೊರವಲಯದಲ್ಲಿರುವ ಆಂಜನೇಯಸ್ವಾಮಿ ದೇವಾಲಯದ ಬಳಿ ಬರುವರು ಇವರ ಹಿಂದೆ ಜನರ ಗುಂಪು ಹಿಂಡು ಹಿಂಡಾಗಿ ಬರುವುದು ದಾಸಯ್ಯನ ವೇಷವಾಗಿ ಈ ದೇವಾಲಯದ ಅರ್ಚಕನಾಗಿರುತ್ತಾನೆ. ದೇವಾಲಯದ ಬಳಿ ಬಂದು ಪೂಜೆ ಸಲ್ಲಿಸುವ ಸಮಯದಲ್ಲಿ ಮಂತ್ರ ಪಟನೆಯೂ ನಡೆಯುತ್ತದೆ.

ಆಗ ಭೂತಗಳು ಇಬ್ಬರಲ್ಲೂ ಆವರಿಸಿಕೊಂಡು ಕೈಯಲ್ಲಿರುವ ಕತ್ತಿ, ನಡುಗಲು ಶುರುವಾಗುತ್ತದೆ. ಆಗ ಭುತ ವೇಷದಾರಿಗಳ ಕಣ್ಣಲ್ಲಿ ನೀರಹನಿಗಳು ಬರುತ್ತಿರುತ್ತದೆ. ಆಗ ಅಲ್ಲಿನ ಜನರು ಭೂತಗಳು ಅವಾಹನೆಯಾಗಿವೆ ಎಂದು ನಂಬುತ್ತಾರೆ. ಆಗ ಕೆಂಚರಾಯನಿಗೆ ಕೆಂಪುಬಟ್ಟೆ, ಕೆಂಪುವಸ್ತ್ರ, ಕರಿರಾಯನಿಗೆ ಕಪ್ಪುಬಟ್ಟೆ, ಕಪ್ಪುವಸ್ತ್ರ ಬಿಟ್ಟು ಏನೂ ಕಾಣುವುದಿಲ್ಲವಂತೆ. ಭೂತಗಳು ಮೈದುಂಬಿ ಬಂದಾಗ ಎಲ್ಲೆಂದರಲ್ಲಿ ಇವರು ಓಡಾಡುತ್ತಿರುತ್ತಾರೆ. ಐದೈದು ಜನ ಗುಂಪುಗಳಲ್ಲಿ ಜನ ಅವರಿಗೆ ಆಹಾರವನ್ನು ತೋರಿಸಿದಾಗ ದಾರಿಗೆ ಬರುತ್ತಾರೆ. ಆಗ ಇವರಿಗೆ ಬಕೆಟ್ಟುಗಟ್ಟಲೆ ಬಾಳೆಹಣ್ಣಿನ ರಸಾಯನ, ಕೋಳಿಗಳನ್ನು ನೀಡುತ್ತಾರೆ. ಕೆಂಚರಾಯ ಮಾಂಸಾಹಾರಿಭೂತ, ಕರಿರಾಯ ಸಸ್ಯಹಾರಿ ಭೂತ ಎಂದು ಎರಡು ಭಾಗ ಮಾಡಿದ್ದಾರೆ. ಇವರಿಬ್ಬರಿಗೂ ಭೂತಾಳೆ ಚೆಕ್ಕೆಯನ್ನು ಸೊಂಟಕ್ಕೆ ಕಟ್ಟಿರುತ್ತಾರೆ. ಸೊಂಟಕ್ಕೆ ಕಟ್ಟಿದ ಚಕ್ಕೆಯಿಂದ ಇವರಿಗೆ ಹಸಿವು ಹೆಚ್ಚಾಗುತ್ತದೆ. ಆಗ ಏನನ್ನು ಬೇಕಾದರೂ ತಿನ್ನಲು ಪ್ರಯತ್ನಿಸುತ್ತಾರೆ ಎಂದು ಸ್ಥಳೀಯರು ಹೇಳುತ್ತಾರೆ.

ಜನರ ಅತಿಯಾದ ನಂಬಿಕೆಗಳಿಂದ ಆಚರಣೆಗಳು ಪ್ರಾರಂಭವಾಗುತ್ತವೆ ಎನ್ನುವುದಕ್ಕೆ ಈ ಭೂತನೆರಿಗೆ, ಭೂತನಡಿಗೆ ಹಬ್ಬ ಒಂದು ಸಾಕ್ಷಿ. ಈ ಆಚರಣೆಯ ಮೂಲ ಉದ್ದೇಶ. ಊರಿಗೆ ಒಳ್ಳೆಯದಾಗಲಿ, ಯಾವುದೇ ಭೂತಕಾಟಗಳು ಒದಗದಿರಲಿ, ಶಾಂತಿ ಮತ್ತು ನೆಮ್ಮದಿ ದೊರೆಯಲಿ ಎಂಬುದಾಗಿದೆ.

ಬೆಂಗಳೂರಿನ ಖ್ಯಾತ ಮನಃಶಾಸ್ತ್ರ ವೈದ್ಯರಾದ ಡಾ.ಜಗದೀಶ್ ರವರು ಇದು ವ್ಯಕ್ತಿಯಲ್ಲಿ ಆಗುವ ಪಸಷನ್ ಸಿಂಡ್ರೋಮ್ ಎಂದು ಕಾರಣ ಹೇಳುತ್ತಾರೆ. ವ್ಯಕ್ತಿಯ ಅತಿಯಾದ ನಂಬಿಕೆಯಿಂದ ವ್ಯಕ್ತಿ ಅಪ್ರಜ್ಞಾವಸ್ಥೆಗೆ ಒಳಗಾದಾಗ ಆತನಿಗೆ ನಾನು ಏನು ಮಾಡುತ್ತಿದ್ದೇನೆ ಎಂಬುದು ತಿಳಿಯುವುದಿಲ್ಲ. ಆಗ ಆ ವ್ಯಕ್ತಿ ಹಾಗೆ ವರ್ತಿಸುತ್ತಾನೆ. ಬಕೆಟ್ಟುಗಟ್ಟಲೇ ಬಾಳೆಹಣ್ಣಿನ ರಸಾಯನ, ಕೋಳಿಯ ರಕ್ತ ಹೀರುವುದರಿಂದ ಆರೋಗ್ಯಕ್ಕೆ ಅಪಾಯವಿಲ್ಲವೇ? ಎಂದಾಗ, ಅತ್ಯಂತ ಹೆಚ್ಚು ಪ್ರಚೋದನೆ ದೊರೆತಾಗ ಮನಸ್ಥಿತಿಯಲ್ಲಿ ಸಮಸ್ಯೆಗೆ ಒಂದು ಪರಿಹಾರ ದೊರೆಯುತ್ತದೆ ಎಂಬ ನಂಬಿಕೆಯಿರುವುದರಿಂದ ಯಾವುದೇ ಅಪಾಯವಿರುವುದಿಲ್ಲ ಎನ್ನುತ್ತಾರೆ. ಈ ಹಬ್ಬದಲ್ಲಿ ಎಲ್ಲಾ ಅನ್ಯಧರ್ಮಿಯರು ಭಾಗವಹಿಸುತ್ತಾರೆ. ಇದು ದಕ್ಷಿಣ ಏಷ್ಯಾ ರಾಷ್ಟ್ರಗಳಲ್ಲಿ ಮಾತ್ರ ಕಂಡುಬರುತ್ತದೆ.

**ಗಾಳಿಪಟ ಹಾರಿಸುವುದು**

ದೊಡ್ಡಬಳ್ಳಾಪುರದಲ್ಲಿ ಬಹಳ ಕಾಲದಿಂದಲೂ ಆಷಾಡಮಾಸದ ದ್ವಾದಶಿ ದಿನದಂದು ಗಾಳಿಪಟಗಳನ್ನು ಹಾರಿಸುತ್ತಾರೆ. ಮೊದ ಮೊದಲು ಗಾಳಿಪಟಗಳನ್ನು ತಯಾರಿಸಲು ಸೂಕ್ತವಾದ ಸಲಕರಣೆಗಳು ಸಿಗದಿದ್ದಾಗ ಕತ್ತಾಳೆನಾರಿನಿಂದ ಹಗ್ಗವನ್ನು ಹೊಸೆದು ಪಟಗಳನ್ನು ಕಟ್ಟುತ್ತಿದ್ದರು ಎಂದು ಹೇಳುತ್ತಾರೆ.

ಗಾಳಿಪಟವನ್ನು ಕಟ್ಟಲು ಬಿದಿರಿನ ಬೊಂಬನ್ನು ನಾಲ್ಕು ಭಾಗಗಳಾಗಿ ಮಾಡಿ ಅದನ್ನು ವೃತ್ತಾಕಾರವಾಗಿ ಕಟ್ಟಿ ಅದಕ್ಕೆ ಬಟ್ಟೆಯನ್ನು ಹೊಲಿದು, ಅದರ ಮಧ್ಯಭಾಗದಲ್ಲಿ ಹನುಮಂತನ ಚಿತ್ರವನ್ನು ಬಿಡಿಸುತ್ತಾರೆ. ಈ ರೀತಿಯಾಗಿ ಬಿಡಿಸಿದ ಪಟಗಳನ್ನು ಊರಿನ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಮಾಡಿ ಊರಿನ ಆಚೆ ಇರುವ ವಿಶಾಲವಾದ ಮೈದಾನದಲ್ಲಿ ಹಾರಿಬಿಡುತ್ತಾರೆ. ನೇಕಾರಿಕೆ ಮುಖ್ಯ ಕಸುಬಾಗಿರುವ ದೊಡ್ಡಬಳ್ಳಾಪುರದಲ್ಲಿ ಆಷಾಢಮಾಸ ಬಂತೆಂದರೆ ಒಂದಿಷ್ಟು ಬಿಡುವು ದೊರೆಯುತ್ತದೆ. ವರ್ಷಪೂರ್ತಿ ದುಡಿಯುವ ನೇಯ್ಗೆ ಕೆಲಸದವರು. ಅಷಾಢಮಾಸದ ಬಿಡುವಿನ ಸಮಯವನ್ನು ಸಾರ್ಥಕಪಡಿಸಿಕೊಳ್ಳುತ್ತಾರೆ. ಗಾಳಿಪಟದ ಹಬ್ಬದಲ್ಲಿ ಮಕ್ಕಳಿಂದ ಹಿಡಿದು ದೊಡ್ಡವರವರೆಗೂ ಹೆಣ್ಣು ಮಕ್ಕಳಿಂದ ಹಿಡಿದು ಹೆಂಗಸರವರಿಗೂ ಗಾಳಿಪಟಗಳನ್ನು ಹಾರಿಸುತ್ತಾರೆ. ಬೆಳಗಿನಿಂದ ಸಂಜೆಯವರೆಗೂ ಗಾಳಿಪಟಗಳನ್ನು ನೋಡಲು ಜನ ಇರುತ್ತಾರೆ. ಈ ಹಬ್ಬದ ಮುಖ್ಯ ಉದ್ದೇಶವೆಂದರೆ ಮಳೆ ಬೆಳೆಗಳು ಸಮೃದ್ಧಿಯಾಗಿ ಆಗುತ್ತದೆಂಬ ನಂಬಿಕೆ ಜನರಲ್ಲಿ ಇರುವುದರಿಂದ ಬಹಳ ಹಿಂದಿನ ಕಾಲದಿಂದಲೂ ಗಾಳಿಪಟಗಳನ್ನು ಹಾರಿಸಿಕೊಂಡು ಬಂದಿರುತ್ತಾರೆ.

ರಾಜ್ಯದಲ್ಲಿ ಗಾಳಿಪಟದ ತವರುಮನೆ ಎಂದು ಹೆಸರು ಮಾಡಿರುವ ದೊಡ್ಡಬಳ್ಳಾಪುರದಲ್ಲಿ ಗಾಳಿಪಟ ತಯಾರಿಕೆಯಲ್ಲಿ ಹೆಸರು ಪಡೆದಿದೆ. ಸಣ್ಣ ಗಾಳಿಪಟದಿಂದ ಹಿಡಿದು ದೊಡ್ಡ ದೊಡ್ಡ ಗಾಳಿಪಟಗಳನ್ನು ತಯಾರು ಮಾಡಿ ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಭಾಗವಹಿಸಿ ಪ್ರಶಸ್ತಿಯನ್ನು ಗಳಿಸಿದವರೂ ಇಲ್ಲಿದ್ದಾರೆ.

ರಾಮನಗರದ ಜಾನಪದ ಲೋಕ, ಮೈಸೂರು, ದೇವನಹಳ್ಳಿ, ಬೆಂಗಳೂರಿನ ಜಕ್ಕೂರು ವಿಮಾನ ನಿಲ್ದಾಣ, ಶೃಂಗೇರಿ, ಪಿರಿಯಾಪಟ್ಟಣಗಳಲ್ಲಿ ಸಾಮಾನ್ಯವಾಗಿ ಗಾಳಿಪಟ ಸ್ಪರ್ಧೆ ನಡೆಯುತ್ತದೆ. ಇಲ್ಲಿಯೂ ಕೂಡ ಪ್ರತಿವರ್ಷ ದೊಡ್ಡಬಳ್ಳಾಪುರದ ನೂರಾರು ಗಾಳಿಪಟದ ಸ್ಪರ್ಧಾಳುಗಳು ಭಾಗವಹಿಸುತ್ತಾರೆ. ದೊಡ್ಡಬಳ್ಳಾಪುರದ ನಗರದಿಂದ ಉತ್ತರ ಭಾರತದ ಅಹಮದಾಬಾದ್‌ನಲ್ಲಿ ನಡೆಯುವ ಗಾಳಿಪಟ ಸ್ಪರ್ಧೆಗೆ ಇಲ್ಲಿಂದ ಹೋಗಿದ್ದಾರೆ.

ಕೆಲವೊಂದು ಗಾಳಿಪಟಗಳ ವಿವರಗಳನ್ನು ಈ ರೀತಿ ಹೇಳಬಹುದು. ಆನೆಪಟ, ಪೈಲ್ ವಾನ್ ಪಟ, ವಾಲಿಸುಗ್ರೀವ ಪಟ, ವೈಟ್ ಲಿಫ್ ಟಿಂಗ್ ಪಟ, ಕಳಚಪಟ, ಬೃಂದಾವನ, ಗಡಿಯಾರ ನಕ್ಷತ್ರಪಟ, ಗುಂಡುಚಕ್ರ, ಬರ್ ಪಟ, ಹುಡುಗಿಪಟ, ಅರ್ಧಚಂದ್ರಪಟ, ಗರುಡಬೇರುಂಡ ಪಟ, ಬಿಂದಿಗೆ ಪಟ, ತಾವರೆ ಹೂವಿನ ಪಟ, ಗುಲಾಬಿ ಹೂವಿನ ಪಟ, ಮಿಕಿಮೌಸ್‌ಪಟ, ತೇರಿನ ಪಟ, ಚಿಟ್ಟೆ ಪಟ, ಜೋಡಿ ಪಕ್ಷಿ ಪಟಿ, ಗೋರಿಲ್ಲ ಪಟ, ಸಿಲಿಂಡರ್ ಪಟ, ಬುಗುರಿ ಪಟ, ಅಯ್ಯಪ್ಪಸ್ವಾಮಿ ಪಟ, ರಾಕೇಟ್ ಪಟ, ಬೆಲೂನ್ ಪಟ, ಲಂಗಪಟ, ಏರೋಪ್ಲೇನ್ ಪಟ, ತೋಕಾಸಿ ಪಟ, ಜಾಕಿಟ್ ಪಟ, ಜಲಕನ್ಯೆ ಪಟ, ಮತ್ಸಕನ್ಯೆ ಪಟ, ಭಾರತಮಾತೆ ಪಟ, ತಿಗಣೆ

ಪಟ, ಬಾವಲಿಪಟ, ಕಾಳಿಂಗಸರ್ಪ ಪಟ, ಮಕ್ಕಳ ಗುಂಡು ಚಕ್ರಪಟ, ಡಬ್ಬ ಪಟ, ಡೈನಾಸರ್ ಪಟ, ಅಕ್ಟೋಪಸ್ ಪಟ, ಡ್ರಾಗನ್ ಪಟ, ಸಣ್ಣ ಸಣ್ಣದಾಗಿ ಕಾಣುವ ಇನ್ನೂ ಹಲವು ಪಟಗಳನ್ನು ಗಾಳಿಯಲ್ಲಿ ಹಾರಿಸುತ್ತಾರೆ.

ಕ್ರಿ.ಪೂ. ಮೂರನೇ ಶತಮಾನದಲ್ಲಿ ಗ್ರೀಕ್ ದೇಶದಲ್ಲಿ ಗಾಳಿಪಟ ರಚನೆ ಹಾಗೂ ಹಾರಾಟ ನಡೆಯಿತೆಂದು ವಿದ್ವಾಂಸರ ಅಭಿಪ್ರಾಯ ಗಾಳಿಪಟ ಸ್ಪರ್ಧೆ ಚೀನಾದೇಶದ ರಾಷ್ಟ್ರೀಯ ಆಟ. ಈ ದೇಶದ ಹನ್ ಸಿನ್ ಎಂಬ ಸೇನಾಧಿಪತಿ ಯುದ್ಧ ತಂತ್ರಕ್ಕಾಗಿ ಗಾಳಿಪಟ ಕಂಡುಹಿಡಿದ ಎಂಬುದು ಪ್ರತೀತಿ. ಚೀನಾ, ಜಪಾನ್ ಇತರೆ ದೇಶಗಳಲ್ಲಿ ನಡೆಯುವ ಉತ್ಸವ, ಹಬ್ಬಗಳಲ್ಲಿ, ಗಾಳಿಪಟಗಳನ್ನು ಹಾರಿಸುತ್ತಾರೆ. ಅಮೇರಿಕದ ಹಲವು ನಗರಗಳಲ್ಲಿ ಪ್ರತಿವರ್ಷದ ವಸಂತ ಮಾಸದಲ್ಲಿ ಬಾಲಕ-ಬಾಲಕಿಯರಿಗೆ ಸ್ಪರ್ಧೆಗಳನ್ನು ನಡೆಸಲಾಗುತ್ತದೆ. ಭಾರತದಲ್ಲಿ ಲಖನೌ, ಕಾಶಿ, ಅಹಮದಾಬಾದ್ ಮುಂತಾದ ಕಡೆಗಳಲ್ಲಿ ಗಾಳಿಪಟದ ಸ್ಫರ್ಧೆಗಳು ನಡೆಯುತ್ತವೆ. ಗುಜರಾತಿನಲ್ಲಿ ಮಕರ ಸಂಕ್ರಮಣದಂದು ಗಾಳಿಪಟಗಳನ್ನು ವಿಶೇಷವಾಗಿ ಹಾರಿಸಲಾಗುತ್ತದೆ. ಜಾನಪದ ಲೋಕದ ಧುರೀಣ ಮತ್ತು ಜಾನಪದ ವಿದ್ವಾಂಸ ಡಾ.ಹೆಚ್.ಎಲ್.ನಾಗೇಗೌಡರು ಗಾಳಿಪಟ ಸ್ಪರ್ಧೆಗಳನ್ನು ನಡೆಸುವ ಮೂಲಕ ಈ ಕಲೆಯನ್ನು ಪ್ರೋತ್ಸಾಹಿಸಿದರು.

**ಭಜನೆ**

ದೈವೀ ಆರಾಧನೆಯಲ್ಲಿ ಭಜನೆಗೆ ಮಹತ್ವದ ಸ್ಥಾನವಿದೆ. ದೇವರನ್ನು ಕುರಿತು ಶ್ರದ್ಧೆ ಮತ್ತು ಭಕ್ತಿಯಿಂದ ಸ್ತುತಿಸುವ ಕ್ರಮಕ್ಕೆ ಭಜನೆ ಎಂದು ಕರೆಯುವರು. ಇದು ದೇವರಿಗೆ ಸಲ್ಲಿಸುವ ಒಂದು ಸೇವೆ ಎನ್ನಬಹುದು. ತಾಲ್ಲೂಕಿನ, ಗಂಟಿಗಾನಹಳ್ಳಿ, ಶಿವಪುರ, ಬಾಶೆಟ್ಟಿಹಳ್ಳಿ ಮುಂತಾದ ಗ್ರಾಮಗಳಲ್ಲಿ ಭಜನೆ ಮಾಡುವ ಕಲಾ ತಂಡಗಳೇ ಇವೆ. ಭಜನೆಯಲ್ಲಿ ಶ್ರೀರಾಮ ಮತ್ತು ಫಂಡಾರಪುರದ ವಿಠಲನ ಕೀರ್ತನೆಗಳನ್ನು ಹಾಡುತ್ತ ಊರಲ್ಲಿ ಗರುಡಗಂಭವನ್ನು ತೆಗೆದುಕೊಂಡು ಸುತ್ತುತ್ತಾರೆ. ಪ್ರತಿ ಮನೆಯವರೂ ಆ ದೀಪಕ್ಕೆ ಎಣ್ಣೆಹಾಕಿ, ಊದುಗಡ್ಡಿ ಹಚ್ಚುವರು. ಶ್ರಾವಣಮಾಸದಲ್ಲಿ ಈ ಭಜನೆ ಹೆಚ್ಚು. ಕೆಲವು ಗ್ರಾಮಗಳಲ್ಲಿ ಪ್ರತಿ ಶನಿವಾರ ಸಂಜೆ ಈ ಭಜನೆ ನಡೆಯುತ್ತದೆ. ಕೀರ್ತನ ಪರಂಪರೆಯನ್ನು ಈ ಭಜನೆ ಇಂದಿಗೂ ಜೀವಂತವಾಗಿ ಇಟ್ಟಿದೆ. ಜನರಲ್ಲಿ ಭಕ್ತಿ, ಸಂಗೀತ ಜ್ಞಾನವನ್ನು ಇದು ಉಳಿಸಿ–ಬೆಳೆಸುತ್ತ ಬಂದಿದೆ. ದೊಡ್ಡಹೆಜ್ಜಾಜಿ, ದೊಡ್ಡಬೆಳವಂಗಲ, ಚಿಕ್ಕ ಬೆಳವಂಗಲ ಮುಂತಾದ ಕಡೆ ಈ ಭಜನಾ ಕಾರ್ಯಕ್ರಮ ಬಹಳ ಅದ್ದೂರಿಯಾಗಿ ನಡೆಯುತ್ತದೆ. ಇಲ್ಲಿ ನಮಗೆ ವೈಷ್ಣವ ಪರಂಪರೆಯ ಪ್ರಭಾವ ದಟ್ಟವಾಗಿರುವುದು ಕಂಡುಬರುತ್ತದೆ. ಶ್ರಾವಣ ಮಾಸದಲ್ಲಿ ದೇವಾಲಯದ ಮುಂದೆ ಎತ್ತರದ ಮರಕ್ಕೆ ದೀಪದ ಲಾಂದ್ರವನ್ನು ಕಟ್ಟುವ ರೂಢಿಯೂ ಇದೆ.

## ಎಳ್ಳುಬೆಲ್ಲದ ಹಬ್ಬ - ಸಂಕ್ರಾಂತಿ

ಮೂಲತಃ ಭಾರತದ ನೆಲ ಹಬ್ಬಗಳ ಭಂಡಾರ. ವರ್ಷಪೂರ್ತಿ ಯಾವುದಾದರೂ ಒಂದು ಹಬ್ಬದ ಸಡಗರ ಸಂಭ್ರಮದ ಆಚರಣೆ ಜಾರಿಯಲ್ಲಿರುತ್ತದೆ. ಯಾವುದೇ ಹಬ್ಬವಿರಲಿ ಅಂದು ಮನೆಯವರೊಂದಿಗೆ ಬಂಧು-ಬಾಂಧವರು, ಆತ್ಮೀಯರು ಸೇರಿ ಪರಸ್ಪರ ಶುಭಾಶಯಗಳನ್ನು ವಿನಿಮಯ ಮಾಡಿಕೊಂಡು ಸಂತೋಷ, ಸಂಭ್ರಮಗಳಿಂದ ಕಾಲಕಳೆಯುವ ದಿನ. ಈ ಹಬ್ಬಗಳಿಗೆ ನಮ್ಮ ತಾಲ್ಲೂಕಿನಲ್ಲೂ ಕೊರತೆಯಿಲ್ಲ. ಹಲವಾರು ವಿವಿಧ ವರ್ಗ ಪಂಗಡ, ಕೋಮುಗಳಿದ್ದರೂ ಒಂದೊಂದು ಹಬ್ಬದಲ್ಲಿ ಒಂದೊಂದು ರೀತಿಯ ಆಚರಣೆಯನ್ನು ನಡೆಸುತ್ತಾರೆ. ನಮ್ಮ ತಾಲ್ಲೂಕಿನಲ್ಲಿ ಸಂಕ್ರಾಂತಿ ಹಬ್ಬದ ಆಚರಣೆ ಬಹಳ ವೈವಿಧ್ಯಮಯವಾಗಿರುವುದನ್ನು ಕಾಣಬಹುದು.

ಈ ಸಂಕ್ರಾಂತಿಯು ಲೋಕದ ಬೆಳಕಿಗೆ ಒಡೆಯನಾದ ಸೂರ್ಯನ ಚಲನೆಯೊಂದಿಗೆ ಮಿಳಿತಗೊಂಡಿರುವ ಹಬ್ಬ, ವಿಶ್ವಕ್ಕೆ ಬೆಳಕನ್ನು ಉಂಟು ಮಾಡುವ ಸೂರ್ಯನು ತನ್ನ ಪಥ ಬದಲಾವಣೆ ಮಾಡುವ ಅಂದರೆ ಒಂದು ರಾಶಿಯಿಂದ ಮತ್ತೊಂದು ರಾಶಿಗೆ ಪ್ರವೇಶ ಮಾಡುವ ಈ ದಿನವನ್ನು ಸಂಕ್ರಮಣವೆಂದೂ, ಮಕರ ರಾಶಿಯನ್ನು ಪ್ರವೇಶ ಮಾಡುವುದರಿಂದ ಮಕರ ಸಂಕ್ರಾಂತಿ ಎಂದೂ ಕರೆಯುತ್ತಾರೆ. ಈ ಒಂದು ದಿನ ಹಿಂದೂ ಸಮುದಾಯದವರು ವಿಶಿಷ್ಟವಾದ ಸಂಕ್ರಾಂತಿಯನ್ನು ಉತ್ತರಾಯಣ ಪುಣ್ಯಕಾಲವೆಂದು ಕರೆಯುವರು.

ಸಂಕ್ರಾಂತಿ ಹಬ್ಬದ ವಿಶೇಷವೆಂದರೆ ಎಲ್ಲೆಡೆಯೂ ಬೆಳೆ ಬರುವ ಸಂದರ್ಭದ ಸುಗ್ಗಿ ಕಾಲವಾಗಿದ್ದು, ರೈತರು ಸಂತೋಷದಿಂದ ಕುಣಿದು ಕುಪ್ಪಳಿಸಿ ನೆಮ್ಮದಿ ಸಂತೋಷ ಕಾಣುವ ದಿನವಿದು. ಎಳ್ಳು-ಬೆಲ್ಲ-ಕಬ್ಬು, ಸಕ್ಕರೆಅಚ್ಚು-ಕುಸುರೆಳ್ಳು, ಕಡಲೆಬೀಜ ಇವುಗಳ ಬಳಕೆಯೇ ಹೆಚ್ಚಾಗಿರುವುದರಿಂದ ಈ ಹಬ್ಬವನ್ನು ಎಳ್ಳು-ಬೆಲ್ಲದ ಹಬ್ಬವೆನ್ನುವುದೂ ವಾಡಿಕೆಯಿದೆ. ಸಂಕ್ರಾಂತಿ ಹಬ್ಬ ಜನರ ಜೀವನ ಸಂಸ್ಕೃತಿಯನ್ನು ಶ್ರೀಮಂತಗೊಳಿಸುವ ಹಬ್ಬಗಳಲ್ಲಿ ಒಂದು. ದ್ವೇಷ-ಅಸೂಯೆಗಳನ್ನು ಮರೆಸುವ ಈ ಹಬ್ಬದ ದಿನ 'ಎಳ್ಳು ಕೊಟ್ಟು - ಒಳ್ಳೆಯ ಮಾತಾಡು' ಎಂಬುದಾಗಿ ಪರಸ್ಪರ ಹಾರೈಸಿಕೊಂಡು ಎಳ್ಳನ್ನು ವಿನಿಯೋಗ ಮಾಡಿಕೊಳ್ಳುತ್ತಾರೆ.

ನಮ್ಮ ಪ್ರಕೃತಿಯು ಸಹ ಈ ಹಬ್ಬದ ಸಡಗರದೊಂದಿಗೆ ಸೇರಿ ನಲಿಯುವುದನ್ನು ಕಾಣಬಹುದಾಗಿದೆ. ಹಣ್ಣೆಲೆಗಳನ್ನು ಉದುರಿಸಿ ಹೊಸ ಚಿಗುರನ್ನು ಮೂಡಿಸಿ ಜಗಕ್ಕೆ ಸುಂದರ ಕಳೆಯನ್ನು ತೊಡಿಸುವ ರಮ್ಯ ಚೈತ್ರಕ್ಕೆ ನಾಂದಿ ಹಾಡುವ ಕಾಲ ಈ ಸಂಕ್ರಾಂತಿ, ಪ್ರತಿವರ್ಷ ಜನವರಿ ೧೪ರಂದು ಮಕರ ಸಂಕ್ರಾಂತಿ ಹಬ್ಬ ಬರುವುದಾದರೂ ಕೆಲವೊಮ್ಮೆ ೧೫ರಂದು ಬರುತ್ತದೆ. ಉತ್ತರಾಯಣದ ಪುಣ್ಯಕಾಲವಾದ ಅಂದು ಸ್ವರ್ಗದ ಬಾಗಿಲು ತೆಗೆಯುವುದೆಂದು ಪ್ರತೀತಿ ಇದೆ. ದೇಶದ ವಿವಿಧೆಡೆಯಲ್ಲಿ ಈ ಸಂಕ್ರಾಂತಿ ಹಬ್ಬವನ್ನು ಬೇರೆ ಬೇರೆ ರೀತಿಯಲ್ಲಿ

ಆಚರಿಸುತ್ತಾರೆ. ಉತ್ತರ ಭಾರತದಲ್ಲಿ ಪರ್ವ ದಿನದಂದು ಕಾಶಿ, ಪ್ರಯಾಗ, ಗಯಾ, ಹರಿದ್ವಾರ ಮುಂತಾದ ಸ್ಥಳಗಳಲ್ಲಿ ಲಕ್ಷಾಂತರ ಜನ ಪುಣ್ಯನದಿ ಗಂಗೆಯಲ್ಲಿ ಮಿಂದು ಸ್ನಾನ ಮಾಡಿ ತಮ್ಮ ಇಷ್ಟ ದೇವತೆಯನ್ನು ಅರ್ಚಿಸಿ, ದಾನಧರ್ಮ ಮಾಡಿ ಪುನೀತರಾಗುತ್ತಾರೆ. ತಮಿಳುನಾಡು ಮತ್ತು ಆಂಧ್ರದಲ್ಲಿ 'ಪೊಂಗಲ್' ಆಚರಣೆ ಇದ್ದರೆ. ನೆರೆಯ ರಾಷ್ಟ್ರವಾದ ಮಹಾರಾಷ್ಟ್ರದಲ್ಲಿ ಕುಸುರೆ ಎಳ್ಳನ್ನು ಎಲ್ಲರಿಗೂ ಹಂಚಿ ಶುಭ ಹಾರೈಸುತ್ತಾರೆ. ಪಂಜಾಬಿನಲ್ಲಿ 'ಲೋಡಿ' ಎಂಬುದಾಗಿ ಆಚರಣೆ ಮಾಡುತ್ತಾರೆ. ಸಂಕ್ರಾಂತಿಯ ಅನುಭವವನ್ನು ಗ್ರಾಮೀಣ ಪ್ರದೇಶಗಳಲ್ಲಿ ಅನುಭವಿಸಬೇಕು. ಅದು ರೈತರ ಪಾಲಿಗೆ ಸುಗ್ಗಿಯ ಸಂಭ್ರಮ ತರುವ ಕಾಲ. ವರ್ಷಪೂರ್ತಿ ಹೊಲಗದ್ದೆಗಳಲ್ಲಿ ಕಷ್ಟಪಟ್ಟು ಬೆವರು ಸುರಿಸಿ ಬೆಳೆದ ಧಾನ್ಯಗಳನ್ನು, ಸಗಣಿಯಿಂದ ಸಾರಿಸಿ ವರ್ತುಲಾಕಾರವಾಗಿ ಮಾಡಿದ ಕಣದಲ್ಲಿ ತಂದು ಮೇಟಿ, ಕಟ್ಟಿಗೆ ನೆಟ್ಟು ಪೂಜಿಸುತ್ತಾರೆ. ನಂತರ ಮೆದೆ ಹಾಕಿದ ಧಾನ್ಯಗಳ ತೆನೆಗಳನ್ನು ತಂದು ಹರಡಿ ತೆನೆಯಿಂದ ಕಾಳು ಬೇರ್ಪಡಿಸಿ, ಅದನ್ನು ಕಣದಲ್ಲಿ ಬೆಟ್ಟದಂತೆ ರಾಶಿ ಹಾಕಿ ಪೂಜಿಸಿ ಕುಣಿಯುವುದೇ ಒಂದು ಅಪೂರ್ವ ಕ್ಷಣ, ಇದಲ್ಲದೆ ಇಡೀ ವರ್ಷ ಹೊಲಗದ್ದೆಗಳಲ್ಲಿ ದುಡಿದು ದಣಿದ ಎತ್ತು-ಹಸು ಎಮ್ಮೆ ಮುಂತಾದ ಜಾನುವಾರುಗಳನ್ನು ಕೆರೆಕಟ್ಟೆಗಳಲ್ಲಿ ಮೀಯಿಸಿ, ಮೈತಿಕ್ಕಿ ಶುಭ್ರಗೊಳಿಸಿ, ಕೋಡುಗಳಿಗೆ, ಗೊರಸುಗಳಿಗೆ ವಿವಿಧ ಬಣ್ಣ ಹಚ್ಚುತ್ತಾರೆ. ಕೊಂಬುಗಳಿಗೆ ಹಿತ್ತಾಳೆ ಅಣಸು ತೊಡಿಸುತ್ತಾರೆ. ಕೊರಳಿಗೆ ಗಂಟೆಗಳನ್ನು ಕಟ್ಟಿ ಝುಗಝುಗಿಸುವ ವಸ್ತ್ರಗಳಿಂದ ಸಿಂಗರಿಸಿ, ಊರು ಬೀದಿಗಳಲ್ಲಿ ಮೆರವಣಿಗೆಯಲ್ಲಿ ಕರೆತಂದು ಅವುಗಳಿಗೆ ದೃಷ್ಟಿದೋಷ ನಿವಾರಣೆಗಾಗಿ ಬೆಂಕಿಯ ಉರಿಯ ಮೇಲೆ ಹಾಯಿಸುತ್ತಾರೆ. ಕೆಲವೆಡೆ ದೇವಾಲಯಗಳಲ್ಲಿ ದೇವರ ಮುಂದೆ, ಮೊಲಕ್ಕೆ ಅರಿಸಿನ ಕುಂಕುಮ ಹಚ್ಚಿ ಹೂ ಮೂಡಿಸಿ, ಪೂಜಿಸಿ ಬಿಟ್ಟು ಬಿಡುವ ಪದ್ಧತಿಯು ಉಂಟು. ತಾಲ್ಲೂಕಿನ ಬಹುತೇಕ ಹಳ್ಳಿಗಳಲ್ಲಿ ಇದನ್ನು ಕಾಣಬಹುದು. ಅನಂತರ ರಾತ್ರಿಯೆಲ್ಲ ರೈತರು ಸುಗ್ಗಿ ಕುಣಿತದಲ್ಲಿ ಪಾಲ್ಗೊಂಡು ಸಂಭ್ರಮಿಸುತ್ತಾರೆ. ಸಂಕ್ರಾಂತಿ ಹೆಂಗಸರಿಗೆ, ಮಕ್ಕಳಿಗೆ ಹೆಚ್ಚಿನ ಮುದ ನೀಡುವ ಹಬ್ಬವಾಗಿದೆ. ಹೆಚ್ಚು ಮಕ್ಕಳು ಜರತಾರಿ ಲಂಗ ದಾವಣೆಯನ್ನು ತೊಟ್ಟು, ಹೆಂಗೆಳೆಯರು ರೇಶಿಮೆ ಸೀರೆ ಒಡವೆಗಳಿಂದಲೂ ಅಲಂಕರಿಸಿ ಕೊಂಡು ಸಕ್ಕರೆಅಚ್ಚು, ಎಳ್ಳು, ಬೆಲ್ಲ, ಕಬ್ಬು, ಹಣ್ಣುಗಳನ್ನು ಮನೆ ಮನೆಗೂ ಹೋಗಿ ಬೀರಿ ಬರುವುದನ್ನು ನೋಡಬಹುದು.

ಮುಂಬರುವ ಯುಗಾದಿಯು ಬೇವು-ಬೆಲ್ಲದ ಹಬ್ಬವಾದರೆ ಮೊದಲು ಬರುವ ಸಂಕ್ರಾಂತಿಯು ಎಳ್ಳು-ಬೆಲ್ಲದ ಹಬ್ಬ, ಅಂದು ಎಳ್ಳೆಣ್ಣೆ ಹಚ್ಚಿಕೊಂಡು ಸ್ನಾನ-ಎಳ್ಳಿನ ದಾನ, ಎಳ್ಳಿನ ಹೋಮ, ಎಳ್ಳೆಣ್ಣೆ ದೀಪ ಬೆಳಗುವುದಕ್ಕೆ ವಿಶೇಷ ಪ್ರಾಶಸ್ತ್ಯ. ಎಳ್ಳು ಪಾಪ ಪರಿಹರಿಸುವುದೆಂಬ ನಂಬಿಕೆ ಹಾಗು ದೇಹಕ್ಕೆ ಪುಷ್ಟಿ ಮತ್ತು ಬಲ ನೀಡುವುದೆಂಬ ಭಾವನೆ ಇದರ ಹಿಂದಿದೆ ಎನ್ನಬಹುದು. ಇಂದು ನಗರ ಪ್ರದೇಶಗಳಲ್ಲಿ ಗ್ರಾಮೀಣ ಪ್ರದೇಶದ

ಹಳ್ಳಿಗಳಲ್ಲಿರುವಂತೆ ಸಂಭ್ರಮದ ವಾತಾವರಣ ಇಲ್ಲದಿದ್ದರೂ ರಂಗು ರಂಗಿನ ಸುಂದರವಾದ ವಿನ್ಯಾಸಗಳ ಗ್ರೀಟಿಂಗ್ಸ್ ಸಂಭ್ರಮದ ಸಂಕ್ರಾಂತಿಯನ್ನು ನೋಡಬಹುದು. ಆದರೆ ಗ್ರಾಮೀಣ ಪ್ರದೇಶಗಳಲ್ಲಿ ಎಳ್ಳು ಬೆಲ್ಲ ಬೀರುವ ಸಂಭ್ರಮ ಇನ್ನೂ ಜೀವಂತವಾಗಿದೆ.

ಹಬ್ಬಗಳ ಆಚರಣೆಯಲ್ಲಿ ಸಂಭ್ರಮ, ಸಂತೋಷ ಉಲ್ಲಾಸ, ಹಿಂದಿನ ಕಾಲದಷ್ಟು ಈಗಿಲ್ಲವಾದರೂ, ಬೇರೊಂದು ರೀತಿಯಲ್ಲಿ ಮುಖವಾಡಗಳಡಿಯಲ್ಲಿ ಹಬ್ಬಗಳ ಭರಾಟೆ ಹೆಚ್ಚುತ್ತಿರುವುದನ್ನು ನೋಡಬಹುದು. ಆದರೂ ಹಳೆಯ ಸಂಪ್ರದಾಯ ಬಿಡದಿರುವುದು ಸಹ ಕೆಲವೆಡೆ ಗಮನ ಸೆಳೆಯುತ್ತವೆ. ನೆಮ್ಮದಿಯ ಆರೋಗ್ಯಕರ ಜೀವನಕ್ಕೆ ಜನಸಂಪರ್ಕ ಸಾಧನಗಳಾದ ಇಂತಹ ಹಬ್ಬ-ಹರಿದಿನಗಳು ಮಾತ್ರವೇ ಸಹಾಯಕವಾಗಬಹುದು.

**ಬೊಂಬೆ ಸಂಭ್ರಮ**

ರೇಷ್ಮೆ ನಗರ ಎಂದೇ ಪ್ರಸಿದ್ಧಿ ಪಡೆದಿರುವ ದೊಡ್ಡಬಳ್ಳಾಪುರದ ಕೆಲವು ಮನೆಗಳಲ್ಲಿ ಪ್ರತಿವರ್ಷ ನವರಾತ್ರಿಹಬ್ಬದ ಸಮಯದಲ್ಲಿ ದಸರಾ ಬೊಂಬೆಗಳ ಸಂಭ್ರಮ ನಡೆಯುತ್ತದೆ. ವರ್ಷದ ಎಲ್ಲ ದಿನಗಳಲ್ಲಿ ನೇಕಾರಿಕೆಯಲ್ಲಿ ಮಗ್ನರಾಗುವ ಇಲ್ಲಿನ ಜನತೆ, ಧಾರ್ಮಿಕ ಹಬ್ಬಗಳನ್ನು ವಿಶೇಷವಾಗಿ ಆಚರಿಸುವ ಸಂಪ್ರದಾಯವನ್ನು ರೂಢಿಸಿ ಕೊಂಡಿದ್ದಾರೆ. ಹೈಟೆಕ್ ಸಿಟಿ ಬೆಂಗಳೂರಿಗೆ ಕೂಗಳತೆಯ ದೂರದಲ್ಲಿದ್ದರೂ, ದೊಡ್ಡಬಳ್ಳಾಪುರ ಮಾತ್ರ ತನ್ನ ಮೂಲ ಅಸ್ತಿತ್ವವನ್ನು ಕಳೆದುಕೊಂಡಿಲ್ಲ. ಬನ್ನಿ ಮುಡಿಯುವುದರಿಂದ ಹಿಡಿದು, ಗಣೇಶ ಹಬ್ಬದವರೆಗೆ ಎಲ್ಲವೂ ವೈವಿಧ್ಯಮಯ ಬಿರುಗಾಳಿಯಂತೆ ಬರುವ ಆಧುನಿಕ ಸಂಸ್ಕೃತಿಗೆ ತಲೆ ಕೆಡಿಸಿಕೊಳ್ಳದ ಈ ಭಾಗದ ಜನತೆ, ಆಧುನಿಕ ಯುಗದಲ್ಲಿದ್ದರೂ ತಮ್ಮ ತನವನ್ನು ಮೆರೆಯುತ್ತಾರೆ. ಇದರಿಂದಾಗಿ ಪರಂಪರಾಗತವಾಗಿ ನಡೆದುಕೊಂಡು ಬಂದ ಸಂಪ್ರದಾಯ ಆಚರಣೆಯೂ ಇಲ್ಲಿ ಜೀವಂತವಾಗಿದೆ ಎಂದು ಹೇಳಬಹುದು. ವ್ಯವಸಾಯ, ನೇಯ್ಗೆ, ವೀಣೆ ಹಾಗು ನಾನಾ ಬಗೆಯ ಗಣಪಗಳನ್ನು ತಯಾರಿಸುವುದು ಇಲ್ಲಿನ ಕಲೆಗಾರರಿಗೆ ಕರಗತವಾಗಿದೆ. ಮತ್ತು ಮಕ್ಕಳಿಗೆ ಮನರಂಜನೆ ನೀಡುವ ನವರಾತ್ರಿಬೊಂಬೆ ಪ್ರದರ್ಶನ ಮಾಡುವ ಕುಟುಂಬಗಳು ಈ ಆಚರಣೆಗೆ ತಲೆಮಾರುಗಳ ಹಿನ್ನೆಲೆ ಇದೆ ಎಂದು ಹೇಳುತ್ತವೆ. ಈ ಬೊಂಬೆಗಳು. ಇತ್ತೀಚಿನ ಸಂದರ್ಭದಲ್ಲಿ ಹೊಸಪೀಳಿಗೆ ಈ ಆಚರಣೆಗೆ ಹೆಚ್ಚು ಉತ್ಸಾಹ, ಆಸಕ್ತಿ ತೋರಿಸುತ್ತಿರುವುದು ಆಶಾದಾಯಕ ಸಂಗತಿಯಾಗಿದೆ. ಈ ಬೊಂಬೆ ಪ್ರದರ್ಶನದಲ್ಲಿ ಪುರಾಣ, ಪುಣ್ಯ ಪುರುಷ ವ್ಯಕ್ತಿಗಳಿಂದ ಹಿಡಿದು ಆಧುನಿಕ ಜಗತ್ತಿನ ವಿದ್ಯಾಮಾನಗಳನ್ನು ಪ್ರತಿಬಿಂಬಿಸುವ ಬೊಂಬೆಗಳನ್ನು ನವರಾತ್ರಿಹಬ್ಬದಲ್ಲಿ ಪ್ರದರ್ಶನಕ್ಕೆ ಇಡುತ್ತಾರೆ. ಮಹಾಲಯ ಅಮಾವಾಸ್ಯೆ ದಿನದಿಂದ ಪ್ರಾರಂಭಿಸಿ. ವಿಜಯದಶಮಿ ತನಕ ನಡೆಯುವ ನವರಾತ್ರಿಬೊಂಬೆ ಪ್ರದರ್ಶನಕ್ಕೆ ನಡುಮನೆಯಲ್ಲಿ ಉತ್ತಮ ವೇದಿಕೆಯನ್ನು ಸಿದ್ಧಪಡಿಸಲಾಗುತ್ತದೆ.

ಯಾವ ಯಾವ ಬೊಂಬೆಗಳನ್ನು ಎಲ್ಲಿ ಕೂಡಿಸಬೇಕು ಎಂಬುದನ್ನು ಚರ್ಚಿಸಿ ನಿರ್ಧರಿಸುತ್ತಾರೆ. ಕೈಲಾಸ ಪರ್ವತದಲ್ಲಿ ಶಿವ, ಪಾರ್ವತಿ, ಮತ್ತು ಗಣಪತಿ ಕುಳಿತಿರುವುದು. ರಾಮ-ಲಕ್ಷ್ಮಣ, ಸೀತೆ ಮತ್ತು ಹನುಮಂತ ಒಂದೆಡೆ ಇರುವಂತೆ ಮಾಡಿರುತ್ತಾರೆ. ವಿಷ್ಣುವಿನ ದಶಾವತಾರ. ಮದುವೆ ದಿಬ್ಬಣ, ಉದ್ಯಾನವನ, ಮೃಗಾಲಯ, ಪ್ರಾಣಿಪಕ್ಷಿಗಳು. ಮಕ್ಕಳ ಆಧುನಿಕ ಆಟಿಕೆಗಳು, ಗ್ರಾಮೀಣ ಬದುಕಿನ ದೃಶ್ಯ ಇಲ್ಲಿ ಪ್ರಮುಖ ಸ್ಥಾನವನ್ನು ಪಡೆದಿರುತ್ತವೆ.

ನವರಾತ್ರಿಯ ದಿನ ಪ್ರತಿ ಸಂಜೆ ವೇಳೆ ಬೊಂಬೆ ಕುಳ್ಳಿರಿಸಿರುವ ಮನೆಗಳಲ್ಲಿ ವಿಶೇಷ ಪೂಜೆ ನಡೆಯುತ್ತದೆ. ಮತ್ತು ಮುತ್ತೈದೆಯರಿಗೆ ಬಾಗಿನ ಹಾಗು ಬರುವ ಮಕ್ಕಳಿಗೆ ಪ್ರಸಾದ ನೀಡುತ್ತಾರೆ. ವಿಜಯದಶಮಿ ದಿನದ ಬಳಿಕ ಬೊಂಬೆಗಳನ್ನು ಮುಂಬರುವ ಹಬ್ಬಕ್ಕಾಗಿ ಜೋಪಾನವಾಗಿ ಇಡುತ್ತಾರೆ. ಬೊಂಬೆಗಳನ್ನು ಪ್ರದರ್ಶನಕ್ಕೆ ಕೂಡಿಸುವುದು ಒಂದು ಕಲೆ. ಈ ನವರಾತ್ರಿಬೊಂಬೆ ಪ್ರದರ್ಶನ ಮಾಡುವ ಕಲೆ ಆಚರಣೆಗೆ ಬಂದಿರುವುದು. ರಾಜಮನೆತನದವರಿಂದ ಮೊದಲು ಮಕ್ಕಳ ಮನರಂಜನೆಗಾಗಿ ಪ್ರಾರಂಭವಾದ ಈ ಬೊಂಬೆ ಪ್ರದರ್ಶನ ಇಂದು ಒಂದು ಸಾಂಪ್ರದಾಯಿಕ ಆಚರಣೆಯಾಗಿದೆ. ದೊಡ್ಡಬಳ್ಳಾಪುರದ ಹಲವು ಮನೆಗಳಲ್ಲಿ ಹಲವಾರು ವರ್ಷಗಳಿಂದ ಬೊಂಬೆ ಪ್ರದರ್ಶನ ಮಾಡುವವರು ಸುಮಾರು ೬೦ ರಿಂದ ೭೦ ವರ್ಷಗಳ ಹಳೆಯ ಬೊಂಬೆಗಳನ್ನು ಸಂಗ್ರಹಿಸಿರುವುದು ಕಂಡುಬರುತ್ತದೆ. ಜೊತೆಗೆ ಕಾಲಕ್ಕೆ ತಕ್ಕಂತೆ ಬದಲಾವಣೆಗೊಳ್ಳುತ್ತಿರುವ ಗೊಂಬೆಗಳನ್ನು ಹೊಸದಾಗಿ ಖರೀದಿ ಮಾಡಿ ಸಂಗ್ರಹಿಸಿದ್ದಾರೆ. ಇತ್ತೀಚಿನ ಸಂದರ್ಭದಲ್ಲಿ ಪ್ಲಾಸ್ಟಿಕ್ ಮತ್ತು ಪ್ಲಾಸ್ಟಿಕ್ ಆಫ್ ಪ್ಯಾರಿಸ್ ಬೊಂಬೆಗಳ ಮಾದರಿಗಳ ಹೆಚ್ಚಿನ ಸಂಖ್ಯೆಯಲ್ಲಿವೆ. ಮರದ ಮತ್ತು ಮಣ್ಣಿನ ಬೊಂಬೆಗಳಿಗೆ ಬಣ್ಣ ಮತ್ತು ಬಣ್ಣದ ಬಟ್ಟೆಗಳಿಂದ ಅಲಂಕಾರ ಮಾಡಿ ಆಕರ್ಷಣೆಗೊಳಿಸುತ್ತಾರೆ. ಒಂದೊಂದು ಮನೆಯಲ್ಲಿ ನೂರರಿಂದ-ಆರುನೂರು ಬೊಂಬೆಗಳವರೆಗೆ ಸಂಗ್ರಹಿಸಿ ಪ್ರತಿವರ್ಷ ಪ್ರದರ್ಶನಕ್ಕೆ ಇಡುವುದು ದೊಡ್ಡಬಳ್ಳಾಪುರ ಜನತೆಯ ವೈಶಿಷ್ಟ್ಯಪೂರ್ಣ ಆಚರಣೆಯಾಗಿದೆ.

### ೬.೩. ಬಾಬಯ್ಯನ ಜಲ್ದಿ

ಇದು ಮುಸಲ್ಮಾನರ ಒಂದು ಆಚರಣೆ. ಕಾರೇಪುರ ಗ್ರಾಮದಲ್ಲಿ ಈ ಆಚರಣೆ ಇಂದಿಗೂ ಇದೆ. ಮುಸಲ್ಮಾನರ ಹಬ್ಬವಾದರೂ ಇದರಲ್ಲಿ ಭಾಗವಹಿಸುವವರು ಹಿಂದುಗಳೇ ಹೆಚ್ಚು. ಉರುಸ್ ಹಬ್ಬದ ದಿನ ದೊಡ್ಡ ಬೆಂಕಿ ಕೊಂಡ ಏರ್ಪಡಿಸಿ ಭಕ್ತರೆಲ್ಲ ಬೆಂಕಿಯನ್ನು ದಾಟುತ್ತಾರೆ. ಈ ಕೊಂಡಕ್ಕೆ ಅರಳು ಚೀಲಗಳನ್ನು ಎಸೆದರೆ ಮೈಯಲ್ಲಿ ಇರುವ ನರಗುಳ್ಳೆಗಳು ವಾಸಿಯಾಗುತ್ತವೆಂಬ ನಂಬಿಕೆ ಇಂದಿಗೂ ಇದೆ. ಹೆಜ್ಜಾಜಿ, ಅಂಬಲಗೆರೆ, ಶ್ಯಾಕಲದೇವನಪುರ, ಗೂಳ್ಯ ಮೊದಲಾದ ಗ್ರಾಮಗಳ ಜನ ಈ ಹಬ್ಬದಲ್ಲಿ ಪಾಲ್ಗೊಳ್ಳುತ್ತಾರೆ.

**ಅಡಿಟಿಪ್ಪಣಿಗಳು**

೧. ಸಿದ್ದಲಿಂಗಯ್ಯ, **ಗ್ರಾಮದೇವತೆಗಳು,** ಪು.೭೧

೨. ಜೀ.ಶಂ.ಪರಮಶಿವಯ್ಯ, **ಕನ್ನಡ ವಿಶ್ವಕೋಶ,** ಸಂಪುಟ-೧, ಪು.೭೦೩

೩. **Standerd Dictionory of Folkore,** Mythology and legends, Vol II, pag-೧೪೦

೪. ಡಾ.ದೇ.ಜವರೇಗೌಡ, **ಜಾನಪದ ಅಧ್ಯಯನ,** ಪು.೩೪೨

೫. ಡಾ. ಸಿದ್ದಲಿಂಗಯ್ಯ, **ಗ್ರಾಮದೇವತೆಗಳು,** ಪು.೭೩

೬. ಹೀಚಿ ಬೋರಲಿಂಗಯ್ಯ, **ಉಜ್ಜನಿ ಚೌಡಮ್ಮ,** ಪು.೪೬-೪೭

೭. ಎಚ್.ಎಸ್.ಸಿದ್ದಗಂಗಪ್ಪ, **ದೇವಿ ಆರಾಧನೆಗೆ ಸಂಬಂಧಿಸಿದ ಕೆಲವು ಆಚರಣೆಗಳು,** ಪು.೪೨–೪೩

೮. ಅದೇ

೯. ಡಾ.ಶಂಕರರಾವ್, (ಅನುವಾದ ಶ್ರೀ ರಾಮಕೃಷ್ಣರಾವ್) ಸಮುದಾಯ ವಾರ್ತಾಪತ್ರ, ಮೇ.೧೯೮೨, ಪು.೨೧)

೧೦. ಎಚ್.ಎಸ್.ಸಿದ್ದರಂಗಪ್ಪ, **ದೇವಿ ಆರಾಧನೆಗೆ ಸಂಬಂಧಿಸಿದ ಕೆಲವು ಜನಪದ ಆಚರಣೆಗಳು,** ಕರ್ನಾಟಕ ಭಾರತಿ, ೧೯೭೮, ಆಗಸ್ಟ್, ಪು.೪೩

೧೧. ಸಿದ್ದಲಿಂಗಯ್ಯ, **ಗ್ರಾಮದೇವತೆಗಳು,** ಪು.೧೯೨

೧೨. ಅದೇ, ಪು.೧೯೧.

೧೩. **ವಿಜಯಕರ್ನಾಟಕ ಸಾಪ್ತಾಹಿಕ ಪುರವಣಿ,** ೨೫ ಭಾನುವಾರ, ನವೆಂಬರ್ ೨೦೦೭

೧೪. ಸಿದ್ದಲಿಂಗಯ್ಯ, **ಹಕ್ಕಿನೋಟ,** ಪು.೪೯

# ೭

# ಸಮಾರೋಪ

ಕರ್ನಾಟಕದ ಪ್ರಾಚೀನ ಸಂಸ್ಕೃತಿಯ ಅಧ್ಯಯನಕ್ಕೆ ಮತ್ತು ರಾಜಕೀಯ ಇತಿಹಾಸಕ್ಕೆ ಪೂರಕವಾಗಿ ಶಾಸನಗಳು ಹೇಗೆ ಸಹಕಾರ ನೀಡಿವೆ ಎಂಬುದನ್ನು ತಿಳಿಯುವುದೇ ಈ ಅಧ್ಯಯನದ ಪ್ರಧಾನ ಉದ್ದೇಶ. ಅಲ್ಲದೆ ತಾಲ್ಲೂಕಿನಲ್ಲಿ ಅನಾಧಾರಕ್ಕೆ ಒಳಗಾಗಿದ್ದ ಸ್ಮಾರಕ ಶಿಲ್ಪಗಳನ್ನು ಪರಿಚಯಿಸುವುದು ಇಲ್ಲಿನ ಮತ್ತೊಂದು ಪ್ರಧಾನ ಅಂಶವಾಗಿದೆ.

ತಾಲ್ಲೂಕಿನಲ್ಲಿನ ಪ್ರಕಟಗೊಂಡ ಮತ್ತು ಪ್ರಕಟಗೊಳ್ಳದೇ ಇರುವ ಶಾಸನಗಳು ಮತ್ತು ಸ್ಮಾರಕಗಳನ್ನು ರಕ್ಷಿಸಿ ಅವುಗಳನ್ನು ಉಳಿಸಿ ಮುಂದಿನ ಪೀಳಿಗೆಗೆ ಕೊಂಡೊಯ್ಯುವ ಹಾದಿಯ ಪ್ರಯತ್ನವೂ ನಡೆಯದೆ ಅವನತಿಯ ಮಾರ್ಗವನ್ನು ಹಿಡಿದಿರುವುದು ಶಾಸನಾಸಕ್ತರಿಗೆ ಮತ್ತು ಶಾಸನ ಪ್ರಪಂಚಕ್ಕೆ ಅತ್ಯಂತ ನೋವಿನ ವಿಷಯವಾಗಿದೆ. ಇಂತಹ ಸಂದರ್ಭದಲ್ಲಿ ಅವುಗಳನ್ನು ಸಂಶೋಧಿಸಿ ಮಾಹಿತಿ ಸಂಗ್ರಹಿಸಿ ಅಧ್ಯಯನವನ್ನು ನಡೆಸಿದ್ದೇವೆಂದು ಹೇಳಬಹುದು. ಈ ದೃಷ್ಟಿಯಿಂದ ಶಾಸನಗಳನ್ನು ಮತ್ತು ಸ್ಮಾರಕಶಾಸನಗಳನ್ನು ಒಂದೆಡೆ ಸಂಗ್ರಹಿಸಿ ಅಧ್ಯಯನ ಮಾಡಿರುವುದು ತಾಲ್ಲೂಕಿನ ಮಟ್ಟಿಗೆ ಮೊಟ್ಟ ಮೊದಲ ಪ್ರಯತ್ನವಾಗಿದೆ.

ಶಾಸನ ಕ್ಷೇತ್ರದ ಅಧ್ಯಯನವು ಮಹಾಸಾಗರದಷ್ಟು ವಿಶಾಲವಾದುದು. ಇಲ್ಲಿ ತುಂಬಿದಷ್ಟು, ಮೊಗೆದಷ್ಟು ಮಾಹಿತಿಗಳು ಮುಗಿಯುವುದೇ ಇಲ್ಲ. ಎಲ್ಲಾ ಶಾಸನಗಳನ್ನು ಮತ್ತು ಸ್ಮಾರಕಗಳನ್ನು ಒಟ್ಟಿಗೆ ಕಲೆಹಾಕಿ ಇಲ್ಲಿ ಅಧ್ಯಯನ ಮಾಡಿದ್ದೇವೆ.

ಪ್ರತಿನಿತ್ಯವೂ ಹೊಸ ಶಾಸನಗಳು ಮತ್ತು ಸ್ಮಾರಕ ಶಾಸನಗಳು ಬೆಳಕಿಗೆ ಬರುತ್ತಲೇ ಇವೆ. ಹೀಗಾಗಿ ನಾವು ಕ್ಷೇತ್ರಕಾರ್ಯ ಮಾಡಿದಾಗ ನಮ್ಮ ಗಮನಕ್ಕೆ ಬರದೆ ದೊರೆಕದೆ ಇರುವ ಶಾಸನಗಳು ಮುಂದೆ ಅಧ್ಯಯನ ಕೈಗೊಂಡವರಿಗೆ ದೊರಕಬಹುದು. ಈ ಒಂದು ಅಂಶವನ್ನು ಮನಸಿನಲ್ಲಿಟ್ಟುಕೊಂಡು ಇಲ್ಲಿನ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಈ ನಮ್ಮ ಅಧ್ಯಯನದ ಶಾಸನಗಳ ವಿಷಯವನ್ನು ಹಲವಾರು ಭಾಗಗಳಾಗಿ ವಿಭಜಿಸಿಕೊಂಡು ಹೆಚ್ಚು ವಿಶ್ಲೇಷಣೆಗೆ ಪ್ರಾಮುಖ್ಯತೆ ನೀಡಿ ಅಧ್ಯಯನ ನಡೆಸಲಾಗಿದೆ. ಸ್ಮಾರಕ ಶಾಸನಗಳಲ್ಲಿ ಕೂಡ ಹೊಸ ಅಂಶಗಳನ್ನು ಹುಡುಕುವ ಪ್ರಯತ್ನ ಮಾಡಲಾಗಿದೆ.

ನಮ್ಮ ಅಧ್ಯಯನದಲ್ಲಿ ಶಾಸನಗಳನ್ನು ವರ್ಗೀಕರಿಸಿ ಅವುಗಳಲ್ಲಿನ ಹೊಸ ವಿಷಯಗಳನ್ನು ಸಾಮಾನ್ಯ ಚಿತ್ರಕ್ಕೆ ಸುವರ್ಣದ ಚೌಕಟ್ಟು ಹಾಕಿದಂತೆ ವಿಶ್ಲೇಷಿಸಲಾಗಿದೆ ಎಂದು ಹೇಳಬಹುದು. ಇನ್ನೂ ಕೆಲವು ಸ್ಥಳಗಳಲ್ಲಿ ವ್ಯವಸ್ಥಿತವಾಗಿ ಸಮಗ್ರವಾದ ಕ್ಷೇತ್ರಕಾರ್ಯ ಮಾಡಿದರೆ ಹೊಸ ಶಾಸನಗಳನ್ನು, ಶಾಸನ ಶಿಲ್ಪಗಳನ್ನು ಪತ್ತೆ ಹಚ್ಚಿ ಹಲವಾರು ಹೊಸ ಅಂಶಗಳನ್ನು ಒಂದೆಡೆ ಕಲೆಹಾಕಬಹುದು. ತಾಲ್ಲೂಕಿನ ಕೆಲವು ಗ್ರಾಮಗಳಲ್ಲಿರುವ ಶಾಸನಗಳು ಮತ್ತು ಶಾಸನಶಿಲ್ಪಗಳ ಬಗ್ಗೆ ಜನರಿಗೆ ಇರುವ ಅಸಡ್ಡೆಯ ಮನೋಭಾವದಿಂದ ಇವುಗಳು ಅನಾಧರಕ್ಕೆ ಒಳಗಾಗಿವೆ ಎಂದು ಹೇಳಬಹುದು. ಇದಕ್ಕೆ ಜನರಲ್ಲಿರುವ ತಪ್ಪು ತಿಳುವಳಿಕೆ ಅವುಗಳ ಬಗ್ಗೆ ಸರಿಯಾದ ಅರಿವಿಲ್ಲದಿರುವುದೇ ಕಾರಣವಾಗಿದೆ. ಶಾಸನಗಳು ಮತ್ತು ಶಾಸನಶಿಲ್ಪಗಳ ಮಹತ್ವ ಮತ್ತು ಅವುಗಳಲ್ಲಿನ ಉತ್ತಮ ವಿಷಯಗಳು ಜನಸಾಮಾನ್ಯರಿಗೆ ಅರ್ಥವಾದರೆ, ತಿಳಿದರೆ ಅವುಗಳನ್ನು ಕಾಪಾಡಿ, ಸಂರಕ್ಷಿಸುವ ಜವಾಬ್ದಾರಿಯನ್ನು ಹೊರಲು ಪ್ರಯತ್ನಿಸುತ್ತಾರೆ. ಹಾಗೂ ಪ್ರಸ್ತುತ ಸಮಯದಲ್ಲಿ ಇವುಗಳಿಂದ ಯಾವ ಪ್ರಯೋಜನವು ಇಲ್ಲ ಎಂಬ ಭಾವನೆ ಇರುವುದರಿಂದ ಶಾಸನಾಧ್ಯಯನ ಮಾಡುವವರು ವಿರಳವಾಗಿದ್ದಾರೆ.

ದೊಡ್ಡಬಳ್ಳಾಪುರ ತಾಲ್ಲೂಕಿನ ಶಾಸನಗಳು ಮತ್ತು ಸ್ಮಾರಕಗಳು ಎಂಬ ಶೀರ್ಷಿಕೆಯಡಿಯಲ್ಲಿ ತಾಲ್ಲೂಕಿನ ಇತಿಹಾಸದ ಸ್ಪಷ್ಟ ಮಾಹಿತಿಗಳನ್ನು ಸಂಗ್ರಹಿಸಿ, ಅವುಗಳನ್ನು ಸಮರ್ಥವಾಗಿ ಬಳಸಿಕೊಳ್ಳಲಾಗಿದೆ. ಭೌಗೋಳಿಕ ವಿವರ, ಕರ್ನಾಟಕ ರಾಜವಂಶಗಳು ಈ ತಾಲ್ಲೂಕಿನ ಮೇಲೆ ಯಾವ ರೀತಿಯ ಪ್ರಭಾವ ಬೀರಿದೆ ಎಂಬುದನ್ನು ಶಾಸನಗಳನ್ನು ಅನುಲಕ್ಷಿಸಿ ಅಧ್ಯಯನ ಮಾಡಿದೆ. ಪ್ರಾಚೀನ ಬೌದ್ಧ ನೆಲೆಯಾದ ರಾಜಘಟ್ಟ ಗ್ರಾಮ ಒಂದು ಐತಿಹಾಸಿಕ ನೆಲೆಯಾಗಿತ್ತು ಎಂಬ ಅಂಶವನ್ನು ಸಹ ಇಲ್ಲಿ ವಿವರಿಸಲಾಗಿದೆ.

ಈ ನಮ್ಮ ಅಧ್ಯಯನದ ಮೂಲಕ ಶಾಸನಗಳ ಮೂಲ ಉದ್ದೇಶ ಮತ್ತು ಅವುಗಳ ವಿಷಯವನ್ನು ಮುಂದಿನ ಜನಾಂಗಕ್ಕೆ ತಲುಪಿಸುವ ಉದ್ದೇಶವೂ ಇದೆ. ತಾಲ್ಲೂಕಿನ ಪ್ರಾಚೀನ ಶಾಸನಗಳಾದ ಕ್ರಿ.ಶ.೪೫೯ರ ಮಲ್ಲೋಹಳ್ಳಿ ತಾಮ್ರಶಾಸನದಿಂದ ಹಿಡಿದು ಕ್ರಿ.ಶ.೧೭೧೫ರ ಮಾವಳೀಪುರದ ಶಾಸನಗಳವರೆಗೆ ಬಳಸಿದ್ದೇವೆ. ಈ ಶಾಸನಗಳಲ್ಲಿ ಬಹುತೇಕವು ದಾನ ಶಾಸನಗಳೇ ಆಗಿವೆ. ಶಿಲಾಶಾಸನಗಳು ಮತ್ತು ತಾಮ್ರಶಾಸನಗಳೆರಡೂ ಸಹ ಅಧ್ಯಯನಕ್ಕೆ ಹೆಚ್ಚು ಇಂಬು ಕೊಡುತ್ತವೆ. ಶಾಸನಗಳಲ್ಲಿನ ವಸ್ತು ಮತ್ತು ವಿಷಯ ವೈವಿಧ್ಯದ ಬಗ್ಗೆ, ಮತ್ತು ಶಾಸನಾಧ್ಯಯನದ ಐತಿಹಾಸದ ಬಗ್ಗೆಯೂ ವಿಸ್ತೃತವಾಗಿ ಇಲ್ಲಿ ಚರ್ಚಿಸಲಾಗಿದೆ. ಶೈವ, ವೈಷ್ಣವ ಮತ್ತು ಜೈನ ಶಾಸನಗಳೆಂಬ ಮೂರು ಭಾಗಗಳಲ್ಲಿ ದಾನ ಶಾಸನಗಳನ್ನು ವಿಂಗಡಿಸಿಕೊಂಡು ವಿಶ್ಲೇಷಣೆ ಮಾಡಲಾಗಿದೆ. ಶಾಸನಗಳಲ್ಲಿ ಅಧಿಕಾರಿವರ್ಗಗಳಾದ ಮಂತ್ರಿಗಳು, ಯುವರಾಜರು, ದಳವಾಯಿಗಳು, ದಂಣಾಯಕರು, ನಾಡಪ್ರಭುಗಳು, ನಾಡಗೌಡರು, ಶಾನಭೋಗರು ಮುಂತಾದ ಅಧಿಕಾರಿ ವರ್ಗಗಳನ್ನು ಗುರುತಿಸಲಾಗಿದೆ.

ತೆರಿಗೆ, ತೆರಿಗೆ ವಸ್ತುಗಳು, ಮತ್ತು ಸುಂಕದ ವಿವರಗಳನ್ನು, ರಾಜಘಟ್ಟ ಗ್ರಾಮ ಒಂದು ವ್ಯಾಪಾರ ಕೇಂದ್ರವಾಗಿತ್ತು ಎಂಬುದನ್ನು ಹಾಗೂ ಅಯ್ಯಾವೊಳೆಯಿಂದ ವ್ಯಾಪಾರಸ್ಥರು ಇಲ್ಲಿಗೆ ಬರುತ್ತಿದ್ದರು, ಈ ಸಂತೆಯಲ್ಲಿ ಹರಿಸಿನ, ಎಳ್ಳು, ಬೆಲ್ಲ, ಕಂಬಳಿ, ಎಲೆ, ಎತ್ತು, ಕೋಣ, ಕುದುರೆಗಳ ಮೇಲೆ ತೆರಿಗೆಗಳನ್ನು ವಿಧಿಸುತ್ತಿದ್ದರು ಎಂಬುದನ್ನು ಹೇಳಬಹುದು. ಗ್ರಾಮನಾಮಗಳಾದ ಹಿಂದಿನ ಹಡುವನಹಳ್ಳಿ, ಈಗ ಹಾಡೋನಹಳ್ಳಿಯಾಗಿ, ಹಿಂದಿನ ಹಂಚಿಪುರ ಈಗ ಅಂಚರಹಳ್ಳಿಗಳಾಗಿ ಜನಸಾಮಾನ್ಯರಲ್ಲಿ ಬೆರೆತು ಹೋಗಿವೆ. ಶಾಸನಗಳಲ್ಲಿ ಕೆಳವರ್ಗದ ಜನರ ಹೆಸರುಗಳಿಂದ ಹಿಡಿದು ಅಧಿಕಾರಿವರ್ಗದ ವ್ಯಕ್ತಿ ನಾಮಗಳನ್ನು ಇಲ್ಲಿ ಗುರುತಿಸಲಾಗಿದೆ. ವಿಜಯನಗರದ ಅಧೀನದಲ್ಲಿದ್ದ ಹುಲುಕಡಿನಾಡ ಪ್ರಭುಗಳಾದ 'ಬುಮ್ಮರಳ' ಎಂಬುವನು ದೊಡ್ಡ ಬೆಳವಂಗಲದ ಪೂರ್ವಕ್ಕೆ ಇರುವ ಹುಲುಕಡಿಬೆಟ್ಟವನ್ನು ಕೇಂದ್ರವನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ್ದರೆಂಬುದಕ್ಕೆ ತಾಲೂಕಿನ ಕೆಲವು ಶಾಸನಗಳು ಆಧಾರಗಳಾಗಿವೆ. ಅಲ್ಲದೆ ಈ ಹುಲುಕಡಿ ನಾಡನ್ನು ಹೆಸರಿಸುವ ಏಳು ಶಾಸನಗಳು ಸಾಕ್ಷ್ಯಗಳಾಗಿವೆ. ಈ ನಾಡಿಗೆ ಸುಮಾರು ಅರವತ್ತೈದು ಗ್ರಾಮಗಳು ಸೇರಿದ್ದು, ಹಣಬೆ ಮತ್ತು ತಿಪ್ಪೂರುಗಳು ಇದರಲ್ಲಿ ಸೀಮೆಗಳಾಗಿದ್ದವು ಎಂಬು ದನ್ನು ವಿಷದವಾಗಿ ಚರ್ಚಿಸಲಾಗಿದೆ.

ಸ್ಮಾರಕಶಾಸನಗಳ ಅಧ್ಯಯನದಲ್ಲಿ ವೀರಗಲ್ಲುಗಳು, ಇವುಗಳ ಅರ್ಥ ವೀರಪರಂಪರೆ ಅವುಗಳಲ್ಲಿನ ಹೋರಾಟದ ವಿಷಯ ನೀಡಿದ ದಾನಗಳ ಬಗ್ಗೆ ವಿಷದೀಕರಿಸಲಾಗಿದೆ. ಗಂಗರ ಕಾಲದ ವೀರಗಲ್ಲುಗಳು ಇಲ್ಲಿ ಅಧಿಕವಾಗಿದ್ದು, ಅವುಗಳಲ್ಲಿನ ಹೋರಾಟದ ದೃಶ್ಯಗಳು ಸುಂದರವಾಗಿ ಮೂಡಿಬಂದಿವೆ. ಹಾದ್ರಿಪುರದ ಅಪ್ರಕಟಿತ ವೀರಗಲ್ಲೊಂದು ರಾಷ್ಟ್ರಕೂಟರ ಕಾಲಕ್ಕೆ ಸೇರಿದ್ದಾಗಿದೆ. ವೀರಗಲ್ಲುಗಳಷ್ಟೇ ಮಹತ್ವವನ್ನು ಮಾಸ್ತಿಕಲ್ಲುಗಳು ಪಡೆದಿವೆ. ಈ ಮಾಸ್ತಿ ಪರಂಪರೆ ಹೇಗೆ ಬೆಳೆದು ಬಂತು, ಈಗಿನ ಸ್ಥಿತಿ ಹೇಗಿದೆ ಎಂಬುದನ್ನು ಇಲ್ಲಿ ವಿವರವಾಗಿ ಚರ್ಚಿಸಲಾಗಿದೆ.

ಶಾಸನಗಳಲ್ಲಿ ವಿಕ್ರಮಶಕೆ, ಶಕಸಂವತ್ಸರ, ಸರ್ವಜಿತಸಂವತ್ಸರ ಮತ್ತು ತಿಥಿಗಳ ಬಗ್ಗೆ ಕಾಲದ ನಿರೂಪಣೆಯನ್ನು ಶಾಸನಗಳ ಹಿನ್ನೆಲೆಯಲ್ಲಿ ಅಧ್ಯಯನ ಕೈಗೊಳ್ಳಲಾಗಿದೆ. ಶಾಸನಗಳಲ್ಲಿ ಶಾಪಾಶಯ ವಾಕ್ಯಗಳು, ಶಾಸನಗಳನ್ನು ನಿರ್ಮಿಸಿದ ಕವಿಗಳು, ಲಿಪಿಕಾರರು, ಶಾಸನಗಳಲ್ಲಿನ ಲಿಪಿ ವೈವಿಧ್ಯವನ್ನು ಈ ಅಧ್ಯಾಯದಲ್ಲಿ ಸಮಗ್ರವಾಗಿ ಗಮನಿಸಿದೆ.

ಹಿಂದೆಯೇ ವಿವರಿಸಿದಂತೆ ಶಾಸನಗಳ ಮೂಲ ಉದ್ದೇಶ ವಿಷಯವನ್ನು ಮುಂದಿನ ತಲೆಮಾರಿಗೂ ಕೊಂಡೊಯ್ಯುವುದಾಗಿದೆ. ಇದರ ಜೊತೆಯಲ್ಲಿಯೇ ಶಾಸನಶಿಲ್ಪದ ಉದ್ದೇಶಗಳೇನು? ಉಬ್ಬುಶಿಲ್ಪ ರೂಢಿಗೆ ಬರಲು ಪ್ರಮುಖ ಕಾರಣಗಳೇನು? ಎಂಬುದನ್ನು ಚರ್ಚಿಸಿ, ತಾಲ್ಲೂಕಿನಲ್ಲಿ

ದೊರೆತ ಶಾಸನ ಶಿಲ್ಪಗಳ ಬಗ್ಗೆ ಅಧ್ಯಯನವನ್ನು ಮಾಡಲಾಗಿದೆ. ಶಾಸನಶಿಲ್ಪ ಮತ್ತು ಉಬ್ಬು ಶಿಲ್ಪಗಳು ಸ್ವರೂಪ, ತಂತ್ರಗಾರಿಕೆಗಳು ಒಂದೇ ಬಗೆಯಾದರೂ ಹೇಳುವ ವಿಷಯ, ನಿರೂಪಿಸುವ ವಿವರಣೆ. ಶಿಲ್ಪಗಳು ಆಲೋಚಿಸುವ ಕ್ರಮ ವಿಭಿನ್ನವಾಗಿದೆ. ದೇವಾಲಯಗಳಲ್ಲಿ ಸ್ತಂಭಗಳ ಮೇಲೆ ಭಿತ್ತಿಗಳ ಮೇಲೆ ಕಾಣುವ ಉಬ್ಬು ಶಿಲ್ಪಗಳಿಗೆ ಧಾರ್ಮಿಕತೆ ಮೂಲ ಪ್ರೇರಣೆಯಾಗಿದೆ. ದೇವಾಲಯಗಳಲ್ಲಿ ದೊರೆತಿರುವ ಉಬ್ಬುಶಿಲ್ಪಗಳಲ್ಲಿ ಸಿಂಹ, ನವಿಲು, ಮೀನು, ಆನೆ, ನರ್ತಕಿ, ಗಜಲಕ್ಷ್ಮಿ, ಹೂವು-ಬಳ್ಳಿಗಳ ಸಾಲುಗಳ ನಿರೂಪಣೆ ಹೆಚ್ಚಾಗಿ ಕಂಡುಬರುತ್ತವೆ. ಆದರೆ ಶಾಸನಶಿಲ್ಪಗಳಲ್ಲಿ ಸ್ವರ್ಗದ ಹಂತದಲ್ಲಿ ಮಾತ್ರಧಾರ್ಮಿಕತೆಯ ಚಿತ್ರಣ, ಪ್ರಭಾವ ಕಂಡುಬರುತ್ತದೆ. ಕೆಳಹಂತಗಳಲ್ಲಿ ಜನರ ಜೀವನದ ಲೌಕಿಕ ಚಿತ್ರಣವಿರುತ್ತದೆ. ಆದ್ದರಿಂದ ಜನರ ಜೀವನ ವಿನ್ಯಾಸ ಕ್ರಮಗಳನ್ನು ತಿಳಿಯಲು ಸ್ಮಾರಕ ಶಿಲ್ಪಗಳಿಗಿಂತ ಶಾಸನಶಿಲ್ಪಗಳು ಹೆಚ್ಚು ಪ್ರಯೋಜನಕಾರಿ ಇವುಗಳು ವಾಸ್ತವ ಜೀವನಕ್ಕೆ, ಸತ್ಯಕ್ಕೆ ಹತ್ತಿರವಾಗಿವೆ. ಸತ್ಯ ಘಟನೆಗಳನ್ನು ನಿರೂಪಿಸುವ ದಾಖಲೆಗಳೆನ್ನಬಹುದು. ಪ್ರಾಚೀನ ಕಾಲದಲ್ಲಿ ಸಮಾಜದಲ್ಲಿ ನಡೆದಿರಬಹುದಾದ ಸಂಗತಿಗಳನ್ನು, ಘಟನೆಗಳನ್ನು ಆಯಾ ಕಾಲದಲ್ಲೇ ಚಿತ್ರಿಸಿ ನಿರೂಪಿಸಿರುವುದು ಒಂದು ಸಾಧನೆಯಾಗಿದೆ. ಹಾಗಾಗಿ ಸಂಸ್ಕೃತಿ, ಇತಿಹಾಸದ ಪುನರ್‌ರಚನೆಯ ಸಂದರ್ಭದಲ್ಲಿ ಇವುಗಳ ಅಧ್ಯಯನ ಮುಖ್ಯವಾಗುತ್ತದೆ.

ಮಹಾಸತಿ ಆಚರಣೆ ಮತ್ತು ಸಂಪ್ರದಾಯ, ಆತ್ಮಬಲಿ ಆಚರಣೆಯನ್ನು ಸಮಗ್ರವಾಗಿ ಅರಿಯಬೇಕಾದರೆ ಶಾಸನಶಿಲ್ಪಗಳಿಗಿಂತ ಉತ್ತಮ ಆಕರಗಳು ಬೇರೊಂದಿಲ್ಲ ಎಂಬುದನ್ನು ಈ ಸಂಪ್ರಬಂಧದಲ್ಲಿ ಆಧಾರ ಸಹಿತ ನಿರೂಪಿಸಲಾಗಿದೆ. ಈ ಒಂದು ಅಧ್ಯಯನದಲ್ಲಿ ಜನಪದ ಕಥೆಗಳನ್ನು ಜನಪದ ಸಾಹಿತ್ಯವನ್ನು, ಹಲವು ನಂಬಿಕೆಗಳನ್ನು ಸಂಕ್ಷೇಪವಾಗಿ ಬಳಸಿ ಕೊಳ್ಳಲಾಗಿದೆ. ಸಮಾಜದ ಜನರ ಬದುಕಿನ ಮಧ್ಯೆ ಮೂಡಿಬಂದಿದ್ದು, ಜನರ ನಿತ್ಯ ಭಾವನೆಗಳಿಗೆ ಮತ್ತು ಶಿಲ್ಪಗಳಿಗೆ ಸಂಬಂಧವಿದೆ. ವೀರರಶಿಲ್ಪಗಳು ಮತ್ತು ಮಹಾಸತಿ ಶಿಲ್ಪಗಳು ದೇವತೆಗಳಾಗಿ ಮಾರ್ಪಟ್ಟಿದ್ದು, ಪೂಜೆಗೆ ಅರ್ಹವಾಗಿವೆ ಎಂಬುದು ಹಾಲೇನಹಳ್ಳಿ, ಕಾರೇಪುರ, ಕೋಡಿಹಳ್ಳಿ, ದೊಡ್ಡಬೆಳವಂಗಲ ಮುಂತಾದ ಗ್ರಾಮಗಳಲ್ಲಿನ ಶಾಸನಶಿಲ್ಪಗಳನ್ನು ಉದಾಹರಿಸಬಹುದು. ಇವುಗಳನ್ನು ಕಲಾಮಧ್ಯಮವಾಗಿ ಚರ್ಚಿಸಲಾಗಿದೆ. ಈ ಶಾಸನಶಿಲ್ಪಗಳಲ್ಲಿ ಕೆಲವು ಸಂಕೇತಗಳು ಅರ್ಥವಾಗುವುದೇ ಇಲ್ಲ. ಏಕೆಂದರೆ ಶಾಸನಶಿಲ್ಪಗಳಲ್ಲಿ ಕಂಡುಬರುವಂತಹ ಚಿಹ್ನೆಗಳನ್ನು, ಸಾಂಕೇತಿಕ ನಿರೂಪಣೆಯನ್ನು ವಿವರಿಸಲು ಕಷ್ಟವಾಗುತ್ತದೆ. ಕಾರಣ ಇವುಗಳನ್ನು ಅರ್ಥಮಾಡಿ ಕೊಳ್ಳಲು ಸಾಕಷ್ಟು ಸಮಕಾಲೀನ ಆಧಾರಗಳು ದೊರೆಯುವುದಿಲ್ಲ. ತಾಲ್ಲೂಕಿನಲ್ಲಿ ಶಾಸನಗಳು ಶಾಸನ ಮತ್ತು ಶಿಲ್ಪಗಳ ಕ್ಷೇತ್ರಕಾರ್ಯ ಮತ್ತು ವಿಶ್ಲೇಷಣೆ ನಡೆದಿರುವುದು ಇದೇ ಮೊದಲ ಪ್ರಯತ್ನವಾಗಿದೆ. ಮತ್ತು ಅಧ್ಯಯನದ ಸಂದರ್ಭದಲ್ಲಿ ಕ್ಷೇತ್ರಕಾರ್ಯವನ್ನೇ ಪ್ರಧಾನವಾಗಿ

ಕೈಗೊಂಡು ಮಾಹಿತಿ ಸಂಗ್ರಹಿಸಲಾಗಿದೆ. ಆದರೆ ಈ ವಿಚಾರಗಳ ಮೇಲೆ ಸಮಗ್ರವಾದ ಕ್ಷೇತ್ರಕಾರ್ಯ ನಡೆದಿರಲಿಲ್ಲ. ಈ ನಡೆದಿಲ್ಲದ ಕೊರತೆಯನ್ನು ನಮ್ಮ ಅಧ್ಯಯನದ ಮಿತಿಯಲ್ಲಿ ಹೋಗಲಾಡಿಸಿದ್ದೇವೆಂಬ ತೃಪ್ತಿ ನಮ್ಮದಾಗಿದೆ. ಶಾಸನಶಿಲ್ಪದ ಸಂಕುಚಿತ ಅರ್ಥವನ್ನು ಬಿಡಿಸಿ ಕಲಾದೃಷ್ಟಿಯಿಂದ ಅದರ ವ್ಯಾಪ್ತಿಯನ್ನು ವಿಸ್ತರಿಸಲು ಪ್ರಯತ್ನಪಟ್ಟಿದ್ದೇವೆ. ಈ ಎಲ್ಲಾ ವಿಚಾರಗಳನ್ನು ಹೇಳಿದರೂ ಇನ್ನೂ ನಮ್ಮ ಕಣ್ಣಿಗೆ ಕಾಣದ ಬೆಳಕಿಗೆ ಬಾರದ ಶಾಸನ ಶಿಲ್ಪಗಳು ದೊರೆಯುತ್ತವೆ ಎನ್ನಬಹುದು. ಇವುಗಳ ಕಾಲಚಕ್ರಕ್ಕೆ ಸಿಲುಕಿ, ಹಾಳಾಗಬಹುದು. ಇದೇ ರೀತಿಯ ದುಸ್ಥಿತಿ ಮುಂದುವರಿದರೆ ಶಾಸನಶಿಲ್ಪಗಳು ಅಧಿಕ ಸಂಖ್ಯೆಯಲ್ಲಿ ಮರೆಯಾಗುವವು. ಶಾಸನಗಳು ಮತ್ತು ಶಾಸನಶಿಲ್ಪಗಳ ಕೆಳಗೆ ಏಳು ಕೊಪ್ಪರಿಗೆ ಹಣ ಅಥವಾ ನಿಧಿ, ಹೂತಿರುತ್ತಾರೆ. ಎಂಬ ಅಜ್ಞಾನದ ಫಲವಾಗಿ ಹಲವಾರು ಶಾಸನ ಶಿಲ್ಪಗಳು ಅಗೆದು ಒಡೆದು ಹಾಕಿದ್ದಾರೆ. ವಾಣಿಗರಹಳ್ಳಿಯ ವೀರಗಲ್ಲುಗಳನ್ನು, ಮತ್ತು ಶಾಸನಗಳನ್ನು ಹಾಳುಗೆಡುವಿದ್ದಾರೆ ಎಂಬುದನ್ನು ಇಲ್ಲಿ ಉದಾಹರಿಸಬಹುದು.

ನಮ್ಮ ಪ್ರಾಚೀನ ಕರ್ನಾಟಕದ ಜನರ ಬದುಕನ್ನು ಅರಿಯಲು ಶಾಸನಗಳು ಮೂಲ ದಾಖಲೆಗಳಾಗಿವೆ. ನಮ್ಮ ಅಧ್ಯಯನದಲ್ಲಿ ಶಾಸನಗಳನ್ನು ಮತ್ತು ಶಾಸನಶಿಲ್ಪಗಳನ್ನು ಮತ್ತು ಸ್ಮಾರಕಗಳನ್ನು ಒಟ್ಟಿಗೆ ಬಳಸಿಕೊಂಡಿದ್ದೇವೆ. ಶಾಸನ ಶಿಲ್ಪಗಳಲ್ಲಿನ ಆಭರಣ, ವೇಷಭೂಷಣ, ಸಂಕೇತಗಳು, ಆಯುಧಗಳು, ಇನ್ನು ಮುಂತಾದ ಅಂಶಗಳನ್ನು ಚರ್ಚಿಸಲಾಗಿದೆ ಇದರಿಂದಾಗಿ ಪ್ರಾಚೀನ ಕರ್ನಾಟಕದ ಆಚಾರ-ವಿಚಾರ, ರೀತಿ-ನೀತಿಗಳನ್ನು, ಕಲೆಯನ್ನು ಅರಿಯುವವರಿಗೆ ನಮ್ಮ ನಿಬಂಧವು ಸ್ವಲ್ಪಮಟ್ಟಿಗಾದರೂ ಪ್ರಯೋಜನವಾಗುತ್ತದೆಂಬ ನಂಬಿಕೆ ನಮ್ಮದು.

ದೇವಾಲಯಗಳು–ಸ್ಮಾರಕಗಳ ಅಧ್ಯಯನ ಎಂಬ ಅಧ್ಯಾಯದಲ್ಲಿ ಶೈವ, ವೈಷ್ಣವ ಮತ್ತು ಜೈನ ಬಸದಿ, ವಾಸ್ತುಶೈಲಿ ದೇವಾಲಯಗಳಲ್ಲಿನ ಶಿಲ್ಪಗಳನ್ನು ಕುರಿತು, ಮಾಹಿತಿ ಸಂಗ್ರಹಿಸಿ ವಿಶ್ಲೇಷಣೆ ಮಾಡಲಾಗಿದೆ. ತಾಲ್ಲೂಕಿನಲ್ಲಿ ಪ್ರಾಚೀನ ಪುರಾತನ ದೇವಾಲಯಗಳು ಅಧಿಕವಾಗಿ ಕಂಡುಬರುವುದಿಲ್ಲ. ಸುಮಾರು ೫೦೦ ರಿಂದ ೬೦೦ ವರ್ಷಗಳ ಹಳೆಯ ದೇವಾಲಯಗಳನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ವಿವರಿಸಲಾಗಿದೆ. ಕ್ರಿ.ಶ.೧೭೬೫ರ ಚನ್ನಬಸವಪುರಾಣದ ಹಸ್ತಪ್ರತಿಯಲ್ಲಿ ಹಾದ್ರಿಪುರದ ವೀರಭದ್ರದೇವಾಲಯದ ಬಗ್ಗೆ ಉಲ್ಲೇಖವಿದೆ. ಕ್ರಿ.ಶ.೧೬೬೭ರಲ್ಲಿ ಕೋಡಿಹಳ್ಳಿ ದಳವಾಯಿ ಬೈರಪ್ಪನು ಆಳ್ವಿಕೆ ನಡೆಸುತ್ತಿದ್ದ ಕಾಲದಲ್ಲಿ ಈತನ ಮಗನಾದ ಸಂಚದಯ್ಯನು, ಕೋಡಿಹಳ್ಳಿ ಗೌಡರಾದ ವೀರೇಗೌಡರಿಗೆ ಚನ್ನಬಸವ ಪುರಾಣ ಕೃತಿಯನ್ನು ಬರೆದುಕೊಟ್ಟಿರುವನು. ಈ ಕೃತಿಯ ಆರಂಭದ ಪದ್ಯದಲ್ಲಿ 'ಹಾದ್ರಿಪುರದ ವೀರಭದ್ರಸ್ವಾಮಿ ಚರಣಾರವಿಂದವೇ ಗತಿ'' ಎಂದು ಹೇಳಲಾಗಿದೆ. ಅಂದರೆ ಈ ದೇವಾಲಯದ ನಿರ್ಮಾಣ ಕ್ರಿ.ಶ.೧೭೬೫ರ ಹಿಂದೆಯೇ ಆಗಿತ್ತು ಎಂದು ಹೇಳಬಹುದು. ಹಾಗಾಗಿ ಈ ದೇವಾಲಯವು ಸುಮಾರು ೩೦೦ ರಿಂದ ೪೦೦ ವರ್ಷಗಳಷ್ಟು ಹಳೆಯದು ಎಂಬುದನ್ನು ನಿರ್ವಿವಾದವಾಗಿ

ಹೇಳಬಹುದು. ಈ ದೇವಾಲಯದ ಶಿಖರವು ವಿಜಯನಗರ ಶೈಲಿಯಲ್ಲಿದ್ದು, ಗಾರೆ ಮತ್ತು ಇಟ್ಟಿಗೆಗಳಿಂದ ನಿರ್ಮಿಸಲಾಗಿದೆ. ಇದೇ ಶೈಲಿಯ ಮತ್ತೊಂದು ದೇವಾಲಯ ಮಾರುತಿ ದೇವಾಲಯವಾಗಿದ್ದು, ಲಿಂಗನಹಳ್ಳಿಯಲ್ಲಿದೆ. ದೊಡ್ಡಬಳ್ಳಾಪುರದ ಪರಿಸರದಲ್ಲಿ ಗಂಗರ ಕಾಲದಿಂದ ಅಂದರೆ ಕ್ರಿ.ಶ.೭-ಏನೇ ಶತಮಾನದಿಂದ ಗುಡಿ ರಚನೆಯ ಪ್ರಕ್ರಿಯೆ ಆರಂಭವಾಗಿದೆ. ಬೆಟ್ಟ ಗುಡ್ಡಗಳಲ್ಲಿ ಗ್ರಾಮಗಳಲ್ಲಿನ ದೇವಾಲಯಗಳನ್ನು ಕಾಲಾನುಕ್ರಮದಲ್ಲಿ ವಿಂಗಡಿಸಿ ಕ್ಷೇತ್ರಕಾರ್ಯದ ನೆರವಿನಿಂದ ವಿಶ್ಲೇಷಣೆ ಮಾಡಲಾಗಿದೆ. ಉದಾಹರಣೆಗಾಗಿ ಕ್ರಿ.ಶ.ಹತ್ತನೇ ಶತಮಾನಕ್ಕೆ ಸೇರಿದ್ದೆಂದು ಹೇಳಲಾದ ಮಾಡೇಶ್ವರ ಗ್ರಾಮದ ಶಿವದೇವಾಲಯ, ಹುಲುಕಡಿ ಬೆಟ್ಟದ ವೀರಭದ್ರದೇವಾಲಯ, ತಾಲ್ಲೂಕಿನಲ್ಲೇ ಅತ್ಯಂತ ಸುಂದರವಾದ ಕ್ರಿ.ಶ.೧೫೩೧ರ ವೈಷ್ಣವಪಂಥದ ಕಾಡನೂರು ಗ್ರಾಮದ ಚನ್ನಕೇಶವ ದೇವಾಲಯಗಳ ಶೈಲಿಗಳನ್ನು ಕುರಿತು ಇಲ್ಲಿ ಚರ್ಚಿಸಲಾಗಿದೆ.

ಪ್ರಾಚೀನ ಕಾಲದ ಜನರು ಅಂದರೆ ರಾಜ್ಯಗಳು, ಸಾಮ್ರಾಜ್ಯಗಳು ಉದಯವಾಗುವುದಕ್ಕೆ ಮುನ್ನ ಚಿಕ್ಕ ಊರುಗಳಲ್ಲಿ ವಾಸಿಸುತ್ತಿದ್ದರು. ತಾವು ಸಂಪಾದಿಸಿದ ಸಂಪತ್ತನ್ನು ದರೋಡ 'ಕೋರರಿಂದ, ಶತ್ರುಗಳಿಂದ ಕಾಡು ಪ್ರಾಣಿಗಿಳಿಂದ ಸಂರಕ್ಷಿಸಿಕೊಳ್ಳಲು ಜನರು ಊರುಗಳ ಸುತ್ತಲೂ ಕೋಟೆಗಳನ್ನು ಕಟ್ಟಲು ಪ್ರಾರಂಭಿಸಿದರು. ಊರುಗಳು ಬೆಳೆದು ಹಲವು ಊರುಗಳು ಒಟ್ಟುಗೂಡಿ ರಾಜ್ಯಗಳು ಸ್ಥಾಪನೆಯಾದ ಮೇಲೆ ಆಳುವ ಅರಸರು ತಮ್ಮ ರಾಜ್ಯಗಳನ್ನು ಸಂರಕ್ಷಿಸಿಕೊಳ್ಳಲು ರಾಜಧಾನಿಯಲ್ಲಿ ಮತ್ತು ಗಡಿ ಪ್ರದೇಶಗಳಲ್ಲಿ ಬಲವಾದ ಕೋಟೆಗಳನ್ನು ಕಟ್ಟಿಸಿದರು. "ಒಂದು ರಾಜ್ಯದ ಅತ್ಯವಶ್ಯಕವಾದ ಸಪ್ತಾಂಗಗಳಲ್ಲಿ ದುರ್ಗವು ಒಂದು ಎಂದು ರಾಜನೀತಿ ಹೇಳುತ್ತದೆ. ಕೋಟೆಗಳನ್ನು ನೆಲದುರ್ಗ, ಗಿರಿದುರ್ಗ, ಜಲದುರ್ಗಗಳೆಂದು ಪ್ರಮುಖವಾಗಿ ಮೂರು ಭಾಗಗಳನ್ನಾಗಿ ವಿಂಗಡಿಸಿ ಚರ್ಚಿಸಲಾಗಿದೆ. ಕೋಟೆಯ ಮಹತ್ವವನ್ನು ಹೇಳುವ ಈ ಮೇಲಿನ ಮಾತು ಕೋಟೆಗಳು ಆಧಾರಗಳಾಗಿವೆ. ಹುಲುಕಡಿ ಬೆಟ್ಟದ ಮೇಲೆ ಇರುವ ಕೋಟೆ, ಲಿಂಗಾಪುರ, ಜಾಲಿಗೆರೆ, ಹಳೇಕೋಟೆ, ಗ್ರಾಮಗಳ ಕೋಟೆಯ ಅವಶೇಷಗಳು ಸಾಕ್ಷಿಗಳಾಗಿವೆ. ಅಲ್ಲದೆ ಈ ಅಧ್ಯಾಯದಲ್ಲಿ ಮಂಟಪಗಳು ಕೆರೆಗಳು, ಭಾವಿಗಳನ್ನು ಸಹ ಚರ್ಚೆಗೆ ತೆಗೆದುಕೊಂಡು ಬಳಸಿಕೊಂಡಿದ್ದೇನೆ.

ಆತ್ಮಸಂಸ್ಕೃತಿಗೆ ಮತ್ತು ನೈತಿಕ ಪರಮ ಮೌಲ್ಯಕ್ಕೆ ಸಂಬಂಧಿಸಿದುದು ಧರ್ಮ. ಈ ಧರ್ಮವು ಪುರುಷಾರ್ಥಗಳಲ್ಲಿ ಒಂದು ಎಂಬುದು ಸರ್ವವಿಧಿತ. ಇಂತಹ ಪರಮಧರ್ಮವನ್ನು ಸಂಸ್ಕೃತಿ, ಪರಂಪರೆಗಳನ್ನು ಆಚರಣೆಗಳು ಮತ್ತು ಜಾತ್ರೆಗಳಲ್ಲಿ, ಹಬ್ಬಗಳಲ್ಲಿ ಕಾಣಬಹುದು. ಜನಪದರ ನಿಜಮನಸ್ಸು, ಜೀವನದ ಪ್ರೀತಿಗಳು ವ್ಯಕ್ತವಾಗುವುದು ಜಾತ್ರೆಗಳು ಮತ್ತು ಆಚರಣೆಗಳ ಮೂಲಕ ಇವುಗಳು ಮನುಜನ ಕಲಾಮನಸ್ಸನ್ನು ಪರಿಪೂರ್ಣವಾಗಿ ಆಶಿಸುತ್ತದೆ. ಮನುಜ ಮನುಜರ ನಡುವೆ ಸಾಂಸ್ಕೃತಿಕ ಕೊಂಡಿಯನ್ನು ಬೆಸೆಯುತ್ತವೆ. ಪ್ರತಿವರ್ಷಕ್ಕೊಮ್ಮೆ

ನಡೆಯುವ ಹುಲುಕುಂಟೆ ಬೇಟೆ, ಹುಲುಕಡಿ ವೀರಭದ್ರಜಾತ್ರೆ, ಘಾಟಿಸುಬ್ರಹ್ಮಣ್ಯ ಜಾತ್ರೆ, ದೊಡ್ಡಬಳ್ಳಾಪುರದ ಕಡಲೆಕಾಯಿ ಪರಿಷೆ, ದೊಡ್ಡಬಳ್ಳಾಪುರದ ವೇಣು ಗೋಪಾಲಸ್ವಾಮಿ, ರಥೋತ್ಸವ, ತೂಬಗೆರೆ ವೆಂಕಟರಮಣ ಸ್ವಾಮಿ ಜಾತ್ರೆಗಳು ವಿಶಿಷ್ಟತೆಯನ್ನು ಹೊಂದಿವೆ. ಇವುಗಳ ಮಾಹಿತಿಗಳನ್ನು ಒಂದೆಡೆ ಕಲೆಹಾಕಿ, ಐತಿಹ್ಯಗಳು ಮತ್ತು ಜಾನಪದದ ಹಿನ್ನೆಲೆಯಲ್ಲಿ ಸಮಗ್ರವಾಗಿ ಚರ್ಚಿಸಲಾಗಿದೆ.

ಜಾಗತೀಕರಣದ ಪ್ರಭಾವದಿಂದಾಗಿ, ಭಾರಿ ಉದ್ಯಮಗಳು ತೀವ್ರವಾಗಿ ಬೆಳೆಯುತ್ತಿರುವ ಇಂದಿನ ಪರಿಸ್ಥಿತಿಯಲ್ಲಿ ಅದಕ್ಕೆ ತಕ್ಕ ಭೂಮಿಯ ಅಗತ್ಯವೂ ಹೆಚ್ಚಾಗಿದೆ. ಇಂತಹ ಸಮಯದಲ್ಲಿ ಸರ್ಕಾರವು ಹಳ್ಳಿಗಳ ಭೂಮಿಗಳನ್ನು ವಶಪಡಿಸಿಕೊಂಡು ಉದ್ಯಮಿಗಳಿಗೆ ನೀಡುತ್ತಿದೆ. ಇದರ ಪರಿಣಾಮ ಗ್ರಾಮೀಣ ಪ್ರದೇಶವು ಇಂದು ಕೈಗಾರಿಕೀಕರಣದ ಪ್ರಭಾವದಿಂದ ಫಲವತ್ತಾದ ಭೂಮಿಯನ್ನು ಕಳೆದುಕೊಂಡು ಭೂರಹಿತ ಕುಟುಂಬಗಳಾಗಿ ಪರಿವರ್ತನೆಯಾಗುತ್ತಿವೆ. ಅರಣ್ಯನಾಶ, ಪ್ರಕೃತಿನಾಶದ ಜೊತೆ ಸಂಸ್ಕೃತಿಯೂ ನಾಶವಾಗಿ ಭೂಮಿಯ ವಿಷಯದಲ್ಲಷ್ಟೇ ಅಲ್ಲದೆ ಸಾಂಸ್ಕೃತಿಕವಾಗಿಯೂ ಬರಡಾಗುತ್ತಿದ್ದೇವೆ. ಇದರ ಪರಿಣಾಮ ದೇವಾಲಯಗಳು, ಶಾಸನಗಳು, ಸ್ಮಾರಕಗಳು ನಾಶವಾಗುತ್ತಿವೆ. ಮುಂದಿನ ತಲೆಮಾರಿಗೆ ನಮ್ಮ ಪೂರ್ವಜನ ಬದುಕು-ರೀತಿ-ನೀತಿಗಳನ್ನು ತಿಳಿಸುವ ಸಾಕ್ಷಿಗಳು ನಾಶವಾಗುತ್ತಿವೆ. ಈ ಕಾರಣದಿಂದ ಇಂದು ತಾಲ್ಲೂಕು-ಹೋಬಳಿ-ಗ್ರಾಮಮಟ್ಟದಲ್ಲಿ ಶಾಸನಗಳನ್ನು, ಸ್ಮಾರಕಗಳನ್ನು ಉಳಿಸುವ ಕಾರ್ಯ ನಡೆಯಬೇಕಾಗಿದೆ.

ದೊಡ್ಡಬಳ್ಳಾಪುರ ಇತ್ತೀಚೆಗೆ ಕೈಗಾರೀಕರಣದ ಪ್ರಭಾವ ಮತ್ತು ದೇವನಹಳ್ಳಿಯ ವಿಮಾನ ನಿಲ್ದಾಣದ ಪ್ರಭಾವದಿಂದಾಗಿ ಬೇರೆ ಬೇರೆ ಕಡೆಯವರು ಈ ಭಾಗದಲ್ಲಿ ಬಂಡವಾಳವನ್ನು ಹೂಡಿ ವ್ಯವಸಾಯದ ಭೂಮಿಯನ್ನು ವಾಣಿಜ್ಯದ ಕಾರಣಗಳಿಗೆ ಬಳಸುತ್ತಿರುವರು. ಇದರಿಂದ ಜನಗಳ ಜೀವನ ರೀತಿ-ಶೈಲಿ ಬದಲಾಗುತ್ತಿದೆ. ಇದರ ಪರಿಣಾಮ ನಮ್ಮ ಪೂರ್ವಿಕರ ಅನೇಕ ಆಚರಣೆಗಳು, ನಂಬಿಕೆಗಳು ಅಲುಗಾಡುತ್ತಿವೆ. ಇವನ್ನು ರಕ್ಷಿಸುವ ಹೊಣೆಗಾರಿಕೆ ಎಲ್ಲರದ್ದಾಗಿದೆ.

## ೧. ನಕ್ಷೆಗಳು

## ತಾಲ್ಲೂಕಿನ ಪ್ರಮುಖ ಗ್ರಾಮಗಳು




೧. ಗುಂಡುಮಗೆರೆ
೨. ಓಜೇನಹಳ್ಳಿ
೩. ಮಾಕಳಿ
೪. ಶ್ರೀ ಘಾಟಿಸುಬ್ರಮಣ್ಯ
೫. ಲಕ್ಕಸಂದ್ರ
೬. ಹಿರೇಮುದ್ದೇನಹಳ್ಳಿ
೭. ಪಾಲ್‌ಪಾಲ್ ದಿನ್ನೆ
೮. ಗೆದ್ದಲಪಾಳ್ಯ
೯. ತುಂಬಗೆರೆ
೧೦. ಸೋತೇನಹಳ್ಳಿ
೧೧. ಎದ್ದಲಹಳ್ಳಿ
೧೨. ತಿಮ್ಮಾಜನಹಳ್ಳಿ
೧೩. ಕುರುವಿಗೆರೆ
೧೪. ಸುಣ್ಣಘಟ್ಟಹಳ್ಳಿ
೧೫. ಹಾಡೋನಹಳ್ಳಿ
೧೬. ಮೆಳೆಕೋಟೆ
೧೭. ರಾಜಘಟ್ಟ
೧೮. ಬೀಡಿಕೆರೆ
೧೯. ಹಂಚರಹಳ್ಳಿ
೨೦. ಲಿಂಗನಹಳ್ಳಿ
೨೧. ಕೊನಘಟ
೨೨. ಕೋಡಿಹಳ್ಳಿ
೨೩. ಪಿಂಡಕೂರು ತಿಮ್ಮನಹಳ್ಳಿ
೨೪. ಶಿವಪುರ
೨೫. ಡಿ.ಕ್ರಾಸ್
೨೬. ಸಿದ್ದೇನಾಯಕನಹಳ್ಳಿ
೨೭. ರಘುನಾಥಪುರ
೨೮. ನಾಗದೇನಹಳ್ಳಿ
೨೯. ಆದಿನಾರಾಯಣ ಹೊಸಹಳ್ಳಿ
೩೦. ಮುತ್ತೂರು
೩೧. ಅರೇಹಳ್ಳಿ ಗುಡ್ಡದಹಳ್ಳಿ
೩೨. ಬಾಶೆಟ್ಟಿಹಳ್ಳಿ
೩೩. ಎಳ್ಳುಪುರ
೩೪. ದೊಡ್ಡತುಮಕೂರು
೩೫. ಜಿಂಕೆಬಚ್ಚಹಳ್ಳಿ
೩೬. ಚಿಕ್ಕತುಮಕೂರು
೩೭. ದೊಡ್ಡಬಳ್ಳಾಪುರ
೩೮. ಏಕಾಶಿಪುರ
೩೯. ಗೆಜ್ಜಗದಹಳ್ಳಿ
೪೦. ಮಧುರೆ
೪೧. ರಾಮದೇವನಹಳ್ಳಿ
೪೨. ಕೆಂಜಗನಾಳ
೪೩. ನಾಗೇನಹಳ್ಳಿ
೪೪. ಕನ್ನಮಂಗಲ
೪೫. ದೊಡ್ಡವಡಗೆರೆ
೪೬. ಚಿಕ್ಕವಡಗೆರೆ
೪೭. ಸಿಂಪಾಡಿಪುರ
೪೮. ಹಾಲೇನಹಳ್ಳಿ
೪೯. ಮರುಷನಹಳ್ಳಿ
೫೦. ಅಂಬಲಗೆರೆ
೫೧. ಕಾರೇಪುರ
೫೨. ಮೈಲನಹಳ್ಳಿ
೫೩. ಕಸಾಘಟ್ಟ
೫೪. ಕತ್ತಿಹೊಸಹಳ್ಳಿ
೫೫. ದೊಡ್ಡಹೆಜ್ಜಾಜಿ
೫೬. ಚಿಕ್ಕಹೆಜ್ಜಾಜಿ

೫೭. ಮಟ್ಟಯ್ಯನಗ್ರಾಹರ
೫೮. ಶ್ಯಾಕಲದೇವನಪುರ
೫೯. ಹೊನ್ನಾದೇವಿಪುರ
೬೦. ಗ್ರಂಡ್ರಗೊಳ್ಳಿಪುರ
೬೧. ಇಸ್ತೂರು
೬೨. ಕನಸವಾಡಿ
೬೩. ಮಲ್ಲೋಹಳ್ಳಿ
೬೪. ಮುಪ್ಪಡಿಘಟ್ಟ
೬೫. ಕಾಡನೂರು
೬೬. ಕಲ್ದೇವನಹಳ್ಳಿ
೬೭. ಹಾದ್ರಿಪುರ
೬೮. ಮಧುರನಹೊಸಹಳ್ಳಿ
೬೯. ದೊಡ್ಡಬೆಳವಂಗಲ
೭೦. ನಾರನಹಳ್ಳಿ
೭೧. ರಾಮೇಶ್ವರ
೭೨. ಹುಸ್ಕೂರು
೭೩. ಜಕ್ಕಸಂದ್ರ
೭೪. ನಾಗಸಂದ್ರ
೭೫. ದರ್ಗಾಜೋಗಿಹಳ್ಳಿ
೭೬. ಕೊಡಿಗೆಹಳ್ಳಿ
೭೭. ಕುರುಬರಹಳ್ಳಿ
೭೮. ಕಂಟನಕುಂಟೆ
೭೯. ತಪಸೀಹಳ್ಳಿ
೮೦. ಅಂತರಹಳ್ಳಿ
೮೧. ಶ್ರವಣೂರು
೮೨. ನೆಲ್ಲುಕುಂಟೆ
೮೩. ಜಾಲಿಗೆರೆ
೮೪. ಕೊಟ್ಟಿಗೆ ಮಂಚೇನಹಳ್ಳಿ
೮೫. ಮಲ್ಲಸಂದ್ರ
೮೬. ಉಜ್ಜನಿ
೮೭. ಕಲ್ಕುಂಟೆ
೮೮. ಆರೂಡಿ
೮೯. ಸಾಸಲು
೯೦. ತೋಡಲು ಬಂಡೆ
೯೧. ಸೂಲುಕುಂಟೆ
೯೨. ಕನಕೇನಹಳ್ಳಿ
೯೩. ಉಲ್ಲೇಗೌಡನಹಳ್ಳಿ
೯೪. ಹಳೇಕೋಟೆ
೯೫. ಬೂಚನಹಳ್ಳಿ
೯೬. ಬೈರಾಪುರ
೯೭. ವಾಣಿಗರಹಳ್ಳಿ
೯೮. ತಿಪ್ಪೂರು
೯೯. ಮಾಡೇಶ್ವರ
೧೦೦. ಲಿಂಗಾಪುರ
೧೦೧. ಹಣಬೆ
೧೦೨. ಮರಳೇನಹಳ್ಳಿ
೧೦೩. ಕೆಸ್ತೂರು
೧೦೪. ರಾಮಪುರ
೧೦೫. ಚಿಕ್ಕಬೆಳವಂಗಲ
೧೦೬. ತೂಬಕುಂಟೆ
೧೦೭. ದ್ಯಾನಸಂದ್ರ
೧೦೮. ಹುಣಸೇಪಾಳ್ಯ
೧೦೯. ಕೋಲಿಗೆರೆ
೧೧೦. ಹುಲ್ಲುಕುಂಟೆ
೧೧೧. ಕರಿಯಪ್ಪನಪಾಳ್ಯ
೧೧೨. ಸಕ್ಕರೆಗೊಲ್ಲಹಳ್ಳಿ
೧೧೩. ಕಂಗಲಾಪುರ
೧೧೪. ಅಲಪನಹಳ್ಳಿ
೧೧೫. ನರಸಾಪುರ
೧೧೬. ಶ್ರೀರಾಮನಹಳ್ಳಿ
೧೧೭. ಮಚ್ಚೇನಹಳ್ಳಿ
೧೧೮. ಲಿಂಗದೀರನಹಳ್ಳಿ
೧೧೯. ಗೌಡನಕುಂಟೆ
೧೨೦. ಬನವತಿ

# ತಾಲ್ಲೂಕಿನ ಪ್ರಮುಖ ಗ್ರಾಮಗಳು




೧. ಹೊಸಹಳ್ಳಿ
೨. ಗುಂಡಮಗೆರೆ
೩. ಹಾಡೋನಹಳ್ಳಿ
೪. ತಿಮ್ಮಾಜನಹಳ್ಳಿ
೫. ತೂಬಗೆರೆ
೬. ಸೋತೇನಹಳ್ಳಿ
೭ ಕುರುವಿಗೆರೆ
೮. ಕಂಚಿಗನಾಳ
೯. ರಾಜಘಟ್ಟ
೧೦. ಹಂಚರಹಳ್ಳಿ

೧೧. ಲಿಂಗನಹಳ್ಳಿ
೧೨. ಕೊನಘಟ್ಟ
೧೩. ಶಿವಪುರ
೧೪. ನಾಗದೇವನಹಳ್ಳಿ
೧೫. ದೊಡ್ಡತುಮಕೂರು
೧೬. ದೊಡ್ಡಬಳ್ಳಾಪುರ
೧೭. ಜಕ್ಕಸಂದ್ರ
೧೮. ಅರಳುಮಲ್ಲಿಗೆ
೧೯. ಚಿಕ್ಕಹೆಜ್ಜಾಜಿ
೨೦. ಪುಟ್ಟಯ್ಯನಗ್ರಹಾರ

೨೧. ಹಾದ್ರಿಪುರ
೨೨. ಶಾಕಲದೇವನಪುರ
೨೩. ಕಲ್ದೇವನಹಳ್ಳಿ
೨೪. ಕಾಡನೂರು
೨೫. ಮುಪ್ಪಡಿಘಟ್ಟ
೨೬. ಗಂಡ್ರಗೂಳಿಪುರ
೨೭. ಇಸ್ತೂರು
೨೮. ಮಲ್ಲೋಹಳ್ಳಿ
೨೯. ಕನಸವಾಡಿ
೩೦. ಮಧುರೆ

೩೧. ನಾಗೇನಹಳ್ಳಿ
೩೨. ಚಿಕ್ಕವಡಗೆರೆ
೩೩. ಅಂಬಲಗೆರೆ
೩೪. ಕಸಾಘಟ್ಟ
೩೫. ರಾಮಪುರ
೩೬. ಲಿಂಗಾಪುರ
೩೭. ಮಾದೇಶ್ವರ
೩೮. ತಿಪ್ಪೂರು
೩೯. ವಾಣಿಗರಹಳ್ಳಿ
೪೦. ಬೂಚನಹಳ್ಳಿ

ಬೆಂಗಳೂರು ಜಿಲ್ಲೆಯಲ್ಲಿ ದೊಡ್ಡಬಳ್ಳಾಪುರ ತಾಲ್ಲೂಕು



# ದೊಡ್ಡಬಳ್ಳಾಪುರ ಪ್ರಮುಖ ರಸ್ತೆ ನಕ್ಷೆ



# ಪ್ರಮುಖ ದೇವಾಲಯಗಳು



13
ಶ್ರೀ ಘಾಟಿ ಸುಬ್ರಮಣ್ಯ
1
ತೂಬುಗೆರೆ
2
ಹುಲುಕಡಿಬೆಟ್ಟ
12
ಮಾಡೇಶ್ವರ
11
ಹಣಬೆ
10
ರಾಜಘಟ್ಟ
3
ಲಿಂಗನಹಳ್ಳಿ
4
5
ಕೋಡಿಹಳ್ಳಿ
ದೊಡ್ಡಬೆಳವಂಗಲ
9
ದೊಡ್ಡಬಳ್ಳಾಪುರ
6
ಅರಳುಮಲ್ಲಿಗೆ
7
ಇಸ್ತೂರು
8

# ಕೋಟೆ ಸ್ಥಳಗಳ ನಕ್ಷೆ




೧. ಸಾಲು: ತೋಡಲು ಬಂಡೆ ಕೋಟೆ
೨. ಉಜ್ಜನಿ ಬೆಟ್ಟದ ಮೇಲಿನ ಕೋಟೆ
೩. ಜಾಲಿಗೆರೆ ಗ್ರಾಮದ ಕೋಟೆ
೪. ಹುಲುಕಡಿಬೆಟ್ಟದ ಕೋಟೆ
೫. ಲಿಂಗಾಪುರದ ಕೋಟೆ
೬. ದೊಡ್ಡಹೆಜ್ಜಾಜಿ
೭. ದೊಡ್ಡಬಳ್ಳಾಪುರದ ಕೋಟೆ
೮. ಮೆಳೇಕೋಟೆ ಗ್ರಾಮದಲ್ಲಿ ಕೋಟೆ



ವೀರಮಾಸ್ತಿ, ಟಿ.ಹೊಸಹಳ್ಳಿ



ವೀರಗಲ್ಲು, ಟಿ.ಹೊಸಹಳ್ಳಿ



ವೀರಗಲ್ಲು, ಟಿ.ಹೊಸಹಳ್ಳಿ



ಹುಲಿಬೇಟೆ ವೀರಗಲ್ಲು, ಗೆದ್ದಲಪಾಳ್ಯ



ವೀರಮಾಸ್ತಿಕಲ್ಲು, ತಪಸಿಹಳ್ಳಿ



ವೀರಮಾಸ್ತಿ, ತಿಪ್ಪೂರು



ವೀರಗಲ್ಲುಗಳು, ದೊಡ್ಡಬೆಳವಂಗಲ



ತುರುಗೋಳ್ ವೀರಗಲ್ಲು, ಹುಲುಕುಂಟೆ



ವೀರಗಲ್ಲು, ವಾಣಿಗರಹಳ್ಳಿ



ವೀರಗಲ್ಲು, ಹುಲುಕುಂಟೆ



ವೀರಗಲ್ಲು, ಲಿಂಗನಹಳ್ಳಿ




ವೀರಗಲ್ಲುಗಳು, ದೊಡ್ಡಬೆಳವಂಗಲ

# ೨. ಗ್ರಂಥಸೂಚಿ


**ಕೃತಿಗಳು**

೧. ಅಪರ್ಣಾ, **ದೇವಾಲಯಗಳ ವಾಸ್ತುಶಿಲ್ಪ ಪರಿಚಯ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೨. ಅಣ್ಣಿಗೇರಿ, **ಶಾಸನ ಸಂಗ್ರಹ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೫

೩. ಕಲಬುರ್ಗಿ ಎಂ.ಎಂ., **ಶಾಸನ ವ್ಯಾಸಾಂಗ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೫

೪. ಕಲಬುರ್ಗಿ ಎಂ.ಎಂ., **ಸಮಾಧಿ ಬಲಿದಾನ, ವೀರಮರಣ ಸ್ಮಾರಕಗಳು,** ಐ.ಬಿ.ಹೆಚ್ ಪ್ರಕಾಶನ, ಬೆಂಗಳೂರು, ೧೯೮೦

೫. ಕಲಬುರ್ಗಿ ಎಂ.ಎಂ.(ಸಂ), **ಪ್ರಾಚೀನ ಕರ್ನಾಟಕದ ಆಡಳಿತ ವಿಭಾಗಗಳು,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೬. ಕೃಷ್ಣಮೂರ್ತಿ ವಿ.ವಿ., **ತಮಿಳುನಾಡಿನ ಕನ್ನಡ ಶಾಸನಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೭

೭. ಕೃಷ್ಣಕುಮಾರ್ ಸಿ.ಪಿ., **ಶಾಸನ ಶಾಸ್ತ್ರಪ್ರವೇಶ, ಚೇತನಾಬುಕ್ ಹೌಸ್,** ಬೆಂಗಳೂರು, ೨೦೦೧

೮. ಗದ್ದಗಿಮಠ್ ಬಿ.ಎಸ್., **ಕನ್ನಡ ಜಾನಪದ ಗೀತೆಗಳು,** ಕರ್ನಾಟಕದ ವಿಶ್ವವಿದ್ಯಾಲಯ, ಧಾರವಾಡ, ೧೯೮೯

೯. ಗುರುರಾಜರಾವ್ ಬಿ.ಕೆ., **ಕರ್ನಾಟಕದ ವಾಸ್ತುಶೈಲಿಗಳು** (ಗುಡಿ-ಜನರ ಜೀವನಾಡಿ), ದಯಾನಂದ ಪೈ ಇತಿಹಾಸ ಸಂಶೋಧನಾ ಕೇಂದ್ರ, ಮೈಸೂರು, ೧೯೯೪

೧೦. ಗೋಪಾಲ್ ಬಾ.ರಾ., **ಕನ್ನಡ ಶಾಸನಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೫

೧೧. ಗೋಪಾಲ ಬಾ.ರಾ., **ಕರ್ನಾಟಕದಲ್ಲಿ ನವಶಿಲಾಯುಗ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೧

೧೨. ಗೋಪಾಲರಾವ್ ಹೆಚ್.ಎಸ್., **ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣಿ ಚಾಲುಕ್ಯರ ದೇವಾಲಯಗಳು,** ಪ್ರಾಚ್ಯ ವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೧೯೯೩

೧೩. ಗೋಪಾಲ್ ರಾವ್ ಹೆಚ್.ಎಸ್., **ಕನಕಸಿರಿ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೯

೧೪. ಚನ್ನಪ್ಪ ಎರೆಸೀಮೆ, ಮಹಾದೇವಯ್ಯ ಟಿ.ಆರ್., **ಸಿದ್ಧಗಂಗಾಶ್ರೀ**, ಸಿದ್ಧಗಂಗಾಮಠ, ತುಮಕೂರು, ೧೯೮೭

೧೫. ಚನ್ನಬಸಪ್ಪ ಎಸ್. ಪಾಟೀಲ್, **ಕರ್ನಾಟಕದ ಕೋಟೆಗಳು**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೧೬. ಚನ್ನಕ ಎಲಿಗಾರ, **ಶಾಸನಗಳಲ್ಲಿ ಸ್ತ್ರೀ–ಸಮಾಜ**, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ

೧೭. ಚನ್ನಕ ಎಲಿಗಾರ, **ಮಾಸ್ತಿಕಲ್ಲು**, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ೧೯೭೭

೧೮. ಚಿದಾನಂದಮೂರ್ತಿ ಎಂ., **ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು**, ಪಿಬಿಹೆಚ್ ಪ್ರಕಾಶನ, ಬೆಂಗಳೂರು, ೧೯೭೫

೧೯. ಚಿದಾನಂದಮೂರ್ತಿ ಎಂ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೯

೨೦. ಚಿದಾನಂದಮೂರ್ತಿ ಎಂ., **ಕನ್ನಡ ಸಾಹಿತ್ಯ ಶಾಸನಗಳಲ್ಲಿ ಸಂಗೀತವಿಚಾರ**, ಬೆಂಗಳೂರು ವಿಶ್ವವಿದ್ಯಾಲಯ ೧೯೮೪

೨೧. ಚಿದಾನಂದಮೂರ್ತಿ ಎಂ., **ಹೊಸತು ಹೊಸತು**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೬

೨೨. ತಿಪ್ಪೇರುದ್ರಸ್ವಾಮಿ ಎಚ್., **ಕರ್ನಾಟಕ ಸಂಸ್ಕೃತಿ ಸಮೀಕ್ಷೆ**, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಬೆಂಗಳೂರು, ೧೯೯೮

೨೩. ದೇಸಾಯಿ ಪಿ.ಬಿ., **ಕನ್ನಡ ನಾಡಿನ ಶಾಸನಗಳು**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೧

೨೪. ದೇವರಕೊಂಡಾರೆಡ್ಡಿ, **ಗಂಗರ ದೇವಾಲಯಗಳು ಒಂದು ಅಧ್ಯಯನ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೬

೨೫. ನಾರಾಯಣ ಕೆ.ವಿ., **ಸ್ಥಳನಾಮಗಳು, ಪರಿವರ್ತನೆ ಮತ್ತು ಪ್ರಭಾವ**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೨೬. ನಾಗರಾಜು ಎಂ.ಜಿ., **ಶಾಸನ ಶಿಲ್ಪಗಳು**, ಶ್ರೀ ಗೌರಿಗಂಗ ಪ್ರಕಾಶನ, ಬೆಂಗಳೂರು, ೧೯೯೦

೨೭. ನಾಗರಾಜು ಎಂ.ಎಸ್., **ಕರ್ನಾಟಕದ ಪುರಾತನ ವಿದ್ಯಾಕೇಂದ್ರಗಳು** (ಗುಡಿಜನರ ಜೀವನಾಡಿ), ದಯಾನಂದ ಪೈ ಇತಿಹಾಸ ಸಂಶೋಧನಾ ಕೇಂದ್ರ, ಮೈಸೂರು, ೧೯೯೪

೨೮. ಪರಮಶಿವಮೂರ್ತಿ, **ಶಾಸನ ಸಂಶೋಧನೆ**, ಗುಣನಿಧಿ ಪ್ರಕಾಶನ, ಬೆಂಗಳೂರು, ೧೯೯೪

೨೯. ಡಾ.ಪರಮಶಿವಮೂರ್ತಿ, **ಕನ್ನಡ ಶಾಸನಶಿಲ್ಪ**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೩೦. ಪರಮಶಿವಮೂರ್ತಿ, **ತುಮಕೂರು ಜಿಲ್ಲೆಯ ಶಾಸನಗಳು**, 'ಸಾಮರಸ್ಯ', ತುಮಕೂರು, ೨೦೦೦

೩೧. ಬಸವರಾಜು ಕಲ್ಗುಡಿ, **ಮಹಾಸತಿ ಆಚರಣೆ : ಒಂದು ಅಧ್ಯಯನ**, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೮೫

೩೨. ಬಸವರಾಜ ಸಬರದ, **ಶಾಸನಗಳು: ಪ್ರಭುತ್ವ ಮತ್ತು ಜನಕೆ**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೩೩. ಭುವನೇಶ್ವರ ಪ್ರಸಾದ್ ಎಮ್.ಪಿ., **ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ರಾಜಕೀಯ ವಿಚಾರಗಳು**, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೯೬

೩೪೩. ಭಟ್‌ಸೂರಿ ಕೆ.ಜಿ., **ಶಾಸನ ಅಧ್ಯಯನ**, ಸಂಪುಟ-೨, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫

೩೫. ಭಟ್‌ಸೂರಿ ಕೆ.ಜಿ., **ಶಾಸನ ಅಧ್ಯಯನ** (ಸಂಪುಟ-೩), ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೩೬. ಭಟ್‌ಸೂರಿ ಕೆ.ಜಿ., **ಗೇರುಸೊಪ್ಪೆ(ನಗರ ಬಸ್ತಿಕೇರಿ)ಯ ಜೈನ ವಾಸ್ತು ಮತ್ತು ಮೂರ್ತಿಶಿಲ್ಪ**, ಕನ್ನಡ ವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೧೯೯೬

೩೭. ಬೈರೇಗೌಡ ಎಂ., **ಅರ್ಕಾವತಿ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೯

೩೮. ಮಂಜುನಾಥ ಎಂ.ಜಿ., **ವೈಶಿಷ್ಟ್ಯಪೂರ್ಣ ಕನ್ನಡ ಶಾಸನಗಳು**, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೨೦೦೪

೩೯. ಮಂಜುನಾಥ ಎಂ.ಜಿ., **ಕನ್ನಡ ಲಿಪಿಶಾಸ್ತ್ರ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೯

೪೦. ಮೇವುಂಡಿ ಮಲ್ಲಾರಿ, **ಕನ್ನಡ ಶಾಸನಗಳು**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೪

೪೧. ಮುಗಳಿ ರಂ.ಶ್ರೀ., ೧೯೭೬, **ಕರ್ನಾಟಕದ ಸಾಂಸ್ಕೃತಿಕ ಪರಂಪರೆ**, ಶಾಸ್ತ್ರಿಕೆ. ಜಿ ಮತ್ತು ಪಾಟೀಲ್ ಎಸ್.ಪಿ.(ಅನುವಾದ) ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೪೨. ರಮೇಶ ಕೆ.ವಿ., ೧೯೭೧, **ಕರ್ನಾಟಕ ಶಾಸನ ಸಮೀಕ್ಷೆ**, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

೪೩. ರಘುನಾಥ್ ಭಟ್ ಎಚ್.ಆರ್., ೧೯೭೭, **ಕರ್ನಾಟಕ ಶಾಸನ ಕಲೆ**, ಭಾರತೀ ಪ್ರಕಾಶನ, ಮೈಸೂರು

೪೪. ರಮೇಶ ಕೆ.ವಿ., ೧೯೯೪, **ಶಾಸನಗಳು ಮತ್ತು ಭಾರತೀಯ ಸಂಸ್ಕೃತಿ** (ಗುಡಿ-ಜನರ ಜೀವನಾಡಿ) ದಯಾನಂದ ಪೈ ಇತಿಹಾಸ ಸಂಶೋಧನಾ ಕೇಂದ್ರ, ಮೈಸೂರು

೪೫. ರಾಮಚಂದ್ರರಾವ್ ಎಸ್.ಕೆ., ೧೯೭೫, **ಮೂರ್ತಿಶಿಲ್ಪ ನೆಲೆ-ಹಿನ್ನೆಲೆ**, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

೪೬. ರಾಜಗೋಪಾಲ್ ಸಿ.ಎಸ್., **ಶ್ರೀ ಘಾಟಿಸುಬ್ರಹ್ಮಣ್ಯ ಕ್ಷೇತ್ರಮಹಾತ್ಮೆ**, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು, ೧೯೮೭

೪೭. ಲಿಂಗಯ್ಯ ಡಿ., **ಕರ್ನಾಟಕದ ಗ್ರಾಮದೇವತೆಗಳು**, ಐ.ಬಿ.ಹೆಚ್ ಪ್ರಕಾಶನ, ೧೯೮೪

೪೮. ವೆಂಕಟಜೋಯಿಸ್, **ಕೆಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ೧೯೯೬

೪೯. ವೆಂಕಟಸುಬ್ಬಯ್ಯ, ೧೯೭೨, **ಕೆಲವು ಕನ್ನಡ ಕವಿಗಳ ಜೀವನ ಕಾಲ ವಿಚಾರ**, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

೫೦. ಶಿವರಾಯ ಕಾರಂತ ಕೆ., ೧೯೬೯, **ಚಾಲುಕ್ಯ ವಾಸ್ತುಶಿಲ್ಪ**, ಕರ್ನಾಟಕ ಲಲಿತಾಕಲಾ ಅಕಾಡೆಮಿ, ಬೆಂಗಳೂರು

೫೧. ಶಿವರಾಮ ಕಾರಂತ ಕೆ., ೧೯೭೫, **ಭಾರತೀಯ ಶಿಲ್ಪ**, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

೫೨. ಶಿವರಾಮ ಕಾರಂತ ಕೆ., ೧೯೮೨, **ಕರ್ನಾಟಕದಲ್ಲಿ ಶಿಲ್ಪ**, ಐ.ಬಿ.ಹೆಚ್ ಪ್ರಕಾಶನ, ಬೆಂಗಳೂರು

೫೩. ಶಿವರುದ್ರಪ್ಪ ಜಿ.ಎಸ್., ೧೯೮೭, **ಶ್ರವಣ ಬೆಳಗೊಳ ಒಂದು ಸಮೀಕ್ಷೆ**, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು,

೫೪. ಶಿರೂರ ಬಿ.ವಿ., **ಸಂಶೋಧನ ಸ್ವರೂಪ**, ಅನ್ನಪೂರ್ಣ ಪ್ರಕಾಶನ ಹುಬ್ಬಳ್ಳಿ, ೨೦೦೦

೫೫. ಶ್ರೀಧರ ಹೆಚ್.ಜಿ., **ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಯುದ್ಧ ಚಿತ್ರಗಳು,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೫೬. ಶಿವಣ್ಣ ಎಸ್.(ಸಂ), **ವೀರಶೈವ ಹಸ್ತಪ್ರತಿ ಪುಸ್ತಿಕೆಗಳು,** ವೀರಶೈವ ಅಧ್ಯಯನ ಸಂಸ್ಥೆ, ಗದಗ

೫೭. ಶ್ರೀಸಂಪದ್ಗಿರಿರಾವ್ ಕೆ., **ಕರ್ನಾಟಕದ ಪರಂಪರೆ,** (ಸಂಪುಟ ೧-೨), ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೭೦

೫೮. ಸಂತಭದ್ರಗಿರಿ ಅಚ್ಯುತದಾಸರು, **ಸಮಾಜ ಸುಧಾರಣೆಯಲ್ಲಿ ದೇವಸ್ಥಾನದ ಪಾತ್ರ',** (ಗುಡಿ-ಜನರ ಜೀವನಾಡಿ), ದಯಾನಂದ ಪೈ ಇತಿಹಾಸ ಸಂಶೋಧನಾ ಕೇಂದ್ರ, ಮೈಸೂರು, ೧೯೯೪

೫೯. ಸಾಲತೊರೆ ಬಿ.ಎ., **ಕನ್ನಡನಾಡಿನ ಚರಿತ್ರೆ, ಭಾಗ-೧,** ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೫೩

೬೦. ಸುಂದರ ಅ., **ದೇವಾಲಯ ಮೂರ್ತಿಶಿಲ್ಪ, ಚೈತ್ಯಾಲಯ ಒಂದು ವಿಶ್ಲೇಷಣೆ,** (ಗುಡಿ-ಜನರ ಜೀವನಾಡಿ), ದಯಾನಂದ ಪೈ ಇತಿಹಾಸ ಸಂಶೋಧನಾ ಕೇಂದ್ರ, ಮೈಸೂರು

೬೧. ಸೂರ್ಯನಾಥ ಯು. ಕಾಮತ್, **ಇತಿಹಾಸ ದರ್ಶನ,** ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ೨೦೦೦

೬೨. ಶೇಠೆ ಬಿ.ಎಸ್., **ಕರ್ನಾಟಕದಲ್ಲಿ ಸತಿ ಪದ್ಧತಿ,** ವೀರಶೈವ ಅಧ್ಯಯನ ಅಕಾಡೆಮಿ, ಬೆಳಗಾವಿ, ೧೯೮೧

೬೩. ಶೇಷಶಾಸ್ತ್ರಿ ಆರ್., **ಕರ್ನಾಟಕದ ವೀರಗಲ್ಲುಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೨

೬೪. ಹಿರೇಮಠ ಎಸ್.ಎಂ., **ವೀರಗಲ್ಲುಗಳು,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೬

೬೫. ಹಿರೇಮಠ ಎಸ್.ಎಂ., **ಶಾಸನಾಧ್ಯಯನ,** ವಿದ್ಯಾನಿಧಿ ಪ್ರಕಾಶನ, ಗದಗ, ೧೯೭೬

೬೬. ಹಿರೇಮಠ ಎಸ್.ಎಸ್. ಕರ್ನಾಟಕದ ಜಾತ್ರೆಗಳು, ದಾವಣಗೆರೆ, ೧೯೯೫

೬೭. ಹಿರೇಮಲ್ಲೂರ ಈಶ್ವರನ್, **ಲಿಂಗಾಯಿತ ಧರ್ಮ ಸಂಸ್ಕೃತಿ ಮತ್ತು ಸಮಾಜ,** ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೯೮

೬೮. ಹೆರಂಜೆ ಕೃಷ್ಣಭಟ್ಟ, **ಸಂಶೋಧನ ಪ್ರಜ್ಞೆ,** ರಾಷ್ಟ್ರಕವಿ ಗೋವಿಂದ ಪೈ, ಸಂಶೋಧನಾ ಕೇಂದ್ರ, ಉಡುಪಿ, ೧೯೯೫

**II ಶಾಸನ ಸಂಪುಟಗಳು**

೧. GRA Epigraphica Carnatica Karnataka Inscriptione south Indian Inscriptions Indian Antiquery, vol.II

**III ವರದಿಗಳು**

೧. Mysore Archaealogical Annual Reports(1900-1943)

೨. census of India, 2001, District census Hand bood scries Bangalore.

**IV Gazetteers**

೧. Karnataka state Gazetteer, Bangalore Rural District, Bangalore

**V. ಪತ್ರಿಕೆಗಳು**

೧. ಇತಿಹಾಸದರ್ಶನ, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು

೨. ಸಾಧನೆ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

೩. ಕನ್ನಡ ಸಾಹಿತ್ಯ ಪರಿಷ್ಪತ್ರಿಕೆ, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು

**VI. ದಿನಪತ್ರಿಕೆಗಳು**

೧. ಪ್ರಜಾವಾಣಿ, ವಿಜಯಕರ್ನಾಟಕ,

**VII. ಸಂಪಾದಿತ ಕೃತಿಗಳು**

೧. ವಿಕ್ರಮಾರ್ಜುನ ವಿಜಯಂ(ಸಂ). ಬೆಳ್ಳಾವೆ ವೆಂಕಟನಾರಾಯಣಪ್ಪ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೫

೨. ಆದಿಪುರಾಣ(ಸಂ), ಪ್ರೊ.ಕೆ.ಜಿ.ಕುಂದಣಗಾರ, ಎ.ಪಿ.ಚೌಗುಲೆ, ಬೆಳಗಾವಿ, ೧೯೫೩

೩. ಶಾಸನ ಪದ್ಯಮಂಜರಿ (ಸಂ), ಆರ್. ನರಸಿಂಹಾಚಾರ್, ಬೆಂಗಳೂರು, ವಿಶ್ವವಿದ್ಯಾಲಯ, ಬೆಂಗಳೂರು



ದಾನಶಾಸನ, ಅಂಚರಹಳ್ಳಿ



ದಾನಶಾಸನ, ಅರಳುಮಲ್ಲಿಗೆ



ದಾನಶಾಸನ, ನಾಗೇನಹಳ್ಳಿ



ದಾನಶಾಸನ, ದೊಡ್ಡಬಳ್ಳಾಪುರ ನಗರ



ವೀರಗಲ್ಲು, ವಾಣಿಗರಹಳ್ಳಿ



ವೀರಗಲ್ಲು, ಗಂಗಸಂದ್ರ



ವೀರಗಲ್ಲು, ದೊಡ್ಡವಡಗೆರೆ



ವೀರಗಲ್ಲು, ಮಾಡೇಶ್ವರ



ವೀರಗಲ್ಲು, ಲಿಂಗನಹಳ್ಳಿ



ವೀರಗಲ್ಲು, ಮಧುರೆ



ವೀರಗಲ್ಲು, ಲಿಂಗನಹಳ್ಳಿ



ವೀರಗಲ್ಲು, ಲಿಂಗನಹಳ್ಳಿ



ವೀರಗಲ್ಲು, ಚಿಕ್ಕವಡಗೆರೆ



ವೀರಗಲ್ಲು, ಗಂಗಸಂದ್ರ



ವೀರಗಲ್ಲು, ಹುಲುಕುಂಟೆ



ವೀರಗಲ್ಲು, ಟಂಕಸಾಲ ಹೊಸಹಳ್ಳಿ



ವೀರಗಲ್ಲು, ಹಾದ್ರಿಪುರ



ವೀರಗಲ್ಲು, ಹುಲುಕುಂಟೆ



ವೀರಗಲ್ಲು, ಗಂಗಾಸಂದ್ರ

ವೀರಗಲ್ಲು, ಕಮ್ಮಸಂದ್ರ





ವೀರಗಲ್ಲು, ಕಮ್ಮಸಂದ್ರ

ವೀರಗಲ್ಲು, ದೊಡ್ಡಬೆಳವಂಗಲ





ವೀರಗಲ್ಲು, ಟಂಕಸಾಲ ಹೊಸಹಳ್ಳಿ



ತುರುಗೋಳ್,   ಹುಲುಕುಂಟೆ



ತುರುಗೋಳ್ ವೀರಮಾಸ್ತಿ, ಜಾಲಿಗೆರೆ

ಮಹಾಸತಿಕಲ್ಲು, ಕೆಂಜಗನಾಳ





ವೀರಮಾಸ್ತಿ, ತಪಸೀಹಳ್ಳಿ

ವೀರಮಾಸ್ತಿ, ಟಂಕಸಾಲ
ಹೊಸಹಳ್ಳಿ





ವೀರಮಾಸ್ತಿ, ಕೆಂಜಿಗನಾಳ



ವೀರಮಾಸ್ತಿ, ಲಿಂಗನಹಳ್ಳಿ



ವೀರಮಾಸ್ತಿ, ಲಿಂಗನಹಳ್ಳಿ



ವೀರಮಾಸ್ತಿ, ನಾಗೇನಹಳ್ಳಿ



ವೀರಮಾಸ್ತಿ, ತಿಪ್ಪೂರು





ಒಕ್ಕೈಮಾಸ್ತಿ, ಬೂಚನಹಳ್ಳಿ

ಒಕ್ಕೈಮಾಸ್ತಿ, ದೊಡ್ಡಹೆಜ್ಜಾಜಿ



ವೀರಮಾಸ್ತಿ,
ಹಿರೇಮುದ್ದೇನಹಳ್ಳಿ



ವೀರಮಾಸ್ತಿ, ನಾಗೇನಹಳ್ಳಿ



ವೀರಮಾಸ್ತಿ, ತಿಮ್ಮಸಂದ್ರ



ಯುದ್ಧವರ್ಣನೆ, ಮುಪ್ಪಡಿಘಟ್ಟ



ಯುದ್ಧವರ್ಣನೆ, ಹೊಸಹಳ್ಳಿ



ಹುಲಿಬೇಟೆ, ತಿಮ್ಮೋಜನಹಳ್ಳಿ



ನೀಲಕಂಠೇಶ್ವರ ಗುಡಿ, ಇಸ್ತೂರು



ಮುಕ್ಕಣ್ಣೇಶ್ವರಗುಡಿ, ಮಾಡೇಶ್ವರ



ಮುಕ್ಕಣ್ಣೇಶ್ವರಗುಡಿ, ಮಾಡೇಶ್ವರ



ಚನ್ನಕೇಶವಗುಡಿ, ಕಾಡನೂರು



ಬೇಟೆ ರಂಗನಾಥಗುಡಿ, ಹುಲುಕುಂಟೆ



ವೀರಭದ್ರಗುಡಿ, ಹಾದ್ರಿಪುರ



ವೀರಭದ್ರ, ಕಾಡನೂರು



ಚನ್ನಕೇಶವಗುಡಿ, ಅರಳುಮಲ್ಲಿಗೆ



ಸೂರ್ಯ, ದೊಡ್ಡಬೆಳವಂಗಲ



ಭಕ್ತರು, ದೊಡ್ಡಬಳ್ಳಾಪುರ



ಚಿನ್ನಮ್ಮನಗುಡಿ, ಸಾಸಲು



ದ್ವಾರಪಾಲಕ, ಲಿಂಗನಹಳ್ಳಿ



ಭಕ್ತರು, ದೊಡ್ಡಬಳ್ಳಾಪುರ



ಗಜನರಸಿಂಹ, ಕತ್ತಿಹೊಸಳ್ಳಿ



ಗಣಪತಿ, ಕಾಡನೂರು



ಭಕ್ತ, ಕಾಡನೂರು



ಕೋಟೆ, ಸಾಸಲು



ಕೋಟೆ, ಸಾಸಲು



ಮದ್ದಿನಮನೆ, ಹುಲುಕಡಿಬೆಟ್ಟ



ಮಕ್ಕಳರಾಯನ ತೋಪು,
ಕಸಘಟ್ಟ

ಲಿಂಗಮುದ್ರೆ, ಕಸಘಟ್ಟ





ವೈಷ್ಣವಮುದ್ರೆ, ಮರುಪನಹಳ್ಳಿ



ನಿಲಸುಗಲ್ಲು, ಶ್ರೀರಾಮನಹಳ್ಳಿ



ಯಂತ್ರದಕಲ್ಲು, ಕನ್ನಮಂಗಲ